# ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿ: ತಾತ್ತ್ವಿಕ ವಿವೇಚನೆ

(ಉತ್ತರ ಕನ್ನಡದ ಕುಣಬಿಯರನ್ನು ಕೇಂದ್ರವಾಗಿಟ್ಟುಕೊಂಡು ವಿವಿಧ ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿಯ ತೌಲನಿಕ ಅಧ್ಯಯನ)

ಸಂಶೋಧನಾ ವಿದ್ಯಾರ್ಥಿ
ಬಿ.ಪಿ.ಮಹೇಂದ್ರಕುಮಾರ್

ಮಾರ್ಗದರ್ಶಕರು
ಡಾ.ಎ.ಎಸ್.ಪ್ರಭಾಕರ
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ [illegible]
ಕನ್ನಡ ವಿಶ್ವವಿದ್ಯಾಲಯ, ಹಂಪಿ [illegible]
2018

# ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿ: ತಾತ್ವಿಕ ವಿವೇಚನೆ

(ಉತ್ತರ ಕನ್ನಡದ ಕುಣಬಿಯರನ್ನ ಕೇಂದ್ರವಾಗಿಟ್ಟುಕೊಂಡು ವಿವಿಧ ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿಯ ತೌಲನಿಕ ಅಧ್ಯಯನ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)



ಸಂಶೋಧನಾ ವಿದ್ಯಾರ್ಥಿ

**ಬಿ.ಪಿ.ಮಹೇಂದ್ರಕುಮಾರ್**

ಮಾರ್ಗದರ್ಶಕರು

**ಡಾ.ಎ.ಎಸ್.ಪ್ರಭಾಕರ**

ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ಬಿ.ಪಿ.ಮಹೇಂದ್ರಕುಮಾರ್** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿ: ತಾತ್ವಿಕ ವಿವೇಚನೆ(ಉತ್ತರ ಕನ್ನಡದ ಕುಣಬಿಯರನ್ನ ಕೇಂದ್ರವಾಗಿಟ್ಟುಕೊಂಡು ವಿವಿಧ ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿಯ ತೌಲನಿಕ ಅಧ್ಯಯನ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಬುಡಕಟ್ಟು ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ವಿ.ಎಸ್.ಪ್ರಭಾಕರ**
ಪ್ರಾಧ್ಯಾಪಕರು
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:**

## ಸಂಶೋಧಕರ ಘೋಷಣಾ ಪತ್ರ

**ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿ: ತಾತ್ವಿಕ ವಿವೇಚನೆ(ಉತ್ತರ ಕನ್ನಡದ ಕುಣಬಿಯರನ್ನ ಕೇಂದ್ರವಾಗಿಟ್ಟುಕೊಂಡು ವಿವಿಧ ಬುಡಕಟ್ಟು ಸಮುದಾಯಗಳ ಸೀಮಾಪದ್ಧತಿಯ ತೌಲನಿಕ ಅಧ್ಯಯನ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ.ಎ.ಎಸ್.ಪ್ರಭಾಕರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಬಿ.ಪಿ.ಮಹೇಂದ್ರಕುಮಾರ್**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ:

# ಪರಿವಿಡಿ

# ಕೋಷ್ಟಕಗಳು

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ಮಹತ್ವ ಮತ್ತು ವ್ಯಾಪ್ತಿ

*"How can you buy or sell the sky the warmth of the land? The idea is strange to us. Yet we do not own the freshness of the air or the sparkle of the water. How can you buy them from us? We will decide in our time. Every part this earth is scared to my people. Every shining pain needle, every sandy shore, every mist in the dark woods, every clearing, and every human insect is holy in the memory and experience of my people. The sap that runs to the trees carries the memories of the red-skinned man".*

***By American Chief Seattle,***
***Duwamish Tribe 1855, to president of USA.***

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ತಾತ್ವಿಕತೆ, ವಿಧಾನ ಮತ್ತು ಮಹತ್ವ

**ಪೀಠಿಕೆ**

ಸೌರಮಂಡಳದೊಳಗಿನ ಭೂಮಿ, ಜೈವಿಕ ಪ್ರಕ್ರಿಯೆಗೊಳಪಟ್ಟು ಜೀವವಿಕಾಸ ಹೊಂದಿದ ವಿಚಾರ ಅತ್ಯಂತ ವಿಸ್ಮಯಕರವಾದದ್ದು. ಸಾವಿರಾರು ಕೋಟಿ ವರ್ಷಗಳಿಂದ ಭೂಮಿ ಜೈವಿಕಯಂತ್ರದಂತೆ ನಿರಂತರವಾಗಿ ವಿಕಾಸದ ನೂಲನ್ನು ನೇಯುತ್ತಲೇ ಇದೆ. ಚಲನೆಯಲ್ಲಿರುವ ವಿಕಾಸದ ಪ್ರಕ್ರಿಯೆ ನಿರಂತರ ಬದಲಾವಣೆಗಳನ್ನು ರೂಪಿಸುತ್ತಲೇ ಇದೆ. ಜೀವಿಗಳು ತಮ್ಮ ಭೌಗೋಳಿಕ ಪ್ರದೇಶದಲ್ಲಿ ತಮ್ಮ ಆಹಾರ ಬದುಕು ಮತ್ತು ಅಸ್ತಿತ್ವಗಳಿಗಾಗಿ ಪೈಪೋಟಿ ನಡೆಸುತ್ತಾ ಅದಕ್ಕಾಗಿ ತಮ್ಮ ಸುತ್ತಲಿನ ಪ್ರದೇಶದ ಪರಿಸರದ ಬದಲಾವಣೆಗೆ ತಕ್ಕಂತೆ ತಮ್ಮ ದೇಹದ ರಚನೆಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಾ ಬಂದಿವೆ. ಹೀಗೆ ತನ್ನ ಪರಿಸರದ ಬದಲಾವಣೆಗಳಿಗೆ ತಕ್ಕಂತೆ ಮಾಡಿಕೊಂಡ ಮಾರ್ಪಾಟುಗಳೇ ಜೀವಿಗಳ ವೈವಿಧ್ಯತೆಗಳಿಗೆ ಕಾರಣವಾಯಿತು. ತಮ್ಮ ಭೌಗೋಳಿಕ ಪ್ರದೇಶದ ಸ್ಥಿತಿಗತಿ, ವೈಪರೀತ್ಯಗಳಿಗೆ ತಕ್ಕಂತೆ ತಮ್ಮ ದೇಹರಚನೆ, ಸ್ವಭಾವ, ಬಣ್ಣ, ಭಾಷೆ, ತಾಳಿಕೊಳ್ಳುವ ಗುಣ ಇತ್ಯಾದಿಗಳನ್ನು ಅಳವಡಿಸಿಕೊಂಡವು. ಹೀಗೆ ರಚಿತವಾದ ಜೀವಿಗಳ ಗುಂಪುಗಳು ಅಕ್ಕಪಕ್ಕದ ಇತರೆ ಜೀವಿಗಳು ನಿರ್ಮಿಸಿಕೊಂಡು ಅದನ್ನು ಪರಿಸರದ ಮನೆ(Eco System) ಎಂದು ಕರೆಯಲಾಗುತ್ತದೆ. ಹೀಗೆ ನಿರ್ಮಾಣವಾದ ಜೀವವಿಕಾಸದ ತುತ್ತತುದಿಯ ಅಂತಿಮ ಘಟ್ಟದಲ್ಲಿ ಪರಿಸರ ಆಯ್ಕೆ(Nature selection) ಜೀವಿಗಳ ಪೈಪೋಟಿಯಲ್ಲಿ ಪ್ರಬುದ್ಧವಾಗಿ ವಿಕಸಿತವಾದವನೇ ಮನುಷ್ಯ. ಜೀವವಿಕಾಸದ ಪೈಪೋಟಿಯಲ್ಲಿ ಮನುಷ್ಯ ಮುನ್ನಡೆಯಿಡಲು ಮುಖ್ಯಕಾರಣ ಆತನಲ್ಲಿ ಪರಿವರ್ತನೆಗೊಂಡ ಜ್ಞಾನದ ಅಂಗ ಮೆದುಳಿನ ವಿಕಾಸ. ಇದು ಪರಿಸರದ ಇತರೆ ಜೀವಿಗಳಿಗೂ ಮನುಷ್ಯನಿಗೂ ಅಜಗಜಾಂತರ ಪ್ರಗತಿಯ ವ್ಯತ್ಯಾಸವನ್ನು ಸೃಷ್ಟಿಸಿದೆ. ಮಂಗನಿಂದ ಮಾನವನಾಗಿ ಪರಿವರ್ತಿತಗೊಂಡ ಮನುಷ್ಯ ಇತರೆ ಜೀವಿಗಳಿಗಿಂತ ಭಿನ್ನವಾದ ಸಾಮಾಜಿಕ ಜೀವನವನ್ನು ಕಟ್ಟಿಕೊಂಡ. ತನ್ನ

ಬುದ್ಧಿ ವಿಕಾಸವಾದಂತೆಲ್ಲಾ ಆತನ ಮಾನಸಿಕ, ಸಾಮಾಜಿಕ, ನೈತಿಕ ಪ್ರಜ್ಞೆಗಳು ಮಾರ್ಪಾಟಾಗುತ್ತಾ, ತಾನು ವಾಸಿಸುವ ಸುತ್ತಲ ಪರಿಸರವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಮಾರ್ಪಾಟು ಮಾಡಿಕೊಳ್ಳುತ್ತಾ, ಜೊತೆಗೆ ಪರಿಸರ ಬದಲಾವಣೆಗಳಿಗೆ ಹೊಂದಿಕೊಂಡು ಅದಕ್ಕೆ ತಕ್ಕಂತೆ ತನ್ನ ಜೀವನವನ್ನು ಅಳವಡಿಸಿಕೊಂಡ. ಇಂತಹ ಜೀವವಿಕಾಸದ ಪ್ರಗತಿಯಲ್ಲಿ ಮುಂದುವರಿದ ಮಾನವನ ಬಗ್ಗೆ ಅಧ್ಯಯನ ಮಾಡುವ ಶಾಸ್ತ್ರವಾಗಿ 'ಮಾನವಶಾಸ್ತ್ರ' ರೂಪಿತವಾಯಿತು.

ಮಾನವನ ಉಗಮ, ಹುಟ್ಟು, ವಿಕಾಸ, ಪರಿವರ್ತನೆ, ಕಾಡಿನಲ್ಲಿ ಇತರೆ ಜೀವಿಗಳೊಂದಿಗೆ ನಡೆಸುವ ಪೈಪೋಟಿ, ಹೊಂದಾಣಿಕೆ, ಅಳವಡಿಕೆಯು ಹೀಗೆ ಪ್ರಾಣಿಗಳಂತೆ ಗುಹೆ ಪೊಟರೆಗಳಲ್ಲಿ ಬೇಟೆಯಾಡಿ ನಂತರ ಗೆಡ್ಡೆಗೆಣಸುಗಳನ್ನು ತಿಂದು ಅಲೆಮಾರಿಯಾಗಿ ಒಂದು ಕಡೆಯಿಂದ ಮತ್ತೊಂದು ಕಡೆ ಆಹಾರ ನೀರಿಗಾಗಿ ವಲಸೆ ಮಾಡುತ್ತಿದ್ದರು. ಹೀಗೆ ಒಂದು ಕಡೆ ನೆಲೆ ನಿಂತು ಕೃಷಿಯ ಅನ್ವೇಷಣೆ ಮಾಡಿ ಹೀಗೆ ಅನುಭವ ಪಡೆದು ಕಾಲ ಕಳೆದಂತೆ ಸಂಘಜೀವಿಯಾಗಿ ಸಂಕೀರ್ಣ ಬದುಕನ್ನು ಸರಳೀಕರಣಗೊಳಿಸುವ ಸಲುವಾಗಿ ಕಟ್ಟಿಕೊಂಡ ಸಮಾಜ, ದೈವಗಳು, ನಂಬಿಕೆಗಳು, ನ್ಯಾಯ ಮತ್ತು ಸೇವೆಯಂತಹ ಆಡಳಿತವ್ಯವಸ್ಥೆ, ಧರ್ಮ, ಕೃಷಿಪದ್ಧತಿ, ವೈದ್ಯಕೀಯ ಚಿಕಿತ್ಸೆ, ಕರಕುಶಲ ಕಲೆ, ಕುಸರಿ ಸಲಕರಣೆಗಳು, ನೆಮ್ಮದಿಗಾಗಿ ಹಾಡು, ಕುಣಿತ, ಜಾನಪದ ಕಥೆ. ಇತ್ಯಾದಿಗಳನ್ನು ಸೃಷ್ಟಿಸಿಕೊಂಡದ್ದನ್ನು ಅಧ್ಯಯನ ಮಾಡಲು ಮಾನವಶಾಸ್ತ್ರದಲ್ಲಿ ಅನೇಕ ಭಾಗಗಳು ಹುಟ್ಟಿಕೊಂಡವು. ಅವುಗಳಲ್ಲಿ ಜೈವಿಕ ಮಾನವಶಾಸ್ತ್ರ, ಸಾಮಾಜಿಕ ಮಾನವಶಾಸ್ತ್ರ, ಸಾಂಸ್ಕೃತಿಕ ಮಾನವಶಾಸ್ತ್ರ, ಭಾಷಾಮಾನವಶಾಸ್ತ್ರ, ಪುರಾತತ್ವ ಮಾನವಶಾಸ್ತ್ರ, ವೈದ್ಯಕೀಯ ಮಾನವಶಾಸ್ತ್ರ, ಆರ್ಥಿಕ ಮಾನವಶಾಸ್ತ್ರ...ಹೀಗೆ ಅನೇಕ ಭಾಗಗಳಾಗಿ ಬೆಳೆಯ ತೊಡಗಿದಂತೆಯೇ ಮಾನವನ ಬಗ್ಗೆ ವರ್ಣನೆ ಮಾಡುವ ನರಕುಲವರ್ಣನೆ ಎಂಬ ಭಾಗವೂ ಸಹ ಹುಟ್ಟಿಕೊಂಡಿತು.

ಮಾನವನ ಈ ವಿಕಾಸ, ಬೆಳವಣಿಗೆ, ಸಾಮಾಜಿಕ ಜೀವನದ ನೋವು–ನಲಿವುಗಳ ಸಂಬಂಧ, ಶಬ್ದವನ್ನು ಸಂವಹನದ ಭಾಷೆಯಾಗಿ ರೂಪಿಸಿದ ಬಗ್ಗೆ ತನ್ಮೂಲಕ ಆಲೋಚಿಸುವ ವಿವೇಚಿಸುವ ವಿಚಾರಗಳನ್ನು ಅನುಭವಗಳನ್ನು ಅಂತರ್ಗತಮಾಡಿಕೊಂಡು ಮುಂದಿನ ಪೀಳಿಗೆಗೆ ದಾಟಿಸುವ ಜ್ಞಾನದ ನಿರಂತರ ಚಲನಶೀಲ ಪ್ರಕ್ರಿಯೆಯ ಮನುಷ್ಯನ ಬದುಕಿನ ಭಾಗವನ್ನು 'ಸಂಸ್ಕೃತಿ' ಎಂದು ಕರೆಯಲಾಯಿತು.

ಸರಳವಾಗಿ "ಜನರ ಜೀವನ ವಿಧಾನವೇ ಸಂಸ್ಕೃತಿ" ಎಂದು ವ್ಯಾಖ್ಯಾನಿಸುವ ಹರ್ಸ್‌ಕೋವಿಟ್ಸ್‌ನಿಂದ ಹಿಡಿದು ಸಮೂಹ ಮತ್ತು ಸಂಬಂಧಗಳ ಆಯಾಮದಲ್ಲಿ ಪ್ರಕಟಗೊಳ್ಳುವ ಸಾಮಾಜಿಕ ಸತ್ಯಗಳ ಮೊತ್ತವೇ ಸಮಾಜ. "ಇದೇ ಮೊತ್ತದ ಕ್ರಿಯೆಯ ಆಯಾಮವೇ ಸಂಸ್ಕೃತಿ" ಎನ್ನುವ ನೊಡೆಲ್‌ರ ಅಭಿಪ್ರಾಯದ ಜೊತೆಗೆ ಕ್ರೋಬರ್ ಪ್ರಕಾರ ಸಂಸ್ಕೃತಿ ಎನ್ನುವುದು "ನಾವು ಕಲಿತ ಹಾಗೂ ಪ್ರಸಾರ ಮಾಡುವ ಸ್ವಭಾವ, ತಂತ್ರವಿಧಾನ, ಚಿಂತನೆ

ಮತ್ತು ಮೌಲ್ಯಗಳ ಮೊತ್ತವಾಗಿದೆ." ಈತನ ಪ್ರಕಾರ ಸಂಸ್ಕೃತಿಯು ವಂಶಪಾರಂಪರ್ಯದಿಂದ ಬರುವುದಿಲ್ಲ. ಮನುಷ್ಯನ ಕಲಿಕೆಯಿಂದ ರೂಪುಗೊಳ್ಳುತ್ತದೆ. ಮನುಷ್ಯನು ತನ್ನ ಪ್ರಭಾವ ಮತ್ತು ನಡವಳಿಕೆಗಳನ್ನು ಚಿಂತನೆ ಮತ್ತು ತಂತ್ರವಿಧಾನಗಳನ್ನು ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ತನ್ನ ಪರಿಸರದಿಂದ ಕಲಿಯುತ್ತಾನೆ. ಪ್ರಸಾರ ಮಾಡುತ್ತಾನೆ. ನಿರಂತರ ಕಲಿಕೆಯೇ ಸಂಸ್ಕೃತಿಯನ್ನು ಚಲನಶೀಲವಾಗಿಡುತ್ತದೆ. ಕ್ರೋಬರ್ ತಿಳುವಳಿಕೆಯ ಹಿನ್ನೆಲೆಯಲ್ಲಿ ಹರ್ಸ್‌ಕೋವಿಟ್ಸ್ ಸಂಸ್ಕೃತಿಯನ್ನು Man made part of environment ಎಂದು ವ್ಯಾಖ್ಯಾನಿಸಿದ್ದಾನೆ. "ಪೂರ್ಣ ಪರಿಸರದಲ್ಲಿ ಮನುಷ್ಯ ನಿರ್ಮಿತ ಭಾಗವೇ ಸಂಸ್ಕೃತಿ" ಎನ್ನುವುದು ಹರ್ಸ್‌ಕೋವಿಟ್ಸ್‌ನ ಅಭಿಪ್ರಾಯವಾಗಿದೆ. ಅನೇಕ ವಿದ್ವಾಂಸರು ಸಂಸ್ಕೃತಿಯ ಬಗ್ಗೆ ಅವರದೇ ರೀತಿಗಳಲ್ಲಿ ವಿಶ್ಲೇಷಿಸಿದ್ದಾರೆ. ಅದಕ್ಕೆ ಸಿದ್ಧಾಂತಗಳನ್ನು ರೂಪಿಸಲಾಗಿದೆ. ಮಾರ್ಗನ್ (Ancient society) ಸ್ಪಿನ್ನಿನ ಏಕರೇಖಾತ್ಮಕ ವಾದ, ಸ್ಟೀವರ್ಡ್ಸ್‌ನ ಪರವಲಯದ ವಕ್ರರೇಖಾ ಸಿದ್ಧಾಂತ", ಪ್ರಾನ್ಸ್ ಬೊಯಿಸ್ ಮಂಡಿಸಿದ ಚಾರಿತ್ರಿಕವಾದ, ವಿಸ್ಲರ್‌ನ ಸಾಪೇಕ್ಷ ಪ್ರತಿಫಲನಗಳನ್ನು ನಮೂದಿಸಿದ್ದಾರೆ. ಡಿ.ಡಿ.ಕೊಸಾಂಬಿಯವರ ಆಳುವವರ್ಗದ ವಿಶ್ಲೇಷಣೆಗಳೇ ಸಂಸ್ಕೃತಿ ಅಲ್ಲ ಎನುತ್ತಾರೆ.

ಒಂದು ಸಮುದಾಯ ತನ್ನ ಸೀಮಿತ ಭೌಗೋಳಿಕ ಪ್ರದೇಶದಲ್ಲಿ ಸಂಕೀರ್ಣಯುಕ್ತ ಸಂಘರ್ಷದ ಬದುಕಿನಿಂದ ಸರಳೀಕೃತ ಬದುಕಿಗಾಗಿ, ಆಹಾರ ಬದುಕು, ರೋಗ, ವ್ಯಾಜ್ಯ, ಪೈಪೋಟಿಗಳ ವಿರುದ್ಧ ನಿರಂತರವಾಗಿ ಹೋರಾಡಿ ಕಂಡುಕೊಂಡ ಸರಳ ಸಾಮಾಜಿಕ ಆಧ್ಯಾತ್ಮಿಕ ಮತ್ತು ನೆಮ್ಮದಿಯ ಸಂಘಟಿತ ಬದುಕನ್ನು ಒಟ್ಟಾರೆಯಾಗಿ 'ಸಂಸ್ಕೃತಿ' ಎನ್ನಬಹುದಾಗಿದೆ. ಈ ಪ್ರಕ್ರಿಯೆ ಕೇವಲ ಮಾನವನ ಸಂಘಟಿತ ಬದುಕಿಗೆ ಮಾತ್ರ ಸೀಮಿತವಲ್ಲ. ಈ ಭೂಮಿಯಲ್ಲಿ ಸಾವಿರಾರು ಕೋಟ್ಯಂತರ ವರ್ಷಗಳಲ್ಲಿ ಲಕ್ಷಾಂತರ ಜೀವಗಳು ಇದೇ ರೀತಿಯ ಬದುಕಿಗಾಗಿ ಹೋರಾಟ ಮಾಡಿ ಕಟ್ಟಿಕೊಂಡ ಬದುಕುಗಳೂ ಕೂಡ ಜೀವವಲಯದ ಸಾಂಸ್ಕೃತಿಕ ಬದುಕೇ ಆಗಿದೆ. ಅದನ್ನು EcoSystem ಎಂದು ಜೈವಿಕಶಾಸ್ತ್ರದ ಮೂಲಕ ಕರೆಯುತ್ತೇವಷ್ಟೆ. ಬುಡಕಟ್ಟುಗಳಲ್ಲಿರಬಹುದಾದ ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆಗಿಂತ ಶ್ರೇಷ್ಠವಾದ ಸಂಘಟಿತ ಬದುಕನ್ನು ಜೇನು ಇರುವೆಗಳು ಅನುಸರಿಸುತ್ತಿಲ್ಲವೇ? ಅವು ಪ್ರಾಣಿ, ಪಕ್ಷಿ, ಕೀಟ ಲೋಕದ ಸಂಸ್ಕೃತಿಯ ವಿಶ್ಲೇಷಣೆಗೆ ಒಳಪಡುತ್ತವೆಯಷ್ಟೆ.

ಮಾನವನ ಸಂಸ್ಕೃತಿಯನ್ನು ಅಭ್ಯಾಸ ಮಾಡುವ ವಿಜ್ಞಾನದ ಕ್ರಮವನ್ನು ಮಾನವಕುಲ ವಿಜ್ಞಾನ(Ethnology) ಮತ್ತು ಮನುಷ್ಯನ ವಿವರಣ ವಿಜ್ಞಾನವನ್ನು (Enthnography) ಕುಲಶಾಸ್ತ್ರೀಯ ಅಧ್ಯಯನವೆಂತಲೂ ಕರೆಯಲಾಗಿದೆ. ಈ ಎರಡು ಅಧ್ಯಯನಗಳು ಬುಡಕಟ್ಟು ಸಂಸ್ಕೃತಿಯನ್ನು ಅಭ್ಯಾಸ ಮಾಡುವ ವಿಷಯಗಳಾಗಿವೆ.

ಮಾನವನ ಸಂಸ್ಕೃತಿಯ ವಿಕಾಸವನ್ನು ಮೂರು ಹಂತಗಳಲ್ಲಿ ಗುರ್ತಿಸಲಾಗಿದೆ.

1. ಆದಿವಾಸಿ ಸಂಸ್ಕೃತಿ, 2. ಗ್ರಾಮೀಣ ಸಂಸ್ಕೃತಿ, 3. ನಗರ ಸಂಸ್ಕೃತಿಗಳಾಗಿವೆ. ಯಾವುದೇ ಸಂಸ್ಕೃತಿಯ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಆದಿವಾಸಿ/ಬುಡಕಟ್ಟು ಸಂಸ್ಕೃತಿಯನ್ನು ಅಧ್ಯಯನ ಮಾಡುವುದು ಅಧ್ಯಯನಕಾರರಿಗೆ ಅನಿವಾರ್ಯದ ವಿಷಯ.

ಒಂದು ಪ್ರತ್ಯೇಕ ಭೌಗೋಳಿಕ ಪ್ರದೇಶದ ನಿರ್ದಿಷ್ಟ ರಕ್ತಸಂಬಂಧದ ವರ್ಗವು ತಮ್ಮ ಬದುಕಿಗಾಗಿ ರೂಪಿಸಿಕೊಂಡ ಸಂಘಟಿತ ಸಾಮಾಜಿಕ ಬದುಕಿನ ಪೂರ್ಣಮೊತ್ತವನ್ನು ಬುಡಕಟ್ಟು ಸಂಸ್ಕೃತಿ ಎನ್ನಬಹುದಾಗಿದೆ. ಆ ಭೌಗೋಳಿಕ ಪ್ರದೇಶ, ಅದರ ಸುತ್ತಲ ಕಾಡು, ಅವುಗಳ ಜೊತೆಗಿನ ವೈರತ್ವ, ಪೈಪೋಟಿ, ಅವುಗಳೊಟ್ಟಿಗಿನ ಅವಿನಾಭಾವ ಸಂಬಂಧ ಅನುಸಂಧಾನ ಮತ್ತು ಹೋರಾಟ ಎಲ್ಲವುಗಳಿಂದ ಸಾವಿರಾರು ವರ್ಷಗಳಲ್ಲಿ ಕಂಡುಕೊಂಡ ಸುಧಾರಿತ ಸರಳ ನೆಮ್ಮದಿ ಸಂಘಟಿತ ಸಾಮಾಜಿಕ ಬದುಕು ನಿರ್ದಿಷ್ಟ ಬುಡಕಟ್ಟುಗಳದ್ದಾಗಿರುತ್ತದೆ. ಇಂತಹ ಆದಿವಾಸಿಗಳಿಗೆ ಪ್ರತ್ಯೇಕವಾದ ಭಾಷೆ, ಆಚರಣೆ, ನಂಬಿಕೆ, ದೈವಗಳು, ಕೃಷಿ, ಜಾನಪದ ಗೀತೆ, ನೃತ್ಯ, ಹಾಡು, ಬೇಟೆ, ಮದುವೆ, ಸಾವು, ಪೂಜೆ, ಆಭರಣ, ಉಡುಪು...ಎಲ್ಲದರಲ್ಲೂ ವಿಭಿನ್ನ ಪ್ರತ್ಯೇಕತೆಯ ಜೀವನವಿಧಾನ ಎದ್ದುಕಾಣುತ್ತದೆ. ಈ ಬುಡಕಟ್ಟುಗಳಲ್ಲಿ ತಮ್ಮದೇ ಆದ ಪ್ರತ್ಯೇಕ ಆಚಾರ, ವಿಚಾರ, ಆಹಾರ ಪದ್ಧತಿ, ಚಿಕಿತ್ಸಾಪದ್ಧತಿ, ಕರಕುಶಲ, ಪಾರಂಪರಿಕ ಜ್ಞಾನ, ನ್ಯಾಯಾಡಳಿತ ಪದ್ಧತಿ... ಇತ್ಯಾದಿಗಳನ್ನು ಕಾಣಬಹುದಾಗಿದೆ. ಇಂತಹ ಬುಡಕಟ್ಟು ಸಮುದಾಯಗಳು ಇತರೆ ಬುಡಕಟ್ಟು ಆಚಾರವಿಚಾರ, ಭಾಷೆ, ಇತರೆ ಪದ್ಧತಿಗಳಿಗಿಂತ ವಿಭಿನ್ನವಾದ ಸಂಸ್ಕೃತಿಯನ್ನು ಹೊಂದಿರುವುದನ್ನು ಗಮನಿಸಬಹುದಾಗಿದೆ. ಈ ಕಾರಣದಿಂದಾಗಿ ಬುಡಕಟ್ಟುಗಳದ್ದು ಬಹುಸಂಸ್ಕೃತಿಯ ಸಂಸ್ಕೃತಿ ಮತ್ತು ವೈವಿಧ್ಯತೆಯನ್ನು ಹೊಂದಿದೆ. ಹಾಗಾಗಿ ಭಾರತದಲ್ಲಿನ ಬುಡಕಟ್ಟುಗಳ ಬದುಕು ಬಹುಸಂಸ್ಕೃತಿ ವೈವಿಧ್ಯತೆಗಳ ಆಗರವಾಗಿದೆ.

ಬುಡಕಟ್ಟುಗಳ ಈ ವ್ಯವಸ್ಥೆಯನ್ನು ಜಾತಿಗೆ ಸಮೀಕರಿಸುವ ಯತ್ನಗಳು ನಡೆಯುತ್ತಿವೆ. ಭಾರತದಲ್ಲಿನ ಜಾತಿ ಮತ್ತು ಬುಡಕಟ್ಟು ಇವುಗಳಿಗಿರುವ ವ್ಯತ್ಯಾಸವನ್ನು ಗಮನಿಸದಿದ್ದಲ್ಲಿ ಬುಡಕಟ್ಟುಗಳ ಬಗೆಗಿನ ದೃಷ್ಟಿಕೋನ ಮತ್ತು ಅಧ್ಯಯನ ವ್ಯರ್ಥ. ಬುಡಕಟ್ಟುಗಳ ಸಂಸ್ಕೃತಿ ಪರಿಸರ ಆಯ್ಕೆ. ಜೀವಿಗಳು ಪರಿಸರದಲ್ಲಿ ಹೇಗೆ ವಿಕಸಿತವಾದವೋ ಹಾಗೆ ಬುಡಕಟ್ಟುಗಳ ಜೀವನವೂ ಕೂಡ ಪರಿಸರದ ವಿಕಾಸದ ಭಾಗವಾಗಿದೆ. ಅದು ಪರಿಸರದ ಆಯ್ಕೆಯಾಗಿದೆ. ಆದರೆ ಭಾರತದ ಜಾತಿವ್ಯವಸ್ಥೆ ಪರಿಸರದ ನೈಸರ್ಗಿಕ ವಿಕಾಸದ ಪ್ರಕ್ರಿಯೆಯಾಗಿದೆ. ಒಂದು ಏಕಸಂಸ್ಕೃತಿ ಬಲಿಷ್ಠವರ್ಗ ತನ್ನ ಸ್ವಾರ್ಥದ ಸಾಧನೆಗಾಗಿ ಕೃತಕವಾಗಿ ಸೃಷ್ಟಿಸಿಕೊಂಡ ಪಿತೂರಿಯ ಭಾಗವಾಗಿ 'ಜಾತಿ' ಸೃಷ್ಟಿಯಾಗಿದೆ. ಶ್ರೇಣೀಕೃತ ತಾರತಮ್ಯದ ವ್ಯವಸ್ಥೆಯಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವೃತ್ತಿ ಹೇರಿಕೆಯಾಧಾರಿತ ನಾಲ್ಕು ಜಾತಿಗಳ ಜೊತೆ ಈ ತಾರತಮ್ಯವನ್ನು

ವಿರೋಧಿಸಿ ಹೊರಬಂದ ಸಮುದಾಯವನ್ನು 5ನೇ ಜಾತಿಯಾಗಿ ಹೊರಗಿಟ್ಟು ಅಸ್ಪಶ್ಯರನ್ನಾಗಿ ಮಾಡುವ ಮೂಲಕ ಶೋಷಣೆಯ ವೃತ್ತಿಗೆ ಅನುಗುಣವಾದ ವರ್ಗೀಕರಣ ಜಾತಿವ್ಯವಸ್ಥೆಯೇ "ಹಿಂದು ವರ್ಗ" ಜಾತಿವ್ಯವಸ್ಥೆಯಾಗಿದೆ. ಇದನ್ನು ಹೊರತುಪಡಿಸಿ ಇರುವ ಎಲ್ಲಾ ಭಾರತದ ಸಾಮಾಜಿಕ ವರ್ಗಗಳೂ ಬುಡಕಟ್ಟುಗಳೇ ಆಗಿವೆ.

ಆದರೆ ಬುಡಕಟ್ಟುಗಳ ಸಂಸ್ಕೃತಿ ಶೈವ, ವೈಷ್ಣವ ಧರ್ಮಗಳಿಗೆ ಒಳಗಾಗಿದೆ. ಬುಡಕಟ್ಟುಗಳು ಯಾವಾಗ ಹುಟ್ಟು, ಮದುವೆ, ಸಾವು ಇತ್ಯಾದಿ ಆಚರಣೆಗಳ ಸಂದರ್ಭಗಳಲ್ಲಿ ಬ್ರಾಹ್ಮಣರ ಪೌರೋಹಿತ್ಯಕ್ಕೆ ಅವಕಾಶ ಕೊಡದೆ ತಾವೇ ನಡೆಸಿಕೊಂಡು ಹೋಗುತ್ತಾರೋ ಅಲ್ಲಿಯವರೆಗೂ ಬುಡಕಟ್ಟುಗಳ ಸಂಸ್ಕೃತಿ ಮೂಲ ರೂಪದಲ್ಲೇ ಉಳಿದಿರುತ್ತದೆ. ಯಾವಾಗ ಬ್ರಾಹ್ಮಣ ಪೌರೋಹಿತ್ಯ ಬುಡಕಟ್ಟು ಆಚರಣೆಗಳ ಕೋಟೆಯೊಳಗೆ ಪ್ರವೇಶ ಮಾಡುತ್ತದೋ ಆಗ ಆ ಬುಡಕಟ್ಟು ತನ್ನ ಮೂಲ ಸ್ವರೂಪವನ್ನು ಮತ್ತು ತನ್ನೆಲ್ಲಾ ಸ್ವಾತಂತ್ರ್ಯವನ್ನು ಕಳೆದುಕೊಂಡು ಜಾತಿಯಾಗಿ ಪರಿವರ್ತಿತವಾಗುತ್ತದೆ.

ಜಾಗತಿಕ ಮಟ್ಟದಲ್ಲಿ ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ರ್‍ಯಾಡ್‌ಕ್ಲಿಪ್ ಬ್ರೌನ್, ರಿವರ್ಸ್ ಸೆಲಿಗ್‌ಮನ್, ಪ್ರಾಂಜ್ ಬೋಯಿಸ್, ಪೋರ್ಟೆಸ್‌ಲೋವಿ, ಇಸಾಕ್ ಶೆಪೇರಾ, ಮ್ಯಾಲಿನೋಸ್ಕಿ, ಏವಾನ್ಸ್ ಪ್ರಿಚರ್ಡ್, ರೇಮಂಡ್ ಫರ್ತ್, ನಾಡೆಲ್ ಅಧ್ಯಯನ ಕೈಗೊಂಡು ಶ್ರೇಷ್ಠವಾದ ಮತ್ತು ಮಹತ್ತರವಾದ ದಾಖಲೆ ಮತ್ತು ಮಾದರಿಯನ್ನು ಮಾನವಶಾಸ್ತ್ರಲೋಕಕ್ಕೆ ನೀಡಿದ್ದಾರೆ.

### ಅಧ್ಯಯನದ ಉದ್ದೇಶ

ಆದಿವಾಸಿಗಳಲ್ಲಿರುವ ಒಂದು ಪ್ರಮುಖವಾದ ಸಾಂಸ್ಕೃತಿಕ ವ್ಯವಸ್ಥೆ, ಅದರ ಆಚರಣೆಗಳು ಮತ್ತು ಮಹತ್ವಗಳ ಕುರಿತು ಬುಡಕಟ್ಟುಗಳ ಅಧ್ಯಯನದ ಭಾಗವಾಗಿ ಹೊರ ಪ್ರಪಂಚಕ್ಕೆ ಅನಾವರಣಗೊಂಡಿಲ್ಲ. ಬುಡಕಟ್ಟುಗಳು ಸಾಂಸ್ಕೃತಿಕವಾಗಿ ತಮ್ಮ ಸಮಾಜವನ್ನು ಕಟ್ಟಿಕೊಳ್ಳುವ ವಿಕಾಸದ ಹಾದಿಯಲ್ಲಿ ತಮ್ಮ ಬೇಟೆ, ಆಹಾರ, ಪಶುಪಾಲನೆ, ಕೃಷಿ, ಕಾಡಿನ ಕಿರು ಉತ್ಪನ್ನಗಳು ಸಂಗಾತಿ ಹಾಗೂ ಸಂತತಿಗಳ ಹಂಚಿಕೆಗಳ ವಿಚಾರದಲ್ಲಿ ಸಾವಿರಾರು ವರ್ಷಗಳಲ್ಲಿ ರೂಪಿಸಲಾಗಿರುವ ಸಂಗತಿಯೇ 'ಸೀಮಾವಲಯ'ವಾಗಿದೆ. ಅದರ ಬಗೆಗಿನ ಉಪಾಸನೆಗಳು (Rituals), ಆಚರಣೆಗಳು, ದೈವಗಳು, ಪಾರಂಪರಿಕ ಜ್ಞಾನ, ಚಿಕಿತ್ಸಾವಿಧಾನ, ಸ್ವಯಂ ಆಡಳಿತವ್ಯವಸ್ಥೆ ಮತ್ತು ಅದರ ಹಿಂದಿರುವ ಆರ್ಥಿಕ ವ್ಯವಸ್ಥೆ ಇತ್ಯಾದಿಗಳು ಹಾಗೂ ಅದರ ನಿಯಂತ್ರಣಾ ಮತ್ತು ನಿರ್ದೇಶನಗಳ ಬಗ್ಗೆ ಬುಡಕಟ್ಟುಗಳಲ್ಲಿ ಹಾಸುಹೊಕ್ಕಾಗಿರುವ ಅತಿ ಪ್ರಮುಖವಾದ ಒಂದು ಸಾಂಸ್ಕೃತಿಕವಾದ ವ್ಯವಸ್ಥೆಯಾದ ಸೀಮೆ, ಗಡಿ, ಜಮ್ಮಾ, ಎಲ್ಲೆ ಹೀಗೆ ಬುಡಕಟ್ಟುಗಳಿಂದ ಮೌಖಿಕವಾಗಿ ಕರೆಯಿಸಿಕೊಳ್ಳಲಾಗಿರುವ 'ಸೀಮಾಪದ್ಧತಿ' ಕುರಿತು ಇಲ್ಲಿಯವರೆಗು ಮಾವನಶಾಸ್ತ್ರಜ್ಞರಾಗಲಿ (Anthropologist), ಮಾನವಕುಲಶಾಸ್ತ್ರಜ್ಞಾರಾಗಲಿ (Ethnologist).

ಭಾರತದ ಆದಿವಾಸಿಗಳ ಒಳಮರ್ಮ ಅರಿಯಲೆಂದೇ ವಿಶೇಷವಾಗಿ ಕರೆತಂದ ವಿದೇಶಿ ವಿದ್ವಾಂಸರುಗಳಾದ ಪೌರಸ್ತವಾದಿ (Orientalists)ಗಳಾಗಲಿ ಅಥವಾ ಭಾರತೀಯ ಅಧ್ಯಯನಕಾರರು, ಸಂಶೋಧಕರಾಗಲಿ ಯಾಕೆ ಇಂತಹ ಬುಡಕಟ್ಟು ಸಮುದಾಯದ ಪ್ರಮುಖ ಸಾಂಸ್ಕೃತಿಕ ಸಂಗತಿಯನ್ನು ಅಧ್ಯಯನಕ್ಕೊಳಪಡಿಸದೇ, ಈ ಬಗ್ಗೆ ಗಮನ ಹರಿಸದೇ ಈ ಅಂಶವನ್ನು ಹೊರಗಿಟ್ಟರು ಎಂಬ ವಿಷಯವೇ ಅತ್ಯಂತ ಸೋಜಿಗವೂ, ಆಶ್ಚರ್ಯವೂ, ಪ್ರಶ್ನಾರ್ಥಕವೂ ಆಗಿದೆ.

ಆರಂಭದಲ್ಲಿ ಈ ದೇಶವನ್ನು ಆಳಿದ ಈಸ್ಟ್ ಇಂಡಿಯಾ ಕಂಪನಿಯು ಭಾರತದ ಸಮುದಾಯಗಳ ಭಾಷೆ ಮತ್ತು ಸಂಸ್ಕೃತಿಯನ್ನು ಅರಿತುಕೊಳ್ಳಬೇಕಾಗಿತ್ತು(British Orientalism 1772 to 1820). ಬ್ಯಾಬಿಗ್‌ಟನ್ ಮ್ಯಾಕಲೇ ಮತ್ತು ಜಾನ್ ಸ್ಟುವರ್ಟ್ ಮಿಲ್ ಈಸ್ಟ್ ಇಂಡಿಯಾ ಕಂಪನಿಯು ಭಾರತದ, ಭಾಷೆ, ಸಂಸ್ಕೃತಿ, ಪಾರಂಪರಿಕ ಜ್ಞಾನ ಮತ್ತು ಸಾಮಾಜಿಕ ವ್ಯವಸ್ಥೆಯನ್ನರಿಯಲು The Discovery of India ಭಾರತದ ಅನ್ವೇಷಣೆಗೆ ಶುರುವಿಟ್ಟುಕೊಂಡರು. ಅದರ ಅಧ್ಯಯನಕ್ಕಾಗಿ ವಿಲಿಯಂ ಜೋನ್ಸ್, ಹೆನ್ರಿ ಕೊಲ್‌ಬ್ರೂಕ್ ಮತ್ತು ಹೊರೆಸ್ಸ ಹೈಮನ್ ವಿಲ್ಸನ್ ಇವರು ಸಂಸ್ಕೃತ, ಪುರಾಣ, ವೇದ ಉಪನಿಷತ್ತುಗಳನ್ನು ಅಧ್ಯಯನ ಮಾಡಿ ತಮ್ಮ ಭಾಷೆಗಳಿಗೆ ತರ್ಜುಮೆ ಮಾಡಿದರು. ಕಾಡು ಮತ್ತು ಅದರೊಳಗಿನ ಜೀವಿಗಳ ಜೊತೆ ಅನುಸಂಧಾನದ ಅವಿನಾಭಾವ ಸಂಬಂಧಗಳನ್ನಿಟ್ಟುಕೊಂಡ ಕಾಡಿನ ಭಾಗವೇ ತಮ್ಮ ಸಮುದಾಯದ ಸಾಂಸ್ಕೃತಿಕ ಸಮಾಜವನ್ನು ರೂಪಿಸಿಕೊಂಡ ಬುಡಕಟ್ಟುಗಳು. ಕಾಡನ್ನೆಂದೂ ಆಸ್ತಿಯನ್ನಾಗಿ ತನ್ನ ಒಡೆತನದ ಭಾಗವೆಂದು ಪರಿಗಣಿಸಿ ಅಲ್ಲಿನ ಸಂಪನ್ಮೂಲಗಳನ್ನೆಂದೂ ಮಾರಾಟದ ಸರಕನ್ನಾಗಿ ಬಳಸಿಕೊಳ್ಳಲಿಲ್ಲ. ಆದರೆ ವಸಾಹತುಶಾಹಿಗಳು ವ್ಯಾಪಾರದ ದೃಷ್ಟಿಯಿಂದ ಸಂಪನ್ಮೂಲಗಳ ಮೇಲಿನ ಹಿಡಿತ ಸಾಧಿಸಲು ಯುರೋಪಿನ ವಿದ್ವಾಂಸರುಗಳಿಂದ (Orientalilsts) ತಮ್ಮ ಅಗತ್ಯತೆಯ ಮೂಗಿನ ನೇರಕ್ಕೆ ಅಧ್ಯಯನಗಳನ್ನು ಮಾಡಿದರು. ಅವರು ಕಾಡಿನ ಭಾವನಾತ್ಮಕವಾದ ಅನೇಕ ಸಾಂಸ್ಕೃತಿಕ ಒಳಮಗ್ಗಲುಗಳಲ್ಲಿರುವ ಆದಿವಾಸಿಗ್ಳ ಮಹತ್ತರವಾದ ಸಂಗತಿಗಳನ್ನು ಅಧ್ಯಯನಗಳಲ್ಲಿ ಅನಾವರಣಗೊಳಿಸಲಿಲ್ಲ. ತಮ್ಮ ಅಗತ್ಯಕ್ಕೆ ಅಧ್ಯಯನ ಮಾಡಿ ತಿಪ್ಪೆ ಸಾರಿಸಿ ಬಿಟ್ಟರು. ಕಾರಣ, ಬುಡಕಟ್ಟುಗಳ ಅನೇಕ ಶ್ರೇಷ್ಠವಾದ ಸಾಂಸ್ಕೃತಿಕ ಮೌಲ್ಯಗಳನ್ನು, ಮಹತ್ವದ ಆಚರಣೆಗಳನ್ನು ಅಧ್ಯಯನಕ್ಕೆ ಒಳಪಡದೇ ಆದಿವಾಸಿಗಳ ಅನೇಕ ಸಂಗತಿಗಳು ಹೊರಪ್ರಪಂಚಕ್ಕೆ ಅಗೋಚರವಾಗೇ ಉಳಿದುಬಿಟ್ಟವು.

ನಂತರ ಬಂದ ಎಡ್ಗರ್ ಥರ್ಸ್‌ಟನ್, ಫ್ರಾನ್ಸಿಸ್ ಬುಕಾನನ್, ವೆರಿಯರ್ ಎಲ್ವಿನ್, ಅಬ್ಬೆ ದುಬಾಯಿಸ್, ಆರ್.ವಿ. ಎಂತೋವನ್, WHR ರಿವರ್ಸ್, ರೇಮಂಡ್ ಫ್ರಿಕ್, ಜೇಮ್ ಜಾರ್ಜ್ ಫೇಸರ್, ಲೂಯಿಸ್, ರೆವಿಸ್ ರೈಸ್, ಹೆನ್ಮಿವೈಟ್ ಹುಡ್‌ಗಳಿಂದ ಹಿಡಿದು ರಂಗಾಚಾರಿ.

ಅನಂತಕೃಷ್ಣ ಅಯ್ಯರ್, ಪಿ.ಕೆ.ನಂಬಿಯಾರ್, ಕೆ.ಎಸ್. ಸಿಂಗ್, ಅವರ ಅಧ್ಯಯನಗಳಲ್ಲಿ ಈ ಸೀಮಾಪದ್ಧತಿಯ ಬಗ್ಗೆ ಎಲ್ಲೂ ಪ್ರಸ್ತಾಪವಾಗದೇ ಉಳಿದ ಈ ವಿಚಾರ ಅತ್ಯಂತ ಆಶ್ಚರ್ಯವನ್ನುಂಟು ಮಾಡಿದೆ. ಎ.ಎಸ್. ಪ್ರಭಾಕರ್ ಸಂಪಾದಕತ್ವದ 'ಆದಿವಾಸಿ ಆಖ್ಯಾನ' ಪುಸ್ತಕಕ್ಕೆ ನಾನು ಬರೆದ 'ಬುಡಕಟ್ಟುಗಳಲ್ಲಿ ಸೀಮಾಪದ್ಧತಿ' ಎಂಬ ಲೇಖನವನ್ನು ಹೊರತಾಗಿಸಿ, ಸೀಮಾಪದ್ಧತಿಯ ಕುರಿತ ಅಧ್ಯಯನಗಳು ನಡೆದಿಲ್ಲ.

ಹೀಗಿರುವ ವ್ಯವಸ್ಥಿತವಾದ ಸೀಮಾವಲಯದೊಳಗಿನ ಹಾಡಿಗಾಗಿ ದುಡಿದ, ಮಡಿದ ವೀರರುಗಳ ಆತ್ಮಗಳೂ ದೈವಗಳಾಗುತ್ತವೆ. ಗಿಡಮರ ಬಳ್ಳಿ, ಕಲ್ಲು, ಕಾಡಿನ ಅನೇಕ ಜೀವಿಗಳೇ ಇವರ ಪೂಜೆಯ ವಸ್ತುಗಳಾಗಿ ವಿವಿಧ ಜವಾಬ್ದಾರಿ ಪಾತ್ರಗಳನ್ನು ವಹಿಸಿಕೊಳ್ಳುತ್ತವೆ. ಸಾಂಪ್ರದಾಯಿಕ ಸಹಜ ಕೃಷಿ, ಕುಂಬರಿ ಬೇಸಾಯ, ಬೇಟೆ ಕಾಡಿನ ಉತ್ಪನ್ನಗಳ ಸಂಗ್ರಹ, ರೋಗರುಜಿನಗಳಿಗೆ ಕಾಡಿನ ಗಿಡಮೂಲಿಕೆಗಳ ಚಿಕಿತ್ಸೆ, ನಿತ್ಯಬಳಕೆಗೆ ತಾವೇ ಹೆಣೆದ ಬುಟ್ಟಿ, ತೊಟ್ಟಿಲು, ಕೇರುಮರ, ಕಡೆಯುವಮಂತು, ಮೀನು ಹಿಡಿಯುವ, ಬೇಟೆಯಾಡುವ ಸಾಧನಗಳು, ತಾನೇ ಹೆಣೆದ ಚಾಪೆ, ಆಟಿಕೆಗಳು ಮರದಿಂದ ಕೆತ್ತಿದ ಬೊಂಬೆ, ಮುಖವಾಡಗಳು, ದೈವಗಳ ಪೂಜೆ, ಬಲಿ, ಜಾತ್ರೆ, ಉತ್ಸವ, ಹಬ್ಬಹರಿದಿನ, ನೃತ್ಯ, ಹಾಡು ಹಾಗೂ ಬಯಲಾಟ ಪಾರಂಪರಿಕ ಜ್ಞಾನಗಳು, ಇವರುಗಳ ನಿಯಮ, ವ್ಯಾಜ್ಯ, ಸಮಸ್ಯೆಗಳ ಸುಸ್ಥಿತಿಯಲ್ಲಿಟ್ಟುಕೊಳ್ಳಲು ನ್ಯಾಯಮಂಡಳಿ ಇರುತ್ತದೆ. ಮೇಲೆ ಹೇಳಲಾಗಿರುವ ಬುಡಕಟ್ಟುಗಳ ಎಲ್ಲಾ ಬಗೆಯ ಕಾರ್ಯಚಟುವಟಿಕೆ, ಸಂಸ್ಕೃತಿ ಉಪಾಸನೆ(Rituals)ಗಳನ್ನು ಕೇಂದ್ರಸ್ಥಾನದಲ್ಲಿದ್ದುಕೊಂಡು ಅವುಗಳನ್ನು ನಿಯಂತ್ರಿಸಲು ಒಬ್ಬ ಮುಖ್ಯ 'ಬುದವಂತ' ನಿರುತ್ತಾನೆ. ಈತ ಇಡೀ ಸಮುದಾಯದ ಸೀಮಾವಲಯದ ಸಾಮ್ರಾಜ್ಯದ ಮುಖ್ಯ ಸೂತ್ರಧಾರ. ಬೇರೆ ಬೇರೆ ಸಮುದಾಯಗಳಲ್ಲಿ ಈತನಿಗೆ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಅಜ್ಜಯ್ಯ, ಗುಡ್ಡಯ್ಯ, ಬಂಜೆಕಾಳ, ಪೂಜಾರಿ ಹೀಗೆ ಬುದವಂತನು ದೈವಗಳು, ಆತ್ಮಗಳು, ನ್ಯಾಯಮಂಡಳಿ, ಸಮುದಾಯ ಇತ್ಯಾದಿಗಳ ಮಧ್ಯೆ ಸಂವಹನದ ಸಂಪರ್ಕವನ್ನೇರ್ಪಡಿಸಿ ಸೀಮಾವ್ಯವಸ್ಥೆಯನ್ನು ನಡೆಸುವ, ನಿಯಂತ್ರಿಸುವ ಮುಖ್ಯ ಪಾತ್ರ ವಹಿಸಿರುತ್ತಾನೆ. ದೈವಗಳು ಮತ್ತು ಮಡಿದವರ ಆತ್ಮಗಳ ಆವಾಹನೆ ಮಾಡಿಕೊಂಡು ಅವುಗಳ ಜೊತೆ ಸಂವಹನ, ಸಂಭಾಷಣೆಯನ್ನು ನಡೆಸಿ ಸಮುದಾಯಗಳ ಜೊತೆ ಸಂಪರ್ಕಕೊಂಡಿ ಏರ್ಪಡಿಸುವವನೇ ಈತ. ಈತನ ಮೈ ಮೇಲೆ ಆತ್ಮಗಳು, ದೈವಗಳು ಆವಾಹನೆಯಾಗಿ ಸಮಸ್ಯೆಗಳಿಗೆ ಪರಿಹಾರ ಮತ್ತು ಬುಡಕಟ್ಟು ಚಟುವಟಿಕೆಗಳ ಕಾರ್ಯ ಹಾಗೂ ಬದುಕಿನ ದಾರಿಯನ್ನು ನಿರ್ದೇಶಿಸುತ್ತವೆ. ಅದರ ಆಣತಿಯಂತೆ ನ್ಯಾಯಮಂಡಳಿ ಕೂಡ ನಡೆದುಕೊಳ್ಳುತ್ತದೆ. ಹಾಡಿಗಳಲ್ಲಿ ತಗಲುವ ರೋಗ ರುಜಿನಗಳಿಗೆ ಚಿಕಿತ್ಸೆ ನೀಡುವ ಮುಖ್ಯ ನಾಟಿ ವೈದ್ಯನೂ ಈತನೇ ಆಗಿರುತ್ತಾನೆ. ದನಕರುಗಳಿಗೆ ತಗಲುವ ರೋಗಗಳಿಗೆ ಚಿಕಿತ್ಸೆಯನ್ನು ಈತನೇ ನೀಡುತ್ತಾನೆ. ಮಾಟಮಂತ್ರ, ಯಂತ್ರತಂತ್ರ ಮತ್ತು ನೋಟಗಳ ಜವಾಬ್ದಾರಿಗಳನ್ನು ನಿಭಾಯಿಸುವವನು ಈತನೇ ಆಗಿರುತ್ತಾನೆ.

ಒಟ್ಟಾರೆಯಾಗಿ ವಿವಿಧ ಬುಡಕಟ್ಟುಗಳಲ್ಲಿರುವ ಸೀಮಾಪದ್ಧತಿಯ ವ್ಯವಸ್ಥೆಗಳಲ್ಲಿ ಹೆಚ್ಚು ಕಡಿಮೆ ಬುದ್ಧಿವಂತ ಮುಖ್ಯ ಸೂತ್ರಧಾರನಿರುತ್ತಾನೆ. ಆತ ಸೀಮಾಪದ್ಧತಿ ವ್ಯವಸ್ಥೆಯಲ್ಲಿ ರಚಿತವಾಗಿರುವ ಹಲವಾರು ಉಪಹಂತ, ವಿಭಾಗ, ವಿವಿಧ ಕಾರ್ಯಚಟುವಟಿಕೆಗಳನ್ನು ನಿಯಂತ್ರಿಸುವ ಕೇಂದ್ರ ಸೂತ್ರಧಾರನಾಗಿರುತ್ತಾನೆ. ಇಂತಹ ವ್ಯವಸ್ಥೆ ಮತ್ತು ಸೂತ್ರಧಾರನಂತಹ ಪಾತ್ರವನ್ನು ಪ್ರಪಂಚದ ಬೇರೆ ಬೇರೆ ದೇಶದ ಬುಡಕಟ್ಟು ಸಮುದಾಯಗಳಲ್ಲಿ ಕಾಣಬಹುದಾಗಿದೆ. ಅಲ್ಲಿ ಇಂತಹ ಸೂತ್ರದಾರನ ಪಾತ್ರಕ್ಕೆ 'ಶಮನ್' ಎಂದು ಕರೆಯುತ್ತಾರೆ(ಕಿಕ್ಕೇರಿ ನಾರಾಯಣ, ಜೇನುಕುರುಬ ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ, ನ್ಯಾಷನಲ್ ಫೋಕ್‌ಲೋರ್ ಸಪೋರ್ಟ್ ಸೆಂಟರ್, 2011).

ಸೀಮಾಪದ್ಧತಿಯ ವ್ಯವಸ್ಥೆಯಲ್ಲಿ ಒಳಗೊಳ್ಳುವ ಉಪಾಸನೆ(Rituals)ಗಳಲ್ಲಿ ಇರಬಹುದಾದ ಸಾಂಸ್ಕೃತಿಕ ರಚನೆ(Syntax), ಅರ್ಥವ್ಯವಸ್ಥೆ(Symatics), ಪಾರಂಪರಿಕ ವ್ಯವಹಾರ(pragmaties) ಹಾಗೂ ಸ್ವಯಂ ಆಡಳಿತವ್ಯವಸ್ಥೆ(Autonomous rule system) ಗಳ ಜೊತೆಗೆ ಪಾರಂಪರಿಕ ಜ್ಞಾನ(Inherited knowledge) ಪರಿಸರದ ವ್ಯವಸ್ಥೆ(Eco-system) ಹಾಗೂ ಜೀವ ವೈವಿಧ್ಯತೆ(Bio-diversity) ಇವುಗಳ ಆಚರಣೆಗಳ ಮಧ್ಯೆ ಇರುವ ಕೊಂಡಿ(link) ಶಮನ್ ಆಗಿರುತ್ತದೆ. ಪ್ರಸ್ತುತ ಬುಡಕಟ್ಟು ಸಮುದಾಯಗಳ ಬದುಕಿನಲ್ಲಿ ಈಗಲೂ ಅಸ್ತಿತ್ವದಲ್ಲಿರುವ ಈ ಸೀಮಾಪದ್ಧತಿಯ ವ್ಯವಸ್ಥೆಯು ಬುಡಕಟ್ಟುಗಳ ಇಡೀ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕಿನ ಮಹತ್ತರವಾದ ನೂರಾರು(ಮೇಲೆ ವಿವರಿಸಿದಂತೆ) ಆಯಾಮಗಳನ್ನು ಅನಾವರಣಗೊಳಿಸುತ್ತದೆ.

ಕರ್ನಾಟಕದ ಬೇರೆ ಬೇರೆ ಬುಡಕಟ್ಟು ಸಮುದಾಯಗಳಲ್ಲಿ ಸೀಮಾಪದ್ಧತಿಯನ್ನು ಬೇರೆ ಬೇರೆ ಹೆಸರುಗಳಲ್ಲಿ ಕರೆಯಲಾಗುತ್ತದೆ. ಈ ಪ್ರಬಂಧವು ಪ್ರಮುಖವಾಗಿ ಉತ್ತರ ಕನ್ನಡ ಜಿಲ್ಲೆಯ ಕುಣಬಿ ಬುಡಕಟ್ಟನ್ನು ಕೇಂದ್ರವಾಗಿಟ್ಟು ಸಂಶೋಧನೆಗೆ ತೊಡಗಿರುವ ಕಾರಣ ಕುಣಬಿಗಳಲ್ಲಿ ಕರೆಯಲಾಗುವ ಈ ಪದ್ಧತಿಯಲ್ಲಿ ಸೀಮಾ ಎಂದು ಕರೆಯುತ್ತಾರೆ. ಆದ್ದರಿಂದ ಪ್ರಬಂಧದ ಶೀರ್ಷಿಕೆಯನ್ನು ಅದೇ ಹೆಸರಿನಲ್ಲಿ ಕರೆಯಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಇತರೆ ಬುಡಕಟ್ಟುಗಳಾದ ಹಾಲಕ್ಕಿ, ಗೊಂಡ ಮತ್ತು ಸಿದ್ದಿ ಸಮುದಾಯಗಳಲ್ಲೂ ಈ ಪದ್ಧತಿಯನ್ನು **'ಸೀಮಾಪದ್ಧತಿ'** ಎಂದೇ ಕರೆಯುತ್ತಾರೆ.

ದಕ್ಷಿಣ ಕರ್ನಾಟಕದ ಮೈಸೂರು, ಚಾಮರಾಜನಗರ ಮತ್ತು ಕೊಡಗು ಜಿಲ್ಲೆಯ ಕಾಡಿನಲ್ಲಿ ವಾಸಿಸುತ್ತಿರುವ ಜೇನುಕುರುಬ ಮತ್ತು ಸೋಲಿಗರಲ್ಲಿ ಈ ಪದ್ಧತಿಯನ್ನು 'ಜಮ್ಮಾ ಪದ್ಧತಿ' ಎಂದು ಕರೆಯುತ್ತಾರೆ. ಆದರೆ ಇದೇ ಭಾಗಗಳಲ್ಲಿ ವಾಸಿಸುತ್ತಿರುವ ಬೆಟ್ಟಕುರುಬ ಆದಿವಾಸಿಗಳು ಇದಕ್ಕೆ **'ಎಲ್ಲೆ'** ಎಂದು ಕರೆಯುತ್ತಾರೆ. ಇವರು ಇದಕ್ಕೆ ಮೊಗೆ ಎಂದು ಕರೆಯುವುದು ಕೂಡ ರೂಢಿಯಲ್ಲಿದೆ. ಸಾಮಾನ್ಯವಾಗಿ ಬೆಟ್ಟಕುರುಬರು ತಮ್ಮ ಕುಲಗಳಿಗೆ

ಮೊಗೆ ಎಂದು ಕರೆಯುತ್ತಾರೆ. ಇವರು ಕುಲ(ಮೊಗೆ)ಗಳ ವಿಂಗಡಣೆಯು ಜನ್ಮಗಳಿಗೆ ತಕ್ಕಂತೆ ವಿಂಗಡಣೆಯಾದ ಕಾರಣ ಮೊಗೆ ಎಂತಲೂ ಕರೆಯಲಾಗುತ್ತದೆ ಎನ್ನುತ್ತಾರೆ.

ಬಯಲುಸೀಮೆಯ ಪಶುಪಾಲಕ ಬುಡಕಟ್ಟುಗಳಾದ ಮ್ಯಾಸಬೇಡ ಮತ್ತು ಕಾಡುಗೊಲ್ಲರಲ್ಲಿ ಈ ವಲಯವ್ಯವಸ್ಥೆಗೆ 'ಗಡಿ' ಎಂದೇ ಹೆಸರಿಸುತ್ತಾರೆ. ಸಿದ್ದಿ, ಕುಣಬಿ, ಹಾಲಕ್ಕಿ ಬುಡಕಟ್ಟುಗಳಲ್ಲಿ ಶಮನ್ ಪಾತ್ರವನ್ನು ವಹಿಸುವವರಿಗೆ ಬುದವಂತನೆಂತಲೂ ಜೇನುಕುರುಬರಲ್ಲಿ ಗುಡ್ಡಯ್ಯನೆಂತಲೂ, ಬೆಟ್ಟಕುರುಬರಲ್ಲಿ ಬಿಂಜೆಕಾಳನೆಂತಲೂ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳಲ್ಲಿ ಪಟ್ಟದ ಪೂಜಾರಿಗಳೆಂತಲೂ ಕರೆಯುತ್ತಾರೆ.

ಸಮುದಾಯದ ಕೃಷಿ, ತಮ್ಮ ಸೀಮೆಯ ಕಾಡನ್ನು ಪೂರ್ವಜರ ಆತ್ಮಗಳು ನಂಬಿದ ದೈವಗಳು ಸದಾ ಸಂರಕ್ಷಿಸುತ್ತಿರುತ್ತವೆಂಬ ಬುಡಕಟ್ಟುಗಳ ಗಾಢವಾದ ನಂಬಿಕೆ, ಸೀಮಾವಲಯ ದೊಳಗಿನ ಅವರ ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ನಿರೀಕ್ಷಣೆಗಳಿಲ್ಲದೆ ನಿಶ್ಚಿಂತೆಯಿಂದಿರುವಂತೆ ವ್ಯವಸ್ಥೆ ಕಲ್ಪಿಸಿದೆ. ಬುಡಕಟ್ಟು ಸಮುದಾಯಗಳು ತಮಗಿರುವ ಸಮಸ್ಯೆ, ನೋವು, ಧಾವಂತ, ಭಯ ಮತ್ತು ಆತಂಕಗಳೆಲ್ಲವನ್ನು ದೈವ ಮತ್ತು ಬುದವಂತ ಹಾಗೂ ನ್ಯಾಯಮಂಡಳಿಯ ಜವಾಬ್ದಾರಿಯ ಮಡಿಲಿಗೆ ಹಾಕಿ ತಾವು ನಿಶ್ಚಿಂತರಾಗಿ ಹಾಡಿ ಕುಣಿದು ಕುಡಿದು ನೆಮ್ಮದಿಯ ನಿದ್ರೆ ಮಾಡಿ ಬದುಕು ನೂಕುತ್ತಾರೆ.

ಆ ಕಾರಣಕ್ಕಾಗಿಯೇ ಬುಡಕಟ್ಟು ಸಮುದಾಯಗಳು, ತಮ್ಮ ಬದುಕಲ್ಲಿ ಕಂಡುಕೊಂಡ ಬೇರೆ ಬೇರೆ ಜಟಿಲವಾದ ಸಮಸ್ಯೆಗಳನ್ನು ಬಗೆಹರಿಸಲು ಬೇರೆ ಬೇರೆ ದೈವಗಳನ್ನು ಆಯ್ಕೆ ಮಾಡಿ ಆಯಾ ಸಮಸ್ಯೆಗಳಿಗೆ ಆಯಾ ದೈವಗಳೇ ಪರಿಹಾರ ನೀಡುವ ವ್ಯವಸ್ಥೆಯನ್ನು ಸೀಮಾಪದ್ಧತಿಯ ವಲಯದೊಳಗೆ ನಿರ್ಮಿಸಿಕೊಂಡಿದ್ದಾರೆ. ಹಾಗಾಗಿ ಬೇರೆ ಬೇರೆ ಋತುಮಾನಗಳಲ್ಲಿ ಸಮಸ್ಯೆಗಳಿಗೆ ಸಂಬಂಧಪಟ್ಟ ದೈವಗಳಿಗೆ ಬಲಿ, ಕಾಣಿಕೆ, ಪೂಜೆ, ಹರಕೆ, ಹಬ್ಬ ಹರಿದಿನ ಜಾತ್ರೆ, ಉತ್ಸವ, ಹರಕೆಗಳಂತಹ ವಿವಿಧ ಉಪಾಸನೆ(Rituals)ಗಳನ್ನು ದೈವಗಳ ಸಂತುಷ್ಟಿ ಮತ್ತು ತೃಪ್ತಿಪಡಿಸಲು ಆಚರಣೆಗಳನ್ನು ನಡೆಸಿಕೊಂಡು ಬಂದಿರುತ್ತಾರೆ.

ಬುಡಕಟ್ಟುಗಳು ಸಾಂಸ್ಕೃತಿಕವಾಗಿ ರೂಢಿಸಿಕೊಂಡು ಬಂದಿರುವ ಸೀಮಾಪದ್ಧತಿ ವ್ಯವಸ್ಥೆಯ ನೀತಿನಿಯಮಗಳನ್ನು ಮೀರಿ ತಾವು ಹಾಕಿಕೊಂಡ ಗೆರೆ ದಾಟಿ ಉಪಚಾರ ಮಾಡಿ ತಪ್ಪು ಮಾರ್ಗದಲ್ಲಿ ನಡೆದುಕೊಂಡರೆ ಅದು ಸೀಮೋಲ್ಲಂಘನೆಯಾಗುತ್ತದೆ. ಅದಕ್ಕಾಗಿ ನ್ಯಾಯಮಂಡಳಿ ಗಳಿದ್ದು, ಅವು ಸೀಮೆಯ ಉಲ್ಲಂಘನೆಯ ರೀತಿ, ಪ್ರಮಾಣ ಮತ್ತು ಅದರ ತೀವ್ರತೆಗನುಗುಣವಾಗಿ, ದಂಡ, ಶಿಕ್ಷೆ, ಬಹಿಷ್ಕಾರಗಳನ್ನು ವಿಧಿಸುವ ಕ್ರಮ ಸೀಮಾವ್ಯವಸ್ಥೆಯಲ್ಲಿದೆ. ನ್ಯಾಯಮಂಡಳಿ ನ್ಯಾಯತೀರ್ಮಾನವನ್ನು ಮುಂಚೆಯೇ ಇಂತಹ ಅನಾಚಾರಗಳ ಆಗುಹೋಗುಗಳನ್ನು ಸದಾ ಗಮನಿಸುತ್ತಿರುವ ಸಂಬಂಧಪಟ್ಟ ಗಡಿದೈವಗಳು, ಹಿರಿಯ ಆತ್ಮಗಳು ಅದಕ್ಕೆ ತಕ್ಕ ಶಿಕ್ಷೆಯನ್ನು ಬೇರೆ ಬೇರೆ ರೂಪದಲ್ಲಿ ನೀಡುತ್ತವೆಂದು ಬುಡಕಟ್ಟುಗಳು ಬಲಿಷ್ಠವಾಗಿ ನಂಬಿರುತ್ತಾರೆ. ಹಾಡಿಯಲ್ಲಿ

ಉಂಟಾಗುವ ಯಾವುದೇ ರೀತಿಯ ವ್ಯತಿರಿಕ್ತ ಬದಲಾವಣೆ, ಪ್ರಮಾದ, ರೋಗರುಜಿನ, ಸಾವು ನೋವು, ವ್ಯಾಜ್ಯ ಕಾಡಿನ ಪ್ರಾಣಿಗಳ ಆಕ್ರಮಣ, ಬರ, ಅತಿವೃಷ್ಟಿ ಅನಾವೃಷ್ಟಿ ಯಾವುದೇ ರೀತಿಯ ವ್ಯತ್ಯಯಗಳಿಗೂ ಹಾಡಿಯೊಳಗಿನ ಸೀಮೋಲ್ಲಂಘನೆಯ ಪರಿಣಾಮವೆಂದೇ ಭಾವಿಸುತ್ತಾರೆ. ಪರಿಸರದಲ್ಲುಂಟಾಗುವ ವ್ಯತ್ಯಯ, ಕಾಡಿನೊಳಗಣ ವೈಪರೀತ್ಯಗಳಿಗೆಲ್ಲಾ ನಾವು ಹಾಕಿಕೊಂಡ ಗೆರೆ ದಾಟಿದ್ದೇವೆಂಬ ಪಾಪಪ್ರಜ್ಞೆ ಅದರ ಪಶ್ಚಾತಾಪಕ್ಕಾಗಿ, ಪ್ರಾಯಶ್ಚಿತಕ್ಕಾಗಿ ಮತ್ತೆ ದೈವಗಳ ಮೊರೆ ಹೋಗಿ ತಮ್ಮೊಳಗೆ ತಾವೇ ಶಿಕ್ಷಿಸಿಕೊಳ್ಳುವ, ತನ್ಮೂಲಕ ಪರಿಶುದ್ಧರಾಗಿ ಹೊರಹೊಮ್ಮುವ ಅವರ ಇಂತಹ ಆಚರಣೆಗಳು ಬುಡಕಟ್ಟುಗಳ ಸಾಂಸ್ಕೃತಿಕ ಸಾಮಾಜಿಕ ಬದುಕನ್ನು ನೆಮ್ಮದಿಯಿಂದ ಇಟ್ಟಿದೆ ಮತ್ತು ಶ್ರೀಮಂತಗೊಳಿಸಿದೆ.

ಈ ಕೆಳಗಿನ ಉದ್ದೇಶಗಳನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

1. ಸೀಮಾಪದ್ಧತಿಯ ಪಾರಂಪರಿಕ ಆಚರಣೆ, ಉಪಾಸನೆಗಳ ಮಹತ್ವ ಮತ್ತು ಸ್ವರೂಪವನ್ನು ತಿಳಿಯುವುದು ಮತ್ತು ಅಧ್ಯಯನವನ್ನು ದಾಖಲಿಸುವ ಮೂಲಕ ಹೊರಜಗತ್ತಿಗೆ ಅದರ ಮಹತ್ವವನ್ನು ಅನಾವರಣಗೊಳಿಸುವುದು.

2. ಅರಣ್ಯವಾಸಿ ಬುಡಕಟ್ಟುಗಳ ಜೀವನವಿಧಾನ ಮತ್ತು ಬಯಲುಸೀಮೆಯ ಜೀವನ ವಿಧಾನಗಳಲ್ಲಿರಬಹುದಾದ ಸೀಮಾಪದ್ಧತಿಯ ತೌಲನಿಕ ಅಧ್ಯಯನದ ಮೂಲಕ ಅವರ ಸೀಮಾಪದ್ಧತಿಯ ಸಾಂಸ್ಕೃತಿಕ ಬದುಕನ್ನು ಅಧ್ಯಯನದ ಶಿಸ್ತಿಗೆ ತಂದು ವಿಶ್ಲೇಷಿಸುವ ಮೂಲಕ ಭೂತ ಮತ್ತು ವರ್ತಮಾನದಲ್ಲಿ ಅವರ ಬದುಕಿನಲ್ಲಿ ಉಂಟಾಗುತ್ತಿರುವ ಸ್ಥಿತ್ಯಂತರಗಳನ್ನು ವಿಶ್ಲೇಷಿಸುವುದು.

3. ಬುಡಕಟ್ಟುಗಳ ಮೂಲಸಂಸ್ಕೃತಿ ಮತ್ತು ಪಾರಂಪರಿಕ ಪೂಜಾ ತಾಣ, ದೇವರಕಾಡು, ಬ್ಯಾಣ, ಸ್ಮಶಾನ, ಗೋಮಾಳ, ಕಾವಲುಗಳು, ಜಾತ್ರೆ ಮತ್ತು ಉತ್ಸವದ ತಾಣಗಳು ಮತ್ತು ಮುಖ್ಯವಾಗಿ ಕಾಡಿನ ಸಾಂಸ್ಕೃತಿಕ ಸೀಮಾವಲಯ ಹಾಗೂ ಕಾಡಿನ ಕಿರು ಉತ್ಪನ್ನಗಳ ಬಳಕೆ ಇವುಗಳ ಮೇಲಿನ ಆದಿವಾಸಿಗಳ ಹಕ್ಕುಗಳನ್ನು ವಿವರಿಸುವುದು.

4. ಬುಡಕಟ್ಟುಗಳ 'ಸೀಮಾಪದ್ಧತಿಯ' ಸಾಮುದಾಯಿಕ ಮತ್ತು ಪಾರಂಪರಿಕ ಮಹತ್ವವನ್ನು ವಿಶ್ಲೇಷಿಸುವುದು. ಜೊತೆಗೆ ಈಗಿನ ಅರಣ್ಯ ಕಾಯ್ದೆ, ವನ್ಯಜೀವ ಸುರಕ್ಷತಾ ಕಾಯ್ದೆಗಳು ಮತ್ತು ಬುಡಕಟ್ಟುಗಳ ಪಾರಂಪರಿಕ ಜೀವನವಿಧಾನಕ್ಕೂ ನಡುವೆ ಉಂಟಾಗಿರುವ ಸಂಘರ್ಷಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವುದು.

## ಅಧ್ಯಯನದ ಮಹತ್ವ

ಈಶಾನ್ಯ ವಲಯದ ಬುಡಕಟ್ಟುಗಳು ಹಿಂದುಗಳಿಗಿಂತ ಭಿನ್ನವಾದ ಸಂಸ್ಕೃತಿಯನ್ನು ಹೊಂದಿದ್ದು, ತಮಗೆ ಪ್ರತ್ಯೇಕವಾದ ರಾಜ್ಯ ಹಾಗೂ ಸವಲತ್ತುಗಳು ಬೇಕೆಂದು ಹೋರಾಟ

ನಡೆಸಿದ್ದವು. ಅದರ ಪ್ರತಿಫಲವಾಗಿ ಕೇಂದ್ರ ಸರ್ಕಾರ ಈ ಪ್ರದೇಶದ ಜನರಿಗೆ ಹೆಚ್ಚಿನ ಸ್ವಾಯತ್ತತೆಯನ್ನು, ಸವಲತ್ತನ್ನು ನೀಡಿ ಆ ಪ್ರದೇಶಗಳನ್ನು ಪರಿಶಿಷ್ಟ ಪ್ರದೇಶಗಳೆಂದು (scheduled areas) ಎಂದು ಘೋಷಿಸಿದೆ. ಈ ಕಾರಣದಿಂದಾಗಿ ನಾಗಾಲ್ಯಾಂಡ್, ಮಣಿಪುರ, ತ್ರಿಪುರ, ಅರುಣಾಚಲ ಪ್ರದೇಶಗಳಲ್ಲಿ ಬುಡಕಟ್ಟುಗಳು ತಮ್ಮ ಸಂಸ್ಕೃತಿಯನ್ನು ರಕ್ಷಣೆ ಮಾಡಿಕೊಂಡೇ ಕಾಡಿನಲ್ಲಿ ತಮ್ಮ ಜೀವನ ಸಾಗಿಸಬಹುದೆಂದು ಹೆಚ್ಚಿನ ಸ್ವಾಯತ್ತತೆಯನ್ನು ನೀಡಿ, ಕಾಡಿನಲ್ಲಿನ ಸ್ವಾತಂತ್ರ್ಯಕ್ಕೆ ವಿಶೇಷ ಮಹತ್ವ ನೀಡಿದ್ದಾರೆ. ನಂತರ 6th and 7th scheduled ಹಾಗೂ PESA Act ಪ್ರಕಾರ ಅಲ್ಲಿ ಸ್ವಯಂ ಆಡಳಿತವ್ಯವಸ್ಥೆಗೆ ಅವಕಾಶ ನೀಡಲಾಗಿದೆ. ಇದಕ್ಕೆ ಪಂಚಾಯತ್‌ರಾಜ್ 123 section Act ಇದಕ್ಕೆ ಪೂರಕವಾದ Tribal Autonomous self since system ಚಾಲ್ತಿಯಲ್ಲಿದೆ.

ಬುಡಕಟ್ಟುಗಳ ಈ ಮೇಲಿನ ವಿಶೇಷ ಸವಲತ್ತುಗಳಿಗೆ ಆ ಪ್ರದೇಶದ ಆದಿವಾಸಿಗಳ ಸಮಗ್ರ ಹೋರಾಟವೇ ಪ್ರಮುಖವಾದ ಪಾತ್ರವೆಂದು ಬಿಂಬಿಸಲಾಗುತ್ತದೆ. ಆದರೆ ಮೇಲಿನ ವಿಶೇಷ ಕಾಯ್ದೆಗಳನ್ನು ತರಲು ಅದಕ್ಕೆ ಪೂರಕವಾದ ಮಾಹಿತಿಗಳ ಶಕ್ತಿ ಒದಗಿಸಿದ್ದು ಮಾತ್ರ ಆ ಸಮುದಾಯಗಳ ಮೇಲೆ ನಡೆದ ಅಧ್ಯಯಗಳಲ್ಲಿನ ಬುಡಕಟ್ಟುಗಳ ವಿಭಿನ್ನ ರೀತಿಯ ಸಂಸ್ಕೃತಿ ಎನ್ನುವುದನ್ನು ಮರೆಯುವ ಹಾಗಿಲ್ಲ.

ಐರೋಪ್ಯ ವಿದ್ವಾಂಸರಾದ ವೆರಿಯರ್ ಎಲ್ವಿನ್‌ರಿಂದ ಹಿಡಿದು, ಅಂಗಾಮಿ ನಾಗಾ ಮತ್ತು ಸೆಮಾ ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿದ ಹಟ್ಸನ್ ಲೋಟಾ ನಾಗಾ, ಆಮೋ ಹಾಗೂ ರೆಂಗ್ಮಾಗಳ ಬಗ್ಗೆ ಅಧ್ಯಯನ ಮಾಡಿದ ಮಿಲ್ಸ್, ನಾಗಾಗಳ ಬಗ್ಗೆ ವಿಶೇಷ ಅಧ್ಯಯನ ಕೈಗೊಂಡ ಸ್ಮಿತ್ ಹಾಗೂ ಮಜುಂದಾರ್, ನೇಕೆಡ್(Nacked) ನಾಗಾಗಳ ಬಗ್ಗೆ ವಾನ್ ಫ್ಯೂರನ್ ಹೈಮನ್ ಡಾರ್ಫ್ ಮುಂತಾದವರ ಅಧ್ಯಯನದ ಮಾಹಿತಿಗಳು ಆ ಆದಿವಾಸಿ ಸಮುದಾಯಗಳ ಹಕ್ಕನ್ನು ಕಾಪಾಡಲು ಮಹತ್ವವಾದ ಪಾತ್ರ ವಹಿಸಿವೆ. ಅವರು ಭಾರತದ ಮಧ್ಯ ಮತ್ತು ಈಶಾನ್ಯ ವಲಯದ ಬುಡಕಟ್ಟುಗಳಾದ ಮೇರಿಯಾ, ಮುರಿಯ, ಸವೋರಾ, ಅಗೇರಿಯಾ, ಬೈಗಾ, ಬೊಂಡೋ ಈಶಾನ್ಯದ ನಾಗಾ ಹಾಗೂ ನೇಷಾ ಪ್ರದೇಶದ ಬುಡಕಟ್ಟುಗಳ ಮೇಲೆ ಕೈಗೊಂಡ ಅಧ್ಯಯನಗಳು ಆದಿವಾಸಿಗಳು ತಮ್ಮ ಹಕ್ಕುಗಳನ್ನು ಪ್ರತಿಪಾದಿಸುವಾಗ ಅದಕ್ಕೆ ಪೂರಕವಾದ ಮಾಹಿತಿಯ ಆಧಾರಗಳನ್ನು ಒದಗಿಸುವ ಮಹತ್ತರ ಪಾತ್ರವನ್ನು ಅಧ್ಯಯನಗಳು ನಿರ್ವಹಿಸಿವೆ.

ಸಂವಿಧಾನದ ನಿಯಮ 342ನೇ ನಿಯಮದ ಪ್ರಕಾರ ಒಂದು ಆದಿವಾಸಿ ಸಮುದಾಯವು ಸರ್ಕಾರದಿಂದ ಗುರ್ತಿಸಲ್ಪಟ್ಟ ಪರಿಶಿಷ್ಟ ವರ್ಗವೆಂದು ಅನುಸೂಚಿತಗೊಳ್ಳಬೇಕು. ನಿಯಮದ ಪ್ರಕಾರ ಆಯಾ ರಾಜ್ಯ ಸರ್ಕಾರಗಳು ಆ ಸಮುದಾಯಗಳ ಕುಲಶಾಸ್ತ್ರೀಯ ಅಧ್ಯಯನ ನಡೆಸಿ

ಶಾಸಕಾಂಗ ಸಭೆಯಲ್ಲಿಟ್ಟು ಅಂಗೀಕರಿಸಿ ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಕೇಂದ್ರ ಸರ್ಕಾರದ ಬುಡಕಟ್ಟು ಮಂತ್ರಾಲಯದ ಮುಖ್ಯ ಕಾರ್ಯದರ್ಶಿಗಳಿಗೆ ರಾಜ್ಯ ಸರ್ಕಾರದ ದಾಖಲೆ ಮತ್ತು ಶಿಫಾರಸ್ಸುಗಳನ್ನು ಕಳುಹಿಸಬೇಕಾಗುತ್ತದೆ. ಇದನ್ನು ಪರಿಶೀಲಿಸಿದ ಮುಖ್ಯಕಾರ್ಯದರ್ಶಿಗಳು RGI(Res.. Govt. Of India) ಭಾರತ ಸರ್ಕಾರದ ಸಂಶೋಧನಾ ಆಯುಕ್ತರಿಗೆ ವರ್ಗಾಯಿಸುತ್ತಾರೆ. RGI ಇಲಾಖೆಯ ರಾಜ್ಯಸರ್ಕಾರದಿಂದ ಶಿಫಾರಸ್ಸುಗೊಂಡ ಸಮುದಾಯದ ಅಧ್ಯಯನದ ದಾಖಲೆಗಳಲ್ಲಿ ಈ ಕೆಳಗಿನ ಗುಣಲಕ್ಷಣಗಳು ಅಡಕವಾಗಿವೆಯೇ ಎಂದು RGI ಆಯೋಗವು ಪರಿಶೀಲಿಸುತ್ತದೆ.

1. ನಾಗರಿಕ ಸಮುದಾಯದಿಂದ ದೂರವಿದ್ದು ಕಾಡು ಮತ್ತು ಬೆಟ್ಟಗಳಲ್ಲಿ ಬದುಕುವವರು.
2. ನಿಗ್ರೋಯಿಡ್, ಅಸ್ಟ್ರೋಲಾಯಿಡ್, ಮಂಗೋಲಾಯಿಡ್ ಮತ್ತು ಕೆಕೊಸೈಡ್ ಈ ನಾಲ್ಕು ಜನಾಂಗಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿದವರಾಗಿರಬೇಕು.
3. ಬುಡಕಟ್ಟುಗಳು ಪ್ರತ್ಯೇಕವಾದ ಭಾಷೆ, ಸಂಸ್ಕೃತಿ ಮತ್ತು ಉಡುಪು ಹೊಂದಿರಬೇಕು.
4. ಪ್ರಾಚೀನ ಆಚರಣೆಗಳಾದ ಪಿತೃಗಳ ಪೂಜೆ, ಭೂತ ಮತ್ತು ದೆವ್ವಗಳ ಆರಾಧನೆಯನ್ನು ಆಚರಿಸುವವರಾಗಿರಬೇಕು.
5. ಆದಿಮ ಕಸುಬುಗಳಾದ ಬೇಟೆ, ಸಾಮುದಾಯಿಕ ಬೇಸಾಯ, ಕಾಡಿನ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ ವೃತ್ತಿಗಳನ್ನು ಮಾಡುವವರಾಗಿರಬೇಕು.
6. ಮಾಂಸ ಸೇವನೆಯನ್ನು ಮಾಡುವವರಾಗಿರಬೇಕು.
7. ಬುಡಕಟ್ಟುಗಳು ಸಾಮಾನ್ಯವಾಗಿ ಅರೆಬೆತ್ತಲೆ, ಬೆತ್ತಲೆಯಾಗಿದ್ದು ಮರದ ತೊಗಟೆ ಎಲೆಗಳನ್ನು ಉಡುಪುಗಳನ್ನು ಬಳಸುವವರಾಗಿರಬೇಕು.
8. ವಲಸೆ ಸಂಸ್ಕೃತಿಯನ್ನು ಹೊಂದಿದ್ದು ಕುಣಿತ, ಕುಡಿತಗಳಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿರ ಬೇಕು.

RGI ಆಯೋಗವು ರಾಜ್ಯಸರ್ಕಾರ ಸಲ್ಲಿಸಿರುವ ಸಮುದಾಯದ ಕುಲಶಾಸ್ತ್ರೀಯ ಅಧ್ಯಯನದ ವರದಿಯಲ್ಲಿ ಈ ಮೇಲಿನ ಕನಿಷ್ಠ ಗುಣಲಕ್ಷಣಗಳಿದ್ದಲ್ಲಿ ಆ ಬಗ್ಗೆ ಕ್ಷೇತ್ರ ಪರಿಶೀಲನೆ ನಡೆಸಿ ಮನದಟ್ಟಾದ ಮೇಲೆ ಅನುಮೋದನೆಗಾಗಿ ಸಂಸತ್ತಿನ ಮುಖ್ಯ ಕಾರ್ಯದರ್ಶಿಗಳಿಗೆ ವರದಿ ಸಲ್ಲಿಸಲಾಗುತ್ತದೆ. ಸಂಸತ್ತಿನಲ್ಲಿ ಚರ್ಚಿಸಿ ಒಪ್ಪಿಗೆಯಾದ ಮೇಲೆ ರಾಷ್ಟ್ರಪತಿಗಳು ಇದನ್ನು ಅಂಗೀಕರಿಸಬೇಕಾಗುತ್ತದೆ. ಅಲ್ಲಿಂದ ನ್ಯಾಯಾಂಗದಲ್ಲಿ(Supreme Court) ಪರಿಶಿಷ್ಟ ಪಂಗಡವೆಂದು ಅನುಸೂಚಿತಗೊಂಡು ಗೆಜೆಟಿಯರ್‌ನಲ್ಲಿ ಪ್ರಕಟಗೊಳ್ಳುವ

ಮೂಲಕ, ಆ ಸಮುದಾಯವು ಅಧಿಕೃತವಾಗಿ ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಯಾಗಿದೆ ಎಂದು ಘೋಷಣೆಯಾಗುತ್ತದೆ. ಇಷ್ಟು ಹಂತಗಳನ್ನು ದಾಟಿ ಒಂದು ಬುಡಕಟ್ಟು ಪರಿಶಿಷ್ಟ ಪಂಗಡವೆಂದು, ಸರ್ಕಾರದ ಮುದ್ರೆಯೊತ್ತಿ ಹೌದು ಇವರು ಅವರೇ ಎಂದು ದೃಢಪಡಿಸಲು ಎಷ್ಟೆಲ್ಲಾ ಪ್ರಯಾಸದ ದಾರಿ ಸವೆಸಬೇಕಾಗಿದೆ.

ಸಮರ್ಪಕವಾದ ಬುಡಕಟ್ಟುಗಳ ಅಧ್ಯಯನ ಮತ್ತು ವೈಜ್ಞಾನಿಕ ಸಮೀಕ್ಷೆ ನಡೆಸದೇ ಇರುವ ಕಾರಣ ಆಯೋಗ ನಿಗದಿಗೊಳಿಸಿರುವ ಸರ್ವತರಹವಾದ ಗುಣಲಕ್ಷಣಗಳಿದ್ದೂ, ನಿಜವಾದ ಸಮೃದ್ಧ ಬುಡಕಟ್ಟು ಗುಣಲಕ್ಷಣಗಳನ್ನು ಹೊಂದಿರುವ ಅದೆಷ್ಟೋ ಬುಡಕಟ್ಟು ಸಮುದಾಯಗಳು ಅಧ್ಯಯನಕಾರರ ತಪ್ಪುಗಳಿಂದಾಗಿ ಸರ್ಕಾರದಿಂದ ಸಿಗಬಹುದಾದ ಬುಡಕಟ್ಟು ಹಕ್ಕು ಮತ್ತು ಸವಲತ್ತುಗಳಿಂದ ವಂಚಿತರಾಗೇ ಉಳಿದಿರುವ ನಿದರ್ಶನಗಳು ನಮ್ಮ ಮುಂದಿವೆ. ಉದಾಹರಣೆಗೆ ಹಾಲಕ್ಕಿ, ಕುಣಬಿ, ಧಂಗರಗೌಳಿ, ಕಾಡುಗೊಲ್ಲ, ಮ್ಯಾಸಬೇಡ ಮುಂತಾದ ಸಮುದಾಯಗಳು ಈ ಕಾರಣಕ್ಕಾಗಿ ತಮ್ಮದಲ್ಲದ ತಪ್ಪಿಗೆ ಪರಿತಪಿಸುವಂತಹ ಸ್ಥಿತಿ ನಿರ್ಮಾಣವಾಗಿದೆ. ತಮ್ಮ ಸಮುದಾಯಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಿ ಎಂಬ ಇಂತಹ ಸಮುದಾಯಗಳ ಹಲವು ದಶಕಗಳ ಹೋರಾಟಗಳನ್ನು ಸರ್ಕಾರಗಳು ನಿಯೋಜಿಸಿರುವ ಅಧ್ಯಯನಕಾರರ ತಪ್ಪು ವರದಿ ಮತ್ತು ಸಂದೇಶಗಳಿಂದಾಗಿ ಇಂತಹ ಸಮುದಾಯಗಳು ಅವಕಾಶಗಳಿಂದ ವಂಚಿತವಾಗಿವೆ.

ಈ ಅಧ್ಯಯನದ ಪ್ರಮುಖವಾದ ಆಶಯ ಇಲ್ಲಿಯವರೆವಿಗೂ ಹಲವಾರು ಅಧ್ಯಯನ ಸಂಶೋಧನೆಗಳಾಗಿಯೂ ಗಮನಕ್ಕೆ ತರಲಾಗದೇ ಬಿಟ್ಟಿರುವ ಬುಡಕಟ್ಟುಗಳ ಅನೇಕ ಸಾಂಸ್ಕೃತಿಕ ಸಂಗತಿಗಳನ್ನು ದಾಖಲಿಸಿ ಹೊರಪ್ರಪಂಚಕ್ಕೆ ಅನಾವರಣಗೊಳಿಸುವ ಮೂಲಕ ಬುಡಕಟ್ಟು ಸಮುದಾಯಗಳಿಗೆ ಸಿಗಲೇ ಬೇಕಾದ ಮಾನ್ಯತೆ (ಪ.ಪಂಗಡ) ಮತ್ತು ಹಕ್ಕುಗಳ ಪ್ರತಿಪಾದನೆಗೆ ಸೈದ್ಧಾಂತಿಕ, ಸಾಂಸ್ಕೃತಿಕ ದಾಖಲೆಗಳನ್ನು ಅಧ್ಯಯನದ ಮೂಲಕ ಕಟ್ಟಿಕೊಡುವುದು.

ಹೀಗೆ ಹೊರಪ್ರಪಂಚಕ್ಕೆ ಅನಾವರಣಗೊಳ್ಳದ ಆದಿವಾಸಿಗಳ ಸಾಂಸ್ಕೃತಿಕ ಸಂಗತಿಗಳನ್ನು ಅಧ್ಯಯನಗೊಳಿಸಿ ದಾಖಲಿಸುವ, ಮೂಲ ಆದಿವಾಸಿಗಳ ಬದುಕಿನ ಬಗ್ಗೆ ತಪ್ಪಾಗಿ ಗ್ರಹಿಸಿ ಆರೋಪಿಸಿರುವ ಅರಣ್ಯ ಇಲಾಖೆ, ಬಂಡವಾಳಶಾಹಿಗಳು, ಪ್ರವಾಸೋದ್ಯಮಗಳ ಮತ್ತು ಆಡಳಿತವರ್ಗಗಳಿಗೆ ಬುಡಕಟ್ಟುಗಳು ಕಾಡಿನ ಕಂಟಕರಲ್ಲ, ಅವರು ಕಾಡಿನ ಜೈವಿಕ ಕ್ರಿಯೆಯ ಒಂದು ಭಾಗ, ಅವರು ಕಾಡಿನ ಉತ್ಪನ್ನಗಳನ್ನು ದೋಚುವವರಲ್ಲ, ಅವರು ಆ ಕಾಡಿನ ಆಹಾರ ಸರಪಳಿಯ ಒಂದು ಕೊಂಡಿ ಎಂದು ಸಾಬೀತುಪಡಿಸಬೇಕಿದೆ.

ಮುಖ್ಯವಾಗಿ ಆಯಾ ಸಮುದಾಯಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಲು. ಈಶಾನ್ಯ ರಾಜ್ಯಗಳಲ್ಲಿರುವ ರೀತಿ ಬುಡಕಟ್ಟು ಪ್ರದೇಶ(Schedule area)ವೆಂದು ಘೋಷಿಸಲು.

ಪಂಚಾಯತ್ ರಾಜ್ ನಿಯಮದ ಪ್ರಕಾರ ಈ ಭಾಗದ ಸಮುದಾಯಗಳನ್ನು 6th and 7th ಶೆಡ್ಯೂಲ್‌ಗಳಿಗೆ ಸೇರ್ಪಡೆಗೊಳಿಸಿ PESA actನ್ನು ಜಾರಿಗೊಳಿಸಲು ಮತ್ತು Tribal Autonomy and life support system ಅಡಿಯಲ್ಲಿ ಬರುವ ಸ್ವಯಂ ಆಡಳಿತ ಮತ್ತು ಕಾಡಿನ ನಿರ್ವಹಣೆಯ ಹಕ್ಕನ್ನು ಈ ದಕ್ಷಿಣ ಭಾಗದಲ್ಲಿ ಅನುಷ್ಠಾನಗೊಳಿಸುವ ಉದ್ದೇಶ ಆಶಯಗಳನ್ನು ಹೊತ್ತು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ತಾತ್ವಿಕತೆ

ಈ ಅಧ್ಯಯನವು ಬುಡಕಟ್ಟುಗಳಲ್ಲಿ ಇರುವ ಪ್ರಮುಖ ಸಾಂಸ್ಕೃತಿಕ ಆಚರಣೆಯಾದ "ಸೀಮಾಪದ್ಧತಿ"ಯ ವೈಶಿಷ್ಟ್ಯತೆ ಮತ್ತು ಮಹತ್ವಗಳ ಕುರಿತ ಅಧ್ಯಯನವಾಗಿದೆ. ಕರ್ನಾಟಕದ ಸಹ್ಯಾದ್ರಿಯ ಪಶ್ಚಿಮಘಟ್ಟಗಳ ತಪ್ಪಲಿನ ಕಾಡು ಅನೇಕ ಬುಡಕಟ್ಟು ಸಮುದಾಯಗಳು ತಮ್ಮ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಳ್ಳಲು ಆಶ್ರಯ ನೀಡಿದೆ. ದಟ್ಟವಾದ ಅರಣ್ಯಗಳು, ವೈವಿಧ್ಯಮಯ ಜೀವವೈವಿಧ್ಯತೆ ಮತ್ತು ಅರಣ್ಯಸಂಪತ್ತು ಹಾಗೂ ಸದಾ ಹರಿಯುವ ನದಿ, ಜಲಪಾತಗಳಿಂದ ತುಂಬಿರುವ ನೈಸರ್ಗಿಕವಾದ ಪರಿಸರವು ಹಲವಾರು ಬುಡಕಟ್ಟುಗಳ ವಾಸಸ್ಥಾನಕ್ಕೆ ಅವಕಾಶ ಕಲ್ಪಿಸಿದೆ. ಈ ಅಧ್ಯಯನದಲ್ಲಿ 'ಸೀಮಾಪದ್ಧತಿ'ಯ ಕುರಿತು ಪ್ರಮುಖವಾಗಿ ಆಯ್ಕೆ ಮಾಡಿಕೊಂಡಿರುವ 'ಕುಣಬಿ' ಸಮುದಾಯವು ಕರ್ನಾಟಕದ ಸಹ್ಯಾದ್ರಿಯ ತಪ್ಪಲಿನ ವಿವಿಧ ಪ್ರದೇಶಗಳಲ್ಲಿ ನೆಲೆ ನಿಂತಿವೆಯಾದರೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ, ಅದರಲ್ಲೂ 84% ಕಾಡಿನಿಂದ ಕೂಡಿದ ಜೋಯಿಡಾ ತಾಲ್ಲೂಕಿನಲ್ಲಿ ಸಾಂದ್ರತೆಗೊಂಡಿರುವುದು ಕಾಣಬಹುದಾಗಿದೆ. ಕರ್ನಾಟಕದ ಇತರ ಜಿಲ್ಲೆಗಳಲ್ಲಿ ಕ್ರಮವಾಗಿ ಶಿವಮೊಗ್ಗ, ಉಡುಪಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಕುಣಬಿ ಸಮುದಾಯಗಳ ನೆಲೆಗಳಿರುವುದು ಕಂಡುಬಂದಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಜೋಯಿಡಾ ತಾಲ್ಲೂಕಿನಲ್ಲಿ ನೂರಕ್ಕೂ ಹೆಚ್ಚು ಕುಳಾವಿಗಳಲ್ಲಿ(ಹಾಡಿ) ಕುಣಬಿಗಳು ನೆಲೆ ನಿಂತಿದ್ದಾರೆ. ಹಾಗೆಯೇ ಕ್ರಮವಾಗಿ ಬೆರಳಣಿಕೆಯಷ್ಟು ಕುಳಾವಿಗಳಲ್ಲಿ ಅಂದರೆ ಯಲ್ಲಾಪುರ, ಕಾರವಾರ, ಅಂಕೋಲ, ಹಳಿಯಾಳ ಮತ್ತು ಶಿರ್ಸಿ ತಾಲ್ಲೂಕುಗಳಲ್ಲಿ ಕುಣಬಿ ಕುಳಾವಿಗಳಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಶಿವಮೊಗ್ಗ ಜಿಲ್ಲೆಯ ಸಾಗರ, ಹೊಸನಗರ, ಶಿವಮೊಗ್ಗ ತಾಲ್ಲೂಕುಗಳಲ್ಲಿ ಕೆಲವು ಕುಳಾವಿಗಳಲ್ಲಿ ಕುಣಬಿಗಳು ವಾಸಿಸುತ್ತಿದ್ದಾರೆ. ಜೋಯಿಡಾ ತಾಲ್ಲೂಕಿಗೆ ಆತುಕೊಂಡಂತೆ ಇರುವ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ 3–4 ಕುಳಾವಿಗಳಲ್ಲಿ ಕುಣಬಿಗಳ ನೆಲೆಗಳಿವೆ. ದಕ್ಷಿಣ ಕನ್ನಡದ ಉಡುಪಿ ಜಿಲ್ಲೆಯ ಕುಂದಾಪುರ ಮತ್ತು ಕಾರ್ಕಳ ಹಾಗೂ ಮಂಗಳೂರಿನ ಬಂಟ್ವಾಳ ತಾಲ್ಲೂಕಿನಲ್ಲಿ ಹಾಗೂ ಚಿಕ್ಕಮಗಳೂರಿನಲ್ಲಿ ಕೆಲವು ಮನೆಗಳಿರುವುದು ಕಂಡುಬಂದಿದೆ.

ಉತ್ತರ ಕನ್ನಡ ಜಿಲ್ಲೆಗೆ ಆತುಕೊಂಡಿರುವ ಗೋವಾ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಕುಣಬಿಗಳಿರುವುದು ಕಂಡುಬಂದಿದೆ. ಕುಣಬಿಗಳ ಮೂಲ ಗೋವಾ ಅಥವಾ ಗೋವಾ–

ಮಹಾರಾಷ್ಟ್ರದ ಗಡಿ ಪ್ರದೇಶವಾದ ರತ್ನಗಿರಿ ಪ್ರಾಂತ್ಯವಾಗಿದ್ದು, ಅಲ್ಲಿಂದ ಕುಣಬಿಗಳು ಕರ್ನಾಟಕಕ್ಕೆ ವಲಸೆ ಬರಲಾಗಿದೆ ಎಂದು ಅನೇಕ ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ. ಕರ್ನಾಟಕದ ಕುಣಬಿಗಳ ಮೂಲನೆಲೆ ಗೋವಾ ರಾಜ್ಯವಾಗಿದ್ದು, ಅದಕ್ಕೆ ತಾಗಿಕೊಂಡಿರುವ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ಹಾಗೂ ಪಕ್ಕದ ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಈ ಸಮುದಾಯ ವಲಸೆ ಹೋಗಿರಬಹುದೆಂದು ಅಂದಾಜಿಸಲಾಗಿದೆ.

ಕರ್ನಾಟಕದಲ್ಲಿ ನೆಲೆಗೊಂಡಿರುವ ಕುಣಬಿ ಸಮುದಾಯಗಳ ಪೈಕಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ದಟ್ಟಕಾಡಿನಲ್ಲಿರುವ ಕುಣಬಿಗಳ ಬುಡಕಟ್ಟು ಸಂಸ್ಕೃತಿ, ಆಚರಣೆ, ವಿಚಾರ, ಸ್ಥಿತಿಗತಿಗಳು ಇತರೆ ಜಿಲ್ಲೆಯ ಕುಣಬಿ ಸಮುದಾಯಗಳಿಗಿಂತ ಆದಿಮ ಸ್ಥಿತಿಯಲ್ಲಿದೆ. ಜೋಯಿಡಾದಲ್ಲಿನ ಕುಣಬಿಗಳು ದಟ್ಟಕಾಡಿನಲ್ಲಿ ಪ್ರತ್ಯೇಕವಾಗಿ ನಾಗರಿಕ ಬದುಕಿನಿಂದ ದೂರ ಉಳಿದು ಬುಡಕಟ್ಟು ಆದಿಸ್ವರೂಪದ ಸಂಸ್ಕೃತಿ ಜೀವನವನ್ನು ಇನ್ನೂ ಗಾಢವಾಗಿ ಉಳಿಸಿಕೊಂಡು ಬಂದಿದ್ದಾರೆ.

ಜೋಯಿಡಾ ತಾಲ್ಲೂಕು ಗೋವಾ ರಾಜ್ಯಕ್ಕೆ ಅತ್ಯಂತ ಸಮೀಪವಾಗಿ ಆತುಕೊಂಡಿದೆ. ಜೋಯಿಡಾ ತಾಲ್ಲೂಕಿನ ಭಾಷೆ, ಆಚಾರ, ವಿಚಾರಕ್ಕೂ ಗೋವಾದ ಕುಣಬಿಗಳ ಬುಡಕಟ್ಟು ಸ್ವರೂಪಗಳಿಗೂ ಅಷ್ಟೇನೂ ವ್ಯತ್ಯಾಸಗಳಿದ್ದಂತೆ ಕಂಡುಬರುವುದಿಲ್ಲ. ಹಾಗೆ ನೋಡಿದರೆ ಪೋರ್ಚುಗೀಸ್ ಆಕ್ರಮಣ ಮತ್ತು ಗೋವಾ ಅಭಿವೃದ್ಧಿ ಹಾಗೂ ವ್ಯಾಪಾರೀಕರಣಗಳ ಕಾರಣ ಜೋಯಿಡಾ ಕುಣಬಿಗಳಿಗಿಂತ ಗೋವಾ ಕುಣಬಿಗಳು ಹೆಚ್ಚು ಸ್ಥಿತ್ಯಂತರಗೊಂಡು ಮುಖ್ಯವಾಹಿನಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಅಲ್ಲಿನ ಸರ್ಕಾರ ಇವರನ್ನು ಪರಿಶಿಷ್ಟ ಪಂಗಡ ಎಂದು ಘೋಷಿಸಿದೆ.

ಜೋಯಿಡಾದ ಕುಣಬಿಗಳು ಇನ್ನೂ ದುರ್ಗಮವಾದ ಅರಣ್ಯದಲ್ಲಿ ವಾಸಿಸುತ್ತಾ, ಬುಡಕಟ್ಟುಗಳ ಮೂಲಸಂಸ್ಕೃತಿ, ಆದಿಮ ಉಪಾಸನೆ ಹಾಗೂ ಸಮುದಾಯಾಧಾರಿತ ಚಟುವಟಿಕೆ ಆಚರಣೆಗಳನ್ನು ಈಗಲೂ ನಡೆಸಿಕೊಂಡು ಬಂದಿವೆ. ಇದಕ್ಕೆ ನಿದರ್ಶನವೆಂಬಂತೆ ಸಾಂಪ್ರದಾಯಿಕ ಸಹಜ ಸಮುದಾಯಾಧಾರಿತ ಕುಂಬರಿ ಬೇಸಾಯ, ಇನ್ನೂ ದೃಢವಾಗಿ ಆಚರಿಸುತ್ತಿರುವ ಬುಡಕಟ್ಟುಗಳ ಸೀಮಾಪದ್ಧತಿ, ಇತರ ಆಚರಣೆಗಳನ್ನು ಅವಲೋಕಿಸಿದಾಗ ಉತ್ತರ ಕನ್ನಡ ಜಿಲ್ಲೆಯಲ್ಲೇ ಬುಡಕಟ್ಟು ಸಂಸ್ಕೃತಿಯ ದೃಷ್ಟಿಯಲ್ಲಿ ಅತ್ಯಂತ ಮೂಲ ಮತ್ತು ಆದಿಮ ಸ್ಥಿತಿಯಲ್ಲಿರುವ ಬುಡಕಟ್ಟು 'ಕುಣಬಿ' ಸಮುದಾಯ ಎಂಬುಎಂದು ಅಧ್ಯಯನಕಾರರ ಅಭಿಪ್ರಾಯವಾಗಿದೆ. ಅದರೆ ಬಹಳಷ್ಟು ಬೇಡಿಕೆ, ಹೋರಾಟಗಳ ನಡುವೆಯೂ ಕುಣಬಿಗಳನ್ನು ಸರ್ಕಾರಗಳು ಪರಿಶಿಷ್ಟರೆಂದು ಪರಿಗಣಿಸದೇ ಕಡೆಗಣಿಸಿವೆ.

ಬುಡಕಟ್ಟು ಸಂಸ್ಕೃತಿಯಲ್ಲಿ 'ಸೀಮಾಪದ್ಧತಿ'ಯು ಅತ್ಯಂತ ಪ್ರಮುಖವಾದ ಮತ್ತು ಮಹತ್ತರವಾದ ಸಾಂಸ್ಕೃತಿಕ ಪಾತ್ರವನ್ನು ಹೊಂದಿ, ಇಡೀ ಬುಡಕಟ್ಟುಗಳ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಒಂದು ಮುಖ್ಯ ಆಚರಣಾ ಪದ್ಧತಿಯಾಗಿದೆ. ಈ ಸೀಮಾಪದ್ಧತಿಯ ಅಧ್ಯಯನವು ಬುಡಕಟ್ಟುಗಳ ಹಲವಾರು ಸಾಂಸ್ಕೃತಿಕ ಆಯಾಮಗಳನ್ನು ಹೊಂದಿದ್ದು, ಈ ಅಧ್ಯಯನದ ಮೂಲಕ ಬುಡಕಟ್ಟುಗಳ ಬೇರೆ ಬೇರೆ ಸಾಂಸ್ಕೃತಿಕ ಒಳ ಆಳದ ಅನೇಕ ಮಗ್ಗಲುಗಳನ್ನು ಅನಾವರಣಗೊಳಿಸ ಬಹುದಾಗಿದೆ. ತನ್ಮೂಲಕ ಈ ಸಮುದಾಯಗಳ ಸಾಂಸ್ಕೃತಿಕ ಗುಣಲಕ್ಷಣಗಳ ಕೊರತೆ ಇದೆ ಎಂದು, ಪರಿಶಿಷ್ಟರೆಂದು ಅಂಗೀಕರಿಸದೇ ನಿರ್ಲಕ್ಷಿಸುತ್ತಿರುವ ಆಡಳಿತಕ್ಕೆ ಸಮರ್ಪಕವಾದ ಸಾಂಸ್ಕೃತಿಕ ದಾಖಲೆಗಳನ್ನು ಒದಗಿಸುತ್ತದೆ. ಇನ್ನೂ ಹೆಚ್ಚಿನದಾಗಿ ಈಶಾನ್ಯ ರಾಜ್ಯಗಳಲ್ಲಿ ಅಲ್ಲಿನ ಸಮುದಾಯಗಳಿಗೆ ದೊರಕಿರುವ ವಿಶೇಷ ಹಕ್ಕುಗಳು ಮತ್ತು ಸೌಲತ್ತುಗಳನ್ನು ದೊರಕುವಂತಾಗಲು ಮೂಲ ಸಾಂಸ್ಕೃತಿಕ ದಾಖಲೆಗಳನ್ನು ಪೂರೈಸಬೇಕಾಗಿದೆ. ಅದಕ್ಕೂ ಹೆಚ್ಚಿನದಾಗಿ ಕಾಡಿನೊಳಗಿನ ಸೀಮಾಪದ್ಧತಿಯ ಸಾಂಸ್ಕೃತಿಕ ವಲಯದ ಮೇಲಿನ ಹಕ್ಕು ಮತ್ತು ಸ್ವಾಮ್ಯತ್ವವನ್ನು ಬುಡಕಟ್ಟುಗಳು ಪಡೆಯಲು ಮನವಿ ಹೋರಾಟಗಳಿಗೆ ಬುನಾದಿಯಾಗಿ ಈ ಅಧ್ಯಯನದ ಮಾಹಿತಿಗಳು ದಾಖಲೆ ಒದಗಿಸುತ್ತವೆ. ಅಂದರೆ ಅವರ ಬದುಕಿನ ಹಕ್ಕುಗಳನ್ನು ಪಡೆಯಲು ಹೋರಾಟದ ಒಂದು ಭಾಗವಾಗಿ ಈ ಅಧ್ಯಯನ ದಾಖಲೆಯ ಮಾಹಿತಿಗಳನ್ನು ನೀಡುವುದು ಈ ಅಧ್ಯಯನದ ಗುರಿಯಾಗಿದೆ.

ಕುಣಬಿಗಳಲ್ಲಿ 'ಸೀಮಾಪದ್ಧತಿ'ಯು ಪ್ರಸ್ತುತದಲ್ಲಿ ಆಚರಣೆಯಲ್ಲಿದೆ. ಕರ್ನಾಟಕದ ಇತರೆ ಸಮುದಾಯಗಳಿಗೆ ಹೋಲಿಸಿದಲ್ಲಿ ಕುಣಬಿಗಳಲ್ಲಿ ಜೀವಂತವಾಗಿರುವ ಈ ಸೀಮಾಪದ್ಧತಿಯು ಇತರೆ ಬುಡಕಟ್ಟುಗಳ ಪದ್ಧತಿಗಿಂತ ಅತ್ಯಂತ ಆದಿಮ ಸ್ವರೂಪದ ಸಂಸ್ಕೃತಿಯಾಗಿದೆ. ಇತರೆ ಸಮುದಾಯಗಳಾದ ಜೇನುಕುರುಬ, ಸೋಲಿಗ, ಬೆಟ್ಟಕುರುಬ ಬುಡಕಟ್ಟುಗಳನ್ನು ಈಗಾಗಲೇ ಅರಣ್ಯ ಇಲಾಖೆಯ ವನ್ಯಜೀವಿಕಾಯ್ದೆ, ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿಸಂರಕ್ಷಿತ ಪ್ರದೇಶದ ನೆಪವೊಡ್ಡಿ ಕಾಡಿನಿಂದ ಹೊರ ಹಾಕಿರುವ ಕಾರಣ ಮತ್ತು ಹಾಲಕ್ಕಿಗಳು ನಾಗರಿಕತೆಯ ಮುಖ್ಯವಾಹಿನಿಗೆ ಸಿಲುಕಿ ಸೀಮಾಪದ್ಧತಿ ಶಿಥಿಲವಾಗಿರುವ ಕಾರಣ, ಮ್ಯಾಸಬೇಡ ಮತ್ತು ಕಾಡುಗೊಲ್ಲರ ಪಶುಪಾಲನೆಯ ಸೀಮಾಲೋಕವಾದ ಕಾವಲುಗಳು ಮತ್ತು ಗೋಮಾಳಗಳನ್ನು ಅರಣ್ಯ ಇಲಾಖೆ ಮತ್ತು ಅಭಿವೃದ್ಧಿಯ ಹೆಸರಲ್ಲಿ ಕಸಿದುಕೊಂಡ ಕಾರಣ ಹಾಗೂ ಹಕ್ಕಿಪಕ್ಕಿಗಳನ್ನು ಕಳ್ಳರೆಂದು ಅತಂತ್ರಗೊಳಿಸಿರುವ ಕಾರಣ ಆ ಸಮುದಾಯಗಳು ಸೀಮಾಪದ್ಧತಿಯ ಆಚರಣೆಗಳನ್ನು ತಮ್ಮ ಮೂಲಸ್ವರೂಪದಲ್ಲಿ ಉಳಿಸಿಕೊಳ್ಳಲಾಗಿಲ್ಲ.

ಆದರೆ ಕುಣಬಿಗಳನ್ನು ಹೋರಾಟಗಳ ಮೂಲಕ ವನ್ಯಜೀವಿಕಾಯ್ದೆ, ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿ ಸಂರಕ್ಷಿತ ಪ್ರದೇಶ ರಕ್ಷಿಸಿಕೊಂಡು ಕಾಡಿನಿಂದ ಹೊರಹಾಕಲಾಗಿದೆ. ಉಳಿದಿರುವ

ಕಾರಣ ಜೋಯಿಡಾ ತಾಲ್ಲೂಕಿನಲ್ಲಿರುವ ಕುಣಬಿ ಸಮುದಾಯದಲ್ಲಿ 'ಸೀಮಾಪದ್ಧತಿ'ಯ ಆಚರಣೆ ಇಂದಿಗೂ ಆದಿಮ ರೂಪದಲ್ಲಿದೆ. ಜೋಯಿಡಾ ತಾಲ್ಲೂಕಿನ ಕುಣಬಿ ಸಮುದಾಯವನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು, ಕರ್ನಾಟಕದ ಇತರ ಬುಡಕಟ್ಟುಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಉಳಿದಿರಬಹುದಾದ ಸೀಮಾಪದ್ಧತಿಯ ಸಂಗತಿಗಳನ್ನು ಇಲ್ಲಿ ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಇದಕ್ಕಾಗಿ ಜೇನುಕುರುಬ, ಬೆಟ್ಟಕುರುಬ ಸೋಲಿಗ, ಹಾಲಕ್ಕಿ, ಸಿದ್ದಿ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳನ್ನು ಆಯ್ಕೆ ಮಾಡಿಕೊಂಡು ತೌಲನಿಕ ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವನ್ನು ಉತ್ತರ ಕನ್ನಡ ಜಿಲ್ಲೆಯ ಜೋಯಿಡಾದ 'ಕುಣಬಿ' ಬುಡಕಟ್ಟು ಸಮುದಾಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಅಧ್ಯಯನ ವಿಷಯಕ್ಕೆ ತೌಲನಿಕ ವಿಚಾರಗಳಿಗಾಗಿ ಪೂರಕ ಮಾಹಿತಿ ಒದಗಿಸುವ ಕಾರಣಕ್ಕಾಗಿ ಉತ್ತರ ಕನ್ನಡ ಜಿಲ್ಲೆ ಮತ್ತು ಕರ್ನಾಟದ ಇತರ ಬುಡಕಟ್ಟುಗಳಾದ ಹಾಲಕ್ಕಿ, ಸಿದ್ದಿ, ಸೋಲಿಗ, ಜೇನುಕುರುಬ, ಬೆಟ್ಟಕುರುಬ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳ ಸೀಮಾಪದ್ಧತಿಯ ಸಂಸ್ಕೃತಿಗಳ ಸಾಂದರ್ಭಿಕ ಉದಾಹರಣೆಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

**ಆಹಾರ ಸಂಗ್ರಾಹಕ ಸಮುದಾಯಗಳು:** ಜೇನುಕುರುಬ, ಬೆಟ್ಟಕುರುಬ

**ಬೇಟೆಯನ್ನು ಅವಲಂಬಿಸಿದ್ದ ಸಮುದಾಯ:** ಮ್ಯಾಸಬೇಡರು

**ಪಶುಪಾಲಕ ಸಮುದಾಯಗಳು:** ಕಾಡುಗೊಲ್ಲರು

**ಕೃಷಿಕ ಸಮುದಾಯಗಳು:** ಕುಣಬಿ, ಸಿದ್ದಿ, ಹಾಲಕ್ಕಿ ಒಕ್ಕಲು, ಸೋಲಿಗ

ಈ ಮೇಲ್ಕಂಡ ಸಮುದಾಯಗಳಲ್ಲಿನ ಸೀಮಾಪದ್ಧತಿಯನ್ನು ತೌಲನಿಕವಾಗಿ ಅಧ್ಯಯನ ಮಾಡಲು ಅಯ್ಕೆ ಮಾಡಿಕೊಳ್ಳಲಾಗಿದೆ.

ಕುಣಬಿ ಮತ್ತು ಜೋಯಿಡಾ ತಾಲ್ಲೂಕನ್ನು ಆಯ್ಕೆ ಮಾಡಿಕೊಳ್ಳಲು ಇರುವ ಕಾರಣಗಳೆಂದರೆ,

1. ಕರ್ನಾಟಕದ ಇತರ ಬುಡಕಟ್ಟು ವಾಸದ ನೆಲೆಗಳಿಗಿಂತ ಕುಣಬಿ ವಾಸದ ನೆಲೆ ಅತಿ ಹೆಚ್ಚು ದುರ್ಗಮವಾದ 84% ದಟ್ಟಕಾಡಿನಿಂದ ಆವೃತವಾದ ಪ್ರದೇಶವಾಗಿದೆ.
2. ಜೋಯಿಡಾ ತಾಲ್ಲೂಕಿನಲ್ಲಿ ಕರ್ನಾಟಕ ಭಾಗದ ಇತರೆ ಕುಣಬಿ ಸಮುದಾಯಕ್ಕೆ ಹೋಲಿಸಿದರೆ ಹೆಚ್ಚಿನ ಜನಸಂಖ್ಯೆಯಲ್ಲಿ ಅಂದರೆ ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ 75% ಜನಸಂಖ್ಯೆ

ಇದ್ದು, ಹೆಚ್ಚಿನ ಕುಣಬಿ ಬುಡಕಟ್ಟು ಸಾಂದ್ರತೆ ಅಧ್ಯಯನಕ್ಕೆ ಪ್ರಶಸ್ತವಾದ ಮಾಹಿತಿ ಸಂಗ್ರಹಕ್ಕೆ ಪೂರಕವಾಗಿದೆ.

3. ಅಧ್ಯಯನದ ವಿಷಯವಾದ 'ಸೀಮಾಪದ್ಧತಿ'ಯು ಈ ತಾಲ್ಲೂಕಿನಲ್ಲಿ ಇತರೆ ಸಮುದಾಯಗಳಿಗಿಂತ ಜೀವಂತಿಕೆಯಿಂದಲೂ, ಆದಿಮ ಸ್ವರೂಪದಲ್ಲಿಯೂ ಇರುವ ಕಾರಣ ಅಧ್ಯಯನಕ್ಕೆ ಪೂರಕವಾದ ಹೆಚ್ಚಿನ ಮಾಹಿತಿಗಳು ಲಭ್ಯವಾಗುತ್ತವೆ.

4. ಬುಡಕಟ್ಟುಗಳು ಸಾಮೂಹಿಕವಾಗಿ ನಡೆಸಿಕೊಂಡು ಬರಲಾಗುತ್ತಿದ್ದ ಸಾಂಪ್ರದಾಯಿಕ ಸಹಜಕೃಷಿಪದ್ಧತಿ, ಕುಂಬರಿ ಬೇಸಾಯ(zoom cultivation) ಇನ್ನೂ ಆಚರಣೆಯಲ್ಲಿದೆ. (ಬೇರೆಡೆ ಎಲ್ಲ ಸಮುದಾಯಗಳಲ್ಲಿ ಅರಣ್ಯ ಇಲಾಖೆಯ ಕಾಡಿನ ಕಾಯ್ದೆ, ಆದೇಶಗಳ ನೆಪ ಮಾಡಿ ಆಚರಣೆ ನಡೆಸದಂತೆ ಸ್ಥಗಿತಗೊಳಿಸಿವೆ).

5. ಅನೇಕ ಅಭಿವೃದ್ಧಿ ಮತ್ತು ರಾಷ್ಟ್ರೀಯ ಯೋಜನೆಗಳಿಗೆ ಈ ತಾಲ್ಲೂಕು ನೆಲೆ ಒದಗಿಸಿದ್ದು, ಅದರ ಪರಿಣಾಮದಿಂದ ಹೇಗೆ ಕುಣಬಿಗಳು ಅತಂತ್ರರಾಗಿದ್ದಾರೆ ಮತ್ತು ಸೀಮಾಪದ್ಧತಿಯ ಮೇಲೆ ವ್ಯತಿರಿಕ್ತ ಪರಿಣಾಮಗಳಾಗಿವೆಯೆಂದು ಅಧ್ಯಯನ ನಡೆಸಬಹುದು.

6. ಮ್ಯಾಂಗನೀಸ್ ಗಣಿ ನಿಧಿಗಾಗಿ ಹೆಚ್ಚಿನ ಗಣಿಗಾರಿಕೆಗಾಗಿ ಈ ಕಾಡು ದುರ್ಬಳಕೆಗೊಳಗಾಗಿದೆ.

7. ಅತ್ಯಂತ ದೊಡ್ಡ ಜಲಾಶಯ ಸೂಪಾ ಅಣೆಕಟ್ಟಿನಿಂದ 47 ಕುಣಬಿಗಳ ಕಳಾವಿ (ಹಾಡಿ)ಗಳು ಸ್ಥಳಾಂತರಗೊಂಡಿವೆ. ಈ ಕಾರಣ ಅವರ ನೆಲೆ ಸಂಸ್ಕೃತಿ ಅಷ್ಟೇ ಅಲ್ಲ, ಸಾವಿರಾರು ವರ್ಷಗಳಿಂದ ಕಟ್ಟಿಕೊಂಡಿರುವ ಸೀಮಾವ್ಯವಸ್ಥೆ ಸಂಪೂರ್ಣವಾಗಿ ನಿರ್ಗಮವಾಗಿರುವ ಕಾರಣ ಸಮುದಾಯದ ಮೇಲೆ ಉಂಟಾಗಿರುವ ಅನಾಹುತ ಮತ್ತು ವ್ಯತಿರಿಕ್ತ ಪರಿಣಾಮಗಳನ್ನು ಅರಿಯಬಹುದು.

8. ಇಂದಿಗೂ ದಟ್ಟಾರಣ್ಯವನ್ನು ಬಳಸಿಕೊಂಡಿರುವ ಈ ತಾಲ್ಲೂಕು ಪ್ರಪಂಚದಲ್ಲಿ 7ನೆಯ ಹೆಚ್ಚಿನ ಜೀವವೈವಿಧ್ಯತೆಯ ತಾಣವೆಂದು ಘೋಷಿಸಲ್ಪಟ್ಟಿದೆ. ಅಲ್ಲಿರುವ ಜೀವಿಗಳ ವೈವಿಧ್ಯತೆಗೂ ಕುಣಬಿ ಬುಡಕಟ್ಟುಗಳಲ್ಲಿರುವ ಸಾಂಸ್ಕೃತಿಕ ವೈವಿಧ್ಯತೆಗೂ ಪರಸ್ಪರ ಪೂರಕ ಸಂಬಂಧಗಳಿವೆ. ಕಾಡಿನ ಪರಿಸರದ ಜೊತೆಗೆ ಬೆಳೆದ ಅವರ ಕಾಡಿನೊಟ್ಟಿಗಿನ ಅವಿನಾಭಾವ ಸಂಬಂಧ ಮತ್ತು ಅನುಸಂಧಾನಗಳನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ.

9. ಜೊತೆಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ, ಹಳಿಯಾಳ, ಅಂಕೋಲ, ಕುಮಟ ಮತ್ತು ಹೊನ್ನಾವರ ತಾಲ್ಲೂಕುಗಳಲ್ಲಿರುವ ಹಾಲಕ್ಕಿ ಮತ್ತು ಸಿದ್ದಿ ಸಮುದಾಯಗಳಲ್ಲಿನ ಸೀಮಾಪದ್ಧತಿಯನ್ನು ವಿಷಯಕ್ಕೆ ಸಾಂದರ್ಭಿಕ ಉದಾಹರಣೆಯಾಗಿ ಅಧ್ಯಯನ ನಡೆಸಲು ಆಯ್ಕೆ ಮಾಡಿಕೊಳ್ಳಲಾಗಿದ್ದು, ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ, ಮೊಳಕಾಲ್ಮೂರು, ಚಳ್ಳಕೆರೆ, ಹಿರಿಯೂರು ತಾಲ್ಲೂಕುಗಳಲ್ಲಿರುವ ಪಶುಪಾಲನಾ ಬುಡಕಟ್ಟುಗಳಲ್ಲಿನ

ಸೀಮಾಪದ್ಧತಿಯನ್ನು ಅವಲೋಕಿಸಲು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಮೈಸೂರು, ಚಾಮರಾಜನಗರ ಮತ್ತು ಕೊಡಗು ಜಿಲ್ಲೆಗಳಲ್ಲಿರುವ ಸೋಲಿಗರು, ಬೆಟ್ಟಕುರುಬರು ಮತ್ತು ಜೇನುಕುರುಬರ ಕೆಲವು ಹಾಡಿಗಳನ್ನು ಸಾಂದರ್ಭಿಕವಾಗಿ ಉದಾಹರಣೆಯ ಕಾರಣ ಜಮಾಪದ್ಧತಿ/ಸೀಮಾ ಅವಲೋಕನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

10. ಬುಡಕಟ್ಟುಗಳನ್ನು ಕಾಡಿನಿಂದ ಸ್ಥಳಾಂತರಗೊಳಿಸಲು ಕಾರಣವಾಗಿರುವ ಕುದುರೆಮುಖ ಉದ್ಯಾನವನ, ನಾಗರಹೊಳೆ ರಾಷ್ಟ್ರೀಯ ಉದ್ಯಾನವನ ಮತ್ತು ಅಣಸಿ ರಾಷ್ಟ್ರೀಯ ಉದ್ಯಾನವನ(ಈಗ ಕಾಳಿ ರಾಷ್ಟ್ರೀಯ ಉದ್ಯಾನವೆಂದು ಹೆಸರು ಬದಲಾಗಿದೆ) ಅದರ ಜೊತೆ ಜೊತೆಗೆ ಹುಲಿಸಂರಕ್ಷಿತಪ್ರದೇಶವೆಂದು ಅದೇ ಪ್ರದೇಶಗಳು ಘೋಷಣೆಗೊಂಡಿವೆ. ಇದರ ಜೊತೆಗೆ ಸೀಬರ್ಡ್ ನೌಕಾನೆಲೆ, ಕೈಗಾ, ಅಣುವಿದ್ಯುತ್ ಯೋಜನೆ, ಕೊಂಕಣ ರೈಲ್ವೆ ಯೋಜನೆ, ಜಲಾಶಯಗಳ (ಅಣೆಕಟ್ಟುಗಳು) ನೆಪಗಳಿಂದ ಸ್ಥಳಾಂತರಗೊಂಡಿರುವ ಈ ಪ್ರದೇಶಗಳಲ್ಲಿನ ಸೀಮಾಪದ್ಧತಿಯನ್ನು ಕಳೆದುಕೊಂಡವರ ಛಿದ್ರಗೊಂಡ ಸಾಂಸ್ಕೃತಿಕ ಬದುಕನ್ನು ಅರಿಯಲು, ಮೇಲಿನ ಪೋಷಿತ ಪ್ರದೇಶಗಳನ್ನು ಅಧ್ಯಯನಕ್ಕೆ ಪೂರಕವಾದ ಪ್ರದೇಶಗಳನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ಮೇಲಿನ ಎಲ್ಲಾ ಅಂಶಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಒದಗಿಸಬಲ್ಲ ಸೂಕ್ತ ಪ್ರದೇಶಗಳಾಗಿವೆ.

## ಅಧ್ಯಯನದ ವಿಧಾನ

ಈಗಾಗಲೇ ಪ್ರಸ್ತಾಪಿಸಿರುವಂತೆ ಪ್ರಸ್ತುತ ಅಧ್ಯಯನಕ್ಕೆ ಉತ್ತರ ಕನ್ನಡ ಜಿಲ್ಲೆ, ಜೋಯಿಡಾ ತಾಲ್ಲೂಕಿನಲ್ಲಿ ಜೀವಿಸುತ್ತಿರುವ 'ಕುಣಬಿ' ಸಮುದಾಯವನ್ನು ಮುಖ್ಯವಾಗಿಟ್ಟುಕೊಂಡು, ಪೂರಕವಾಗಿ ಕರ್ನಾಟಕದ ಇತರ ಬುಡಕಟ್ಟುಗಳಾದ ಹಾಲಕ್ಕಿ, ಸಿದ್ದಿ, ಸೋಲಿಗರು, ಬೆಟ್ಟಕುರುಬರು, ಜೇನುಕುರುಬರು, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳ ಸೀಮಾಪದ್ಧತಿಗಳನ್ನು ಇಲ್ಲಿ ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಈ ಅಧ್ಯಯನಕ್ಕಾಗಿ ಉಲ್ಲೇಖಿತ ಸಮುದಾಯಗಳಿಂದ ಹತ್ತು ಜನರನ್ನು ವ್ಯಕ್ತಿ ಸಂದರ್ಶನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅಗತ್ಯದ ಸಂದರ್ಭದಲ್ಲಿ ಹತ್ತಕ್ಕಿಂತ ಹೆಚ್ಚು ಜನರನ್ನು ಸಂದರ್ಶಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಸೀಮಾಪದ್ಧತಿಯ ಆಚರಣೆಗಳು ಬುಡಕಟ್ಟುಗಳಲ್ಲಿನ ಜೀವಂತವಾಗಿದ್ದು, ಸಾಂಗವಾಗಿ ನಡೆಸಿಕೊಂಡು ಬರಲಾಗುತ್ತಿದ್ದರೂ ಕೂಡ ಅಧ್ಯಯನಕಾರರ ನಿರ್ಲಕ್ಷ್ಯ ಮತ್ತು ಅಸಡ್ಡೆಯ ಕಾರಣಗಳಿಂದ ಹೊರ ನಾಗರಿಕ ಪ್ರಪಂಚಕ್ಕೆ ಈ ಸಂಗತಿ

ಅಗೋಚರ ವಿಚಾರವಾಗಿ ಉಳಿದುಬಿಟ್ಟಿದೆ. ಕಾರಣ ಸಮುದಾಯಗಳ ಹಕ್ಕು ಪ್ರತಿಪಾದನೆಗೆ ಮುಖ್ಯ ತೊಡಕುಗಳಲ್ಲಿರಬಹುದಾದ ಸೀಮಾಪದ್ಧತಿ ಮತ್ತು ಅದರ ಆಡಳಿತ ವ್ಯವಸ್ಥೆಯನ್ನು PRA 'ಜನರ ಸಹಭಾಗಿತ್ವದಲ್ಲಿ ಹಾಡಿಗಳ ಸಮೀಕ್ಷೆ' (PRA-Participatory rural appraisal) ಮಾದರಿಯಲ್ಲಿ ಹಾಡಿಯ ಬುಡಕಟ್ಟುಗಳೇ ಸೀಮೆಯ ರಚನೆಯ, ನಕ್ಷೆಯನ್ನು ಬಿಡಿಸುವ ಮೂಲಕ ಕ್ಷೇತ್ರಕಾರ್ಯವನ್ನು ಪ್ರತಿ ಹಳ್ಳಿಗಳಲ್ಲಿ ಕೈಗೊಂಡು ಅಧ್ಯಯನ ನಡೆಸಿ ತನ್ಮೂಲಕ ಪ್ರಾಯೋಗಿಕವಾಗಿ ಸೀಮಾಪದ್ಧತಿಯ ಸ್ವರೂಪ, ಮಹತ್ವ ಮತ್ತು ಸಾಂಸ್ಕೃತಿಕ ಅನನ್ಯತೆಗಳನ್ನು ಕುಣಬಿಗಳ ಸಾಮಾಜಿಕ, ಒಳಾಡಳಿತ, ಸ್ಥಿತಿಗತಿ, ಆರ್ಥಿಕ ವ್ಯವಸ್ಥೆ, ಪಾರಂಪರಿಕ ಜ್ಞಾನ ಸಹಜ ಕುಂಬರಿ ಕೃಷಿ, ಬೇಟೆ, ಆಹಾರ ಸಂಗ್ರಹಣೆ ಮತ್ತು ಕಾಡಿನ ಕಿರು ಉತ್ಪನ್ನಗಳ ನಿರ್ವಹಣೆ, ದೈವಗಳಲ್ಲಿರುವ ನಂಬಿಕೆ, ಪೂಜೆ, ಹಬ್ಬ, ಹರಿದಿನ, ಜಾತ್ರೆ, ಉತ್ಸವ, ನಾಟಿ ಚಿಕಿತ್ಸಾಪದ್ಧತಿಗಳು, ಕಲೆ, ಕುಸರಿ ಕೆಲಸಗಳು, ನೋಟ-ಮಾಟ-ಮಂತ್ರ ಇವುಗಳೆಲ್ಲಾ ಸೂತ್ರದಂತೆ ಹಿಡಿದಿಟ್ಟು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಮಡಿದವರ ಆತ್ಮಗಳು, ಬುಧುವಂತ, ಮಿರಾಶಿಗಾವಡ, ಸ್ವಯಂ ಆಡಳಿತ ಕಾರ್ಯವ್ಯವಸ್ಥೆ, ಸರ್ಕಾರದ ಆಡಳಿತ ನಿರ್ಲಕ್ಷ್ಯ, ರಾಷ್ಟ್ರೀಯ, ಅಭಿವೃದ್ಧಿ ಯೋಜನೆಗಳು, ಅರಣ್ಯ ಕಾಯ್ದೆಗಳು ಮತ್ತು ಸ್ಥಳಾಂತರಗಳು ಹಾಗೂ ಪರಕೀಯ ಸಂಸ್ಕೃತಿಯ ದಾಳಿಗಳ ಮತ್ತು ಅದರ ದುಷ್ಪರಿಣಾಮಗಳ ಕುರಿತು ಅಧ್ಯಯನ ಕೈಗೊಳ್ಳಲು ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ವಿಧಾನಗಳನ್ನು ಅನುಸರಿಸಲಾಗಿದೆ.

1. ಲಭ್ಯ ಸಾಹಿತ್ಯ ಅಕರಗಳ ಅಧ್ಯಯನ
2. ಚಾರಿತ್ರಿಕ ವಿಧಾನ
3. ಪ್ರಶ್ನಾವಳಿ ವಿಧಾನ
4. ಸಂದರ್ಶನ ವಿಧಾನ
5. ಹಾಡಿ ಜನರ ಸಹಭಾಗಿತ್ವ ವಿಧಾನದ ಮೂಲಕ(PRA technology) ಪ್ರತಿನಕ್ಷೆ ದೈಶಿಕ ದಾಖಲೆ ಸಾಕ್ಷಿ(counter mapping) ಮಾದರಿ, ಸೀಮಾನಕ್ಷೆ, ಸಮುದಾಯದವರೇ ಅವರ ಮಾಹಿತಿ ಮೇರೆಗೆ ತಯಾರಿಸುವ ಒಂದು 'ಸೀಮಾನೋಟ'.
6. ಗುಂಪು ಚರ್ಚೆ
7. ಅವಲೋಕನಾ ವಿಧಾನ

ಈ ಮೇಲ್ಕಂಡ ವಿಧಾನಗಳ ಮೂಲಕ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಪ್ರಸ್ತುತ ವಿಷಯದ ಕುರಿತು ಇಲ್ಲಿವರೆಗೆ ಸಂಗ್ರಹಿಸಿರುವ ಮಾಹಿತಿಗಳ ಪ್ರಕಾರ ಅಧ್ಯಯನವು ನಡೆದಿರುವುದು ಕಂಡುಬರುವುದಿಲ್ಲ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ವಸಾಹತುಶಾಹಿಗಳ ಆಕ್ರಮಕ್ಕೊಳಪಟ್ಟಿದ್ದ ಮೂಲನಿವಾಸಿಗಳಾಗಿದ್ದು ತಮ್ಮ ಮೂಲನೆಲೆ ಕಳೆದುಕೊಂಡಿದ್ದ ಆದಿವಾಸಿಗಳು, ಯಾರು ಹೊರಗಡೆಯಿಂದ ತಮ್ಮ ಜಾಗವನ್ನು ಆಕ್ರಮಿಸಿ ದೇಶದ ಆಡಳಿತದ ಚುಕ್ಕಾಣಿ ಹಿಡಿದಿದ್ದಾರೋ, ಅವರೊಟ್ಟಿಗೆ ಈಗ ಹೋರಾಟ ನಡೆಸಿ ತಮ್ಮ ಗಡಿಭಾಗ, ಭೂಮಿ, ಸಂಪನ್ಮೂಲಗಳನ್ನು ಪುನಃ ಪಡೆಯುವಲ್ಲಿ ನಡೆಯುತ್ತಿರುವ ಹೋರಾಟ, ವ್ಯಾಜ್ಯ, ಇತ್ಯರ್ಥಗಳ ಬಗ್ಗೆ ಅಧ್ಯಯನಗಳು ನಡೆದಿವೆಯೇ ಹೊರತು, ಪ್ರಸ್ತುತ ವಿಷಯದ ಕುರಿತು ಎಲ್ಲೂ ಅಧ್ಯಯನಗಳಾಗಿದ್ದು ಕಂಡುಬಂದಿಲ್ಲ. ಆದರೂ ಈ ಬಗ್ಗೆ ಮಾಹಿತಿಗಾಗಿ ಅಧ್ಯಯನ ಸಮೀಕ್ಷೆ ನಡೆಸಿರುವ ಬಗ್ಗೆ ಹಾಗೂ ಪ್ರಸ್ತುತ ವಿಷಯಕ್ಕೆ ಆಯ್ಕೆ ಮಾಡಿಕೊಳ್ಳಲಾಗಿರುವ ಬುಡಕಟ್ಟುಗಳ ಕುರಿತು ವಿವಿಧ ವಿದ್ವಾಂಸರು ನಡೆಸಿದ ಅಧ್ಯಯನಗಳಲ್ಲಿ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಉಪಾಸನೆ, ಆಚರಣೆಗಳ ಕುರಿತು ಮಾಹಿತಿ ಸಂಗ್ರಹಿಸಲಾಗಿರುವ ಅಧ್ಯಯನಗಳ ಸಮೀಕ್ಷೆಯು ಈ ಕೆಳಕಂಡಂತೆ ಪಟ್ಟಿ ಮಾಡಲಾಗಿದೆ.

- ಹರಿಮೋಹನ್ ಮಾಥೂರ್ ಅವರು ಬರೆದ 'Tribal land issues in India communal management, Rights and displacement" ಕುರಿತು ಲೇಖನದಲ್ಲಿ ಜಾಗತಿಕ ಮಟ್ಟದಲ್ಲಿನ ವಿಶ್ವ ಅಭಿವೃದ್ಧಿಯ ಅಜೆಂಡಾಗಳಲ್ಲಿ ಹೇಗೆ ಬುಡಕಟ್ಟುಗಳನ್ನು ಅಭಿವೃದ್ಧಿ ಯೋಜನೆಗಳ ಹೆಸರಿನಲ್ಲಿ ಸ್ಥಳಾಂತರ ಮಾಡಲಾಗುತ್ತಿದೆ, ಅದರ ಮೂಲಕ ಹೇಗೆ ಬುಡಕಟ್ಟುಗಳ ಮೂಲ ಕಾಡಿನ ಹಕ್ಕುಗಳನ್ನು ಕಸಿದುಕೊಳ್ಳಲಾಗುತ್ತಿದೆ ಎಂಬ ವಿಚಾರವನ್ನು ವಿಶ್ಲೇಷಿಸಲಾಗಿದೆ.
- ಗ್ಲೇವಿಯರ್ ಬೆಲ್ಟ್ರಾನ್ ಮತ್ತು ಅಡ್ರಿನ್ ಫಿಲಿಪ್ಸ್‌ರ ಸಂಪಾದಕತ್ವದಲ್ಲಿ ಪ್ರಕಟಿಸಿರುವ "Indigenous and traditional peoples and protected areas"(IUCN-The world conservation Union-2000) International Union for Conservation of Nature-IUCN ಸಂಸ್ಥೆಯು ಹೇಗೆ ಇಡೀ ಪ್ರಪಂಚದಲ್ಲಿರುವ ಕಾಡಿನ ಹಕ್ಕು, ಅರಣ್ಯ ನೀತಿಗಳನ್ನು ರೂಪಿಸುತ್ತದೆ ಹಾಗೂ ಅಭಯಾರಣ್ಯ, ವನ್ಯಜೀವಿಧಾಮ, ಹುಲಿ ಸಂರಕ್ಷಣಾ ಪ್ರದೇಶ ಹಾಗೂ ರಾಷ್ಟ್ರೀಯ ಉದ್ಯಾನವನಗಳ 5 ತತ್ವಗಳು ಹೇಗೆ ಬುಡಕಟ್ಟುಗಳ ಸಂಪೂರ್ಣ ಸಾಂಸ್ಕೃತಿಕ ಮೂಲಭೂತ ಅಸ್ತಿತ್ವವನ್ನು ಕಸಿದುಕೊಂಡಿದೆ ಹಾಗೂ ವಿದೇಶಗಳಲ್ಲಿ ಗಡಿ ಮತ್ತು ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ವ್ಯಾಜ್ಯಗಳನ್ನು ಬಗೆಹರಿಸುವಲ್ಲಿ ಮುಖ್ಯ ಪಾತ್ರವಹಿಸಿದೆ ಎಂಬ ವಿಚಾರವನ್ನು ಅಧ್ಯಯನ ಮಾಡಲಾಗಿದೆ.

- ಬಿರ್ಗಿಟ್ಟೆ ಫಿಯರಿಂಗ್ ಅವರ ಪುಸ್ತಕ "Indigenous peoples rights to land, territories and resources (International land coalition publication-2013) ಪ್ರಕಟಿತ ಪುಸ್ತಕದಲ್ಲಿ International land coalition (ILC) ಸಂಸ್ಥೆಯ Global land Forum ಮೂಲಕ ಪ್ರಪಂಚದಾದ್ಯಂತ ಮೂಲನಿವಾಸಿಗಳ ನೈಸರ್ಗಿಕ ಸಂಪನ್ಮೂಲ, ಗಡಿ ಭೂಮಿ ಹಕ್ಕುಗಳ ಪ್ರತಿಪಾದನೆಗಾಗಿ ಹೇಗೆ ಧ್ವನಿ ಎತ್ತಿ ಹೋರಾಟ ನಡೆಸಿ ಮೂಲ ನಿವಾಸಿಗಳೀಗೆ ನ್ಯಾಯ ಒದಗಿಸುವಲ್ಲಿ, ಮುಖ್ಯ ಪಾತ್ರ ವಹಿಸಿದೆ ಎಂಬುಧನ್ನು ಅಧ್ಯಯನ ಮಾಡಲಾಗಿದೆ.
- ಉ.ಎ.ಸರ್ವರ್ ಪೊನರ್ ಅವರ ಸಂಶೋಧನಾ ಲೇಖನ "on human territoriality" A contribution to Instinct theory(Canadian Psycho analytic society - 1966) ಪ್ರಕಟಣೆಯಲ್ಲಿ ಹೇಗೆ ಪ್ರಸ್ತುತ ಅಧ್ಯಯನದ ವಿಚಾರದಲ್ಲಿನ 'ಸೀಮಾಪದ್ಧತಿಯ' ಪ್ರಾಣಿಗಳಲ್ಲಿನ ನೈಸರ್ಗಿಕ ನಡವಳಿಕೆಯ ಭಾಗವಾಗಿದ್ದು, ಹೇಗೆ ವಿಕಸಿತ ನಾಗರಿಕ ಜಗತ್ತಿನ ಮನುಷ್ಯನ ಆಧುನಿಕ ಬದುಕಿನ ನಡವಳಿಕೆಯಲ್ಲಿ 'ಗಡಿತನ'(Territorialism) ಅಡಕವಾಗಿರುತ್ತದೆ ಎಂಬುಧನ್ನು ವಿಶ್ಲೇಷಿಸಲಾಗಿದೆ.
- ಡೆಸ್ಮಂಡ್ ಮೊರೀಸ್ ಅವರ "Territorial Behaviour" ಕುರಿತ ಸಂಶೋಧನಾ ಲೇಖನದಲ್ಲಿ ಮನುಷ್ಯನ ಸೀಮಾವಲಯ, ಬುಡಕಟ್ಟುಗಳ ಸೀಮಾವಲಯ ಮತ್ತು ವೈಯಕ್ತಿಕ ಸೀಮಾವಲಯದ ಪ್ರದೇಶಗಳ Space ಬಗ್ಗೆ ವಿಶ್ಲೇಷಿಸಲಾಗಿದೆ.
- ಯುಗೋ ಪ್ಯಾಬಿಯಟ್ಟಿಯವರು ಬರೆದ "commission on Nomadic peoples control and Alienation of Territory among the Bedovin of Sandhi Arebik" ಪ್ರಕಟಣೆಯಲ್ಲಿ IUAES (The commission on Nomadic peoples of International Union of the Anthropologies and Ethnological sciences" ಸಂಸ್ಥೆಯ ಫೊರ್ಡ್ ಪೌಂಡೇಶನ್ ಸಂಸ್ಥೆ ಜೊತೆಗೂಡಿ ಸೌದಿ ಅರೇಬಿಯಾದ ಪುಟ್ಟ ಬುಡಕಟ್ಟು ಗುಂಪುಗಳಾದ ಮುಕುದ್, ಕಾರವಾನ ಮತ್ತು ಬೆಡೊಯಿನ್ ಹಕ್ಕುಗಳಿಗಾಗಿ ನಡೆಸಿದ ಹೋರಾಟದ ಕುರಿತು ವಿಶ್ಲೇಷಿಸಲಾಗಿದೆ.
- ಜಾನ್.ಸಿ. ರಸೆಲ್ ಅವರ ಸಂಶೋಧನಾ ಲೇಖನ "values, Attitudes and Beliefs towards National forest system lands and Arizona Tribal peoples" ಅರಿಜೋನಾದಲ್ಲಿ 21 ಆದಿವಾಸಿಗಳನ್ನು ಗುರ್ತಿಸಲಾಗಿದ್ದು ಅಮೆರಿಕ ಸಂಯುಕ್ತ ರಾಷ್ಟ್ರಗಳಲ್ಲಿ ಅರಿಜೋನಾ ಭಾಗದಲ್ಲೇ ಹೆಚ್ಚಾಗಿರುವ ಅಮೆರಿಕ ಮೂಲ ಆದಿವಾಸಿಗಳ ಗಡಿವಲಯಗಳನ್ನು ಅಲ್ಲಿನ ರಾಷ್ಟ್ರೀಯ ಉದ್ಯಾನವನ ಅರಣ್ಯದಲ್ಲಿ ಗುರ್ತಿಸಿರುವ ಕುರಿತು ವಿಶ್ಲೇಷಿಸಲಾಗಿದೆ.

- ಮೈತ್ರಿ ಪ್ರಸಾದ ಅಲೆಯಮ್ಮೆ ಅವರು ಪ್ರಕಟಿಸಿರುವ "Territorial Legends" Politics of Indigenous, migration and urban citizenship in pasighat, Arunachal Pradesh ಸಂಶೋಧನಾ ಲೇಖನದಲ್ಲಿ ಹೇಗೆ ಅರಣ್ಯ ಕಾಯ್ದೆ ಮತ್ತು ನೀತಿಗಳು ಆದಿವಾಸಿಗಳ ಹಕ್ಕುಗಳನ್ನು ಕಸಿದುಕೊಳ್ಳುತ್ತವೆ ಮತ್ತು ಹೇಗೆ ಅವರ ಸ್ಥಳಾಂತರಗಳು ಹಳ್ಳಿ ಮತ್ತು ಪಟ್ಟಣಗಳಲ್ಲಿ ಆದಿವಾಸಿಗಳ ಬದುಕನ್ನು ರಾಜಕೀಕರಣಗೊಳಿಸುತ್ತದೆ ಎಂಬುಧನ್ನು ವಿಶ್ಲೇಷಿಸಲಾಗಿದೆ.
- ಲುಸ್ ಪ್ಯಾಟ್ರಿಕಾ ಮೆಜಿಯಾ ಗುಯೆರೆರೊ ಮತ್ತು ಸಹಪಾಟಿಗಳ Inter-American commission on Human Rights(IACHA) ಸಹಭಾಗಿತ್ವದಲ್ಲಿ ಪ್ರಕಟಿಸಿರುವ "Indigenous and tribal peoples right over their Ancestral lands and Natural resources' ಅಧ್ಯಯನದ ಪ್ರಕಟಿತ ಪುಸ್ತಕದಲ್ಲಿ ಅಲ್ಲಿನ ಮೂಲ ನಿವಾಸಿಗಳ ಕುರಿತಾದ ಮಾನವ ಹಕ್ಕುಗಳು ಮತ್ತು ನ್ಯಾಯಶಾಸ್ತ್ರದ ನೀತಿಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ(ILO convention No :169 International labour organization).
- ಜಾಫೆಂ ಡಿ.ಸ್ಟ್ರೋಮರ್ ಮತ್ತು ಸ್ಟೀಫನ್ ಡಿ.ಓಸ್ಟೋರಿನ್‌ರ INDIAN country and the nature and scope of tribal self Government in Alaska ANCSA (Alaska Native claims settlement Act) ಅಲಾಸ್ಕ ಆದಿವಾಸಿಗಳ ಮೂಲಭೂತ ನೈಸರ್ಗಿಕ ಸಂಪನ್ಮೂಲ ಹಾಗೂ ಗಡಿಗಳ ಹಕ್ಕುಗಳ ಬಗ್ಗೆ ANCSA ಆಧಾರದಲ್ಲಿ ಅಲಾಸ್ಕ ಬುಡಕಟ್ಟುಗಳ ವಿಶ್ಲೇಷಣೆ ಮಾಡಲಾಗಿರುವ ಲೇಖನ.
- ಮಾದವಗಾಡ್ಗೀಳ್ ಮತ್ತು ಸಹಚರರು ಪ್ರಕಟಿಸಿರುವ ಸಂಶೋಧನಾ ಲೇಖನ "Prioritizing traditional conservation practices for Karnataka" Centre for ecological sciences, Indian institute of science, Bangalore ಈ ಲೇಖನದಲ್ಲಿ ಆದಿವಾಸಿಗಳು ಆಚರಿಸಲ್ಪಡುತ್ತಿರುವ ಸಾಂಪ್ರದಾಯಿಕ ಸ್ಮಶಾನ, ದೇವರಕಾಡು, ನಾಗಬನ, ಭೂತಗುಡಿಗಳು, ಸೊಪ್ಪಿನ ಬೆಟ್ಟ, ಬ್ಯಾಣ, ಇತ್ಯಾದಿ ಜಾಗಗಳಲ್ಲಿ ವನವಾಸಿಗಳು ಕಾಪಾಡಿಕೊಂಡು ಬಂದಿರುವ ಮರ ಗಿಡ ಬಳ್ಳಿಗಳ ಔಷಧಿ ಸಸ್ಯ ಜೀವ ವೈವಿಧ್ಯತೆಗಳ ಬಗ್ಗೆ ವಿಶ್ಲೇಷಿಸಲಾಗಿದೆ(ಪ್ರಸ್ತುತ ವಿಷಯದ ಕುರಿತು ಈ ಸಂಶೋಧಕರು ಎಲ್ಲೂ ಪ್ರಸ್ತಾಪ ಮಾಡಿರುವುದಿಲ್ಲ).
- I, II and III, IV, V, VI, VII, VIII, IX, X and XI schedules of Amendments from the constitution of India ಬುಡಕಟ್ಟುಗಳ ನೈಸರ್ಗಿಕ ಮೂಲಭೂತ ಹಕ್ಕುಗಳು ಮತ್ತು ಸ್ವಯಂ ಆಡಳಿತ ವ್ಯವಸ್ಥೆ ಹಾಗೂ ಸಾಂಪ್ರದಾಯಿಕ ಕುಂಬರಿ ಬೇಸಾಯ ಮತ್ತು ಇತರ ವಿಷಯಗಳ ಬಗ್ಗೆ ಆದಿವಾಸಿಗಳಿಗಿರುವ ಹಕ್ಕುಗಳ ಬಗ್ಗೆ ಮಾಹಿತಿ ಪಡೆಯಲಾಗಿದೆ.

- ಎಡ್ವರ್ಡ್ ಇ. ಡ್ಯುಡೆಕ್ ಪುಸ್ತಕ "Tribal Religious Beliefs of North East India with special emphasis on Nagaland and the Introduction of effect of Gosper" Global serve Journal missions: 2008 ಪುಟ ಸಂ: 18ರಲ್ಲಿರುವ self Government and village Administrative system ತಲೆಬರಹದಡಿಯಲ್ಲಿ ಸೀಮಾವಲಯದ ನಿಯಂತ್ರಣಕ್ಕಾಗಿ ವಿಶೇಷವಾಗಿ, ಸಮುದಾಯಗಳು ನೇಮಕ ಮಾಡಲಾಗಿದ್ದ ಅದರ ರಕ್ಷಣೆಯ ಮತ್ತು ನ್ಯಾಯ ತೀರ್ಮಾನದ ಪೂರ್ಣ ಆಚರಣೆಯಲ್ಲಿ ಇರುವ ಸಂಗತಿಯ ವಿಶ್ಲೇಷಣೆಯಿದೆ.

- ಮಾಬೆರ್ಲ್ಲಿ, ಗೊರ್ಬೆಟ್ ಮತ್ತು ಜಿಲ್, ನೆಲ್ಸನ್ "Case study of world 12 National Park" by IUCN-1999. ಸಂಸ್ಥೆ ಇತರೆ ವಿಶ್ವದ ಸಂಸ್ಥೆಗಳ ಸಹಯೋಗದಲ್ಲಿ 70 ದೇಶಗಳಲ್ಲಿರುವ 5ರಿಂದ 6 ಸಾವಿರ ವಿವಿಧ ಮೂಲನಿವಾಸಿ ಗುಂಪುಗಳ 250 ಮಿಲಿಯನ್ ಜನರು ರಾಷ್ಟ್ರೀಯ ಉದ್ಯಾನವನಗಳಿಂದ ಸ್ಥಳಾಂತರಗೊಂಡು ಹೇಗೆ ಹಕ್ಕು ವಂಚಿತರಾಗಿ ದ್ದಾರೆಂದು ಕೇಸ್ ಸ್ಟಡಿ ಮಾಡಿರುವ ಸಂಶೋಧನಾ ದಾಖಲೆಗಳ ವಿಶ್ಲೇಷಣೆ.

- ಸುಶ್ಮಿತ ಮಂಡಲ್, ನಿತಿನ್ ಡಿ.ರೈ ಮತ್ತು ಸಿ.ಮಾದೇಗೌಡರ ಸಂಶೋಧನಾ ಲೇಖನ Culture conservation and co-management: strengthening soliga stake in Biodiversity conservation in Biligiri Rangaswamy Temple wild life sanctuary India" 9 ಪುಟಗಳ ಈ ಸಂಶೋಧನಾ ಲೇಖನದಲ್ಲಿ ಸೀಮಾದೈವಗಳು ಹಾಗೂ ಸಾಂಪ್ರದಾಯಿಕ ಸಸ್ಯಗಳ ಜೀವ ವೈವಿಧ್ಯತೆ ಹಾಗೂ ಅವುಗಳ ಪ್ರತಿ ನಕ್ಷೆಗಳ ಕುರಿತ ವಿಶ್ಲೇಷಣೆ.

- ಮಾದೇಗೌಡ ಸಿ ಅವರ "Traditional knowledge and conservation" ಸೋಲಿಗರು ಪಾರಂಪರಿಕ ಜ್ಞಾನ ಮತ್ತು ಅರಣ್ಯ ಸಂರಕ್ಷಣೆಯಲ್ಲಿ ಅದರ ಪಾತ್ರದ ಕುರಿತು 5 ಪುಟಗಳ ಲೇಖನದಲ್ಲಿ ವಿಶ್ಲೇಷಣೆಯಿದೆ.

- ಡಾ.ಸೋಮಶೇಖರ ಅವರ ಸಂಶೋಧನಾ ಲೇಖನ "Diminishing role of soliga Herbal Health Healer" 28 ಪುಟಗಳ ಈ ಲೇಖನದಲ್ಲಿ ಸೋಲಿಗ ಬುಡಕಟ್ಟುಗಳ ಪಾರಂಪರಿಕ ಚಿಕಿತ್ಸಾವಿಧಾನ ಮತ್ತು ಅದಕ್ಕೆ ಬಳಸಲಾಗುವ ಗಿಡ ಮರಬಳ್ಳಿಗಳ ವಿವರಣೆಗಳಿವೆ.

- ಹಿ.ಚಿ. ಬೋರಲಿಂಗಯ್ಯ ಅಧ್ಯಯನ ವರದಿ "ಕುಣಬಿಯರು" ಪುಸ್ತಕದಲ್ಲಿ ಕುಣಬಿ ಸಮುದಾಯದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದುಕಿನ ಸಂಪೂರ್ಣ ಪರಿಚಯವಿದೆ. ಪುಸ್ತಕದ 30ನೇ ಪುಟದಲ್ಲಿರುವ 'ಸೀಮಾಪದ್ಧತಿ' ತಲೆಬರಹದ ಮಾಹಿತಿಯಲ್ಲಿ ಲೇಖಕರು

ನಾನು ಬುಡಕಟ್ಟು ಅಧ್ಯಯನ ಸಂಚಿಕೆ–4ರಲ್ಲಿ ಬರೆದ ಬರಹದ ಭಾಗವನ್ನು ಉಲ್ಲೇಖಿಸಿ ವಿಶ್ಲೇಷಿಸಿರುತ್ತಾರೆ. ಪುಸ್ತಕದ ಪುಟಸಂಖ್ಯೆ 62ರಲ್ಲಿ "ಅವನತಿಯತ್ತ ನೈಸರ್ಗಿಕ ಕುಂಬರಿ ಬೇಸಾಯ ಸಂಸ್ಕೃತಿ" ಮಾಹಿತಿ ವಿವರಣೆಯು ನಾನು (ಮಹೇಂದ್ರಕುಮಾರ್) ಆಗ 21–01–2002ರಲ್ಲಿ ಲೇಖನ ಬರೆದು ಪ್ರಕಟಿಸಿದ ಮಾಹಿತಿಯನ್ನು ಯಥಾವತ್ತಾಗಿ ಪಡೆದಿರುವ ವಿಶ್ಲೇಷಣೆ ಹಾಗೂ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಗ್ರೀನ್ ಇಂಡಿಯಾ ಸಂಸ್ಥೆ ನಡೆಸಿದ ಹೋರಾಟಗಳ ಕುರಿತ ಮಾಹಿತಿಗಳಿವೆ.

- ಮಲ್ಲಿಕಾರ್ಜುನ ಪ. ಸೊಬರದ ಅವರ ಪಿಎಚ್.ಡಿ., ಮಹಾಪ್ರಬಂಧ "ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನದಲ್ಲಿ ಕುಣಬಿಯರ ಕುರಿತಾದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆಗಳಿವೆ.
- ಡಾ.ಹಿ.ಚಿ.ಬೋರಲಿಂಗಯ್ಯ ಅವರ "ಗಿರಿಜನ ನಾಡಿಗೆ ಪಯಣ" 1991, ರ ಕೃತಿಯಲ್ಲಿ ಶಿವಮೊಗ್ಗ ಜಿಲ್ಲೆಯ ಮೇಘಾನೆಯ ಕುಣಬಿಯರ ಕುರಿತು ಪುಟ ಸಂ:11–13ರಲ್ಲಿ ಮಾಹಿತಿ ನೀಡಿರುತ್ತಾರೆ.
- ಪ್ರೊ.ಎಚ್.ಜೆ. ಲಕ್ಕಪ್ಪಗೌಡ(1998) 'ಕರ್ನಾಟಕದ ಬುಡಕಟ್ಟುಗಳು' ಸಂಪುಟ 1 ರಲ್ಲಿ ಕುಣಬಿಗಳ ಬಗ್ಗೆ ಡಾ. ಅಭಯ್‌ಕುಮಾರ್ ಕ್ರಾಡಿಯವರು ಮಾಹಿತಿ ನೀಡಿದ್ದಾರೆ.
- ಕೆ.ಎಸ್.ಸಿಂಗ್ (1904) ಅವರ ಪೀಪಲ್ ಆಫ್ ಇಂಡಿಯಾ–1998 National series volume 5, Indias communitee ಗ್ರಂಥದಲ್ಲಿ ಕುಣಬಿಗಳ ಜೀವನವಿಧಾನ, ಬೇಸಾಯಪದ್ಧತಿ, ಆಚರಣೆ ಮತ್ತು ಸಾಮಾಜಿಕ, ಸಾಂಸ್ಕೃತಿಕ ಜೀವನಗಳ ಬಗ್ಗೆ ಮಾಹಿತಿ ನೀಡಿದ್ದಾರೆ.
- ಡಾ.ಪ್ರಭಾಕರ್.ಎ.ಎಸ್., ಸಂಪಾದಕತ್ವದ ಗ್ರಂಥ 'ಆದಿವಾಸಿ ಆಖ್ಯಾನ'(2005)ರಲ್ಲಿ ಬಿ.ಪಿ. ಮಹೇಂದ್ರಕುಮಾರ್ (ಪ್ರಸ್ತುತ ವಿಷಯದ ಸಂಶೋಧಕರು) ಅವರು ಬುಡಕಟ್ಟು ಜನಾಂಗದಲ್ಲಿ ಸೀಮೆಯ ಪರಿಕಲ್ಪನೆ ಬಗ್ಗೆ ಕುಣಬಿ ಸಮುದಾಯವನ್ನೆ ಕೇಂದ್ರವಾಗಿಟ್ಟುಕೊಂಡು ಲೇಖನ ಮಾಡಿದ್ದಾರೆ. ಇದೇ ಲೇಖನವೇ ಪ್ರಸ್ತುತ ವಿಷಯದ ಕುರಿತು ಸಂಶೋಧನೆಗೆ ಮೂಲ ಕಾರಣವಾಗಿದೆ.
- ಪ್ರತಾಪ್ ಸಿಂಗ್ ವೆಳಿಪ್ ಕಾಣ್‌ಕರ್(2006) 'The Kurbis Kunbis of India' ಗ್ರಂಥವನ್ನು ಹೊರತಂದಿದ್ದು, ಭಾರತದಲ್ಲಿನ ಕುಣಬಿಗಳ ಬಗ್ಗೆ ವಿಶೇಷವಾದ ಮಾಹಿತಿಗಳನ್ನು ನೀಡಿದ್ದಾರೆ.

- ಡಾ.ಎನ್.ಆರ್. ನಾಯಕ ಅವರ "ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ" ಉಪಸಂಸ್ಕೃತಿ ಅಧ್ಯಯನ 1993, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ ಸರಣಿ ಗ್ರಂಥ ಮಾಲಿಕೆಯಲ್ಲಿ 'ಹಾಲಕ್ಕಿ' ಸಮುದಾಯದ ಸಾಮಾಜಿಕ ಸಂಸ್ಕೃತಿಯ ಸಂಪೂರ್ಣ ಜೀವನದ ಚಿತ್ರಣವನ್ನು ನೀಡಿದ್ದಾರೆ.
- ಡಾ.ಹಿ.ಚಿ.ಬೋರಲಿಂಗಯ್ಯ ಅವರ "ಸಿದ್ದಿಯರ ಸಂಸ್ಕೃತಿ" ಉಪಸಂಸ್ಕೃತಿ ಅಧ್ಯಯನ 1993, ಕನ್ನಡ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ ಗ್ರಂಥಮಾಲೆಯಲ್ಲಿ 'ಸಿದ್ದಿ ಸಮುದಾಯದ ಸಂಪೂರ್ಣ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.
- ಡಾ.ಎ.ಎಸ್. ಪ್ರಭಾಕರರು ಬರೆದಿರುವ "ಕರ್ನಾಟಕದ ಬುಡಕಟ್ಟುಗಳ ಚಿತ್ರ ಸಂಪುಟ' ಗ್ರಂಥದಲ್ಲಿ ಸಿದ್ದಿ, ಕುಣಬಿ, ಹಾಲಕ್ಕಿ, ಕಾಡುಗೊಲ್ಲ, ಜೇನುಕುರುಬ, ಸೋಲಿಗರು ಮತ್ತು ಬೆಟ್ಟಕುರುಬರ ಕುರಿತಾದ ಪ್ರಾಥಮಿಕ ಮಾಹಿತಿಗಳನ್ನು ನೀಡಿದ್ದಾರೆ.
- ಡಾ.ಎಂ.ಬಿ.ರಾಜಮಣ್ಣಿ ಅವರು 'ಕರ್ನಾಟಕದ ಬುಡಕಟ್ಟುಗಳ' ಗ್ರಂಥದಲ್ಲಿ ಪುಟ ಸಂಖ್ಯೆ 738ರಿಂದ 743ರವರೆಗಿನ ಅಧ್ಯಯನದಲ್ಲಿ "ಕಾಡುಕುರುಬರು" ಕುರಿತ ಲೇಖನದಲ್ಲಿ ಬೆಟ್ಟಕುರುಬ ಸಮುದಾಯದ ಜೀವನವಿಧಾನ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದುಕಿನ ಬಗ್ಗೆ ಮಾಹಿತಿಗಳನ್ನು ನೀಡಿದ್ದಾರೆ.
- ಡಾ.ಎಸ್. ಶ್ರೀಕಾಂತ್ ಅವರು ರಚಿಸಿರುವ ಆದಿವಾಸಿ ಸಮುದಾಯಗಳ ಬದುಕು ಬವಣೆಯ ಒಂದನೇ ಅಧ್ಯಾಯ "ಜೇನುಕುರುಬರು" ಲೇಖನದಲ್ಲಿ ಜೇನುಕುರುಬರ ಬಗ್ಗೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದ ಬಗ್ಗೆ ಮಾಹಿತಿ ನೀಡಿದ್ದಾರೆ.
- ಡಾ. ಚಂದ್ರು ಕಾಳೇನಹಳ್ಳಿಯವರ "ಸೋಲಿಗರ ಸಂಸ್ಕೃತಿ" ಉಪಸಂಸ್ಕೃತಿ ಅಧ್ಯಯನ 1993 ಕರ್ನಾಟಕ ಸಾಹಿತ್ಯ ಅಕಾಡೆಮಿ ಗ್ರಂಥಮಾಲಿಕೆಯಲ್ಲಿ ಸೋಲಿಗರ ಸಾಮಾಜಿಕ ಜೀವನವಿಧಾನ ಮತ್ತು ಸಾಂಸ್ಕೃತಿಕ ಆಚರಣೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ.
- 'ಅವ್ಯಕ್ತ ಸಾಂಸ್ಕೃತಿಕ ಪರಂಪರೆ" (2011) ಜೇನುಕುರುಬರಲ್ಲಿರುವ ಸಾಮಾಜಿಕ ದಿನ ನಿತ್ಯದ ಬದುಕು, ವಿಶೇಷವಾಗಿ ಅವರ ಸ್ಥಳ ಮತ್ತು ಬ್ರಹ್ಮಾಂಡದ ಪರಿಕಲ್ಪನೆ ಹಾಗೂ ಕೊಂತಪೂಜೆ, ದೇವರಗುಡ್ಡ ಅಲ್ಲದೆ ಜೇನುಕುರುಬರ ಮಹಾಕಾವ್ಯ ಕುರಿತ ಮಾಹಿತಿಗಳನ್ನು ನೀಡಿದ್ದಾರೆ.
- ಡಾ.ಕೃಷ್ಣಮೂರ್ತಿ ಹನೂರು ಅವರ ಪಿಎಚ್.ಡಿ., ಮಹಾಪ್ರಬಂಧವಾದ "ಬೇಡನಾಯಕರು"(1989) ಕೃತಿಯಲ್ಲಿ "ಮ್ಯಾಸಬೇಡ" ಸಮುದಾಯದ ಜೀವನ ಕುರಿತು ಸಂಪೂರ್ಣ ಮಾಹಿತಿ ನೀಡಿದ್ದಾರೆ.

- ಡಾ. ಕೃಷ್ಣಮೂರ್ತಿ ಅವರ "ಮ್ಯಾಸಬೇಡರು" ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡನಾಯಕರ ಬುಡಕಟ್ಟು ಜೀವನ ಮತ್ತು ಸಂಸ್ಕೃತಿ ಅಧ್ಯಯನ ಗ್ರಂಥ, ಕನ್ನಡ ಪುಸ್ತಕ ಪ್ರಾಧಿಕಾರ: 2006ರಲ್ಲಿ ಚಿತ್ರದುರ್ಗ ಮ್ಯಾಸಬೇಡರ ಕುರಿತು ಮಾಹಿತಿ ನೀಡಿದ್ದಾರೆ.
- ಡಾ. ವಿರೂಪಾಕ್ಷಿ ಪೂಜಾರಹಳ್ಳಿಯವರ "ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುವೀರರು" ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಇವರ ಗ್ರಂಥದಲ್ಲಿ ಮ್ಯಾಸಬೇಡರ ಕುರಿತು ಮಾಹಿತಿ ಪಡೆಯಲಾಗಿದೆ.
- ಡಾ. ಮೀರಾಸಾಬಿಹಳ್ಳಿ ಶಿವಣ್ಣರ ಗ್ರಂಥ "ಕಾಡುಗೊಲ್ಲ ಬುಡಕಟ್ಟು ವೀರರು" ಪಿಎಚ್.ಡಿ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ 1996ರಲ್ಲಿ ಕಾಡುಗೊಲ್ಲ ಸಮುದಾಯದಲ್ಲಿ ಪಶುಪಾಲನಾ ಆದಿವಾಸಿಗಳಾದ ಕಾಡುಗೊಲ್ಲರ ಪಶು ಮತ್ತು ತಮ್ಮ ಸೀಮೆಗಾಗಿ ಹೋರಾಡಿ ಮಡಿದ ಈರಗಾರ' ವೀರರುಗಳ ಬಗ್ಗೆ ಮಾಹಿತಿ ನೀಡಿದ್ದಾರೆ.
- ಡಾ. ತೀ.ನಂ. ಶಂಕರನಾರಾಯಣರ ಗ್ರಂಥ "ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ–1982ರಲ್ಲಿ ಕಾಡುಗೊಲ್ಲರ ಕುರಿತು ಇರುವ ಸಂಪ್ರದಾಯ ಮತ್ತು ನಂಬಿಕೆಗಳ ಕುರಿತು ಗೊಲ್ಲರ ಜೀವನ ವಿಧಾನದ ಬಗ್ಗೆ ಸಂಪೂರ್ಣ ಮಾಹಿತಿ ನೀಡಿರುತ್ತಾರೆ.
- ವಿಜಯಲಕ್ಷ್ಮೀ ಆರ್. ಅವರ 'ಹಾಲಕ್ಕಿ ಒಕ್ಕಲಿಗರ ಮಹಿಳೆ' ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ, ಪಿಎಚ್.ಡಿ., ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪ್ರಬಂಧದಲ್ಲಿ ಹಾಲಕ್ಕಿಗಳ ಸ್ಥಳಾಂತರ ಕುರಿತು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

## ಮಹಾಪ್ರಬಂಧದ ಅಧ್ಯಾಯಗಳ ಸ್ವರೂಪ

### ಅಧ್ಯಾಯ: ಒಂದು

ಪೀಠಿಕೆ, ಅಧ್ಯಯನದ ಉದ್ದೇಶಗಳು, ಆಶಯ ಮತ್ತು ವಿಧಾನಗಳು, ಅಧ್ಯಯನದ ತಾತ್ವಿಕತೆ, ಅಧ್ಯಯನದ ವಿಧಾನ, ವ್ಯಾಪ್ತಿ ಮತ್ತು ಪ್ರಬಂಧದ ಅಧ್ಯಾಯಗಳನ್ನು ಒಳಗೊಂಡಿದೆ.

### ಅಧ್ಯಾಯ: ಎರಡು

**ಬುಡಕಟ್ಟುಗಳ ಸೀಮಾಪದ್ಧತಿ ಹಾಗೆಂದರೇನು?:** ಸೀಮಾಪದ್ಧತಿ ಎಂದರೇನು? ಅದರ ಅರ್ಥ, ಸ್ವರೂಪ ಮತ್ತು ಅಸ್ತಿತ್ವದ ಕುರಿತ ವಿವರಣೆಗಳಿರಬೇಕು. ಯಾವ ಯಾವ ಬುಡಕಟ್ಟುಗಳಲ್ಲಿ ಇದನ್ನು ಹೇಗೆ ಕರೆಯುತ್ತಾರೆ ಎಂಬ ವಿವರಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. **ವಿವಿಧ ದೇಶಗಳಲ್ಲಿ ಆದಿವಾಸಿಗಳ ಸೀಮಾಪದ್ಧತಿಯ ವಿಶ್ಲೇಷಣೆ:** ವಿವಿಧ ದೇಶಗಳ ಆದಿವಾಸಿಗಳಲ್ಲಿ ಸೀಮಾಪದ್ಧತಿಸ್ವರೂಪ

ಹೇಗಿದೆ? ಅಲೆಮಾರಿಗಳು, ವಲಸಿಗರು, ಆಹಾರ ಸಂಗ್ರಾಹಕರು, ಬೇಟೆಗಾರ, ಪಶುಪಾಲಕ ಮತ್ತು ಕೃಷಿಕ ಸಮುದಾಯಗಳ ಸೀಮಾಪದ್ಧತಿಯ ಸ್ವರೂಪವೇನು? ಈಗಿರುವ ಸೆಕೆಂಡರಿ ಮಾಹಿತಿಯನ್ನು ಬಳಸಿ ಈ ಭಾಗದ ಬರಹವನ್ನು ಮಾಡಲಾಗಿದೆ ಮತ್ತು ಭಾರತದ ಬುಡಕಟ್ಟುಗಳಲ್ಲಿ ಸೀಮೆ ಪದ್ಧತಿಯ ವಿವೇಚನೆ ಹಾಗೂ ಸೀಮಾಪದ್ಧತಿಯ ತೌಲನಿಕ ವಿಶ್ಲೇಷಣೆಯನ್ನು ಮಾಡಲಾಗಿದೆ.

**ಅಧ್ಯಾಯ: ಮೂರು**

**ಕರ್ನಾಟಕ ಬುಡಕಟ್ಟುಗಳಲ್ಲಿ ಸೀಮಾಪದ್ಧತಿ:** ಕರ್ನಾಟಕ ಬುಡಕಟ್ಟುಗಳಲ್ಲಿ ಸೀಮಾಪದ್ಧತಿ ಎಂದರೇನು? ಅದರ ಅರ್ಥ, ಸ್ವರೂಪ ಮತ್ತು ಅಸ್ತಿತ್ವದ ಕುರಿತ ವಿವರಣೆಗಳಿವೆ. ಇದು ಪೀಠಿಕೆಯ ಸ್ವರೂಪದಲ್ಲಿದೆ. ಈ ಅಧ್ಯಯನಕ್ಕೆ ಆಯ್ದುಕೊಂಡ ಬುಡಕಟ್ಟುಗಳ ಹಾಡಿಗಳ ಭೌಗೋಳಿಕತೆ, ಸುತ್ತಲ ಪರಿಸರಗಳನ್ನು ವಿವರಗಳನ್ನು ನೀಡಲಾಗಿದೆ. ಈ ಅಧ್ಯಯನಕ್ಕೆ ಆಯ್ದುಕೊಂಡ ಬುಡಕಟ್ಟುಗಳ ಸ್ವರೂಪವನ್ನು ಚರ್ಚಿಸಲಾಗಿದೆ. ಆಹಾರ ಸಂಗ್ರಾಹಕ, ಬೇಟೆಗಾರ, ಪಶುಪಾಲಕ ಮತ್ತು ಕೃಷಿಕ ಸಮುದಾಯಗಳ ವಿಶ್ಲೇಷಣೆ ಮಾಡಲಾಗಿದೆ. ಆಹಾರ ಸಂಗ್ರಾಹಕ ಬುಡಕಟ್ಟುಗಳಲ್ಲಿ ಸೀಮಾಪದ್ಧತಿ: ಬೆಟ್ಟಕುರುಬ, ಜೇನುಕುರುಬ, ಬೇಟೆ ಸಮುದಾಯಗಳಲ್ಲಿ ಸೀಮಾಪದ್ಧತಿ ಮ್ಯಾಸ ಬೇಡ, ಹಕ್ಕಿಪಿಕ್ಕಿ, ಪಶುಪಾಲಕ ಸಮುದಾಯಗಳಲ್ಲಿ ಸೀಮಾಪದ್ಧತಿ ಕಾಡುಗೊಲ್ಲ, ಕೃಷಿಕ ಸಮುದಾಯಗಳಲ್ಲಿ ಸೀಮಾಪದ್ಧತಿ ಕುಣಬಿ, ಹಾಲಕ್ಕಿ, ಸೋಲಿಗರು, ಸಿದ್ದಿಗಳು ಮತ್ತು ಸ್ಥಳಾಂತರಗೊಂಡ ಬುಡಕಟ್ಟು ಸಮುದಾಯಗಳಲ್ಲಿ ಸೀಮಾಪದ್ಧತಿ ವಿಚಾರಗಳಲ್ಲಿ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ: ನಾಲ್ಕು**

**ಬುಡಕಟ್ಟುಗಳಲ್ಲಿ ಸೀಮಾ ಪದ್ಧತಿ ಮತ್ತು ಪಾರಂಪರಿಕ ಜ್ಞಾನ:** ಪ್ರಸ್ತುತ ಅಧ್ಯಾಯದಲ್ಲಿ ಬುಡಕಟ್ಟು ಸಮುದಾಯಗಳಲ್ಲಿರುವ ಸೀಮಾಪದ್ಧತಿಯ ಕುರಿತು ವಿವರಗಳನ್ನು ನೀಡಲಾಗಿದೆ. ಸೀಮಾಪದ್ಧತಿ ಎಂದರೇನು? ಸೀಮಾಪದ್ಧತಿಯ ಹುಟ್ಟು ಮತ್ತು ವಿಕಾಸ ಹೇಗೆ? ಸೀಮಾಪದ್ಧತಿಯ ಸ್ವರೂಪ ಮತ್ತು ಅಸ್ತಿತ್ವದ ಮಹತ್ವಗಳೇನು, ವಿವಿಧ ದೇಶಗಳಲ್ಲಿನ ಆದಿವಾಸಿಗಳಲ್ಲಿ ಸೀಮಾಪದ್ಧತಿಯ ಸಾಧ್ಯತೆ ಸ್ವರೂಪಗಳೇನೆಂದು ವಿಶ್ಲೇಷಿಸಲಾಗಿದೆ.

ಕರ್ನಾಟಕದ ಬುಡಕಟ್ಟುಗಳ ಸೀಮಾಪದ್ಧತಿಯೊಳಗಿನ ಅವರ ಪಾರಂಪರಿಕ ಜ್ಞಾನದ ಭಾಗಗಳಾದ ನಾಟಿ ಚಿಕಿತ್ಸಾಪದ್ಧತಿ, ನೋಟ, ಬೇಟೆ, ಆಹಾರಸಂಗ್ರಹಣೆ, ಆದಿಮ ಕೃಷಿ 'ಕುಂಬರಿ ಬೇಸಾಯ' ಪದ್ಧತಿಗಳ ವಿಶ್ಲೇಷಣೆಗಳು ಮತ್ತು ಈ ಪಾರಂಪರಿಕ ಜ್ಞಾನದ ಮೂಲ ನೆಲೆಗಳನ್ನು ಆಡಳಿತ ವರ್ಗ ಕಸಿದುಕೊಳ್ಳುವ ಕುತಂತ್ರಗಳು ಹಾಗೂ ತಮ್ಮ ಅಸ್ತಿತ್ವದ ಪಾರಂಪರಿಕ ನೆಲೆಗಳನ್ನು ಉಳಿಸಿಕೊಳ್ಳಲು ಸಮುದಾಯಗಳು ನಡೆಸಿದ ಹೋರಾಟಗಳನ್ನು ದಾಖಲಿಸಿ ಈ

ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ವಿವಿಧ ಬುಡಕಟ್ಟುಗಳು ಆಡಳಿತ ವರ್ಗದ ಅಭಿವೃದ್ಧಿಯ ಹೆಸರಿನಲ್ಲಿ ನಡೆಸಲಾಗಿರುವ ಆಕ್ರಮಣಗಳ ಮಧ್ಯೆಯು ಉಳಿಸಿಕೊಂಡು ಬಂದಿರುವ ಔಷಧಿ ಚಿಕಿತ್ಸಾವಿಧಾನ ಮತ್ತು ಮರಗಿಡಬಳ್ಳಿಗಳ ವಿವರಣೆಗಳನ್ನು ಸಂಗ್ರಹಿಸಿ ಮಾಹಿತಿ ನೀಡಲಾಗಿದೆ. ನಂತರ ಬುಡಕಟ್ಟುಗಳ ಪಶುಗಳ ವೈದ್ಯ ಪದ್ಧತಿ ಹಾಗೂ ಅವರುಗಳ ಪಾರಂಪರಿಕ ನಂಬಿಕೆಗಳಲ್ಲಿ ಮಾಟ, ಮಂತ್ರ ಹಾಗೂ ತಂತ್ರಗಳ ಬಗ್ಗೆ ವಿವರಣೆ ನೀಡಲಾಗಿದೆ. ಕುಣಬಿ ಸಮುದಾಯದಲ್ಲಿರುವ ಬೇಟೆಯಾಡುವ ಪದ್ಧತಿ ಕುರಿತು ವಿಶ್ಲೇಷಿಸಲಾಗಿದೆ.

**ಅಧ್ಯಾಯ: ಐದು**

**ಅರಣ್ಯ ಕಾಯಿದೆಗಳು, ಸ್ಥಳಾಂತರ-ಸ್ವಯಂ ನಿರ್ಣಯದ ಹಕ್ಕು ಮತ್ತು ಸೀಮಾಪದ್ಧತಿ:** ಕರ್ನಾಟಕದ ಅಧ್ಯಯನಕ್ಕೊಳಪಟ್ಟ ಎಂಟು ಬುಡಕಟ್ಟುಗಳ ಮೇಲೆ ಅರಣ್ಯ ಕಾಯ್ದೆಯ ಅನುಷ್ಠಾನದಲ್ಲಾಗಿರುವ ಪರಿಣಾಮಗಳೇನು? ಕರ್ನಾಟಕದ ಅಧ್ಯಯನಕ್ಕೊಳಪಟ್ಟ ಎಂಟು ಬುಡಕಟ್ಟುಗಳ ಮೇಲೆ ಸ್ಥಳಾಂತರದಿಂದ ಆಗಿರುವ ಪರಿಣಾಮಗಳೇನು? ಸ್ವಯಂ ನಿರ್ಣಯದ ಹಕ್ಕುಗಳ ಉಲ್ಲಂಘನೆ ಆಗಿದೆಯೇ? ಅಥವಾ ಸ್ವಯಂ ನಿರ್ಣಯದ ಹಕ್ಕುಗಳ ರಕ್ಷಣೆ ಆಗಿದೆಯೇ? ಅರಣ್ಯ ಕಾಯಿದೆಗಳು, ಸ್ಥಳಾಂತರ-ಸ್ವಯಂ ನಿರ್ಣಯದ ಹಕ್ಕು ಮತ್ತು ಆಯಾ ಸಮುದಾಯಗಳ ಸೀಮಾಪದ್ಧತಿಯ ಮೇಲಾಗಿರುವ ಪರಿಣಾಮಗಳ ಕುರಿತ ಚರ್ಚೆ ಇಲ್ಲಿದೆ. ಈ ಬುಡಕಟ್ಟುಗಳ ಪಾರಂಪರಿಕ ಸೀಮಾಪದ್ಧತಿಯ ಅಸ್ತಿತ್ವ ಉಳಿದಿದೆಯೇ ಇಲ್ಲವೇ ಎಂಬ ವಿವರಗಳಿವೆ. ರಾಜ್ಯ ವಿಂಗಡಣೆ ಮತ್ತು ಆದಿವಾಸಿಗಳ ಸಹಜ ಹಕ್ಕುಗಳ ನಡುವಿನ ಸಂಘರ್ಷ, ಸೂಪಾ, ನಾಗರಹೊಳೆ ಮತ್ತು ಕುದುರೆಮುಖ ಸ್ಥಳಾಂತರಗಳ ಕುರಿತು ಕರ್ನಾಟಕದ ಅಧ್ಯಯನಕ್ಕೊಳಪಟ್ಟ ಸೂಪಾ, ನಾಗರಹೊಳೆ, ಕುದುರೆಮುಖ ಏರಿಯಾದ ಆಯ್ದ ಒಂದೊಂದು ಕೇಸ್ ಸ್ಟಡಿಗಳ ವಿವರಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ. ಪ್ರತಿ ಕೇಸ್ ಸ್ಟಡಿಯನ್ನು ವಿಶ್ಲೇಷಣೆಯನ್ನು ಮಾಡಲಾಗಿದೆ. ನಂತರ ಸೀಮಾ ಪದ್ಧತಿಯ ತಾತ್ವಿಕತೆಯ ಕುರಿತು ತಾರ್ಕಿಕ ವಿಶ್ಲೇಷಣೆಯನ್ನು ನೀಡಲಾಗಿದೆ.

**ಸಮಾರೋಪ**

ಮಹಾಪ್ರಬಂಧದ ಎಲ್ಲಾ ಅಧ್ಯಾಯಗಳ ಸಾರವನ್ನು ನೀಡಲಾಗಿದೆ. ಜೊತೆಗೆ ಅಧ್ಯಯನದ ಫಲಿತ ಮತ್ತು ಮಿತಿಗಳನ್ನು ವಿವರಿಸಲಾಗಿದೆ.

## ಅಧ್ಯಾಯ: ಎರಡು

# ಕುಣಬಿ ಸಮುದಾಯದ ಸೀಮಾಪದ್ಧತಿ

### ಪೀಠಿಕೆ

ಪ್ರಸ್ತುತ ಅಧ್ಯಾಯದಲ್ಲಿ ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಕುಣುಬಿ ಸಮುದಾಯದಲ್ಲಿರುವ ಸೀಮಾಪದ್ಧತಿಯ ಕುರಿತ ವಿವರಗಳನ್ನು ನೀಡುವುದರ ಜೊತೆಗೆ, ಆ ವಿವರಗಳನ್ನು ತಾತ್ವಿಕ ವಿವೇಚನೆಗೆ ಒಳಪಡಿಸಲಾಗಿದೆ. ಕುಣಬಿಯರು ಮೂಲತಃ ಕೊಂಕಣಿ, ಮರಾಠಿ ಮತ್ತು ಕನ್ನಡದ ಮಿಶ್ರಭಾಷಿಕ ಪ್ರದೇಶದಲ್ಲಿ ನಿರಂತರ ವಲಸೆ ಮಾಡುತ್ತ ಬಂದವರು. ಕಾಲಾನಂತರ ಗೋವಾ ಮತ್ತು ಮಹಾರಾಷ್ಟ್ರದ ಗಡಿಭಾಗದ ಜೋಯಿಡಾ, ಹಳಿಯಾಳ, ಯಲ್ಲಾಪುರ ತಾಲ್ಲೂಕುಗಳಲ್ಲಿ ನೆಲೆ ನಿಂತಿದ್ದಾರೆ. ಮೂಲತಃ ಪಶುಪಾಲಕರು ಮತ್ತು ಪಾರಂಪರಿಕ ಕೃಷಿಕರೂ ಆದ ಕುಣಬಿಯರು ದಕ್ಷಿಣ ಭಾರತದ ವಿಶಿಷ್ಟ ಜನವರ್ಗಕ್ಕೆ ಸೇರಿದವರು. ಇವರ ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಕುರಿತ ಅನೇಕ ವಿವರಗಳು ನಮ್ಮ ದೇಶದ ಆದಿಮ ಜನಸಮುದಾಯಗಳ ವಿಶಿಷ್ಟ ದುಡಿಮೆಯ ಕ್ರಮವನ್ನು ಚಾರಿತ್ರಿಕವಾಗಿ ಕಟ್ಟಿಕೊಡುತ್ತವೆ. ಇದರ ಜೊತೆಗೆ ದಕ್ಷಿಣ ಪ್ರಸ್ಥಭೂಮಿಯ ವಿಶಿಷ್ಟ ಮತ್ತು ಆದಿಮ ಕೃಷಿಯ ಚಹರೆಗಳು ಇನ್ನೂ ಈ ಸಮುದಾಯದಲ್ಲಿ ಆಚರಣೆಯಲ್ಲಿವೆ. ಇಂತಹ ಸಮುದಾಯಗಳು ತಮ್ಮ ದುಡಿಮೆಯ ಕ್ಷೇತ್ರವನ್ನು ನಿರ್ದಿಷ್ಟವಾಗಿ ಗುರುತಿಸಿಕೊಳ್ಳುವ ಕ್ರಮದಲ್ಲಿಯೇ ಸೀಮಾಪದ್ಧತಿಯ ಕುರುಹುಗಳಿವೆ, ಅದರ ಆಚರಣೆಯೂ ಚಾರಿತ್ರಿಕವಾಗಿ ಇಂದಿಗೂ ಉಳಿದುಕೊಂಡು ಬಂದಿದೆ. ಕುಣುಬಿಯರ ದುಡಿಮೆ, ಭೂಹಿಡುವಳಿ, ಅರಣ್ಯದ ಅವಲಂಬನೆ, ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಕ್ರಮಗಳಲ್ಲಿ ಇರುವ ಸೀಮೆಯ ಪರಿಕಲ್ಪನೆಯನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಕಳೆದ ಎರಡು ದಶಕಗಳಿಂದ ನಾನು ಕುಣಬಿಯರ ಜೊತೆಗೆ ಒಡನಾಡಿದ ವಿವರಗಳು ಮತ್ತು ಈ ಅಧ್ಯಯನಕ್ಕೆ ಉದ್ದೇಶಪೂರ್ವಕವಾಗಿ ಸಂಗ್ರಹಿಸಿದ ತಿಳುವಳಿಕೆಯನ್ನು ಬಳಸಿ ಈ ಅಧ್ಯಾಯವನ್ನು ಬರೆಯಲಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಯಲ್ಲಾಪುರ, ಕಾರವಾರ, ಶಿವಮೊಗ್ಗ, ಉಡುಪಿ ಜಿಲ್ಲೆಗಳಲ್ಲಿರುವ ಕುಣುಬಿ ಬುಡಕಟ್ಟು ಸಮುದಾಯಗಳು ದಟ್ಟ ಕಾಡಿನ ಮದ್ಯೆ ವಾಸಿಸುತ್ತಿದ್ದಾರೆ. ಇವರ ಹಾಡಿಗಳನ್ನು **ಕುಳಾವಿ** ಎಂದು ಕರೆಯುತ್ತಾರೆ. ಕುಣಬಿಗಳು ಕೂಡ ಹಾಲಕ್ಕಿಯಂತೆ ಕುಂಬರಿ ಬೇಸಾಯವನ್ನು ಈಗಲೂ ನಡೆಸಿಕೊಂಡು ಬಂದಿದ್ದಾರೆ. ಅವರ ಸೀಮಾಪದ್ಧತಿ ಈಗಲೂ ಅವರಲ್ಲಿನ ಪ್ರಬಲವಾದ ಆಚರಣೆ ಪ್ರತಿ ಕುಳಾವಿ ಸುತ್ತಲೂ 4–5 ಕಿ.ಮೀ. ಮತ್ತು ವೃತ್ತಾಕಾರದ ವ್ಯಾಪ್ತಿಯಲ್ಲಿ ಗಡಿರೇಖೆಗಳನ್ನು ಗುರ್ತಿಸಿರುತ್ತಾರೆ. ಒಂದು ಕುಳಾವಿಯ ಪರಿಧಿಯಲ್ಲಿ ಆ ಕುಳಾವಿಗೆ ಸಂಬಂಧಪಡದವರ ಪ್ರವೇಶವಿರುವುದಿಲ್ಲ. ಪ್ರತ್ಯೇಕ ಕುಳಾವಿಯ ಸೀಮೆಯ ಗಡಿಗಳಲ್ಲಿ ವಾಗ್ರೊ(ಹುಲಿ), ಕಾಪ್ರಿ, ಜನ್ಮಿ, ಭಯ ಚೋನಾಸ್, ಸಾತ್ಪುರುಕ್ಷ, ಮಾಲಜನ್ಮಿ, ಚಾಡ್ಡೋಜನ್ಮಿ, ಭಯಚೋಜನ್ಮಿ ಸಾತೇರಿದೇವಿ, ಬೈರೋರಾಮಲಿಂಗ, ಗಾವಳಾದೇವಿ ಪಾಯಕ್, ಬಾಗ್ಚೆನಾಸ್, ಮಡೆನಾಸ್, ಸವಡಿನಾಸ್ ಇವುಗಳೂ ಕುಣಬಿಗಳ ಸೀಮಾದೈವಗಳಾಗಿವೆ.

ಕುಳಾವಿಯಲ್ಲಿ ಮಡಿದ ಹಿರಿಯರ ಆತ್ಮಗಳನ್ನು ಗಡಿಯಲ್ಲಿ ಗುಂಡುಕಲ್ಲಿನ ರೂಪದಲ್ಲಿ ಸ್ಥಾಪಿಸಿ ಪೂಜಿಸಲಾಗುತ್ತದೆ. ಗಾಂಗೋಡಾದ ಸಾತ್ ಪುರುಷ, ಗಾವಡೇವಾಡಾದ ಕಾಪ್ರಿ ಮತ್ತು ಡಿಗ್ಗಿಯ ಗಾವಳಾದೇವಿ ಜಾತ್ರೆಗಳು ನೆರವೇರುತ್ತವೆ. ಇವು ಕಾಡನ್ನು, ಬೆಳೆದ ಪೈರನ್ನು ಹಾಗೂ ಬುಡಕಟ್ಟುಗಳ ಬದುಕನ್ನು ಸಂರಕ್ಷಿಸುತ್ತಿರುತ್ತವೆಂದು ಕುಣಬಿಗಳು ನಂಬುತ್ತಾರೆ. ಸೀಮಾದೈವಗಳಿಗೆ ಸಂಬಂಧಪಟ್ಟಂತೆ ಸಿಗ್ಮೋ, ಬಾರ್ಸಿ, ಮಾತನ್, ಉಷ್ಟಾಣ್ ಹಬ್ಬಗಳನ್ನು ಆಚರಿಸುತ್ತಾರೆ.

## ಕುಣಬಿಯರು ಮತ್ತು ಅವರ ನೆಲೆಗಳು

ಒಂದಾನೊಂದು ಕಾಲಕ್ಕೆ ಇಡೀ ಮಾನವಕುಲವೇ ವಲಸೆಜೀವನವನ್ನು ಅವಲಂಬಿಸಿತ್ತು. ಮನುಷ್ಯ ಕೃಷಿಯನ್ನು ಕಂಡುಕೊಳ್ಳುವುದಕ್ಕೆ ಮೊದಲ ಹಂತ ಆರಂಭವಾದದ್ದು ನೈಸರ್ಗಿಕವಾಗಿ ದೊರೆಯುತ್ತಿದ್ದ ಆಹಾರ ಪದಾರ್ಥಗಳ ಸಂಗ್ರಹದಿಂದ. ಎರಡನೆಯ ಹಂತ ಬೇಟೆ. ಮೂರನೆಯ ಹಂತ ಪಶುಸಂಗೋಪನೆ ಅರ್ಥಾತ್ ವಿವಿಧ ಪ್ರಾಣಿಗಳ ಸಾಕಾಣಿಕೆ. ಕೃಷಿ ಮನುಷ್ಯ ಕಂಡುಕೊಂಡ ಬಹುಮುಖ್ಯ ಆರ್ಥಿಕ ಹಂತ. ಕೃಷಿ ಬಳಕೆಗೆ ಬಂದ ನಂತರವೇ ಮನುಷ್ಯ ಸಮುದಾಯಗಳು ಒಂದು ಕಡೆ ನೆಲೆ ನಿಲ್ಲಲು ಆರಂಭಿಸಿದ್ದು. ಅನಂತರವೇ ಹಳ್ಳಿ, ಊರು, ಗ್ರಾಮ, ಪಟ್ಟಣ ಹಾಗೂ ಇವೆಲ್ಲವನ್ನೂ ಒಳಗೊಂಡ ಪಾಳೇಪಟ್ಟು ರಾಜ್ಯಗಳ ಉದಯ, ಚಕ್ರಾಧಿಪತ್ಯದ ಸ್ಥಾಪನೆ ಇತ್ಯಾದಿ ರಾಜಕೀಯ ವ್ಯವಸ್ಥೆ ಬೆಳೆದದ್ದು. ಅನಂತರವೇ ಜಮೀನುದಾರಿಕೆ, ಊಳಿಗಮಾನ್ಯತೆ ತಲೆದೋರಿದ್ದು, ಜಾತಿವ್ಯವಸ್ಥೆ ಕೂಡ ಕೃಷಿ ಯುಗದ ಒಂದು ಕೆಟ್ಟ ಬಳುವಳಿ. ಆದರೆ ಇದು ಭಾರತಕ್ಕೆ ಮಾತ್ರ ವಿಶಿಷ್ಟವಾಗಲು ಪುರೋಹಿತಶಾಹಿ ಹಾಗೂ ಆಡಳಿತಶಾಹಿಗಳ ಕೈವಾಡವೂ ಇದೆ.

ಕುಣಬಿಯ ಮೇಲೆ ನಾನು ಹೇಳಿದ ಯಾವ ಆರ್ಥಿಕ ಹಂತಕ್ಕೆ ಸಲ್ಲುತ್ತಾರೆ ಎಂಬುದನ್ನೇ ಜಿಜ್ಞಾಸೆಗಾಗಿ ಈ ಪೀಠಿಕೆ ಹಾಕಬೇಕಾಯಿತು ಅಷ್ಟೇ. ಕುಣಬಿಯರು ಪ್ರಧಾನವಾಗಿ ಕಾಡಿನಲ್ಲಿ ವಾಸ ಮಾಡುವ ಜನ. ಅವರು ತೀರಾ ಇತ್ತೀಚಿನವರೆಗೂ ಅರೆ ಅಲೆಮಾರಿಗಳು. ಕಾಡಿನ ನಿಸರ್ಗದತ್ತ ಆಹಾರ ಸಂಗ್ರಹಣೆ, ಲಭ್ಯವಿದ್ದ ಬೇಟೆ ಹಾಗೂ ಆ ನಂತರದಲ್ಲಿ 'ಕುಂಬರಿ ಬೇಸಾಯ' ಇವು ಇವರ ಇವತ್ತಿನ ಆರ್ಥಿಕತೆ ರೂಪಿಸಿರುವ ಅಂಶಗಳು.

ಮಲೆನಾಡಿನಲ್ಲಿ ವಾಸವಿರುವ ಹಲವು ಬುಡಕಟ್ಟುಗಳಲ್ಲಿ ಕೆಲವು ಇದೇ ನೆಲದ ಆದಿ ಸ್ವರೂಪದ ಆದಿವಾಸಿ ಗುಂಪುಗಳು. ಇನ್ನು ಕೆಲವು ಹೊರಗಿನಿಂದ ವಲಸೆ ಬಂದ ಬುಡಕಟ್ಟುಗಳು. ಕುಣಬಿಯರು, ಗೌಳಿಗರು, ಮರಾಠಿ ನಾಯ್ಕರು. ಸಿದ್ದಿಯರು ವಸಾಹತು ಕಾಲಘಟ್ಟದಲ್ಲಿ ಗುಲಾಮರಾಗಿ ಗೋವಾಕ್ಕೆ ಬಂದ ಆಫ್ರಿಕಾ ಮೂಲ ಬುಡಕಟ್ಟುಗಳು. ಅನಂತರದಲ್ಲಿ ಗೋವಾ ಗುಜರಾತ್ ಮತ್ತು ಕರ್ನಾಟಕದ ಕಾಡುಗಳಲ್ಲಿ ಸಿದ್ಧಿಯರು ನೆಲೆ ನಿಂತರು. ಆದರೆ ಕುಣಬಿಯರು, ಕುಡಬಿಯರು, ಗೌಳಿಗರು ಹಾಗೂ ಮರಾಠಿ ನಾಯ್ಕರು ಯಾವ ಕಾರಣಕ್ಕಾಗಿ ವಲಸೆ ಬಂದರು ಎಂಬುದು ಚರ್ಚೆಗೆ ಗ್ರಾಸವಾಗಬೇಕಾದ ವಿಚಾರ. ಅನೇಕರ ಪ್ರಕಾರ ಇವರೆಲ್ಲ ಪೋರ್ಚುಗೀಸರ ಆಡಳಿತ ಕಾಲದಲ್ಲಿ ಅವರು ಹೇರುತ್ತಿದ್ದ ಬಲವಂತ ಮತಾಂತರಕ್ಕೆ ಹೆದರಿ ಗೋವಾ ಮತ್ತು ಅದರ ಸುತ್ತಮುತ್ತಲ ಪ್ರದೇಶದಿಂದ ದೂರದ ಕಾಡುಗಳಿಗೆ ವಲಸೆ ಬಂದರು. ಇದು ಬಹುಸಂಖ್ಯೆಯ ತಜ್ಞರ ಅಭಿಮತ. ಇದು ಭಾಗಶಃ ಸತ್ಯವಿರಬಹುದು. ಆದರೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ. ಅದೇನೆಂದರೆ, ಈ ಎಲ್ಲ ಬುಡಕಟ್ಟುಗಳು ಅವರ ಆಹಾರ ಸಂಗ್ರಹಣೆಯ ಹಂತದಲ್ಲಿ ಪೂರ್ಣ ಪ್ರಮಾಣದ ಅಲೆಮಾರಿಗಳಾಗಿದ್ದವರು, ಕುಂಬರಿ ಕೃಷಿ ಹಂತಕ್ಕೆ ತಲುಪಿದ ಮೇಲೆ ಅರೆ ಅಲೆಮಾರಿಗಳಾಗಿ ಪರಿವರ್ತಿತರಾದವರು. ಅದರಲ್ಲಿಯೂ ಇವರ ಕೃಷಿ ಪೂರ್ಣ ಪ್ರಮಾಣದ ಬೃಹತ್ ಕೃಷಿ ಅಲ್ಲ. ಒಂದು ರೀತಿಯಲ್ಲಿ ಇವರದು ನೈಸರ್ಗಿಕ ಕೃಷಿ, ಅಂದರೆ 'ಕುಂಬರಿ ಬೇಸಾಯ' ಅಥವಾ 'ಕೆತ್ತು ಬೇಸಾಯ'. ಜಗತ್ತಿನಾದ್ಯಂತ ಅರೆ ಅಲೆಮಾರಿ ಜನರು ಕೈಗೊಳ್ಳುತ್ತಿದ್ದ ಈ ರೀತಿಯ ನೈಸರ್ಗಿಕ ಬೇಸಾಯಕ್ಕೆ ಶಿಫ್ಟಿಂಗ್ ಕಲ್ಟಿವೇಷನ್ ಎಂದು ಕರೆಯುತ್ತಾರೆ. ಅಂದರೆ ಕಾಡಿನಿಂದ ಕಾಡಿಗೆ ವರ್ಗಾವಣೆಗೊಳ್ಳುತ್ತಾ ಕೃಷಿಯನ್ನು ಮುಂದುವರಿಸುವುದು. ಈ ವರ್ಗಾವಣೆ ಬೇಸಾಯದ ಜೊತೆಜೊತೆಗೆ ಅವರ ವಲಸೆಯೂ ಮುಂದುವರಿಯುತ್ತಿತ್ತು. ಆದರೆ ಅಂಥ ವಲಸೆಗೂ ಒಂದು ಮಿತಿ ಇರುತ್ತಿತ್ತು. ಅದಕ್ಕೂ ಅವರದೇ ಆದ ಸೀಮೆ ಅಥವಾ ವೃತ್ತದ ಕಲ್ಪನೆ ಇರುತ್ತಿತ್ತು. ಮಧ್ಯಭಾರತದ ಗೊಂಡರು, ಸಂತಾಲರು ಮುಂತಾದವರನ್ನು ಗಮನಿಸಿದಾಗ ಇದು ನಿಚ್ಚಳವಾಗುತ್ತದೆ. ವಿಂದ್ಯ ಪರ್ವತಗಳ ಕಾಡುಗಳನ್ನು ಅವಲಂಬಿಸಿ ಗುಜರಾತ್, ಮಹಾರಾಷ್ಟ್ರ, ಮಧ್ಯಪ್ರದೇಶ ಮತ್ತು ಒರಿಸ್ಸಾದವರೆಗೆ ಒಂದು ಪಯಣದ ಹಾದಿಯನ್ನು ಇಲ್ಲಿ ಗುರುತಿಸಲು ಸಾಧ್ಯ. ಹಾಗೆಯೇ

ನಮ್ಮ ಪಶ್ಚಿಮಘಟ್ಟಗಳು ಕೂಡ. ಮಹಾರಾಷ್ಟ್ರ, ಗೋವಾ ಕರ್ನಾಟಕ ಹಾಗೂ ಕೇರಳದ ಉದ್ದಕ್ಕೆ ದೇಶದ ಪಶ್ಚಿಮದಲ್ಲಿ ಹಬ್ಬಿ ನಿಂತ ವೈವಿಧ್ಯಮಯ ಜೈವಿಕ ಅರಣ್ಯ. ಅಪಾರ ಪ್ರಮಾಣದ ಮಳೆಯನ್ನು ಆಕರ್ಷಿಸುವ ಪ್ರದೇಶ. ಸಮೃದ್ಧ ಅರಣ್ಯ, ತುಂಬಿ ಹರಿಯುವ ನದಿ ಹಾಗೂ ಅಪಾರ ನಿಸರ್ಗದತ್ತ ಆಹಾರ ಸಾಮಗ್ರಿಗಳನ್ನು ಒದಗಿಸಿದ ನಿತ್ಯ ಚೇತನ ನಿಬಿಡಾರಣ್ಯ ಅದು. ಇಂಥ ಅರಣ್ಯವನ್ನು ಆಶ್ರಯಿಸಿ ಬುಡಕಟ್ಟು ಸಮುದಾಯಗಳು ವಲಸೆಯ ರೂಪದಲ್ಲಿ ಬದುಕುತ್ತಿದ್ದವು. ಮಹಾರಾಷ್ಟ್ರದಿಂದ ಕೇರಳದವರೆಗೆ ಈ ವಲಸೆ ಒಂದು ನಿರಂತರ ಕಾಯಕವಾಗಿತ್ತು. ಆದ್ದರಿಂದ ಇಂದು ನೆಲೆ ನಿಂತಿರುವ ಕನ್ನಡೇತರವೆನಿಸಿದ ಹತ್ತಾರು ಬುಡಕಟ್ಟು ಗಳೆಲ್ಲವೂ ಮತಾಂತರಕ್ಕೆ ಹೆದರಿ ಗೋವಾ ಮತ್ತು ಮಹಾರಾಷ್ಟ್ರದಿಂದ ಪಲಾಯನ ಮಾಡಿದವು ಎಂಬ ಒಂದೇ ತತ್ವಕ್ಕೇ ಅಂಟಿಕೊಳ್ಳುವ ಬದಲು, ನಿಸರ್ಗದತ್ತವಾಗಿ ತಮ್ಮ ಕುಂಬರಿ ಬೇಸಾಯದ ವೃತ್ತಿಯನ್ನು ಅನುಸರಿಸುತ್ತಾ ಕ್ರಮೇಣ ಅಲ್ಲಲ್ಲಿ ನೆಲೆ ಕಂಡುಕೊಂಡವು ಎಂದು ಕೂಡ ಊಹಿಸಬಹುದಾಗಿದೆ. ಆದ್ದರಿಂದಲೇ ಈ ಸಮುದಾಯಗಳು ಆಡುವ ಭಾಷೆ ಹಲವು ಭಾಷೆಗಳ ಮಿಶ್ರಣವಾಗಿ ಒಂದು ಉಪ ಭಾಷೆಯ ಸ್ವರೂಪದಲ್ಲಿದೆ. ಕುಣಬಿಯಲ್ಲಿ ಕೊಂಕಣಿ ಭಾಷೆಯೇ ಪ್ರಧಾನವಾದರೂ ಅದರಲ್ಲಿ ಮರಾಠಿ ಕೊಂಕಣಿ ಹಾಗೂ ದಕ್ಷಿಣ ಕನ್ನಡ ಭಾಗದಲ್ಲಿರುವ ಕುಡುಬಿಯಲ್ಲಿ ತುಳು ಕೂಡ ಸೇರಿಕೊಂಡಿರುವುದು ಗಮನಿಸಬೇಕಾದ ಅಂಶವಾಗಿದೆ. ಹೀಗೆ ಬುಡಕಟ್ಟು ಸಮುದಾಯಗಳು ಸಮಾನ ವಾತಾವರಣ ಮತ್ತು ಸಾಖುಶ್ಯ ಸ್ಥಳಾವಕಾಶಗಳನ್ನು ಹುಡುಕಿಕೊಂಡು ಒಂದು ನಿರ್ದಿಷ್ಟ ಗಡಿಯೋಜನೆಯಲ್ಲಿ ಮುಂದಕ್ಕೆ-ಹಿಂದಕ್ಕೆ ಓಡಾಡುವ ಪರಿಪಾಟವನ್ನು ಇಟ್ಟುಕೊಂಡಿದ್ದವು ಎಂದು ಹೇಳಬಹುದು. ಈ ನನ್ನ ವಾದಕ್ಕೆ ಪೂರಕವಾಗಿ 1795ರಷ್ಟು ಹಿಂದೆಯೇ ಪಶ್ಚಿಮಘಟ್ಟಗಳನ್ನು ಸುತ್ತಾಡಿ ವರದಿ ಮಾಡಿದ ಫ್ರಾನ್ಸಿಸ್ ಬುಕಾನನ್‌ನನ್ನು ಉದಾಹರಿಸಬಹುದು. ಬುಕಾನನ್‌ನ ಪ್ರಕಾರ "ಕುಣಬಿಗಳು ಕರ್ನಾಟಕ ಮೂಲದ ಬುಡಕಟ್ಟು, ಆಗ ಉಂಟಾಗಿದ್ದ ಪ್ಲೇಗ್ ರೋಗದ ಕಾರಣ ಗೋವಾಗೆ ವಲಸೆ ಹೋಗಿ ಪೋರ್ಚುಗೀಸ್ ಕಾಲದಲ್ಲಿ ಪುನಃ ಕರ್ನಾಟಕದ ಜೋಯಿಡಾ ಭಾಗಕ್ಕೆ ವಾಪಸಾಗಿದ್ದಾರೆಂದು ಆತ ಹೇಳುತ್ತಾನೆ"[1] ಬುಕಾನನ್ ಪ್ರಕಾರ ಇವರು ಕರ್ನಾಟಕ ಮೂಲದವರು ಎಂಬ ವಾದಕ್ಕೂ ಅಂಟಿಕೊಳ್ಳಬೇಕಾಗಿಲ್ಲ. ಅವರ ಅನುಕೂಲ-ಅನಾನುಕೂಲತೆಗಳನ್ನು ಆಧರಿಸಿ ಅವರು ತಮ್ಮ ನಿಶ್ಚಿತ ವಲಸೆ ಮಾರ್ಗಗಳಲ್ಲಿ ಸಂಚಾರ ಮಾಡುತ್ತಿದ್ದರು ಎಂದು ತಾರ್ಕಿಕವಾಗಿ ಊಹಿಸಬಹುದು.

ಹೀಗೆ ಅಲೆಮಾರಿಗಳಾಗಿ, ನಂತರ ಇದೀಗ ಪಶ್ಚಿಮ ಘಟ್ಟಗಳಲ್ಲಿ ಅಲ್ಲಲ್ಲಿ ನೆಲೆಯಲ್ಲಿರುವ ಕುಣಬಿಯರು ಇಂದಿಗೂ ವಿಶಿಷ್ಟವಾದ ಬದುಕನ್ನು ಬದುಕುತ್ತಾ ಬುಡಕಟ್ಟು ಸ್ವರೂಪವನ್ನು ಉಳಿಸಿಕೊಂಡಿದ್ದಾರೆ. ಗೋವಾ ಸುತ್ತಮುತ್ತಲ ಪ್ರದೇಶದಲ್ಲಿ ಈಗಲೂ ಕುಣಬಿಯರಿದ್ದಾರೆ. ಅಲ್ಲಿನ ಸರ್ಕಾರ ಅವರನ್ನು 'ಬುಡಕಟ್ಟು ಸಮುದಾಯ' ಎಂದು ಘೋಷಿಸಿದೆ. ಗೋವಾ

ಅಥವಾ ಕರ್ನಾಟಕ ಎಂಬ ರಾಜ್ಯಗಳು ಇಂದು ರಾಜಕೀಯ ವ್ಯವಸ್ಥೆಯ ಭಾಗಗಳು. ರಾಜ್ಯಗಳ ಗಡಿ, ಬಾಂದು, ಸೀಮೆ, ರೇಖೆ ಎಲ್ಲವೂ ಆಧುನಿಕ ರಾಜಕೀಯ ವ್ಯವಸ್ಥೆ ರೂಪಿಸಿದ ಒಂದು ಆಡಳಿತಾನುಕೂಲ ಶಿಸ್ತು ಅಷ್ಟೆ. ಆದರೆ ಹಿಂದೆ ಅಂಥ ಗಡಿ–ನುಡಿಯ ಪ್ರಕ್ರಿಯೆ ಇಲ್ಲದಾಗ ಎಲ್ಲ ಅರಣ್ಯವೂ ಬುಡಕಟ್ಟುಗಳಿಗೆ ಒಂದೇ ಆದ್ದರಿಂದ ಗೋವಾದ ಕುಣಬಿಯರಿಗೂ ಕರ್ನಾಟಕದ ಕುಣಬಿಯರಿಗೂ ಯಾವುದೇ ವ್ಯತ್ಯಾಸವೂ ಇಲ್ಲ. ಆದರೂ ನಮ್ಮ ಸರ್ಕಾರಗಳು ಗೋವಾದಲ್ಲಿ ಇರುವವರು 'ಬುಡಕಟ್ಟು' ಎಂದು ಘೋಷಿಸಿ, ಕರ್ನಾಟಕ ಸೀಮೆಯಲ್ಲಿರುವ ಅದೇ ಜನರನ್ನು ಹಾಗೆ ಘೋಷಿಸದೇ ಇರುವುದು ಮಾತ್ರ ವಿಪರ್ಯಾಸವಾಗಿ ಕಾಣುತ್ತದೆ.

ಕರ್ನಾಟಕದ ಸಹ್ಯಾದ್ರಿಯ ಮಡಿಲಲ್ಲಿ ಅಲ್ಲಲ್ಲಿ ನೆಲೆ ನಿಂತಿರುವ ಕುಣಬಿಯರ ನೆಲೆಗಳನ್ನು ನಾನು ಕಂಡಷ್ಟರ ಮಟ್ಟಿಗೆ ಇಲ್ಲಿ ಗುರುತಿಸಬಯಸುತ್ತೇನೆ.

ಕುಣಬಿಯರು ಗೋವಾಕ್ಕೆ ಅತ್ಯಂತ ಹತ್ತಿರದಲ್ಲಿರುವ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನಲ್ಲಿ ಅತ್ಯಂತ ಸಾಂದ್ರವಾಗಿಯೂ, ಅಂಕೋಲಾ, ಯಲ್ಲಾಪುರ ಹಾಗೂ ಹೊನ್ನಾವರ ತಾಲ್ಲೂಕಿನ ಅಲ್ಲಲ್ಲಿಯೂ ಹಾಗೂ ಶಿವಮೊಗ್ಗ ಜಿಲ್ಲೆ ಸಾಗರ ಹಾಗೂ ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ಅತ್ಯಂತ ವಿರಳವಾಗಿಯೂ ಕಂಡುಬರುತ್ತಾರೆ. ಅವರು ಕಂಡು ಬರುವ ಸ್ಥಳಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಲಾಗಿದೆ.

## ಉತ್ತರ ಕನ್ನಡ ಜಿಲ್ಲೆ

### 1. ಜೋಯಿಡಾ ತಾಲ್ಲೂಕು

1. ಅಣಶಿವಾಡಾ–ಆಪಕರಣಿ
2. ಹಲ್ಕುಂಬಿ
3. ಅಸುಳ್ಳಿ
4. ಅಂಬರ್ಡ
5. ಅಂಬೋಳೆ
6. ಆಂಬಟ್‌ಗಾಳಿ
7. ಆಂಬಾಳಿ
8. ಕಡಗರ್ಣಿ
9. ಕಣ್ಣೆ
10. ಕರಕಣೆ
11. ಕರಂಬಾಳಿ–ಕರಂಜ
12. ಕಳಣೆ–ಕಳಾವಳಿ
13. ಕಾಜುವಾಡಾ
14. ಕಾಟೇಲ್
15. ಕಾರಟೋಳಿ
16. ಕಾರ್‌ಸಿಂಗಳ್
17. ಕಾಳಸಾಯಿ
18. ಕಿರವತ್ತಿ
19. ಕಿಂದಳ್
20. ಕುರಾವಲಿ–ಶಾವನಾಗೆ
21. ಕುಂಗಾಳ್
22. ಕುಂಡಲ್

23. ಕುಣ್ಣಂಗ್
24. ಕೇಲೋಲಿ
25. ಕೊಂದೊರ್
26. ಖಾನ್‌ಗಾಂವ್
27. ಗಾವಡೇವಾಡಾ
28. ಗಾಳ್
29. ಗಾಂಗೋಡಾ
30. ಗುಂದ್
31. ಗುಂದರೆ
32. ಗುಂದಾಳಿ
33. ಗೋಕರ್ಣ
34. ಘಟ್ಟಾವ್
35. ಚಾಪಾಳಿ–ಚರಗಾಳಿ
36. ಚಾಪೇರ್
37. ಚಾಪೋಲಿ(ಕಳಸಾಯಿ)
38. ಚಾಪೋಲಿ
39. ಚೌಕ್‌ನ್‌ಗಾಳಿ
40. ಚಿಚೆನಾಡಿ–ಮಾಲೆ ಚಂದ್ರಾಳಿ
41. ಝೂಮ್‌ಗಾಳಿ
42. ಪಟೆಗಾಳಿ
43. ಡಿಗ್ಗಿ
44. ಡೇರಿಯಾ
45. ತಾಡಶೇತ್
46. ತಿನೀಖಂಡ್
47. ತೇಲೋಲಿ
48. ದಾಡಸೇತ್.
49. ದಾತೋಡಿ
50. ದಿಗಲಂಬ್
51. ದುಧಮಾಳಾ
52. ದುಧಮಳಾ ವೈಲವಾಡು
53. ಧುಪೇವಾಡಿ–ದೇವಸ
54. ನಗರಭಾವಿ
55. ನಗರಿ
56. ನವರ್
57. ನುಜ್ಜಿಪಾಟ್ನೇ
58. ಪಟ್ಟೇಗಾಳಿ–ಪಟ್ನೆ
59. ಪ್ರತಿವಾಡಾ
60. ಪಾತಾಗುಡಿ
61. ಪಿಸೋಸಾ–ಪಿರೇಗಾಳಿ
62. ಪುಸೇಲಿ
63. ಪೋಟೋಳಿ
64. ಪೋಸೋಲಿ
65. ಬಾಕಿ–ಬಾರಲ್‌ಕೋಷ್ ಬಾಪೇಲಿ
66. ಚಾಂದೇಗಾಳಿ
67. ಬಿಡೋಲಿ ಪಾಟ್ನೆ
68. ಬಿರೊಡಾ
69. ಬೊಂಡೇಲಿ–ಬೋತಿ
70. ಭಾಮಣೆ
71. ಭಾರಾಡಿ–ಭೀಮಗಾಳಿ
72. ಮಡಭಾವಿ–ಮದ್ಲವಾಡ್
73. ಮಲಕರ್ಣಿ
74. ಮಾತಕಣ

75. ಮಾಟಗಾಂವ್
76. ಮಾತಕಣಿ
77. ಮಾಯರೆ
78. ಮಿರಾಶಿಕುಂಬೇಲಿ
79. ಮುಡಿಯೇ
80. ಮೈನೋಳ
81. ರಾಮನಗರ
82. ಲಿಂಬುಡ್‌ಶೇತ್–ರಿಟ್ಕೆ
83. ರುಂಡಾಳಿ
84. ವಡಾಕಡೇ
85. ವರಾಂಡ
86. ವಾಗಬಂದ್–ವಾಕ್‌ಶೇಪಡಿ
87. ವಾಗೇಲಿ
88. ವಾಸ್‌ಪೋಡ್
89. ವಿರಲ್
90. ಶಿರೋಳ್
91. ಸಾಚ್ಚೇವಾಡಾ
92. ಸಾಮ್‌ಜೋಯಿಡಾ
93. ಸಿಟ್ಟೇಗಾಳಿ
94. ಸಿತಾವಾಡಿ
95. ಸಿಸಯಿ
96. ಸುಕ್ತರಿ
97. ಸುಳಾವಳಿ
98. ಸೊಲಿಯೆ
99. ಹೆಣಕೋಳ
100. ಹನೂಲಿ

**2. ಯಲ್ಲಾಪುರ ತಾಲ್ಲೂಕು**

ಅಳ್ಳೆಮನೆ
ತಾರೆಮನೆ
ನೀರಕ್ಲು ತಿಮಾನಿ
ಬಂತೊಳ್ಳಿ
ಹೆಗ್ಗಾರಮನೆ

**3. ಕಾರವಾರ ತಾಲ್ಲೂಕು**

ಕಡಚಿಮನೆ–ಗೋಪಶೆಚ್ಚಾ
ಕಬ್ಬ್ಯಾ
ಹರೂರು

**4. ಅಂಕೋಲಾ ತಾಲ್ಲೂಕು**

ಲಕ್ಕೆಮನೆ
ಶೇಡಿಗುಳಿ

**5. ಶಿವಮೊಗ್ಗ ಜಿಲ್ಲೆ : ಸಾಗರ ತಾಲ್ಲೂಕು**

ನಾಗವಳ್ಳಿ
ಮೇಘಾನೆ
ಸಬನಮನೆ

6. ಹೊನ್ನಾವರ ತಾಲ್ಲೂಕು

ಅಟಾರ ಹಳಿಮಳ[2]

**ಕುಣಬಿಯರು–ಕುಡುಬಿಯರು**

ಕುಣಬಿಯರು ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ ಘಟ್ಟದ ಮೇಲಿನ ದಟ್ಟಾರಣ್ಯಗಳಲ್ಲಿದ್ದರೆ, ಕುಡುಬಿಯರು ದಕ್ಷಿಣ ಕನ್ನಡ ಜಿಲ್ಲೆಯ ಘಟ್ಟದ ಕೆಳಗಿನ ಕರಾವಳಿ ಪ್ರದೇಶದಲ್ಲಿ ವಾಸವಾಗಿದ್ದಾರೆ. ಆಚಾರ–ವಿಚಾರ, ದೈಹಿಕ ಚಹರೆ ಹಾಗೂ ಸಾಂಸ್ಕೃತಿಕ ವಿವರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಕುಡುಬಿ ಮತ್ತು ಕುಣಬಿಯರಲ್ಲಿ ಅಂಥ ವ್ಯತ್ಯಾಸವೇನೂ ಕಾಣುವುದಿಲ್ಲ. ಬಹುಶಃ ಘಟ್ಟದ ಮೇಲೆ ತಮ್ಮ ಘಟ್ಟದ ಕೆಳಗಿನ ಅಕ್ಷರ ಉಚ್ಚಾರದಲ್ಲಿ ಆಗಿರುವ ಅಕ್ಷರ ವ್ಯತ್ಯಾಸವೇ ಹೊರತು ಅದಕ್ಕಿಂತ ದೊಡ್ಡ ಕಾರಣವೇನೂ ಇರಲಾರದು. ಆದರೆ ಸಹಜವಾಗಿಯೇ ಘಟ್ಟದ ಮೇಲಿನ ಮತ್ತು ಘಟ್ಟದ ಕೆಳಗಿನ ಜನಜೀವನದಲ್ಲಿಯೇ ಸಾಕಷ್ಟು ಪ್ರಾದೇಶಿಕ ವ್ಯತ್ಯಾಸಗಳಿರುವುದರಿಂದ ಈ ಸಮುದಾಯಗಳಲ್ಲಿಯೂ ಅಷ್ಟರಮಟ್ಟಿನ ಪ್ರಾದೇಶಿಕ ವ್ಯತ್ಯಾಸವಿದೆ. ಘಟ್ಟದ ಮೇಲೆ ಕೊಂಕಣಿಗೆ ಕನ್ನಡ ಬೆರೆತಿರುವಂತೆ, ಘಟ್ಟದ ಕೆಳಗೆ ಕೊಂಕಣಿಗೆ ತುಳು ಬೆರೆತಿದೆ. ಕುಂದಾಪುರದ ಸುತ್ತಮುತ್ತಲ ಕುಡುಬಿಯರ ಕೊಂಕಣಿಗೆ ಕುಂದಾಪುರದ ಪ್ರಾದೇಶಿಕ ಕನ್ನಡವೂ ಬೆರೆತಿದೆ ಎನ್ನಬಹುದು. ಕುಡುಬಿಯರು ಕೂಡ ಗೋವಾದಿಂದ ವಲಸೆ ಬಂದವರು ಎಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಕ್ಷಿಣ ಕನ್ನಡದ ಕಾಡಿನಲ್ಲಿ ವಾಸಿಸುವ ಕುಡುಬಿಯರನ್ನು ಗೋವಾ ಕುಡುಬಿಯರು, ಕುಮ್ರಿ ಕುಡುಬಿಯರು ಎಂದು ಕರೆಯುತ್ತಾರೆ. ವಾಸ್ತವವಾಗಿ ಇವರೆಲ್ಲರೂ ಒಂದೇ ಗುಂಪಿನವರಾಗಿದ್ದು ಸ್ಥಳೀಯರು ಹೊರಗಿನವರನ್ನು ಗುರುತಿಸುವಾಗ ಒಂದೊಂದು ಹೆಸರು ಕೊಟ್ಟಂತೆ ಕಾಣುತ್ತದೆ. ಸಮುದ್ರದ ದಂಡೆಯಲ್ಲಿ ವಾಸಿಸುವ ಕುಡುಬಿಯರನ್ನು ಕೊಡಿಮೂಲ ಕುಡುಬಿಯರು ಮತ್ತು ಜೋಗಿ ಕುಡುಬಿಯರು ಎಂದು ಕರೆಯುತ್ತಾರೆ. ಇವರಿಗೆ ಕ್ರಮೇಣ ಕಾನನ ಸಂಪರ್ಕ ತಪ್ಪಿ ಸಮುದ್ರದ ಸಂಪರ್ಕ ಬಂದಿದೆ. ಸಮುದ್ರದಂಡೆಯ ಕೊಡಿಯಾಲ ಎಂಬಲ್ಲಿ ನೆಲೆ ನಿಂತ ಕಾರಣ ಆ ಸ್ಥಳನಾಮದ ಹೆಸರು ಅಂಟಿಕೊಂಡಿದೆ ಎಂಬುದು ಸ್ಪಷ್ಟ.

ದಕ್ಷಿಣ ಕನ್ನಡ ಕುಡುಬಿಯರ ಸಾಂಸ್ಕೃತಿಕ ನೆಲೆಗಳೆಲ್ಲವೂ ಉತ್ತರ ಕನ್ನಡ ಕುಣಬಿಯರ ಮುಂದುವರಿದ ರೂಪಗಳೇ ಆಗಿವೆ. ಇವೆಲ್ಲ ವಲಸೆ ಮುಂದುವರಿದ ರೂಪಗಳೇ ಆಗಿವೆ. ವಲಸೆ ಮುಂದುವರಿದಂತೆ ದಕ್ಷಿಣದ ಕಡೆಗೆ ಬಂದ ಇವರು ಕರಾವಳಿಯ ದಟ್ಟ ಕಾನನಗಳಲ್ಲಿ ತಮ್ಮ ನೆಲೆ ಕಂಡುಕೊಂಡರು. ಕುಂದಾಪುರ, ಉಡುಪಿ ಹಾಗೂ ಮಂಗಳೂರು ತಾಲ್ಲೂಕುಗಳಿಗೆ ಸೇರಿದ ಬಾರ್ಕೂರು, ಮಂದರ್ತಿ, ಕೊಕ್ಕರ್ಣೆ, ಸುರಾಲು, ಬಿಲ್ಲಾಡಿ, ಹೆಸ್ಕುಂದ, ಹಾಲಾಡಿ, ಸಿರಿಯಾರ, ನೆಡೂರು, ಕೊಲ್ಲೂರು, ಬಜಪೆ ಮುಂತಾದ ಊರುಗಳಲ್ಲಿ ಹೆಚ್ಚಿನ ಸಂಖ್ಯೆಯ ಕುಡುಬಿಯರು ಕಂಡುಬರುತ್ತಾರೆ. ಈ ಸ್ಥಳಗಳೆಲ್ಲವೂ ಕರಾವಳಿ ಪ್ರದೇಶದಲ್ಲಿದ್ದರೂ ಕಾಡಿನಿಂದ

ಆವೃತ್ತವಾದ ಹಾಗೂ ಘಟ್ಟಗಳಿಗೆ ಸಮೀಪವಾದ ಸ್ಥಳಗಳು ಎಂಬುದನ್ನು ಗಮನಿಸಬೇಕು. ಒಂದು ಕಾಲಕ್ಕೆ ಕುಂಬರಿ ಬೇಸಾಯವೇ ಇವರಿಗೂ ಪ್ರಮುಖವಾಗಿದ್ದು, ಕಾಡಿನ ಕಾನೂನುಗಳು ಬಿಗಿಯಾದ ನಂತರ ಒಡೆಯರ ತೋಟಗಳಲ್ಲಿ ಕೆಲಸ ಮಾಡುವುದು ಇವರಿಗೆ ಅನಿವಾರ್ಯವಾಯಿತು. ಒಟ್ಟಿನಲ್ಲಿ ಕುಣಬಿಯರಿಗೂ ಕುಡುಬಿಯರಿಗೂ ಅನೇಕ ಸಮಾನ ಅಂಶಗಳಿವೆ. ಕುಮ್ರಿ ಬೇಸಾಯ, ಹೋಳಿಹಬ್ಬ ಗುಮಟೆ ವಾದನ ಮತ್ತು ಕೊಂಕಣಿ ಕಥಾನಕಗಳು ಇವಿಷ್ಟೇ ಸಾಕು, ಈ ಎರಡು ಸಮುದಾಯಗಳೂ ಮೂಲದಲ್ಲಿ ಒಂದೇ ಎಂದು ತೀರ್ಮಾನಿಸುವುದಕ್ಕೆ.

**ನಕ್ಷೆ**

**ಕುಣಬಿಗಳ ನೆಲೆಗಳಿರುವ ಕರ್ನಾಟಕ ನಕ್ಷೆ**



"ಖುಣಗಿ" ಕೃಷಿ ವ್ಯವಸಾಯವನ್ನು ಮೈಗೂಡಿಸಿಕೊಂಡಿರುವ ಕುಣಬಿಗಳು, ಗದ್ದೆಯ ಭತ್ತದ ಪ್ರದೇಶವನ್ನು "ಖುಣಗಿ" ಎಂದು ಕರೆಯಲಾಗುತ್ತಿದ್ದು, ಇದನ್ನು ಕಾಲಾಂತರದಲ್ಲಿ ಪರಿವರ್ತಿತವಾಗಿ ಖುಣಿಗೆ ಇದು ಕುಣಬಿ ಆಗಿರಬಹುದಾಗಿದೆ. ಕೃಷಿ ಉದ್ಯೋಗದಿಂದ ಈ ಕುಣಬಿ ಪದ ಬಂದಿರಬಹುದಾಗಿದೆ. "ಕುಳವಾಡಿ" ಕುಳ+ವಾಡಿ=ಕುಳವಾಡಿ ಎಂದು ಇಂದಿಗೂ ಕುಣಬಿಗಳನ್ನು ಕರೆಯಲಾಗುತ್ತದೆ. 'ಕುಳ' ಅಂದರೆ ಹಿರಿಯರ ಆತ್ಮದ ದೇವರು, 'ವಾಡಿ' ಅಂದರೆ ಅಕ್ಕಿಯ ಅಕ್ಷತೆಯ ಕಾಳನ್ನು ಇಟ್ಟು ಪೂಜೆ ಮಾಡುವುದು ಎಂದರ್ಥವಿದೆ. ಕುಳವಾಡಿ ಇದು ಕುಣಬಿ ಎಂಬ ಪದ ಆಗಿರಬಹುದಾಗಿದೆ. ಇದಕ್ಕೆ ಹೆಚ್ಚು ಒತ್ತೂ ಸಿಗಬಹುದು. ಇಂದಿಗೂ ಕುಣಬಿಗಳಿಗೆ ಮನೆದೇವರು ಯಾರೆಂದು ಕರೆದರೆ ಕುಲದೇವರೆಂದು ಕರೆಯುತ್ತಾರೆ. ಅಂದರೆ ಕುಲದೇವರಿಗೆ ಹೆಸರಿರುವುದಿಲ್ಲ. ಹಿರಿಯರ ಮಡಿದ ಆತ್ಮಗಳೇ ಕುಲದೇವರಾಗಿರುತ್ತಾರೆ. ಆಕಾರ ಮತ್ತು ರೌದ್ರಿಗಳು ಕುಲದೇವರಾಗಿರುತ್ತಾರೆ. ಆಕಾರ ಎಂದರೆ ವಂಶದ ಎಲ್ಲ ಚಿತ್ರಗಳು ರೌದ್ರಿ ಎಂದರೆ ಅವರ ಮಡಿದ ಆತ್ಮಗಳು.

**ಕುಣಬಿಗಳಲ್ಲಿನ ಸೀಮಾದೈವಗಳು ಮತ್ತು ಅವುಗಳ ಪಾತ್ರ**

ಕರ್ನಾಟಕದ ಇತರ ಬುಡಕಟ್ಟುಗಳಿಗೆ ಹೋಲಿಸಿದಲ್ಲಿ ಉತ್ತರ ಕನ್ನಡ ಜಿಲ್ಲೆಯ ಕುಣಬಿ ಬುಡಕಟ್ಟು ಸಮುದಾಯದಲ್ಲಿನ ಸೀಮಾಪದ್ಧತಿಯು ಅತ್ಯಂತ ಪ್ರಚಲಿತ ಮತ್ತು ಜೀವಂತ ಸ್ಥಿತಿಯಲ್ಲಿದ್ದು, ಪ್ರಸ್ತುತ ಕಾಲಮಾನದಲ್ಲಿಯೂ ಅವಿರತವಾಗಿ(ನಿರಂತರವಾಗಿ) ಆಚರಣೆಗಳು ಜರುಗುತ್ತಾ ಬರುತ್ತಿರುವುದನ್ನು ಕಾಣಬಹುದಾಗಿದೆ. ನಾನು ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಸೀಮಾಪದ್ಧತಿಯು ಭೂಮಿಯ ಪ್ರತಿಯೊಂದು ಜೀವಿಗಳಲ್ಲಿ ತಮ್ಮ ಆಹಾರ, ಸಂಗಾತಿ, ಸಂತತಿ ರಕ್ಷಣೆ ಮತ್ತು ನೆಮ್ಮದಿಗಾಗಿ ನಿರ್ಮಿಸಿಕೊಂಡ ಸೀಮಾವಲಯ. ಇದು ಜೀವಿಗಳಲ್ಲಿ ವಿಕಸಿತವಾದ ಒಂದು ನಡವಳಿಕೆಯಾಗಿದೆ.

ಮನುಷ್ಯ ತನ್ನ ಬುದ್ಧಿಮಟ್ಟದ ಬೆಳವಣಿಗೆಯ ಕಾರಣ ಪ್ರಾಣಿ ಅವಸ್ಥೆಯಿಂದ ದಾಟಿ ಮಾನವ ಸಾಮಾಜಿಕ ಜೀವನದ ನಿರ್ಮಾಣಗೊಳಿಸುವ ಹಾದಿಯಲ್ಲಿ ಪ್ರಾಣಿಗಳಲ್ಲಿದ್ದ ಸೀಮಾಪದ್ಧತಿಯ ನಡವಳಿಕೆಯಿಂದ ಮಾನವ ಸಮಾಜದ ಸಾಂಸ್ಕೃತಿಕ ಬದುಕು ಕಟ್ಟಿಕೊಳ್ಳುವ ಸಂದರ್ಭದಲ್ಲಿ ಬುಡಕಟ್ಟುಗಳು ಸಾಂಸ್ಕೃತಿಕವಾಗಿ ವಿಕಸಿತಗೊಳಿಸಿದ ಸೀಮಾ ನಡವಳಿಕೆಯೇ ಪ್ರಸ್ತುತ ಅಧ್ಯಯನದ ಬುಡಕಟ್ಟು ಸೀಮಾಪದ್ಧತಿಯಾಗಿದೆ.

ಕಾಡಿನ ಬದುಕಿನಲ್ಲಿ ಪ್ರಾಣಿಯಾಗಿಯೇ ಜೀವನ ಸಾಗಿಸುತ್ತಿದ್ದ ಮಾನವ ಕ್ರಮೇಣ ಬುಡಕಟ್ಟು ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ವಿಸ್ತೃತಗೊಳಿಸಿಕೊಂಡ. ತನ್ನ ಆಹಾರ, ಸಂತತಿ ಮತ್ತು ಅದರ ಮೂಲ ಸಂಪನ್ಮೂಲಗಳ ರಕ್ಷಣೆಗಳಿಗಾಗಿ ಮೂಲ ನೈಸರ್ಗಿಕ ಸೀಮಾಪದ್ಧತಿಯನ್ನು ತನ್ನ ಅನುಕೂಲತೆಗಳಿಗಾಗಿ ರೂಪಿಸಿಕೊಂಡ. ಸೀಮಾಪದ್ಧತಿಯನ್ನು

ಸಾಂಸ್ಕೃತಿಕವಾಗಿ ಅಭಿವೃದ್ಧಿಗೊಳಿಸಲು ನೂರಾರು ಮಾರ್ಪಾಟುಗಳನ್ನು ಕಾಲಕ್ರಮೇಣ ಮಾಡಿಕೊಂಡ. ಸಮಾಜದ ಸಾಮುದಾಯಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಬೇಕಾಗುವ ಆಹಾರ ಮತ್ತು ಸಂಪನ್ಮೂಲಗಳ ಹಂಚಿಕೆ ಅದಕ್ಕಾಗಿ ಆರ್ಥಿಕ ಮತ್ತು ನ್ಯಾಯವ್ಯವಸ್ಥೆ, ಚಿಕಿತ್ಸಾವಿಧಾನ, ವಿಧಿವಿಧಾನ ಮತ್ತು ಉಪಾಸನೆಗಳು, ನಂಬಿಕೆಗಳು ಇವನ್ನೆಲ್ಲಾ ರಕ್ಷಿಸುವ ನೂರಾರು ದೈವಗಳು ಅದಕ್ಕಾಗಿ ನಿರ್ಮಾಣಗೊಂಡ ನೂರಾರು ಹಬ್ಬ ಹರಿದಿನ ಆಚರಣೆಗಳು ಅದನ್ನು ನಿಬಾಯಿಸಲು ನಿಯೋಜಿಸಲಾದ ವಿವಿಧ ಜವಾಬ್ದಾರಿ ಕುರಿತ ಸಾಂಪ್ರದಾಯಿಕ ಅಧಿಕಾರಿಗಳು ಹೀಗೆ ಇವಿಷ್ಟನ್ನು ಒಳಗೊಳ್ಳುವ ನಿರ್ದಿಷ್ಟ ರಕ್ಷಿತ ವಲಯದೊಳಗಿನ ಒಳಗಿನ ಸಂಪೂರ್ಣ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳ ಮೊತ್ತವೇ ಸೀಮಾಪದ್ಧತಿಯಾಗಿದೆ.

ಈ ಕೆಳಕಂಡ ಸೀಮಾದೈವಗಳನ್ನು ಕ್ಷೇತ್ರಕಾರ್ಯದಲ್ಲಿ ಗುರ್ತಿಸಲಾಗಿದೆ.

1. ಜನ್ಮಿಗಳು : ಇದರಲ್ಲಿ ಜಾಗತ ಜನ್ಮಿ, ಭೂಮಿಟೋ ಜನ್ಮಿ, ಮಾಲಜನ್ಮಿ, ಭಯಚೋ ಜನ್ಮಿ, ಚಾಡ್ಡೊ ಜನ್ಮಿ ಮುಂತಾದ ವಿವಿಧ ರೂಪದ ಜನ್ಮಿಗಳಿವೆ.

2. ಮಡಬಾಸ್‌ಗಳು : ಮಡಬಾಸ್‌ಗಳಲ್ಲಿ ಜಾಗತ ಮಡಬಾಸ್, ಭೂಮಿಟೋ ಮಡಬಾಸ್, ಭುಮಿಚೆ ಮಡಬಾಸ್, ಮಾರ್ಗಾಳಿ ಮಡಬಾಸ್, ಮಾಲ್ ಮಡಬಾಸ್, ಮಾಗಣಿ ಮಡಬಾಸ್, ಸಾಂಗಣಿ ಮಡಬಾಸ್ ವಿವಿಧ 7 ಮಡಬಾಸ್‌ಗಳಿವೆ.

3. ಪಾಯಕಗಳು : ಪಾಯಕಗಳಲ್ಲಿ ಭಗೇಲಿ ಪಾಯಕ, ಅರ್ಜುನಾಚೋಪಾಯಕ, ದೇವರ ಪಾಯಕ, ಸೆಳೆಪಾಯಕ, ತೋಕೋ ಪಾಯಕ ವಿವಿಧ ಪಾಯಕಗಳಿವೆ.

4. ನಾಸಗಳು : ನಾಸಗಳಲ್ಲಿ ಭಯಜೋನಾಸ್, ಚುಡುಗೋನಾಸ್, ಮೆಡೆನಾಸ್, ಬಾಗ್ಯೊನಾಸ್, ಸೀಮಾನಾಸ್, ಸವಡಿನಾಸ್ ಮುಂತಾದ ನಾಸಗಳಿವೆ.

5. ಜಾಣಗಳು : ಜಾಣಗಳಲ್ಲಿ ಧರ್ಮಿಜಾಣ, ಮೂರ್ತಾವಳಿ ಜಾಣ, ಭಕ್ತಜಾಣ, ಜಾಗತ್‌ಜಾಣ, ಬೊಯಚೋಜಾಣ ಮುಂತಾದ ಜಾಣಗಳಿವೆ.

6. ಕಾಳಗಳು : ಕಾಳಗಳಲ್ಲಿ ಸ್ಮಶಾನ ಕಾಳ, ಮಸಣ ಕೋಟ್‌ಕಾಳ, ಜಾಗತಕಾಳ ಗಡಿಜೋಕಾಳ ಭಯಜೋಕಾಳ

7. ಪುರುಷಗಳು : ಭಕ್ತಿ ಪುರುಷ. ಗಾವಡ ಪುರುಷ

8. ಭೂವಂಡಿಗಳು : ಖುಟಿಯೇ ಭೂವಂಡಿ, ಶಿವರಾಭೂವಂಡಿ, ವಾಲಚಿ ಭೂವಂಡಿ, ಸುಣ್ಯಾ ಭೂವಂಡಿ, ಸಳ್ಯಾಚಿ ಭೂವಂಡಿ, ಗರವೈಭೂವಂಡಿ ಮುಂತಾದ ಭೂವಂಡಿಗಳಿವೆ.

9. ವಾಗ್ರೊ(ಭಯಭೂಮಿಕಾ)

10. ಕಾಫ್ರಿ

11. ಸಾತ್ವರುಷ

12. ಗಾವಳಾದೇವಿ

13. ಕಾಳಿ

14. ಖುಟಿ

15. ಮೋಟಿ

16. ಪುರಮಾರ

17. ಹೊಳಯೇಪೂರತ

18. ತಳಸೋಡಿ ಹುಮುಟ

19. ಭೂಮಿತಲೆದೈವ

20. ಭೂಮಿತ್

ಕುಣಬಿಗಳಲ್ಲಿನ ಸೀಮಾಪದ್ಧತಿ, ಸೀಮಾದೈವಗಳು ಹಾಗೂ ಅದರ ಆಚರಣೆಗಳು ಅತ್ಯಂತ ವೈವಿಧ್ಯಮಯವೂ, ಸಂಕೀರ್ಣವೂ ಆಗಿವೆ. ಕುಣಬಿಗಳ ಸಮೃದ್ಧ ಸಂಸ್ಕೃತಿಯ ಪ್ರತಿಯೊಂದು ನಿಧಿನಿಷೇಧ, ಉಪಾಸನೆ ಮತ್ತು ವಿವಿಧ ಆಚರಣೆಗಳ ಹೆಜ್ಜೆ ಹೆಜ್ಜೆಗೂ ಸೀಮಾ ಸಾಂಸ್ಕೃತಿಕ ಛಾಪು ಇಲ್ಲದೆ ಯಾವ ಕಾರ್ಯಕ್ರಮಗಳೂ ಜರುಗುವುದೇ ಇಲ್ಲವೇನೋ ಎಂಬಂತೆ ಪ್ರತಿ ಆಚರಣೆಗಳಲ್ಲಿ ಸೀಮಾಪದ್ಧತಿಯ ಸಂಸ್ಕೃತಿ ಹಾಸುಹೊಕ್ಕಾಗಿರುವುದನ್ನು ಕಾಣಬಹುದಾಗಿದೆ. ಸೀಮಾಪದ್ಧತಿಯ ಪ್ರತಿ ದೈವಗಳನ್ನು ಅವಲೋಕಿಸಿದಾಗ ಮಾತ್ರ ಸೀಮಾಲೋಕದ ಒಳ ಆವರಣ ಅನಾವರಣಗೊಳ್ಳುತ್ತದೆ.

## ಜನ್ಮಿಯ ಮೂಲಕ ಆತ್ಮಗಳು ದೈವಗಳಾಗುವ ಆಕಾರದ ಪ್ರಕ್ರಿಯೆ

ಯಾವುದೇ ಬುಡಕಟ್ಟುಗಳಲ್ಲಿ ಮೂಲದೈವಗಳು ಸಮುದಾಯದ ಏಳಿಗೆಗಾಗಿ ಮಡಿದ ಪೂರ್ವಿಕರ ಆತ್ಮಗಳಾಗಿವೆ. ಇವೇ ಮುಂದೆ ನಿರ್ದಿಷ್ಟ ಸಮುದಾಯದ ಸೀಮಾವಲಯದ ರಕ್ಷಣೆಯ ಪೂರ್ಣ ಜವಾಬ್ದಾರಿಯನ್ನು ವಹಿಸುತ್ತವೆಂದು ಆದಿವಾಸಿಗಳು ಬಲವಾಗಿ ನಂಬಿದ್ದಾರೆ. ಆದಿವಾಸಿ ಸಮುದಾಯದಲ್ಲಿ ಮಡಿದವರ ಆತ್ಮಗಳು ದೈವತ್ವ ಪಡೆದು ದೇವರಾಗಿ ಸ್ಥಾಪನೆಗೊಳ್ಳಲು

ಪ್ರಮುಖವಾದ ಮೂಲ ನೈಸರ್ಗಿಕ ಸೀಮಾದೇವತೆಯೇ 'ಜನ್ಮಿ' ಮುಖ್ಯ ಕಾರಣಕರ್ತೆಯಾಗಿದ್ದಾಳೆ. ಜನ್ಮಿ ದೇವತೆ ಸೀಮಾಪದ್ಧತಿಯ ಅತಿಮುಖ್ಯ ಸೀಮಾದೈವ. ಹಾಗೆ ನೋಡಿದರೆ ಆದಿವಾಸಿಗಳು ಈ ಲೋಕದ ಎಲ್ಲಾ ಹುಟ್ಟಿಗೆ ಜನ್ಮದಾತೆ ಜನ್ಮಿ ಎಂದೇ ನಂಬುತ್ತಾರೆ. ದಕ್ಷಿಣ ಕರ್ನಾಟಕದ ಜೇನುಕುರುಬ, ಬೆಟ್ಟಕುರುಬ, ಸೋಲಿಗ, ಮಲೆಕುಡಿಯ ಇತರ ಬುಡಕಟ್ಟುಗಳಲ್ಲಿ ಸೀಮಾಪದ್ಧತಿಯನ್ನು 'ಜಮ್ಮಾ' ಎಂದು ಕರೆಯುತ್ತಾರೆ. ಜಮ್ಮಾ ಎಂದರೆ ಜನ್ಮಭೂಮಿ ಎಂದು ಅರ್ಥ. ಒಂದು ಕಾಲದಲ್ಲಿ ಆದಿವಾಸಿಗಳಾಗಿದ್ದ ಕೊಡವರಲ್ಲಿ ಒಂದು ಗುಂಪಿನ ವರ್ಗವನ್ನು ಜಮ್ಮಾ ಕೊಡವರೆಂದು ಕರೆಯಲಾಗುತ್ತಿದೆ. ಕುಣಬಿಗಳಲ್ಲಿ ಜನ್ಮಿ ಅತ್ಯಂತ ಪ್ರಮುಖವಾದ ಸೀಮಾದೈವ. ಜನ್ಮಿ ಇಲ್ಲದೆ ಅವರ ಯಾವುದೇ ವಿಧಿವಿಧಾನ, ಉಪಾಸನೆಯ ಸಾಂಸ್ಕೃತಿಕ ಆಚರಣೆಗಳೂ ಜರುಗುವಂತಿಲ್ಲ. ಕುಣಬಿಗಳು ಶಿವ ಮತ್ತು ದೇವಿಯ ಆರಾಧಕರಾಗಿದ್ದಾರೆ. ಅವರ ಕುಲದೈವಗಳು ಶಿವನ ಬೇರೆ ಬೇರೆ ರೂಪಗಳೇ ಆಗಿವೆ. ಸಿದ್ಧನಾಥ, ಸೋಮನಾಥ, ಮಹಾದೇವ, ರಾಮಲಿಂಗೇಶ್ವರ, ಮಲ್ಲಿಕಾರ್ಜುನ, ಮಾಗಳೇಶ್ವರ, ಗಳಗೇಶ್ವರ ಹೀಗೆ ವಿವಿಧ ಶಿವನ ಆರಾಧನೆಯನ್ನು ವಿವಿಧ ಕುಲದೈವಗಳಾಗಿ ಪೂಜಿಸುತ್ತಿದ್ದರೂ ಕುಣಬಿಗಳಲ್ಲದೆ ಮುಖ್ಯ ದೈವ ಜನ್ಮಿಯೇ ಆಗಿರುತ್ತದೆ. ಯಾವುದೇ ಆಚರಣೆ ಮತ್ತು ದೈವದ ಕಾರ್ಯಗಳಲ್ಲಿ ಮೊದಲ ಸ್ಥಾನ ಜನ್ಮಿ ಮತ್ತು ನಂತರದ ಸ್ಥಾನ ಕುಲದೇವರಿಗೆ ನೀಡಲಾಗುತ್ತದೆ.

ಈ ಮೇಲೆ ಹೆಸರಿಸಲಾಗಿರುವ ಅನೇಕ ಸೀಮಾದೈವಗಳಿಗಿಂತ ಹೆಚ್ಚು ಬಲಿಷ್ಠವಾದ ಪ್ರಮುಖ ದೈವ ಈ ಜನ್ಮಿಯು, ಸಮುದಾಯದಲ್ಲಿ ಮಡಿದ ಹಿರಿಯರ ಆತ್ಮಗಳಿಗೆ ದೈವತ್ವದ ಪದವಿಗೇರಿಸುವ ದೈವ ಜನ್ಮಿ. ಈ ದೈವವು ನಿರ್ಜೀವ ಆತ್ಮಗಳಿಗೆ ಜೀವನೀಡಿ ರೂಪ ಕೊಟ್ಟು, ಆತ್ಮಗಳಿಗೆ ಕುಲದೈವ ಪಟ್ಟದ ಸ್ಥಾಪನೆಗೊಳ್ಳಲು ಕಾರಣ ಈ ಜನ್ಮಿ ದೈವವಾಗಿರುತ್ತದೆ. ವಿಧಿವಶರಾದ ಹಿರಿಯರ ಆತ್ಮಗಳು ಅಂತ್ಯಸಂಸ್ಕಾರಗೊಂಡ ನಂತರ ಸ್ಮಶಾನದಿಂದ ನೇರವಾಗಿ ತಂದು ಕುಲದೇವರಾಗಿ ಸ್ಥಾಪನೆ ಮಾಡಿ ಇಡುವುದಿಲ್ಲ. ಮೊದಲು ಸ್ಮಶಾನ ಸೀಮಾದೈವವಾದ 'ಸ್ಮಶಾನಕಾಳ'ನಿಗೆ ಪೂಜೆ ಸಲ್ಲಿಸಿ, ಬಲಿ ನೀಡಿ ತದನಂತರ ಕುಳಾವಿಯ(ಹಾಡಿಯ)ಸೀಮೆಯ ಹೊರಗಡೆ ಆತ್ಮಕ್ಕೆ ಇಷ್ಟವಾಗಿದ್ದ ಮರದ ಮೇಲೆ(ಹಲಸು, ಮಾವು... ಇತ್ಯಾದಿ) ಇಡಲಾಗುತ್ತದೆ. ಈ ಕೆಲಸವನ್ನು ಕುಳಾವಿಯ ಬುದವಂತ, ಧರ್ಮಿಜಾಣ ಮತ್ತು ಮಿರಾಶಿಗಳು ಸೇರಿ ಕ್ರಿಯೆಯನ್ನು ನೆರವೇರಿಸುತ್ತಾರೆ.

ಹೀಗೆ ಈ ಆತ್ಮವನ್ನು ಆ ನಿರ್ದಿಷ್ಟ ಮರದ ಮೇಲೆ 2–3 ವರ್ಷ ಪರೀಕ್ಷೆಗೆ ಒಳಪಡಿಸಲಾಗುತ್ತದೆ. ಹೀಗೆ ಸೀಮೆಯ ಹೊರಗಿನ ಮರದ ಮೇಲಿಟ್ಟ ಆತ್ಮವು ತನ್ನ ಕುಳಾವಿಯ ಸಮುದಾಯಕ್ಕೆ ಮತ್ತು ಕುಟುಂಬಕ್ಕೆ ಯಾವ ಯಾವ ರೀತಿ ಒಳಿತನ್ನು ಮಾಡಿದೆ ಎಂಬ ಸಂಗತಿಗಳನ್ನು ಪರೀಕ್ಷಿಸಿ ನೋಡಿ, ಆ ಆತ್ಮವು ಸಮುದಾಯಕ್ಕೆ ಮತ್ತು ಕುಟುಂಬಕ್ಕೆ ಒಳಿತನ್ನು

ಮಾಡುತ್ತಿದೆ ಎಂದು ಖಾತ್ರಿಯಾದಲ್ಲಿ ಕುಳಾವಿಯ ಧರ್ಮಿಜಾಣ, ಬುಧವಂತ ಮತ್ತು ಮಿರಾಶಿಗಳು ಜೊತೆಗೂಡಿ ಸೀಮಾಗಡಿಯಲ್ಲಿ ಆತ್ಮವನ್ನು ಕುಲದೈವವಾಗಿ ಸ್ಥಾಪನೆ ಮಾಡಲಾಗುತ್ತದೆ. ಅಲ್ಲಿಂದ ಹೀಗೆ ಮಡಿದ ಆತ್ಮವು ಕುಳಾವಿಯ ಸೀಮಾ ಕುಲದೈವವಾಗಿ ಕುಳಾವಿಯ ಸೀಮೆಯ ರಕ್ಷಣೆಯ ಜವಾಬ್ದಾರಿ ಹೊತ್ತು ಸಮುದಾಯದಿಂದ ಪೂಜೆಗೆ ಒಳಗೊಳ್ಳುವ ಅರ್ಹತೆ ಪಡೆಯುತ್ತದೆ. ಇವು ಆಯಾ ಕುಟುಂಬದ ಮನೆತನದ ಮನೆದೇವರಾಗಿ, ಕುಲದೇವರಾಗಿ ಪರಿವರ್ತಿತವಾಗುತ್ತದೆ.

"ಹೀಗೆ ಸತ್ತ ಹಿರಿಯರ ಆತ್ಮಗಳು ದೈವ ಸ್ವರೂಪವಾಗಿ ಪರಿವರ್ತನೆಗೊಂಡು ಚಿನ್ನೆ ರೂಪ ಪಡೆದು ರೌದ್ರಿಯ ದೈವವಾಗುವ ಪ್ರಕ್ರಿಯೆಯನ್ನು 'ಆಕಾರ'ವೆಂದು ಕರೆಯಲಾಗುತ್ತದೆ. ಒಂದು ವೇಳೆ ಸೀಮೆಯ ಹೊರಗೆ(ಮಡಿದ ಹಿರಿಯರ ಆತ್ಮಗಳಿಗೆ ರೌದ್ರಿ ಎನ್ನುತ್ತಾರೆ) ಮರದ ಮೇಲೆ ಇಡಲಾಗಿದ್ದ ಮಡಿದ ಆತ್ಮವು ಸಮುದಾಯಕ್ಕೆ ಮತ್ತು ಕುಟುಂಬಕ್ಕೆ ಒಳಿತನ್ನು ಮಾಡದೇ ಇದ್ದಲ್ಲಿ ಆ ಆತ್ಮಕ್ಕೆ ಆಕಾರ ಸ್ಥಾಪನೆಗೊಳಿಸದೇ ಅಲ್ಲೆ ಸೀಮೆ ಹೊರಗಡೆ ಮರದ ಮೇಲೆ ದಡೆಯ ಮೇಲೆ ಅತಂತ್ರ ಸ್ಥಿತಿಯಲ್ಲಿ ಇಡಲಾಗುತ್ತದೆ. ಇಂತಹ ಆತ್ಮಗಳು ಸಮುದಾಯದ ಕುಲದೈವಗಳಾಗುವುದಿಲ್ಲ.

ಒಂದು ವೇಳೆ ಈ ಆತ್ಮಗಳು ಸ್ಮಶಾನದಿಂದ ಸೀಮಾವಲಯ ದಾಟಿ ಬಂದಿವೆಯೇ? ಇಲ್ಲವೇ? ಎಂದು ನೋಡುವ ಒಂದು ಪದ್ಧತಿ ಕುಣಬಿಗಳಲ್ಲಿದೆ. ಅದನ್ನು 'ವಾಟಿ' (ನೋಟ) ಹಾಕುವುದು ಎಂದು ಕರೆಯಲಾಗುತ್ತದೆ. ಹೀಗೆ ವಾಟಿ ಹಾಕುವಾತ ಧರ್ಮಿಜಾಣನಾಗಿರುತ್ತಾನೆ. ಈತನ ಮೇಲೆ ಏಳು ಸೀಮಾದೈವಗಳಾದ 'ಮಡೆಬಾಸ್' ಶಕ್ತಿ ಆವಾಹನೆಗೊಂಡು ತನ್ನ ಮುಂದಿರುವ ತಟ್ಟೆಗೆ ಬೆರಳು ಹಚ್ಚಿದೊಡನೆ ತನ್ನಷ್ಟಕ್ಕೆ ತಾನೇ ಮುಂದೆ ಚಲಿಸುತ್ತದೆ. ಅದು ಸೀಮಾಗಡಿ ದಾಟಿ ಬಂದಿದೆಯೋ ಅಥವಾ ಇಲ್ಲವೋ ಎಂದು ವಾಟಿ ತಿಳಿಸುತ್ತದೆ. ಆತ್ಮಕ್ಕೆ ಯಾರು ಇಷ್ಟವೋ ಆ ಕುಟುಂಬ ಸದಸ್ಯರನ್ನು ಹುಡುಕಿಕೊಂಡು ಹೋಗುತ್ತದೆ. ಇದರಿಂದ ಮಡಿದವರ ಆತ್ಮಕ್ಕೆ ಆ ಸ್ಥಾನ ಇಷ್ಟವಾಗಿದೆ, ಆ ವ್ಯಕ್ತಿ ಇಷ್ಟವಾಗಿದೆ ಎಂದು ಧರ್ಮಿಜಾಣನ 'ವಾಟಿ'ಯ ಮೂಲಕ ತಿಳಿಯಬಹುದಾಗಿದೆ.

ಇದೇ ಧರ್ಮಿಜಾಣನು ಸಮುದಾಯದ ಜನ ತಾವು ನೆರವೇರಿಸುವ ಕಾರ್ಯ ಸರಿಯೋ, ತಪ್ಪೋ ಎಂದು ನಿರ್ಧರಿಸಲು ಗಾಳೋ ಎಂಬ ಮರದಿಂದ ತಯಾರಿಸಿದ ಹಲಗೆಯ ಸಹಾಯದಿಂದ ಕುಲದೈವಗಳನ್ನು ಕೇಳಲಾಗುತ್ತದೆ. ಬುದವಂತ ಮತ್ತು ಧರ್ಮಿಜಾಣರಿಗೆ ಕುಲದೈವಗಳು ಮೈಮೇಲೆ ಬಂದು ಅವರು ಉರುಳಿಸಿದ ಗಾಳೋ ಮರದ ಹಲಗೆ ಮೇಲ್ಮುಖವಾಗಿ ಬಿದ್ದರೆ ಹಿಡಿದ ದೇವರ ಕಾರ್ಯ ಸರಿ ಎಂದೂ, ಕೆಳಮುಖವಾಗಿ ಬಿದ್ದಲ್ಲಿ ಹಿಡಿದ ಕಾರ್ಯ ಸರಿಯಿಲ್ಲವೆಂದೂ ನಂಬಲಾಗುತ್ತದೆ. ಈ ಪ್ರಕ್ರಿಯೆಯನ್ನು 'ಪಳ' ಹೊಡೆಯುವುದು ಎಂದು ಕರೆಯಲಾಗುತ್ತದೆ. ಈ ಎಲ್ಲಾ ಪ್ರಕ್ರಿಯೆಗಳಿಗೆ ಕಾರಣ ಸೀಮಾದೈವ ಕುಲದೈವಗಳಾಗಿವೆ.

## ಧರ್ಮಿಜಾಣ

ಕುಣಬಿ ಬುಡಕಟ್ಟು ಸಮುದಾಯದಲ್ಲಿ 'ಸೀಮಾಪದ್ಧತಿ'ಗೆ ಸಂಬಂಧಪಟ್ಟಂತೆ ಅದರ ಸಂಪೂರ್ಣ ಧರ್ಮ ಆಚರಣೆಗಳನ್ನು ರೂಪಿಸುವ ಕೇಂದ್ರ ಸೂತ್ರಧಾರ ಧರ್ಮಿಜಾಣನಾಗಿರುತ್ತಾನೆ. ತದನಂತರ ಬುದವಂತ ಮತ್ತು ಮಿರಾಶಿಗಳಾಗಿರುತ್ತಾರೆ. ಸೀಮಾ ಕುಲದೈವಗಳ ಆತ್ಮಗಳು, ಸೀಮಾದೈವಗಳನ್ನು ಆವಾಹನೆ ಮಾಡಿ ಅವುಗಳ ಜೊತೆ ಸಂಪರ್ಕವನ್ನೇರ್ಪಡಿಸಿ ಮಾತನಾಡಿಸುವ ವಿಶೇಷ ಕಲೆ ಮತ್ತು ಪ್ರಮುಖ ದೈವಶಕ್ತಿಯ ಅವತಾರ ಧರ್ಮಿಜಾಣನಾಗಿರುತ್ತಾನೆ. ಮಡಿದವರ ಆತ್ಮಗಳ ಜೊತೆ ಸಂಭಾಷಣೆ ಮಾಡಿ ಸಮುದಾಯಕ್ಕೆ ಉತ್ತಮ ಮಾರ್ಗ ತೋರಿಸುವ ಕೇಂದ್ರ ಬಿಂದು ಈತನಾಗಿರುತ್ತಾನೆ. ಏಳು ಪ್ರಮುಖ ಸೀಮಾದೈವಗಳಾದ ಮಡೆನಾಸ್‌ಗಳನ್ನು ವಶೀಕರಣಗೊಳಿಸಿ ಅವುಗಳೊಂದಿಗೆ ಸಂಭಾಷಿಸುವ ಈತ ಮಡಬಾಸ್ ದೈವಗಳಿಂದ ಸೀಮಾವಲಯದಲ್ಲಿ ಅಪಚಾರಗಳಾದಲ್ಲಿ ಸರಿಪಡಿಸಿ ರಕ್ಷಿಸುವ ಪ್ರಮುಖ ಪಾತ್ರವನ್ನು ಧರ್ಮಿಜಾಣ ವಹಿಸುತ್ತಾನೆ.

ಧರ್ಮಿಜಾಣನು ಬೇರೆ ಬೇರೆ ಕುಳಾವಿಗಳಿಗೆ ಹೋಗಿ ಮಾರ್ಗತವನ್ನು ನಡೆಸಿಕೊಡುತ್ತಾನೆ. ಮಾರ್ಗತ ಎಂದರೆ ಮಣೆಯ ಮೇಲೆ ಅಕ್ಕಿ ಹಾಕಿ ದೈವಗಳನ್ನು ಆವಾಹನೆ ಮಾಡಿಕೊಂಡು ವಾಟಿ(ನೋಟ) ನೋಡುವ ಮೂಲಕ ಸಮಸ್ಯೆಗಳಿಗೆ ದಾರಿಯನ್ನು ತೋರಿಸುವ ಹಾಗೂ ಫಳ ಹೊಡೆಯುವ ಮೂಲಕ(ಗಾಳೇ ಹೊಡೆಯುವುದು) ಗಾಳೋಮರದ ಹಲಗೆ ಹಾಕಿ ನೋಟ ನೋಡುವ ಕ್ರಿಯೆಗಳಲ್ಲಿ ಈತ ನಿಷ್ಣಾತನಾಗಿರುತ್ತಾನೆ.

ಮಾರ್ಗತ ಮಾಡುವಾಗ 'ಭೂಮಿತ್'ನ್ನೂ ಮೊದಲು ಪೂಜೆ ಮಾಡಿ ಪುನರ್ ಶಕ್ತಿ ನೀಡಿ ಜಾಗೃತಗೊಳಿಸುತ್ತಾನೆ. ಭೂಮಿತ್ ಎಂದರೆ ಸೀಮಾದೈವಗಳಾದ ಜನ್ಮಿ, ನಾಸ, ಪಾಯಕ, ಪುರಮಾರ ಮತ್ತು ಕುಲದೈವಗಳಿರುವ ಸ್ಥಳವನ್ನು ಭೂಮಿತ್ ಎಂದು ಕರೆಯಲಾಗುತ್ತದೆ. ಅಂತಹ ಸ್ಥಳವು ಕುಣಬಿ ಸಮುದಾಯದ ಅತ್ಯಂತ ಪವಿತ್ರ ಶಕ್ತಿ ಹೊಂದಿರುವ ಸ್ಥಳವಾಗಿರುತ್ತದೆ. ಈ ಸ್ಥಳದಲ್ಲಿ ಭೂಮಿತ್ ಮತ್ತು ಕುಲದೈವ ಸ್ಥಳಗಳಲ್ಲಿ ಮಾರ್ಗತ ಮಾಡಿ ಎರಡರ ಶಬ್ದ ಒಂದೇ ಎಂದು(ದೇವರ ಶಬ್ದ)ಗಾಳೋ ಹೊಡೆದು ನೋಡಲಾಗುತ್ತದೆ. ಸರಿಯಾಗದಿದ್ದಲ್ಲಿ ವಾಟಿ ಹಾಕಿನೋಡಲಾಗುತ್ತದೆ. ಈ ಮೂಲಕ ಸಮುದಾಯದ ಸಮಸ್ಯೆಗಳಿಗೆ ಉತ್ತರ ಮತ್ತು ರಕ್ಷಣೆಯನ್ನು ಕಂಡುಕೊಳ್ಳಲಾಗುತ್ತದೆ.

ಧರ್ಮಿಜಾಣ ಒಂದು ರೀತಿಯ ಸೀಮಾಲೋಕದ ಮಾಂತ್ರಿಕ. ಈತ ಸಮಸ್ಯೆಗಳಿಗೆ ದೈವ ಮತ್ತು ಆತ್ಮಗಳನ್ನು ಮೈಮೇಲೆ ತಂದುಕೊಂಡು ಅವುಗಳ ಮೂಲಕ ಸೀಮಾಗಡಿ ಮತ್ತು ಒಳಗಿನ ಎಲ್ಲಾ ಸಮಸ್ಯೆಗಳನ್ನು ಸರಿಪಡಿಸುವುದರ ಜೊತೆ ರಕ್ಷಣೆಯ ಜವಾಬ್ದಾರಿಯನ್ನು

ಹೊತ್ತಿರುವ ದೈವಿಶಕ್ತಿಯಿರುವ ಪುರುಷನೆಂದೇ ನಂಬಲಾಗುತ್ತದೆ. ಎಲ್ಲಾ ದೈವ ಮತ್ತು ಆತ್ಮಗಳನ್ನು ಆವಾಹನೆಗೊಳಿಸಿಕೊಳ್ಳುವ ಶಕ್ತಿಯಿರುವ ಕಾರಣ ಧರ್ಮಿಜಾಣ ಮಡಬಾಸ್ ಸೀಮಾದೈವಗಳಿಗಿಂತ ಹೆಚ್ಚು ಶಕ್ತಿಶಾಲಿ ಎಂದು ಕುಣಬಿಗಳು ನಂಬುತ್ತಾರೆ. ಧರ್ಮಿಜಾಣ ಮಾರ್ಗತ ಮಾಡುವಾಗ ಕುಳಾವಿಯ ಬುಧವಂತ ಮತ್ತು ಮಿರಾಶಿಗಳೂ ಇರಲೇಬೇಕು. ಅವರ ಶಬ್ದ ವಚನ ಪಡೆದೇ ಧರ್ಮಿಜಾಣ ಧರ್ಮಕಾರ್ಯವನ್ನು ನಿಭಾಯಿಸುತ್ತಾನೆ. ಕುಳಾವಿಯಲ್ಲಿ ಕಾಯಿಲೆ ಕಸಾಯಿಲೆ ಯಾದವರಿಗೆ, ಬೆಳೆಯ ಮೊದಲನೇ ಬಿತ್ತನೆ ಮಾಡುವಾಗ, ಮಡಿದವರು ಆತ್ಮಗಳನ್ನು ಕುಲದೇವರಾಗಿ ಸ್ಥಾಪನೆ ಮಾಡುವಾಗ ದನಕರುಗಳಿಗೆ ಅನಾರೋಗ್ಯಗೊಂಡಾಗ, ದುಷ್ಟಶಕ್ತಿಗಳು ಸೀಮಾವಲಯಕ್ಕೆ ನುಗ್ಗಿದಾಗ ಮತ್ತು ಕುಳಾವಿಯ ಸೀಮಾವಲಯದ ಉತ್ಪನ್ನಗಳ ರಕ್ಷಣೆಯ ಜವಾಬ್ದಾರಿಯ ಕಾರ್ಯಗಳನ್ನು ಧರ್ಮಿಜಾಣ ಮುಂದೆ ನಿಂತು ಅವುಗಳನ್ನು ನಿಭಾಯಿಸುತ್ತಾನೆ. ಒಟ್ಟಿನಲ್ಲಿ ಈತ ಒಬ್ಬ ಧಾರ್ಮಿಕ ಸೈಕೋಥೆರಪಿಸ್ಟ್‌ನಂತೆ ಕೆಲಸ ನಿರ್ವಹಿಸುತ್ತಾನೆಂದು ಆಧುನಿಕ ಮನೋವೈದ್ಯರಿಗೆ ಹೋಲಿಸಿ ಹೇಳಬಹುದಾಗಿದೆ.

**ಮೂರ್ತಾವಳಿ ಜಾಣ**

ಕುಣಬಿ ಆದಿವಾಸಿಗಳಲ್ಲಿ ಜರುಗುವ ಯಾವುದೇ ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಕ್ರಮಗಳಿಗೆ ಮುಹೂರ್ತಗಳನ್ನು ನಿಗದಿ ಮಾಡುವ ಅಧಿಕೃತ ಧರ್ಮಾಧಿಕಾರಿ ಮೂರ್ತಾವಳಿ ಜಾಣನಾಗಿರುತ್ತಾನೆ. ಬೆಳೆಗಳ ಬಿತ್ತನೆಯಾಗಲಿ, ಮದುವೆ ಮತ್ತು ಶುಭಕಾರ್ಯಗಳಲ್ಲಿ ಹಲಗೆ ಮೇಲೆ ಭತಾಚೋ ಅಸೋ(ಭತ್ತದ ಕಾಳುಹಾಕಿ) ಆತ್ಮಗಳನ್ನು ಮೈಮೇಲೆ ತಂದುಕೊಂಡು ಲೆಕ್ಕಾಚಾರ ಮಾಡುತ್ತಾನೆ. ಜೊತೆಗೆ ಗ್ರಹ ಮತ್ತು ನಕ್ಷತ್ರಗಳ ಹೊಂದಾಣಿಕೆ ಮಾಡಿಕೊಂಡು ಶುಭಕಾರ್ಯಗಳಿಗೆ ಮುಹೂರ್ತವನ್ನು ಈತ ನಿಗದಿ ಮಾಡುವ ಜವಾಬ್ದಾರಿಯನ್ನು ಹೊತ್ತಿರುತ್ತಾನೆ. ಮಡಿದವರ ಆತ್ಮಗಳನ್ನು ಆಕಾರ ಮಾಡಿ ಸೀಮಾ ಕುಲದೈವಗಳನ್ನಾಗಿ ಸ್ಥಾಪಿಸುವಾಗ, ಬೇಟೆ ಮತ್ತು ಅರಣ್ಯ ಕಿರು ಉತ್ಪನ್ನಗಳನ್ನು ಕೀಳುವಾಗ ವೇಳೆ ಸಮಯ ಹಾಗೂ ಮುಹೂರ್ತಗಳನ್ನು ನಿಗದಿ ಮಾಡುವ ಜವಾಬ್ದಾರಿಯು ಈ ಮೂರ್ತಾವಳಿ ಜಾಣನದ್ದಾಗಿರುತ್ತದೆ. ಇತ್ತೀಚೆಗೆ ಬ್ರಾಹ್ಮಣರ ತೋಟಗಳಲ್ಲಿ ಕೂಲಿಕಾರರಾಗಿ ದುಡಿಯುತ್ತಿರುವ ಈ ಸಮುದಾಯದ ಹಲವರು ಧರ್ಮಿಜಾಣ, ಮೂರ್ತಾವಳಿ ಜಾಣ ಮತ್ತು ಭಕ್ತಜಾಣ ಧಾರ್ಮಿಕ ನಡವಳಿಕೆಗಳು ಮೂಢನಂಬಿಕೆ ಎಂದು ಬ್ರಾಹ್ಮಣರು ಬಿಂಬಿಸುತ್ತಿರುವ ಕಾರಣ ಇತ್ತೀಚೆಗೆ ಕುಣಬಿಗಳು ತಮ್ಮ ಶುಭಕಾರ್ಯಗಳ ಸಂದರ್ಭದಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಕಾರ್ಯಗಳನ್ನು ನೆರವೇರಿಸುವುದು ಸಮಾಜದಲ್ಲಿ ಘನತೆ, ಗೌರವದ ವಿಷಯವೆಂದು ಪ್ರತಿಬಿಂಬಿಸಲಾಗುತ್ತಿದೆ. ಹಾಗಾಗಿ ಬಹಳಷ್ಟು ಕುಣಬಿಗಳು ಘನತೆಯ ವ್ಯಾಮೋಹಕ್ಕೊಳಗಾಗಿರುವ ಕಾರಣ ತಮ್ಮ ಮೂಲಸಂಸ್ಕೃತಿಯಿಂದ ವಿಮುಖರಾಗಿ ಸ್ಥಿತ್ಯಂತರಗೊಳ್ಳುತ್ತಿರುವುದನ್ನು ಗಮನಿಸಬಹುದಾಗಿದೆ.

**ಬುದವಂತ**

ಕುಣಬಿ ಬುಡಕಟ್ಟುಗಳ ಕುಳಾವಿ(ಹಾಡಿ)ಯ ಅತ್ಯಂತ ಪ್ರಮುಖನೀತ. ಒಂದು ರೀತಿಯಲ್ಲಿ ಇಡೀ ಕುಳಾವಿಯ ಸಂಪೂರ್ಣ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ವ್ಯವಸ್ಥೆ ಹಾಗೂ ತನ್ಮೂಲಕ ರಚಿತವಾಗಿರುವ ಅಷ್ಟೂ ಉಪಾಸನೆ, ವಿಧಿವಿಧಾನ ಮತ್ತು ಆಚರಣೆಗಳೆಲ್ಲಾ ಸೀಮಾವಲಯದೊಳಗಿನ ಪದ್ಧತಿಯ ವ್ಯವಸ್ಥೆಯ ನಿಯಂತ್ರಣಕ್ಕೊಳಪಟ್ಟಿರುತ್ತದೆ. ಈ ಎಲ್ಲಾ ಸೀಮಾಪದ್ಧತಿಯ ವಿವಿಧ ವಿಭಾಗಗಳ ಪ್ರತಿಯೊಂದು ಕಾರ್ಯ ಚಟುವಟಿಕೆಗಳ ಸೂತ್ರದ ಮೂಗುದಾರದ ತಂತು ಬುಧವಂತನ ಕೈಲಿರುತ್ತದೆ. ಕುಣಬಿ ಸಮುದಾಯದ ಸಾಂಸ್ಕೃತಿಕ ಆಚರಣೆಗಳ ಸೂತ್ರಧಾರನೀತ. ಜೇನುಕುರುಬರಲ್ಲಿನ ಗುಡ್ಡಯ್ಯ, ಬೆಟ್ಟಕುರುಬರಲ್ಲಿನ ಬಿಂಜೆಕಾಳ ಮತ್ತು ಹಾಲಕ್ಕಿಗಳಲ್ಲಿನ ಸೀಮೆಯ ಅರಸುಗೌಡ, ಸೋಲಿಗರಲ್ಲಿನ ಅಜ್ಜಯ್ಯನ ರೀತಿಯಲ್ಲಿ ಕುಣಬಿಗಳಲ್ಲಿ ಬುಧವಂತನ ಪಾತ್ರವಿರುತ್ತದೆ. ತನ್ನ ಜೊತೆ ಜೊತೆಗೆ ವಿವಿಧ ಧಾರ್ಮಿಕ ಮತ್ತು ಸಾಂಸ್ಕೃತಿಕ ಹಾಗೂ ಸಾಮಾಜಿಕ ಕಾರ್ಯಗಳ ಜವಾಬ್ದಾರಿಗಳನ್ನು ಹೊತ್ತಿರುವ ಧರ್ಮಿಜಾಣ, ಮೂರ್ತಾವಳಿ ಜಾಣ, ಭಕ್ತ ಜಾಣ, ಮಿರಾಶಿ, ಕೋಲ್ಕಾರ, ಗಾವಡೆಗಳು(ನ್ಯಾಯಾಧಿಕಾರಿಗಳು) ಇವರುಗಳ ಕೇಂದ್ರ ಸ್ಥಾನದಲ್ಲಿದ್ದುಕೊಂಡು ಸಂಪೂರ್ಣ ಆದಿವಾಸಿ ಸಾಮಾಜಿಕ ವ್ಯವಸ್ಥೆಯ ಆಡಳಿತದ ಇವುಗಳ ಸೂತ್ರಧಾರ ಈ ಬುದವಂತನಾಗಿರುತ್ತಾನೆ.[3]

ಈಗಾಗಲೇ ಪೀಠಿಕೆಯಲ್ಲಿ ಪ್ರಸ್ತಾಪಿಸಿಸಿರುವ ಹಾಗೆ ಪ್ರಪಂಚದಲ್ಲಿನ ಬೇರೆ ಬೇರೆ ಬುಡಕಟ್ಟುಗಳಲ್ಲಿ ಬುಧವಂತ, ಬಿಂಜೆಕಾಳ, ಗುಡ್ಡಯ್ಯ, ಅಜ್ಜಯ್ಯ ನಂತಹ ಪಾತ್ರವನ್ನು ವಹಿಸುವ ಸೂತ್ರಧಾರನಿಗೆ 'ಶಮನ್' ಎಂದು ಕರೆಯಲಾಗುತ್ತದೆ. ಬುದವಂತಮೂರ್ತ ಮತ್ತು ಅಮೂರ್ತಗಳ ನಡುವಿನ ಕೊಂಡಿಯಾಗಿದ್ದುಕೊಂಡು ದೈವಗಳು, ಆತ್ಮಗಳನ್ನು ಮತ್ತು ದುಷ್ಟಶಕ್ತಿಗಳನ್ನು ಆವಾಹನೆ ಮಾಡಿಕೊಂಡು ಅವುಗಳು ಮತ್ತು ಲೌಕಿಕ ಜಗತ್ತಿನ ಜೊತೆಗೆ ಅನುಸಂಧಾನ ಮಾಡಿ ಸಂಬಂಧ ಕಲ್ಪಿಸುವ, ಸಮಸ್ಯೆಗಳಿಗೆ ದಾರಿಯನ್ನು, ರೋಗಗಳಿಗೆ ಚಿಕಿತ್ಸೆಯನ್ನು, ಮಾನಸಿಕ ರೋಗ, ವ್ಯಾಕುಲತೆಗಳಿಗೆ ಪರಿಹಾರವನ್ನು ಕುಳಾವಿಯ ಸಾಂಸ್ಕೃತಿಕ ರಚನೆ(Syntax), ಅರ್ಥವ್ಯವಸ್ಥೆ(symatics), ಪಾರಂಪರಿಕ ವ್ಯವಹಾರ(Pragmatics), ಸ್ವಯಂ ಆಡಳಿತ ಮತ್ತು ನ್ಯಾಯವ್ಯವಸ್ಥೆ(Autonomous rule system), ಪಾರಂಪರಿಕ ಜ್ಞಾನ(Intherited knowledge), ಪರಿಸರದ ವ್ಯವಸ್ಥೆ (Eco system) ಮತ್ತು ಜೀವವೈವಿಧ್ಯತೆ(Bio-diversity) ಹಾಗೂ ಉಪಾಸನೆ(Rituals) ಇವುಗಳೆಲ್ಲವುಗಳ ಆಚರಣೆಗಳಲ್ಲಿನ ಕೊಂಡಿ ಮುಖ್ಯ ಕೇಂದ್ರ ಬಿಂದು ಮತ್ತು ಆಧ್ಯಾತ್ಮಿಕ ಸೂತ್ರದಾರನ ಪಾತ್ರವನ್ನು ಕುಣಬಿ ಸಮುದಾಯದಲ್ಲಿ ಬುದವಂತ ನಿರ್ವಹಿಸುತ್ತಾನೆ. ಈ ಮೇಲಿನ ಎಲ್ಲಾ ವಿವಿಧ ಆಯಾಮಗಳನ್ನು ಒಳಗೊಳ್ಳುವ ಒಟ್ಟು ಮೊತ್ತದ ಭಾಗವೇ ಸೀಮಾಪದ್ಧತಿಯಾಗಿರುತ್ತದೆ. ಆದ್ದರಿಂದ ಸೀಮಾಪದ್ಧತಿಯ ಮುಖ್ಯ ಕೇಂದ್ರ ಬಿಂದು (King pin) ಬುಧವಂತನೆಂದು ಹೇಳಬಹುದಾಗಿದೆ.

**ಮಡಬಾಸಗಳು**

ಇಡೀ ಕುಣಬಿ ಕುಳಾವಿಯ ಸೀಮಾವಲಯವನ್ನು ಕೆಟ್ಟ ಶಕ್ತಿಗಳಿಂದ ರಕ್ಷಿಸಿ ಹಳ್ಳಿಗೆ ಒಳಿತನ್ನು ಮಾಡುವ ದುಷ್ಟಶಕ್ತಿನಿವಾರಕ ಸೀಮಾದೈವಗಳು ಮಡಬಾಸಗಳಿಗಿರುತ್ತವೆ. ಮಡಬಾಸಗಳು ಮುಖ್ಯವಾಗಿ ಧರ್ಮಿಜಾಣ, ಬುಧವಂತರುಗಳ ಮೈಮೇಲೆ ಆವಾಹನೆಗೊಂಡು ಹಳ್ಳಿಯ ಯಾವುದೇ ಕಾರ್ಯಗಳು ಸುಲಲಿತವಾಗಿ, ತೊಂದರೆಗಳಾಗದೆ ನಡೆದುಕೊಂಡು ಹೋಗಲು ಬೆನ್ನೆಲುಬಾಗಿ ನಿಂತು ರಕ್ಷಣೆಯೊಂದಿಗೆ ಕಾರ್ಯಗಳನ್ನು ಸುಗಮವಾಗಿ ನಡೆಸಿಕೊಡುವ ಸೀಮಾದೈವಗಳು ಮಡಬಾಸಗಳಾಗಿವೆ.

ಮಡಬಾಸಗಳಲ್ಲಿ 7 ಬಗೆಯ ಮಡಬಾಸಗಳಿವೆ ಅವು 1. ಜಾಗತಮಡಬಾಸ, 2. ಭುಮಿಟೋ ಮಡಬಾಸ, 3. ಭುಮಿಚೆಮಡಬಾಸ, 4. ಮಾಲ್‌ಮಡಬಾಸ, 5. ಮಾಗಣಿ ಮಡಬಾಸ, 6. ಸಾಂಗಣಿ ಮಡಬಾಸ, 7. ಮಾರ್ಗಾಳಿ ಮಡಬಾಸ್‌ಗಳಾಗಿವೆ.

ಬೇರೆ ಬೇರೆ ಮಡಬಾಸಗಳು ಬೇರೆ ಬೇರೆ ಪ್ರತ್ಯೇಕ ಸಮಸ್ಯೆಗಳಿಗೆ ಧರ್ಮಿಜಾಣ ಮತ್ತು ಬುಧವಂತರ ಹಾಗೂ ಮಿರಾಶಿಗಳ ಬಳಿ ಸಮಸ್ಯೆಗಳನ್ನು ಹೇಳಿಕೆ ಮಾಡಿಕೊಂಡಾಗ ಅವರು ಸಮಸ್ಯೆ ಬಗೆಹರಿಸಲು ಇರುವ ಪ್ರತ್ಯೇಕ ಮಡಬಾಸಗಳು ದೈವಗಳನ್ನು ಆವಾಹನೆ ಮಾಡಿಕೊಂಡು ಸಮಸ್ಯೆಗಳನ್ನು ಬಗೆಹರಿಸಿ ರಕ್ಷಣೆ ನೀಡುತ್ತವೆಂದು ಕುಣಬಿಗಳು ನಂಬಿರುತ್ತಾರೆ. ಹೀಗೆ ಮಡಬಾಸ ದೈವಗಳನ್ನು ಮೈಮೇಲೆ ಆವಾಹನೆ ಮಾಡಿಕೊಂಡು ಸಮಸ್ಯೆಗಳನ್ನು ಬಗೆಹರಿಸುವ ಪ್ರಕ್ರಿಯೆಗೆ ಕೊಂಕಣಿಯಲ್ಲಿ 'ಜಾಪಪೂಟವಾ' ಎಂದು ಕರೆಯಲಾಗುತ್ತದೆ. ಮಾಗಣಿ ಮಡೆಬಾಸ್ ದೈವವನ್ನು ಕುಳಾವಿಯ ಮಿರಾಶಿ ಹೇಳಿಕೆ ಮಾಡುವಾಗ ತನ್ನ ಮೈಮೇಲೆ ಆವಾಹನೆ ಮಾಡಿಕೊಂಡು ಗಡಿಯಲ್ಲಿರುವ ಇತರೆ ಸೀಮಾ ಕುಲದೈವ, ದೈವಗಳೊಟ್ಟಿಗೆ ಸಂವಾದ ಏರ್ಪಡಿಸಿ ಗಡಿಯ ಹೊರಗಡೆಯಿಂದ ಬರಬಹುದಾದ ದುಷ್ಟಶಕ್ತಿ (Negative energy)ಗಳು ಸೀಮೆಯ ಒಳಗೆ ಬಾರದಂತೆ ತಡೆಯುವ ಶಕ್ತಿ ಮಾಗಣಿ ಮಡಬಾಸ್‌ಗೆ ಇರುತ್ತದೆ.

ಮಡಿದವರ ಆತ್ಮಗಳನ್ನು (ರೌದ್ರಿ) ಸ್ಮಶಾನದಿಂದ ಸೀಮೆಯ ಒಳಗಡೆ ತಂದು ಆಕರ ಮಾಡಿ ಸೀಮಾಕುಲದೈವಗಳನ್ನಾಗಿ ಪ್ರತಿಷ್ಠಾಪನೆ ಮಾಡುವ ಪ್ರಕ್ರಿಯೆಯಲ್ಲಿ ಈ ಮಡಬಾಸ ದೈವಗಳ ಪಾತ್ರ ಅತ್ಯಂತ ಪ್ರಮುಖವಾದದ್ದು. ಧರ್ಮೀಜಾಣ, ಬುದವಂತಮತ್ತು ಮಿರಾಶಿಗಳ ಮೈಮೇಲೆ ಒಟ್ಟಿಗೆ ಏಳೂ ಮಡಬಾಸಗಳು ಮೈಮೇಲೆ ಆವಾಹನೆಗೊಂಡು ಕುಳಾವಿಯಲ್ಲಿ ಮಡಿದ ರೌದ್ರಿ ಆತ್ಮವನ್ನು ಸೀಮಾಕುಲದೈವಗಳನ್ನಾಗಿ ಮಾರ್ಪಡಿಸುವಾಗ ಈ ಏಳು ದೈವಗಳು ರೌದ್ರಿಗೆ ಆಕಾರ ನೀಡಿ ಕುಲದೈವಗಳನ್ನಾಗಿ ಶುದ್ಧೀಕರಿಸುವ ಪ್ರಮುಖ ಪಾತ್ರವನ್ನು ಮಡಬಾಸಗಳು ನಿರ್ವಹಿಸುತ್ತವೆ. ಹೀಗೆ ಕುಳಾವಿಯ ಪ್ರತ್ಯೇಕ ಸಮಸ್ಯೆ ಪ್ರತ್ಯೇಕ ಶುಭಕಾರ್ಯಗಳ ನಿರ್ವಹಣೆಯ ನಿರ್ದಿಷ್ಟವಾದ ಜವಾಬ್ದಾರಿಗಳನ್ನು ಮಡಬಾಸಗಳು ಹೊತ್ತಿರುತ್ತವೆ. ಪ್ರತಿಯೊಂದು ಜಾತ್ರೆ, ಹಬ್ಬ,

ಪೂಜೆ, ಬಾರ್ಸಿ, ಮಾತನ್ ಭೂವಂಡಿ(ಬೇಟೆ), ಉಷ್ಕಾಣ್, ಮಹಾಲಯ, ಸಿಗ್ಮೋ, ಬಂಡಿವೋಡಿ, ನವರಾತ್ರೀ, ದಸರಾ, ಮೂಟಬೈಲ ಘಂಟಾವಣಿ, ಸಂಕ್ರಾಂತಿ, ಮದುವೆ, ಹುಟ್ಟು ಮತ್ತು ಸಾವಿನ ಕಾರ್ಯಗಳ ಜೊತೆ, ಹೊಸ ಬಿತ್ತನೆ ಮಾಡುವಾಗ, ನ್ಯಾಯ ತೀರ್ಮಾನ ಮಾಡುವಾಗ, ಹೀಗೆ ಕುಳಾವಿಯ ಯಾವುದೇ ಸಾಂಸ್ಕೃತಿಯ ಕಾರ್ಯಚಟುವಟಿಕೆಗಳ ಪೂರ್ವದಲ್ಲಿ ಈ ಮಡಬಾಸಗಳನ್ನು ಮೈಮೇಲೆ ಆವಾಹನೆ ಮಾಡಿಕೊಂಡು ಹೇಳಿಕೆ ಪಡೆದೇ ಕಾರ್ಯಕ್ರಮಗಳನ್ನು ಜರುಗಿಸಲಾಗುತ್ತದೆ.[4]

**ಪಾಯಕಗಳು**

ಸೀಮಾದೈವಗಳಿಗೆ ದೇವರ ಸೈನಿಕರುಗಳು ಪಾಯಕಗಳು. ಪಾಯಕಗಳನ್ನು 'ದೇವತಾರ' ಗಳೆಂತಲೂ ಕರೆಯುತ್ತಾರೆ. ಇವು ಕುಳಾವಿಯ ಗಡಿ ರಕ್ಷಿಸುವ ಸೈನಿಕ ದೈವಗಳು. ಕೆಟ್ಟ ಖಂಡಗಳು ಮತ್ತು ದುಷ್ಟಶಕ್ತಿಗಳನ್ನು ಹಿಡಿದು ಬಂದನದಲ್ಲಿಟ್ಟುಕೊಳ್ಳುವ ಶಕ್ತಿಯನ್ನು ಪಾಯಕಗಳು ಹೊಂದಿರುತ್ತವೆ. ಪಾಯಕಗಳಲ್ಲಿ ಭಗೇಲಿಪಾಯಕ, ಅರ್ಜುನಾಚೋ ಪಾಯಕ, ದೇವರಪಾಯಕ, ಸೆಳೆ ಪಾಯಕ, ತೊಕೋ ಪಾಯಕ, ಶಕ್ತಿ ಪಾಯಕಗಳೆಂಬ ವಿವಿಧ ಪಾಯಕಗಳಿದ್ದು ಕುಣಬಿಯ ಸೀಮಾದೈವಗಳಿಗೆ ಇವು ಸೈನಿಕರಂತೆ ದುಷ್ಟಶಕ್ತಿಗಳ ವಿರುದ್ಧ ಹೋರಾಡಿ ಕುಣಬಿಗಳ ನಿರ್ದಿಷ್ಟ ಸೀಮೆಯ ಕಾಡನ್ನು ಮತ್ತು ಕುಳಾವಿಯನ್ನು ರಕ್ಷಿಸುವ ಜವಾಬ್ದಾರಿಯನ್ನು ಇವು ಹೊತ್ತಿರುತ್ತವೆ.

ಕುಳಾವಿಯೊಳಗಿನ(ಹಾಡಿ) ಕುಣಬಿಗಳು ತಮ್ಮನ್ನು ಹಾಗೂ ಇಡೀ ಸೀಮಾ ಗಡಿಯನ್ನು ಕೆಟ್ಟ ಶಕ್ತಿಗಳಿಂದ ಕಾಪಾಡಲು, ದುಷ್ಟರು ಕಾಡಿನೊಳಗೆ ನುಗ್ಗದಂತೆ ಕಾಪಾಡಲು ಕಳ್ಳಾಕಾಕರಿಂದ ಬೆಳೆ ರಕ್ಷಣೆ ಮಾಡಲು, ರೋಗಗಳು ಸೀಮೆಯೊಳಗೆ ಬರದಂತೆ ತಡೆದು ಉತ್ತಮ ಆರೋಗ್ಯವನ್ನು ದಯಪಾಲಿಸಲು ಮಕ್ಕಳಾಗದೇ ಇದ್ದಾಗ ಅದರ ತೊಂದರೆ ನಿವಾರಿಸಿ ಸಂತತಿಯನ್ನು ಕರುಣಿಸಲು ಈ ಪಾಯಕಗಳು ಮಹತ್ತರವಾದ ಸೀಮಾ ರಕ್ಷಣಾಕಾರ್ಯವನ್ನು ನಿರ್ವಹಿಸುತ್ತವೆ. ಈ ಕಾರಣಕ್ಕಾಗಿ ಪಾಯಕಗಳಿಗೆ ಕುಣಬಿಗಳು ಕಾಲಕಾಲಕ್ಕೆ ಕುರಿ ಕೋಳಿಗಳನ್ನು ಬಲಿ ಕೊಟ್ಟು ಬುದವಂತಮತ್ತು ಮಿರಾಶಿಗಳ ಮೂಲಕ ಹರಕೆಗಳನ್ನು ಪಡೆದುಕೊಳ್ಳಲಾಗುತ್ತದೆ. ಪಾಯಕಗಳು ಹೇಗೆ ರಕ್ಷಿಸುತ್ತವೆಂಬುಧಕ್ಕೆ ತೆಲೂಲಿಯ, ದೇವರ ಪಾಯಕ ಒಂದು ಉತ್ತಮ ಉದಾಹರಣೆಯಾಗಿದೆ. ತೆಲೂಲಿ ಕುಳಾವಿಯ ಪಾಯಕ ಶ್ರೀ ಸಿದ್ಧನಾಥ ದೇವರ ಸೀಮಾ ಸೈನಿಕ ಪಾಯಕವಾಗಿದೆ. ಜೋಯಿಡಾ ತಾಲ್ಲೂಕಿನ ಕುಂಬಾರವಾಡ ಹಳ್ಳಿಯ ಹತ್ತಿರ ವಿರುವ ತೆಲೂಲಿ ಮತ್ತು ಕಾರಸಿಂಗಳ ಕುಳಾವಿಗಳ ಮಧ್ಯೆ 'ಹಾಗಡೋ' ಎಂಬ ಬೆಟ್ಟವಿದೆ. ಆ ಬೆಟ್ಟದ ಮೇಲೆ ಈ ದೇವರ ಪಾಯಕವಿದ್ದು, ತೆಲೂಲಿ ಮತ್ತು ಕಾರಸಿಂಗಳ ಕುಳಾವಿ ಮತ್ತು ಸೀಮೆಯನ್ನು ಈ ಪಾಯಕ ರಕ್ಷಿಸುತ್ತಿರುತ್ತದೆ. ಒಮ್ಮೆ ಗೋವಾ ರಾಜ್ಯದ ಗಡಿ ಭಾಗದಿಂದ ತೆಲೂಲಿ ಮತ್ತು ಕಾರಸಿಂಗಳ ಸೀಮಾವಲಯದ ಕಾಡಿನ ಗಡಿಯೊಳಗೆ ಕಾಡುಗಳ್ಳರು ನುಗ್ಗಲು ಪ್ರಯತ್ನಿಸುತ್ತಿರುವಾಗ ಈ

ದೇವರ ಪಾಯಕ ಕಳ್ಳರು ಸೀಮೆಯೊಳಗೆ ಪ್ರವೇಶಿಸದಂತೆ ತಡೆಹಿಡಿದು, ಗಡಿ ರಕ್ಷಣೆ ಕಾಯ್ದುಕೊಂಡ ಬಗ್ಗೆ ಇರುವ ದಂತಕಥೆಯನ್ನು ತೆಲೂಲಿಯ ಸುಭಾಷಗಾವಡ ಅವರು ಬಿಚ್ಚಿಡುತ್ತಾರೆ. ಗೋವಾ ಕಾಡುಗಳ್ಳರು ತೆಲೂಲಿ ಸೀಮಾ ಗಡಿಯಲ್ಲಿ ನುಗ್ಗಲು ಪ್ರಯತ್ನಿಸುತ್ತಿರುವಾಗ ಕಾಡಿನಲ್ಲಿ ಕತ್ತಲೆಯು ಆವರಿಸಿಕೊಳ್ಳುವ ರೀತಿ ಕಗ್ಗತ್ತಲನ್ನು ನಿರ್ಮಿಸಿ ಕಳ್ಳರು ಒಳನುಗ್ಗದಂತೆ ತಡೆ ಹಿಡಿಯಲಾಯಿತು. ಆ ಕಾಡನ್ನು ಇಂದಿಗೂ ಕಾಳೆಜಾಹ(ಕಗ್ಗತ್ತಲಕಾಡು) ಎಂದೇ ಕರೆಯುತ್ತಾರೆ.

ಇದೇ ರೀತಿಯ ನೂರಾರು ದಂತಕಥೆಗಳು ಸೀಮಾಪದ್ಧತಿಯ ದೈವಗಳ ವಿಚಾರದಲ್ಲಿ ಕುಣಬಿಗಳು ಕಥೆಗಳನ್ನು ಹೇಳುತ್ತಾರೆ. ಬಹುಶಃ ಇಂತಹ ಕಥೆಗಳು ಇತರರು ಕಳ್ಳಕಾಕರು ತಮ್ಮ ಕುಳಾವಿ ಮತ್ತು ಕಾಡಿನ ತಮ್ಮ ಸೀಮಾ ರೇಖೆ ದಾಟಿ ಒಳನುಗ್ಗದಂತೆ ವದಂತಿಗಳನ್ನು ಹಬ್ಬಿಸಿ ಭಯದ ವಾತಾವರಣ ನಿರ್ಮಿಸುವುದರ ಮೂಲಕವೂ ಸೀಮೆಯ ರಕ್ಷಣೆಯನ್ನು ಕಾಪಾಡಿಕೊಳ್ಳುವ ಒಂದು ತಂತ್ರ ಇದಾಗಿರಬಹುದೆಂದು ಊಹಿಸಬಹುದಾಗಿದೆ.

**ನಾಸಗಳು** 

ಪಾಯಕ ದೈವಗಳ ಹಾಗೆಯೇ ನಾಸಗಳೂ ಕೂಡ ಮುಖ್ಯ. ಜನ್ಮಿ ಸೀಮಾದೈವಗಳಿಗೆ ಸೈನಿಕ ದೈವಗಳಂತೆ ರಕ್ಷಣೆ ಒದಗಿಸುವ ದೈವಗಳು ನಾಸಗಳಾಗಿವೆ. ನಾಸಗಳಲ್ಲಿ ಭೂಯಾಚೋನಾಸ, ತಳ್ನಾಸ, ಚುಡುಗೊನಿನಾಸ, ಮೆಡೆನಾಸ, ಬಾಕ್ಜೊನಾಸ, ಸೀಮಾನಾಸ, ಸವಡಿನಾಸ ಮುಂತಾದ ನಾಸಗಳಿವೆ. ಕುಳಾವಿಯ ಸೀಮಾಪದ್ಧತಿಯಲ್ಲಿ ಜನ್ಮಿ ದೈವ ಪ್ರಮುಖದೈವ. ಎಷ್ಟು ವಿವಿಧ ಜನ್ಮಿ ಪ್ರಮುಖ ದೈವಗಳಿವೆಯೂ ಅದಕ್ಕೆ ತಕ್ಕುದಾದ ನಾಸ ಸೈನಿಕ ದೈವಗಳು ಪ್ರತಿ ಜನ್ಮಿಗಳಿಗಿದ್ದು ಜನ್ಮಿದೈವಗಳಿಗೆ ರಕ್ಷಣೆ ಮತ್ತು ಬೆಂಬಲವನ್ನು ನೀಡುತ್ತಿರುತ್ತವೆ. ಉದಾಹರಣೆಗೆ: ಭೂಯಚೋನಾಸವು ಪ್ರತಿಯೊಂದು ಕುಳಾವಿಯ ಸೀಮಾದೈವ ಜನ್ಮಿ ದೈವದೊಂದಿಗೆ ಕೆಲಸ ಮಾಡುವ ದೈವವಾಗಿರುತ್ತದೆ. ಇದು ಜನ್ಮಿಗೆ ಸಾರಥಿಯಂತೆ ಕೆಲಸ ನಿರ್ವಹಿಸುತ್ತಿದ್ದು, ಭೂಮಿತ್ ದೇವಸ್ಥಾನಗಳಲ್ಲಿ ಸ್ಥಾಪನೆಗೊಂಡಿರುವ ಈ ಭೂಂಯಾಚೋ ನಾಸ ಗಡಿಕಾರ್ಯ ಕಾಯಕದಲ್ಲಿ ತೊಡಗಿಸಿಕೊಂಡಿರುತ್ತದೆ. ಹಾಗಾಗಿ ಕುಳಾವಿಯ ಬುದವಂತಮತ್ತು ಮಿರಾಶಿಗಳಲ್ಲಿ ಕುಣಬಿಗಳು ಜನ್ಮಿಯ ಜೊತೆ ಹೇಳಿಕೆ(ಹರಕೆ) ಮಾಡಿಕೊಳ್ಳುವ ಸಂದರ್ಭದಲ್ಲಿ ಭೂಯಚೋನಾಸ ದೈವಕ್ಕೂ ಹೇಳಿಕೆ ಪಡೆದುಕೊಳ್ಳಲಾಗುತ್ತದೆ.

**ಕಾಳಗಳು ಮತ್ತು ಕಾಳಿಗಳು**

ಕಾಳ ಮತ್ತು ಕಾಳಿಗಳು ಮೂಲದಲ್ಲಿ ಕುಳಾವಿಯ ಒಳಿತಿಗಾಗಿ ದುಡಿದು ಮಡಿದವರ ಪೂರ್ವಿಕರ ಆತ್ಮಗಳು. ಈ ಆತ್ಮಗಳು ಧರ್ಮಿಜಾಣ, ಬುದವಂತಮತ್ತು ಮಿರಾಶಿಗಳಿಂದ ಸಾಂಪ್ರದಾಯಿಕವಾಗಿ ಆಕಾರ ಪಡೆದು ಸೀಮಾಕುಲದೈವಗಳಾಗಿ ಸ್ಥಾಪನೆಗೊಂಡವುಗಳು ಕಾಳ

ಮತ್ತು ಕಾಳಿಗಳು ಸೀಮಾದೈವಗಳಿಗೆ ಉಪಸೈನಿಕರಂತೆ ಬೆಂಗಾವಲಿಗೆ ನಿಂತು ಸೀಮಾ ರಕ್ಷಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತವೆ. ಇದು ಒಂದು ತರಹ ರಾಜರುಗಳ ಸಾಮ್ರಾಜ್ಯದ ಸೈನ್ಯ ಪಡೆಯಲ್ಲಿ ಮಹಾದಂಡನಾಯಕ, ದಂಡನಾಯಕ, ಸೈನ್ಯಾಧಿಪತಿ, ದಳಪತಿ, ತಳವಾರ, ಮುಂತಾದ ರಕ್ಷಣೆಯ ಉಪವಿಭಾಗಗಳ ಜವಾಬ್ದಾರಿಗಳನ್ನು ಹೊತ್ತುಕೊಂಡ ರೀತಿಯಲ್ಲಿ ಕುಣಬಿಗಳ ಕಾಡಿನೊಳಗಿನ ಕುಳಾವಿಯ ಸೀಮಾ ಸಾಮ್ರಾಜ್ಯವನ್ನು ರಕ್ಷಿಸುವಲ್ಲಿ ವಿವಿಧ ಹುದ್ದೆ, ಜವಾಬ್ದಾರಿಗಳನ್ನು ನಿಭಾಯಿಸುವಂತೆ, ಸೀಮಾಪದ್ಧತಿಯ ಸಾಮ್ರಾಜ್ಯದ ಮುಖ್ಯ ರಕ್ಷಣಾ ದೈವ ಜನ್ನಿ. ಜನ್ನಿಗೆ ಕೈ ಜೋಡಿಸುವ ಬೇರೆ ಬೇರೆ ಹಂತಗಳಲ್ಲಿ ಮಡಬಾಸ್, ಪಾಯಕ, ನಾಸ, ಪುರುಷಗಳು, ಸೀಮಾಗಡಿಯ ರಕ್ಷಣೆಯ ಕಾರ್ಯನಿರ್ವಹಿಸುತ್ತಿರುತ್ತವೆ. ಇಂತಹ ಒಂದು ರಕ್ಷಣೆಯ ವ್ಯವಸ್ಥೆಯ ಭಾಗವಾಗಿ ಕಾಳ ಮತ್ತು ಕಾಳಿ ರಕ್ಷಣೆಯ ಪಾತ್ರವನ್ನು ಸೀಮಾಪದ್ಧತಿಯಲ್ಲಿ ವಹಿಸುತ್ತದೆ.

ಕಾಳಗಳಲ್ಲಿ ಗಾಂಡಚೊ ಕಾಳ(ಸತ್ಪುರುಷ), ಸ್ಮಶಾನಕಾಳ ಮಸಣಕೋಟ್‌ಕಾಳ, ಜಾಗತಕಾಳ, ಗಡಿಜೋಕಾಳ, ಭೂಯಜೋಕಾಳಗಳು, ಖಾಫ್ರಿ, ತಳಸೋಡಿ ಹಮುಟ ಮುಂತಾದವುಗಳು ಪ್ರಮುಖ ಕಾಳಗಳಾಗಿವೆ. ಕಾಳಿಗಳಲ್ಲಿ ಗಾವಳಾದೇವಿ, ಚಾಪೇರಿ, ಸಾತೇರಿಗಳ, ಪ್ರಮುಖವಾದ ಕಾಳಿಗಳಾಗಿವೆ.

**ಗಾಂಡಚೋಕಾಳ(ಸಾತ್ ಪುರುಷ)**

ಗಾಂಡಚೋಕಾಳ ಜೋಯಿಡಾ ತಾಲ್ಲೂಕಿನ ಗಾಂಗೋಡ ಕುಳಾವಿಯ ಗಾಂಗೋಡಕಾಳ ಪ್ರಮುಖವಾದ ಸೀಮಾದೈವವಾಗಿದೆ. ಗಾಂಗೋಡ ಕಾಳವನ್ನು 'ಸಾತ್ ಪುರುಷ' ಎಂತಲೂ ಕರೆಯುತ್ತಾರೆ. ಕಾರಣ ಗಾಂಡಚೋಕಾಳ ಎನ್ನುವ ದೈವ ಆ ಕುಳಾವಿಗಳಲ್ಲಿ ಸಮುದಾಯದ ಏಳಿಗೆಗಾಗಿ ಶ್ರಮಿಸಿ ಮಡಿದ ಪೂರ್ವಜರ ಏಳುಜನರ ಆತ್ಮಗಳ ಒಂದು ಸಂಕೀರ್ಣವಾಗಿದೆ. ಗಾಂಗೋಡಾ ಸೀಮಾಗಡಿಯ ಭಾಗದಲ್ಲಿರುವ ಕುಳಾವಿಯ ಗ್ರಾಮದೈವ ಸೋಮನಾಥನಾಗಿದ್ದು ಈ ಸೋಮನಾಥನಿಗೆ ಅಂಗ ದೇವತೆ ಜನ್ನಿಯಾಗಿದ್ದಾಳೆ. ಸೋಮನಾಥ ದೇವಸ್ಥಾನದ ಪಕ್ಕದಲ್ಲಿ ಜನ್ನಿಯು ಕಲ್ಲುಗುಂಡಿನ ರೂಪದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದಾಳೆ. ಈ ಜನ್ನಿ ಅಂಗದೇವತೆಯ ಅಂಗರಕ್ಷಕರಾಗಿ ಈ ಏಳು ಸಾತ್ಪುರುಷ ಕಾಳಗಳು ದೇವಸ್ಥಾನದಿಂದ 100 ಅಡಿ ದೂರದಲ್ಲಿ ಏಳು ಗುಂಡುಕಲ್ಲುಗಳನ್ನೊಳಗೊಂಡ ಕಟ್ಟೆಯಲ್ಲಿ ಬುದವಂತ ಮತ್ತು ಧರ್ಮಿಜಾಣರಿಂದ ಆಕಾರ ಪಡೆದು ಕುಲದೈವಗಳಾಗಿ ಪ್ರತಿಷ್ಠಾಪಿಸಲ್ಪಟ್ಟಿರುವ ದೈವಗಳೇ "ಗಾಂಡಚೋಕಾಳ'.

ಗಾಂಗೋಡಾ ಕುಳಾವಿಯ ಸೀಮಾಕ್ಷೇತ್ರದ ವ್ಯಾಪ್ತಿ 6–7 ಕಿ.ಮೀ. ವೃತ್ತ ಪರಿಧಿ ಆವರಣದ ಗಡಿ ವಲಯವಾಗಿದೆ. ಈ ಕ್ಷೇತ್ರವನ್ನು ದುಷ್ಟ ಶಕ್ತಿ, ಕಳ್ಳಕಾಕರುಗಳಿಂದ ಸದಾ ಈ ಸಾತ್ಪುರುಷ ಕಾಳಗಳು ರಕ್ಷಿಸುತ್ತಲಿರುತ್ತಾರೆಂಬುಧು ಗಾಂಗೋಡ ಸೀಮಾದೊಳಗೆ ವಾಸಿಸುವ ಕುಣಬಿಗಳ ನಂಬಿಕೆಯಾಗಿದೆ. ಈ ಸಾತ್ಪುರುಷರನ್ನು ಮೀರಿ ಯಾರೂ ಒಳಬರುವ ಹಾಗಿಲ್ಲ.

ಬಂದರೂ ಅವರು ಉಳಿಯಲಾರರು. ಈ ಆತ್ಮಗಳಿಗೆ ಬೆಂಬಲವಾಗಿ ಮೂಲಜನ್ಮಿ, ಚೌಡ್ಡೊಜನ್ಮಿ, ಭಯಜೋಜನ್ಮಿ, ಪಾಯಕ, ಭಯಚೋನಾಸ, ಸಾತೇರಿದೇವರಿ, ಬೈರೋರಾಮಲಿಂಗ ದೈವಗಳು, ವಿವಿಧ ಸಣ್ಣದಪ್ಪ ಉದ್ದ ಗುಂಡುಕಲ್ಲುಗಳ ರೂಪದಲ್ಲಿ ಸೀಮಾವಲಯದ ಗಡಿ ರೇಖೆಯೊಳಗೆ ಪ್ರತಿಸ್ಥಾಪಿಸಲ್ಪಟ್ಟಿದ್ದು, ಅವು ಒಂದಕ್ಕೊಂದು ಪೂರಕವಾಗಿ ಕಾಡನ್ನು, ಕಾಡಿನೊಳಗಿನ ಜೀವಿಗಳನ್ನು ಹಾಗೂ ಕುಳಾವಿಯ ಜನರನ್ನು ಸಂರಕ್ಷಿಸುತ್ತಿರುತ್ತವೆ. ಇದಲ್ಲದೆ ಪ್ರತಿ ಕುಳಾವಿಯ ಸೀಮಾವಲಯದ ರೇಖೆಯೊಳಗೆ ಕಲ್ಲಿನ ಅಥವಾ ಲೋಹದಿಂದ ಮಾಡಲಾದ ಹುಲಿಯ ಆಕೃತಿಯ ದೈವವನ್ನು ಕುಣಬಿಗಳು ಪ್ರತಿಸ್ತಾಪಿಸಿರುತ್ತಾರೆ. ಅದಕ್ಕೆ ಅವರು ವಾಗ್ರೊ ಎಂದು ಕರೆಯುತ್ತಾರೆ. ವಾಗ್ರೊ ದೈವವು ನಿರ್ದಿಷ್ಟ ಕುಣಬಿ ಕುಳಾವಿಯ ಸೀಮಾದೈವವಾಗಿದ್ದು ಇದು ಸೀಮಾವಲಯದೊಳಗೆ ದುಷ್ಟಮೃಗಗಳು, ಕುಣಬಿಗಳ ಮೇಲೆರಗದಂತೆ, ಕಾಡನ್ನು ಮತ್ತು ಕುಣಬಿಗಳ ಬೆಳೆಗಳನ್ನು ರಕ್ಷಿಸುವ ಜವಾಬ್ದಾರಿ ಹೊತ್ತಿರುತ್ತದೆ.

ಈ ಗಡಿ ವ್ಯಾಪ್ತಿ ಪ್ರದೇಶದೊಳಗಿರುವ ಕಾಡಿನ ಉತ್ಪನ್ನಗಳನ್ನು ಬೇರೆ ಯಾರೂ ತೆಗೆಯುವ ಹಾಗಿಲ್ಲ. ಖುದ್ದು ಗಾಂಗೋಡ ಕುಣಬಿಗಳು ಕೂಡ ಕಾಡಿನ ಕಾಳುಮೆಣಸು, ಜೇನುತುಪ್ಪ, ಸೀಗೆ, ವಾಟೆಹುಳೀ, ಮುರುಗಲಿ, ತೆಗೆಯುವ ಮೊದಲು ಗಾಂಗೋಡವಾಳ ಸತ್ಪುರುಷರುಗಳಿಗೆ 'ಮಾತನ್' ಪೂಜೆಯನ್ನು ಬುಧವಂತನ ಮೂಲಕ ನೆರವೇರಿಸಿ ಅನುಮತಿ ಪಡೆದ ನಂತರವಷ್ಟೇ ಸಂಗ್ರಹಿಸಬಹುದು. ಅಲ್ಲದೆ ಅವರು ಬೆಳೆದ ವರ್ಷದ ಮೊದಲ ಬೆಳೆಯನ್ನು ಕೂಡ ಈ ರೀತಿ 'ಮಾತನ್' ಪೂಜೆ ನೆರವೇರಿಸಿ ಅನುಮತಿ ಪಡೆದ ಮೇಲೆ ಬಳಸಬಹುದು. ಸೀಮಾರೇಖೆಯ ಒಳಗಿನ ವ್ಯಾಪ್ತಿ ಪ್ರದೇಶದ ಕಾಡಲ್ಲಿ ಯಾರೇ ಕಳ್ಳತನ ಮಾಡಲಿ, ಪ್ರಾಣಿಗಳನ್ನು ಬೇಟೆಯಾಡಲಿ ಅವರನ್ನು ಏಳುಕಾಳ ಸತ್ಪುರುಷರು ಇಲ್ಲಿಯವರೆವಿಗೂ ಬಿಟ್ಟಿಲ್ಲ. ಸತ್ಪುರುಷರು ಕಳ್ಳರನ್ನು ಬಿಡುವುದಿಲ್ಲವೆಂಬುಧು ಹಳ್ಳಿಯ ಜನರ ಗಾಢವಾದ ನಂಬಿಕೆ. ಗಾಂಗೋಡ ಕುಣಬಿ ಕುಳಾವಿಯ ಬುದವಂತ "ರಾಯಸುಕ್ಟೋ ವೆಳಿಪ್" ಹೇಳಿಕೆ ಪ್ರಕಾರ ಈಗಲೂ ಅರಣ್ಯ ಇಲಾಖೆ ಯವರು ಕೂಡ ಯಾವುದೇ ಮರವನ್ನು ಕಡಿಯಬೇಕಾದರೂ ಕೂಡ ಕಾಳ ಸತ್ಪುರುಷರಿಗೆ ಪೂಜೆ ಸಲ್ಲಿಸಿ ಹೇಳಿಕೆ ಪಡೆದೇ ಮರ ಕಡಿಯಬೇಕಾಗುತ್ತದೆ. ಈ ಸಂಪ್ರದಾಯ ಇಂದಿಗೂ ಚಾಲ್ತಿಯಲ್ಲಿದೆ. ಹಾಗಾಗಿ ಇಲ್ಲಿಯವರೆವಿಗೂ ಯಾರೂ ಈ ನಿಯಮ ಮೀರಿ ದೇವರನ್ನು ಕೇಳದೆ ಮರ ಇರಲಿ ಒಂದು ಕಡ್ಡಿಯನ್ನು ಕಾಡಿನಿಂದ ತೆಗೆದುಕೊಂಡು ಹೋಗುವುದಿಲ್ಲ. ಹೀಗೆ ದೇವರ ಅನುಮತಿ ಪಡೆಯದೇ ಮರಗಳ್ಳತನ ಹಾಗೂ ಕಾಡಿನ ಉತ್ಪನ್ನ ಕದ್ದವರು ಬೇರೆ ಬೇರೆ ರೀತಿ ಶಿಕ್ಷೆಗೊಳಗೊಂಡು ನಾಶವಾದ ಬಗ್ಗೆ ಇಲ್ಲಿ ದಂತಕಥೆಗಳೇ ಇವೆ. ಏಪ್ರಿಲ್ ತಿಂಗಳ ಯುಗಾದಿಯ ನಂತರ ಗಾಂಗೋಡದಲ್ಲಿ ಗಾಂಡಚೋಕಾಳ(ಸಾತ್‌ಪುರುಷ) ಜಾತ್ರೆಯನ್ನು ವಿಜೃಂಭಣೆಯಿಂದ ನೆರವೇರಿಸಲಾಗುತ್ತದೆ.

**ಗಾವಡೇವಾಡದ ಖಾಪ್ರಿ**

ಜೋಯಿಡಾ ತಾಲ್ಲೂಕಿನ ಗಾವಡೇವಾಡ ಕುಳಾವಿಯಲ್ಲಿ ಪ್ರತಿವರ್ಷ ತುಳಸಿ ಹಬ್ಬದ ಮಾರನೆಯ ದಿನ ಅಂದರೆ ಕಾರ್ತಿಕ ಮಾಸದ ದ್ವಾದಶಿ ಹುಣ್ಣಿಮೆಯ ಮಾರನೇ ದಿನ ಜೋಯಿಡಾ ತಾಲ್ಲೂಕಿನಲ್ಲಿ ಅತ್ಯಂತ ವಿಜ್ರಂಭಣೆಯಿಂದ ಜರುಗುವ ಜಾತ್ರೆ ಖಾಪ್ರಿ ಜಾತ್ರೆಯಾಗಿದೆ.

ಗಾಂಗೋಡ ಸಾತ್ಪುರುಷ ಕಾಳನಂತೆ ಖಾಪ್ರಿಯೂ ಕೂಡ ಸೀಮೆಯನ್ನು ರಕ್ಷಿಸುವ ಕುಳಾವಿಯ ಮಡಿದ ಅಣ್ಣ ತಮ್ಮಂದಿರು ಆತ್ಮಗಳಾಗಿವೆ. ಗಾವಡೇವಾಡ ಗ್ರಾಮದ ಮುಖ್ಯದೇವರು ಶ್ರೀ ಸಿದ್ಧೇಶ್ವರ ನಂತರದ ಮುಖ್ಯ ಸೀಮಾದೈವ ಜನ್ಮಿ ದೇವತೆಯಾಗಿದ್ದು ಆಕೆಯ ಪ್ರಮುಖ ಸೈನಿಕರುಗಳು ಇದೇ ಕುಳಾವಿಯ ಮಡಿದ ಹಿರಿಯ ಅಣ್ಣ ತಮ್ಮಂದಿರ ಆತ್ಮಗಳಾಗಿವೆ. ಸಾಮಾನ್ಯವಾಗಿ ಇವು ಕುಳಾವಿಯ ಸೀಮಾಕಾಡಿನೊಳಗಿನ 'ಪಿಡಗೋಸ್' (ದುರ್ಗ ಎಂಬ ಹೆಸರಿನ ಬಸರಿ ಜಾತಿಮರ) ಮರದಲ್ಲಿ ಆತ್ಮಗಳು ನೆಲೆಸಿದ್ದು ಸೀಮಾವಲಯವನ್ನು ರಕ್ಷಿಸುವ ಕೆಲಸ ನಿರ್ವಹಿಸುತ್ತಿರುತ್ತವೆ. ಸಾತ್ಪುರುಷರ ಈ ಸೀಮಾದೈವಗಳೂ ಸಹ ಗಾವಡೇವಾಡ ಕುಳಾವಿ ಸೀಮಾಕ್ಷೇತ್ರವನ್ನು ಸದಾ ರಕ್ಷಿಸುವ ಜವಾಬ್ದಾರಿಯನ್ನು ಹೊತ್ತು ಕೆಲಸ ನಿರ್ವಹಿಸುತ್ತಿರುತ್ತವೆ ಎಂದು ಕುಣಬಿಗಳು ನಂಬಿದ್ದಾರೆ.

ಖಾಪ್ರಿ ದೈವಗಳಿಗೆ ನಿರ್ದಿಷ್ಟ ಆಕಾರವಿರುವುದಿಲ್ಲ. ಕುಣಬಿಗಳ ಬೇರೆ ಬೇರೆ ಕುಳಾವಿಯ ಬೇರೆ ಬೇರೆ ಸೀಮಾಗಡಿಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ಮಡಿದವರ ಆತ್ಮಗಳು ಆಕಾರ ಪಡೆದು ಕುಲದೈವಗಳಾದ ದೈವಗಳನ್ನು ಗುಂಡುಕಲ್ಲಿನ ರೂಪದಲ್ಲಿ ಇಡಲಾಗಿರುತ್ತದೆ. ಆದರೆ ಗಾವಡೇವಾಡದ ದೈವಗಳು ಕರಿಕಂಬಳಿ ಹೊದ್ದು ತಿರುಗುತ್ತಿರುತ್ತವೆ ಎಂದು ನಂಬಲಾಗುತ್ತಿದೆ. ಅನೇಕ ಸ್ಥಳೀಯ ಕುಣಬಿಗಳು ಹೇಳುವ ಹಾಗೆ, ಮೈತುಂಬಾ ಕಂಬಳಿ ಹೊದ್ದು ತಿರುಗಾಡುವುದನ್ನು ನಾವು ಗಮನಿಸಿದ್ದೇವೆ. ಸೀಮಾ ನಿಯಮಗಳಿಗೆ ವಿರುದ್ಧವಾಗಿ ಸೀಮೋಲ್ಲಂಘನೆಯಲ್ಲಿ ಖಾಪ್ರಿ ದೈವಗಳು ವಿಧವಿಧವಾಗಿ ಉಪಟಳ ನೀಡುತ್ತವೆಂಬ ಅನೇಕ ದಂತಕಥೆಗಳನ್ನು ಸ್ಥಳೀಯರು ವಿವರಿಸುತ್ತಾರೆ.

ಜಾತ್ರೆಯ ದಿನದಂದು, ಪಿಡಗೊಸ್ ಮರದಿಂದ ಇಳಿದು ಊರಿನ ಕುಣಬಿಗಳ ಮೈ ಮೇಲೆ ಆತ್ಮಗಳು ಆವಾಹನೆಗೊಳ್ಳುತ್ತವೆ. ಆಗ ಅಂತಹವರಿಗೆ ಮೈಮೇಲೆ ಸಂಪೂರ್ಣವಾಗಿ ಮುಖ ಮತ್ತು ಪಾದವನ್ನು ಬಿಡದಂತೆ ಕಂಬಳಿಯಿಂದ ಸಂಪೂರ್ಣವಾಗಿ ಮುಚ್ಚಿ ಚೆಂಡು ಹೂವಿನಿಂದ ಅಲಂಕಾರ ಮಾಡಲಾಗುತ್ತದೆ. ಒಂದು ಆತ್ಮವು ಕಾಡಿನಿಂದಲೂ ಇನ್ನೊಂದು ಆತ್ಮವು ಕುಳಾವಿಯ ಮಧ್ಯಭಾಗದಿಂದಲೂ ಶೃಂಗಾರಗೊಂಡು ಮೆರವಣಿಗೆಯನ್ನು ಹೊರಡಿಸಲಾಗುತ್ತದೆ. ಎರಡೂ ಖಾಪ್ರಿಗಳಿಗೂ ಒಂದೊಂದು ಒನಕೆಯನ್ನು ನೀಡಲಾಗಿರುತ್ತದೆ. ಅವು ಒನಕೆಯನ್ನು ಕುಟ್ಟುತ್ತಾ ಹಾಡುತ್ತಾ ಬರುತ್ತಿರುತ್ತವೆ. ಈ ಖಾಪ್ರಿಗಳ ಹಿಂದೆ ಮತ್ತು ಮುಂದೆ ಕುಳಾವಿಯರ ಬುಧವಂತ, ಮಿರಾಶಿ, ಧರ್ಮಿಜಾಣ ಅವರ ಜೊತೆ ಕುಳಾವಿಯ ಎಲ್ಲಾ ಕುಣಬಿ ಪುರುಷ, ಮಹಿಳೆ ಮಕ್ಕಳೂ ಕೂಡ ಕೂಡಿಕೊಂಡು ಖಾಪ್ರಿ ದೈವಗಳ

ಒನಕೆಯ ಸದ್ದಿನ ಜೊತೆ ಗುಮಟೆ, ಕಂಸಾಳೆ ಡೋಲುಗಳೊಂದಿಗೆ ಭಜನೆಯಲ್ಲಿ ತಾಳ ಹಾಕುತ್ತಾ ನರ್ತಿಸುತ್ತಾ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಮೆರವಣಿಗೆಯು ಕುಳಾವಿಯ ಮಧ್ಯಭಾಗದಲ್ಲಿ ಹೂವುಗಳಿಂದ ಶೃಂಗರಿಸಲಾಗಿರುವ ತುಳಸಿಕಟ್ಟೆಗೆ ಆಗಮಿಸಿ ತುಳಸಿಕಟ್ಟೆಯ ಸುತ್ತಲೂ ಭಜನೆ, ವಾದ್ಯಗಳ ತಾಳಕ್ಕೆ ತಕ್ಕಂತೆ ನರ್ತಿಸುತ್ತಾ "ಸಾಹೇಬ ಖಾತಾ ದೊನಗೊಟೆ ಸಾಮ ಬಿಣಜೆ ಖಲೆಮ್ಹಟೆ" "ಆ ಸಕ್ಯಾಲಸಕ್ಯಾನಿ ಖಾಪ್ರಿ ಖಮಲೊಪ್ರಸ್ಸಾಸಿ" ಹೀಗೆ ಒಂದಾದ ಮೇಲೊಂದರಂತೆ ಹಾಡು ಹಾಡುತ್ತಾ ನರ್ತಿಸುತ್ತಾ ತುಳಸಿಕಟ್ಟೆ ಪ್ರದಕ್ಷಿಣೆ ಹಾಕಲಾಗುತ್ತದೆ. ಈ ದೃಶ್ಯವನ್ನು ವೀಕ್ಷಿಸಲು ಸಾವಿರಾರು ಜನ ಕುಣಬಿಗಳ ಹಾಗೂ ಇತ್ತೀಚೆಗೆ ಬೇರೆ ಬೇರೆ ಭಾಗಗಳಿಂದ ಸಾವಿರಾರು ಜನಸ್ತೋಮ ಸೇರುತ್ತಾರೆ. ಈ ಜಾತ್ರೆಯಲ್ಲಿ ಭಕ್ತರ ಹರಕೆ ಹೊತ್ತು ಕಂಬಳಿಯನ್ನು ಹರಕೆಗಾಗಿ ಸಲ್ಲಿಸುತ್ತಾರೆ. ಕಂಬಳಿಯ ಪುಟ್ಟ ಗುಡ್ಡವೇ ಇದರಿಂದ ನಿರ್ಮಾಣಗೊಳ್ಳುತ್ತದೆ. ಅದನ್ನು ಕೊನೆಗೆ ಹರಾಜಾಕುವ ಮೂಲಕ ಬಂದ ಹಣವನ್ನು ದೇವರ ಕಾರ್ಯಕ್ಕೆ ಬಳಸಿಕೊಳ್ಳಲಾಗುತ್ತದೆ.

ಈ ಜಾತ್ರೆಯ ಸಮಯದಲ್ಲಿ ಕುಣಬಿಗಳು ತಮ್ಮ ಬೆಳೆಗಳ ಮತ್ತು ಕಾಡುಗಳ ರಕ್ಷಣೆಗೆ ಹೋಗುವುದಿಲ್ಲ. ಆದರೂ ಕಾಡುಪ್ರಾಣಿಗಳಿಂದ ಬೆಳೆ ಹಾನಿಗೊಳ್ಳುತ್ತಿಲ್ಲವೆಂಬ ನಂಬಿಕೆಯಾಗಿದೆ. ಅದಕ್ಕೆ ಮುಖ್ಯ ಕಾರಣ ಖಾಪ್ರಿ ಆತ್ಮಗಳು ಮತ್ತು ವಾಗ್ರೊ ದೈವ ಎಂದು ನಂಬಲಾಗುತ್ತಿದೆ. ಇತ್ತೀಚಿನವರೆವಿಗೂ ಗಾಂಗೋಡ ಕುಳಾವಿಯ ಬುದವಂತ 99 ವರ್ಷದ ಹಿರಿಯನಾಗಿದ್ದ 'ಮಾಂಡಿ ಸಡಿಗಾವಡ' ಖಾಪ್ರಿ ಜಾತ್ರೆಯ ಮುಖ್ಯ ನೇತೃತ್ವವಹಿಸುತ್ತಿದ್ದ ಆತ ಮಡಿದ ನಂತರ ಈಗ ವಿನೋದ ಮಿರಾಶಿ, ಕೃಷ್ಣಾ ಮಿರಾಶಿ, ದತ್ತಗಾವಡ, ಜಾನುಗಾವಡ, ಮನೋಹರಗಾವಡ, ಅಶೋಕ ಮಿರಾಶಿ, ಮಹದೇವ ಮುಂತಾದವರು ಜಾತ್ರೆಯ ಮಹೋತ್ಸವದ ಸಾಂಸ್ಕೃತಿಕ ಕಾರ್ಯಗಳ ಜವಾಬ್ದಾರಿ ವಹಿಸಿಕೊಂಡು ಜಾತ್ರೆಯನ್ನು ನಡೆಸಿಕೊಡುತ್ತಿದ್ದಾರೆ.

ಜಾತ್ರೆಯ ಕೊನೆಯಲ್ಲಿ ಬೆಲ್ಲ ಮತ್ತು ಚುರುಮುರಿಯನ್ನು ಹಂಚಲಾಗುತ್ತದೆ. ಹರಕೆ ಹೊತ್ತವರು ಕಂಬಳಿಯ ಜೊತೆ ಹರಕೆ ಒಪ್ಪಿಸಿರುತ್ತಾರೆ. ಅದನ್ನು ನಂತರ ನೆರೆದ ಭಕ್ತರಿಗೆ ಹಂಚಲಾಗುತ್ತದೆ. ಕುಳಾವಿಯ ಪ್ರತಿಯೊಂದು ಮನೆಯಲ್ಲಿ ಆಗಮಿಸಿದ ಕುಣಬಿಗಳಿಗೆ ಊಟದ ವ್ಯವಸ್ಥೆ ಮಾಡುತ್ತಾರೆ. ಈ ಸೀಮಾದೈವದ ವಿಶೇಷ ಜಾತ್ರೆಯಲ್ಲಿ ಗಮನಿಸಬೇಕಾದ ವಿಶೇಷ ವಿಚಾರವೆಂದರೆ, ಖಾಪ್ರಿಗೆ ಕರಿಕಂಬಳಿಯನ್ನು ಸಂಪೂರ್ಣವಾಗಿ ಸುತ್ತಿರುವುದು. ಖಾಪ್ರಿ ಎಂದರೆ ಕೊಂಕಣಿಯಲ್ಲಿ 'ಕಪ್ಪು' ಎಂದರ್ಥ. ಇಲ್ಲಿ ಆತ್ಮಗಳಿಗೆ ಆಕಾರವಿಲ್ಲವೆಂಬ ಭಾವಾರ್ಥವಿಟ್ಟುಕೊಂಡು ಸಂಪೂರ್ಣ ಪಾದ ಮುಖವನ್ನು ಬಿಡದೆ ಸುತ್ತಿರುತ್ತಾರೆ. ಉಳಿದ ಕುಳಾವಿಗಳಲ್ಲಿ ಹೀಗೆ ಮಡಿದವರ ಆತ್ಮಗಳು ಸೀಮಾದೈವಗಳಾಗಿ ಮಾರ್ಪಟ್ಟಾಗ ಆಕಾರವಿಲ್ಲದೆ ಕಲ್ಲುಗುಂಡು ರೂಪದಲ್ಲಿರುವುದು ಸಾಮಾನ್ಯವಾಗಿತ್ತು. ಆದರೆ ಇದೊಂದು ಕುಳಾವಿಯ ಸೀಮಾದೈವ ನಿರಾಕಾರದ ಖಾಪ್ರಿಯಾಗಿ ರೂಪಗೊಂಡದ್ದು ವಿಶೇಷವೂ ಅರ್ಥಗರ್ಭಿತವೂ ಅನ್ನಬಹುದಾಗಿದೆ.

ವಿಶೇಷವಾದ ಅಂಶವನ್ನು ಈ ಜಾತ್ರೆಯ ಪ್ರಕ್ರಿಯೆಯಲ್ಲಿ ಗಮನಿಸಬಹುದಾದಂತಹ ಅಂಶವೆಂದರೆ ಕಂಬಳಿ ಹೊದ್ದ ಆತ್ಮಗಳು ಒನಕೆಯನ್ನು ನೆಲಕ್ಕೆ ಕುಟ್ಟುತ್ತಾ ವಾದ್ಯಗಳ ತಾಳಕ್ಕೆ ನರ್ತಿಸುತ್ತಾ ಹಾಡುತ್ತಿರುತ್ತವೆ. ಆ ಹಾಡನ್ನು ಅದರ ಹಿಂದೆ ಸುತ್ತುವ ನೂರಾರು, ಪುರುಷ, ಮಹಿಳೆ, ಮಕ್ಕಳು ಪುನರುಚ್ಚರಿಸುತ್ತಾ ಹಾಡುತ್ತಿರುತ್ತಾರೆ. ಖಾಫ್ರಿಗಳು ಹಾಡುವ ಹಾಡು ಆ ನಿರ್ದಿಷ್ಟ ಸೀಮಾಕ್ಷೇತ್ರ ಕುಳಾವಿಯ ಸಾವಿರಾರು ವರ್ಷಗಳ ಇತಿಹಾಸದ ಕಥೆಯನ್ನು ವಿವರಿಸುತ್ತಿರುತ್ತದೆ. ಕುಣಬಿಗಳ ಬದುಕಿನ ಸಾವಿರಾರು ವರ್ಷಗಳ ಸಾಂಸ್ಕೃತಿಕ ಇತಿಹಾಸದಲ್ಲಿರುವ ನೋವು, ನಲಿವು, ಪಾಠ, ಜ್ಞಾನ, ಎಚ್ಚರಿಕೆಯಲ್ಲಿಟ್ಟುಕೊಳ್ಳಬೇಕಾದ ವಿಚಾರಗಳು ಹೀಗೆ ಹಲವಾರು ಸಂದೇಶಗಳನ್ನು ನೂರಾರು ಪೀಳಿಗೆಗಳು ಜಾನಪದ ಸಂಗ್ರಹಣೆಯನ್ನು ತಮ್ಮ ಮುಂದಿನ ಪೀಳಿಗೆಗೆ ಮೌಖಿಕವಾಗಿ ಸಂದೇಶ ದಾಟಿಸುವ ಪ್ರಕ್ರಿಯೆಗೊಳ್ಳುತ್ತಿರುವ ಒಂದು ಅದ್ಭುತ ಸಂದೇಶದ ಪ್ರತೀಕಕ್ಕೆ ಈ ಖಾಫ್ರಿ ಜಾತ್ರೆ ಸಾಕ್ಷೀಭೂತವಾಗಿರುವ ಅಂಶ ಬುಡಕಟ್ಟುಗಳ ಇತಿಹಾಸವನ್ನು ಅರಿಯಲು ಅಧ್ಯಯನ ಕೈಗೊಳ್ಳಲು ಸಂಶೋಧಕರಿಗೆ ಉತ್ತಮವಾದ ದಾರಿಯನ್ನು ಈ ಜಾತ್ರೆ ಕಲ್ಪಿಸುತ್ತಿದೆ. ಬರೀ ಗಂಭೀರವಾದ ವಿಚಾರಗಳನ್ನಷ್ಟೇ ಹಿರಿಯರ ಆತ್ಮಗಳು ತಮ್ಮ ಮುಂದಿನ ಪೀಳಿಗೆಗೆ ಇತಿಹಾಸವನ್ನು ತೆರೆದಿಡುವುದಿಲ್ಲ. ಹೀಗೆ ಖಾಫ್ರಿಗಳು ಇತಿಹಾಸ ಬಿಚ್ಚಿಡುತ್ತಾ ಪ್ರದಕ್ಷಿಣೆ ಮಾಡುವಾಗ ಬ್ರಿಟಿಷರು ಆಳುವಾಗ ಇವರನ್ನು ಹಿಂಸಿಸಿದ್ದು, ಬ್ರಿಟಿಷರ ಬಣ್ಣ, ನಡವಳಿಕೆಗಳನ್ನು ಕೂಡ ಲೇವಡಿ ಮಾಡಿ, ಅಧಿಕಾರಿಯ ಹೆಂಡತಿಯ ಕುಂಡಿ ಕೆಂಪೆಂದು ಹಾಡಿ ನಗಾಡುವುದೂ ಇದೆ. ಈ ಹಿಂದೆ ಈ ಜಾತ್ರೆಗಳಿಗೆ ಕೋಣಗಳ ಬಲಿ ನೀಡಲಾಗುತ್ತಿತ್ತೆಂದು ಹೇಳಲಾಗುತ್ತಿತ್ತು. ಈಗ ಅದು ನಿಂತಿದೆ.

ಒಂದು ಬುಡಕಟ್ಟು ಸಮುದಾಯ ತನ್ನ ಆದಿಮ ಸ್ಥಿತಿಯಲ್ಲಿನ ತಮ್ಮ ಬದುಕಿನ ಇತಿಹಾಸದ ದಾಖಲೆಗಳನ್ನು ಗೆರೆಗಳಲ್ಲಿ ಹಿಡಿದಿಡಲಾಗದಿರುವ ಸನ್ನಿವೇಶದಲ್ಲಿ ತಮ್ಮ ಬದುಕಿನ ಸಮಗ್ರ ಇತಿಹಾಸವನ್ನು ಮೌಖಿಕ ಜಾನಪದದ ಮೂಲಕ ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಸಾವಿರಾರು ವರ್ಷಗಳ ತಮ್ಮ ಸಾಂಸ್ಕೃತಿಕ ಬದುಕಿನ ಇತಿಹಾಸವನ್ನು ಕಟ್ಟಿಕೊಡುವ ವಿಶೇಷವಾದ ಅವಕಾಶವನ್ನು ಈ ಖಾಫ್ರಿ ಜಾತ್ರೆ ಅಭಿವ್ಯಕ್ತಗೊಳಿಸುವ ಪರಿ ಅತ್ಯಂತ ಮಾರ್ಮಿಕವಾದದ್ದಾಗಿದೆ.

### ತೆಲೂಲಿಯ ತಳಸೋಡಿ ಹಮುಟ ಮತ್ತು ಗಾವುಡ ಪುರುಷ

ಜೋಯಿಡಾ ತಾಲ್ಲೂಕಿನ ತೆಲೂಲಿ ಕುಳಾವಿಯ ಸೀಮಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕುಳಾವಿಯ ಪ್ರಮುಖವಾದ ದೈವ ಸಿದ್ಧನಾಥನಾಥ ತೆಲೂಲಿಯ ಸೀಮಾವಲಯವು ವಿಸ್ತೀರ್ಣವಾದ ಕಾಡಿನಿಂದ ಕೂಡಿದೆ. ಪೂರ್ವಕ್ಕೆ ಕುರಾವಲಿ ಕುಳಾವಿಯವರೆವಿಗೂ, ಪಶ್ಚಿಮಕ್ಕೆ ಕಾರಸಿಂಗಳ ಕುಳಾವಿಯವರೆವಿಗೂ, ಉತ್ತರಕ್ಕೆ ಡೇರಿಯೇ ಕುಳಾವಿಯವರೆಗೂ ದಕ್ಷಿಣಕ್ಕೆ ಕಾಟೇಲ್

ಕುಳಾವಿಯವರೆವಿಗೂ 5-6 ಕಿ.ಮೀ. ಪರಧಿಯಲ್ಲಿ ತೆಲೂಲಿ ಸೀಮಾವಲಯದ ಕ್ಷೇತ್ರದ ಗಡಿಯನ್ನು ಹೊಂದಿದ್ದು ಸೀಮಾರೇಖೆಯ ಉದ್ದಕ್ಕೂ ವಾಗ್ರೋ(ಹುಲಿದೈವ) ಕಾಳ ಭೈರವ, ಜನ್ಮಿ, ಜಗತ್ ಜನ್ಮಿ, ತೊಗೊ ಪಾಯಕ, ಸೆಳೆ ಪಾಯಕ ಮಡಬಾಸಗಳು, ಜಾಗತಕಾಳ, ದೇವಕಾರ ಮುಂತಾದ ಸೀಮಾದೈವಗಳು ತೆಲೂಲಿ ಸೀಮಾಕ್ಷೇತ್ರ ವಲಯವನ್ನು ಹೊರಗಿನಿಂದ ದುಷ್ಟಶಕ್ತಿಗಳು, ಕಳ್ಳಕಾಕರಿಂದ ಗಡಿಯೊಳಗೆ ಬಾರದಂತೆ ರಕ್ಷಣೆ ಮಾಡುತ್ತಿರುತ್ತವೆಂದು ನಂಬಲಾಗಿದೆ.

ಈ ಕುಳಾವಿಗೆ ಪ್ರಮುಖವಾದ ಕಾಳಗಳು(ಮಡಿದವರ ಆತ್ಮದ ದೈವಗಳು) ತಳಸೋಡಿ ಹಮುಟ ಮತ್ತು ಗಾವಡಪುರುಷ ಇವೆರಡೂ ಕುಳಾವಿಯ ಏಳಿಗೆಗಾಗಿ ಮಡಿದ ಅಣ್ಣತಮ್ಮಂದಿರ ಆತ್ಮಗಳು. ಕುಲದೈವಗಳಾಗಿ ಪ್ರತಿಷ್ಠಾಪಿಸಿ ಸೀಮಾದೈವಗಳಾಗಿ ಜನ್ಮಿ, ಜಗತ್ ಜನ್ಮಿಗಳಿಗೆ ಸೈನಿಕ ದೈವಗಳಂತೆ ಕೆಲಸ ನಿರ್ವಹಿಸುವ ದೈವಗಳಾಗಿ ಸದಾ ಗಡಿ ಸಂರಕ್ಷಣೆಯಲ್ಲಿ ತೊಡಗಿಸಿಕೊಂಡಿರುತ್ತವೆಂದು ಕುಣಬಿಗಳು ನಂಬುತ್ತಾರೆ. ತೆಲೂಲಿ ಕುಳಾವಿಯ ಗಡಿಭಾಗಗಳಿಂದ ಆದಿಗೋವಾ, ಕಾರಸಿಂಗಳ, ಕುವವಳಿ, ಕಾರಸಿಂಗಳ ಮತ್ತು ಡೇರಿಯೇ ಸೀಮಾರೇಖೆಯ ಅಂಚಿನಿಂದ ಕೆಟ್ಟಶಕ್ತಿ ಕೆಟ್ಟ ಖಂಡಗಳು, ಕಳ್ಳಕಾಕರು, ಕೆಟ್ಟಶಬ್ದಗಳು ಬಾರದಂತೆ ತಮ್ಮ ಸೀಮಾವಲಯದ ಕಾಡಿನ ಸಂಪೂರ್ಣ ಸಂಪನ್ಮೂಲಗಳನ್ನು ರಕ್ಷಿಸುವ ಜವಾಬ್ದಾರಿಗಳನ್ನು ಈ ತಳಸೋಡಿ ಹಮುಟ ಮತ್ತು ಗಾವಡಪುರುಷ ಸೀಮಾ ಆತ್ಮಗಳು ವಹಿಸಿಕೊಂಡಿರುತ್ತವೆ.

ಇವುಗಳ ಜೊತೆಗೆ ಚಿತ್ರವಾತ, ಭಯಭೂಮಿಕ, ಶಾಂಡಿಲ್ಯ ಮಹಾರಾಜ, ರಾಮಲಿಂಗೇಶ್ವರ, ಕಾನಡೆ ಭಗವಂತನ ಮುಂತಾದ ದೈವಗಳಿಗೆ ಬುದವಂತಭೀಮಾ ಪಾವಟೋ ಗಾವಡಾ, ಮಿರಾಶಿಯಾದ ಶಾಬಾಗಾವಡೋ ಅವರು ದೈವಗಳಿಗೆ ಪೂಜೆ ಮಾಡಿ ಹೇಳಿಕೆಗಳನ್ನು ಮಾಡುವ ಮೂಲಕ ದೈವಗಳನ್ನು ಜಾಗೃತವಾಗಿಟ್ಟಿರುತ್ತಾರೆ. ಇದನ್ನು ಕೊಂಕಣಿ ಭಾಷೆಯಲ್ಲಿ ಭೂತಹಾಳ್‌ತೇಲಿ ಎಂದು ಕರೆಯಲಾಗುತ್ತದೆ.

**ಮಾಯಿರೆ ಡಿಗ್ಗಿ ಕುಳಾವಿಯ ಶ್ರೀಗಾವಳಾದೇವಿ**

ಜೋಯಿಡಾ ತಾಲ್ಲೂಕು ಕೇಂದ್ರದಿಂದ 60 ಕಿ.ಮೀ. ದಟ್ಟ ಕಾಡಿನೊಳಗೆ ಕಾಳಿನದಿ ಹುಟ್ಟುವ ಮೂಲಸ್ಥಾನದಲ್ಲಿರುವ ಡಿಗ್ಗಿ ಮತ್ತು ಮಾಯಿರೆ ಕುಳಾವಿಯ ಹಾಗೂ ಸೋಲಿಯೆ ಕುಳಾವಿಗಳ ಕಾಡಿನ ಮಧ್ಯದಲ್ಲಿ ಹುತ್ತದ ರೂಪದಲ್ಲಿ ನೆಲೆ ನಿಂತಿರುವ ಸೀಮಾದೈವವೇ ಗಾವಳಾ ದೇವಿಯಾಗಿದ್ದಾಳೆ. ಹೋಳಿ ಹಬ್ಬದ ಸಂದರ್ಭದಲ್ಲಿ ಶ್ರೀಗಾವಳಾದೇವಿ ಜಾತ್ರೆಯನ್ನು ವಿಜೃಂಭಣೆಯಿಂದ ನೆರವೇರಿಸಲಾಗುತ್ತದೆ. ನೂರಾರು ವರ್ಷಗಳ ಹಿಂದೆ ಡಿಗ್ಗಿ ಕುಳಾವಿಯಲ್ಲಿ ಗಾವಳಾದೇವಿಯ ನೆಲೆ ನಿಂತಿದ್ದಳೆಂದು ಬ್ರಿಟಿಷರಿದ್ದ ಕಾಲದಲ್ಲಿ ಡಿಗ್ಗಿ ಮಾರ್ಗದ ಮೂಲಕ ಗೋವಾಕ್ಕೆ ಎತ್ತಿನ ಗಾಡಿಗಳಲ್ಲಿ ಬಹಳಷ್ಟು ಗಾಡಿಗಳ ಗಂಟೆಗಳ ಶಬ್ದನಾದ ಹೆಚ್ಚಾಗಿ ಮಾಡುತ್ತಿದ್ದ

ಕಾರಣ ಗಾವಳಾದೇವಿಯ ಡಿಗ್ಗಿ ಮತ್ತು ಮಾಯಿರೆ ಕುಳಾವಿಗಳ ಬೆಟ್ಟಗಳ ಮಧ್ಯೆ ನೆಲ ನಿಂತಳೆಂಬ ಪ್ರತೀತಿಯಿದೆ.

ಹೋಳಿ ಹಬ್ಬದ ಸಿಗ್ಮೊ ಸಂದರ್ಭದಲ್ಲಿ ಶ್ರೀ ಗಾವಳಾದೇವಿ ಜಾತ್ರೆಯು ಜರಗುತ್ತದೆ. ಗಾವಳಾದೇವಿಯ 30 ಅಡಿ ಉದ್ದದ ಪುರಾತನ ಬೃಹತ್ ಹುತ್ತದ ರೂಪದಲ್ಲಿ ಸ್ಥಾಪನೆಗೊಂಡಿದ್ದಾಳೆ. ಈ ಹುತ್ತದ ಸುತ್ತಲೂ ನೂರಾರು ಮಡಿದವರ ಆತ್ಮಗಳು ಕುಲದೈವಗಳಾಗಿ ಕಲ್ಲಿನ ಗುಂಡುಗಳ ರೂಪದಲ್ಲಿ ಪ್ರತಿಷ್ಠಾಪಿಸಲಾಗಿದೆ. ಗಾವಳಾದೈವವು ಸ್ಥಾಪನೆಯಾಗಿರುವ ಜಾಗದ ನಾಲ್ಕು ಹಳ್ಳಿಗಳಾದ ಕಣ್ಣೆ, ಸೋಲಿಯೇ, ಡಿಗ್ಗಿ ಬೊಂಡೇಲಿ ಮತ್ತು ಮಾಯಿರೆ ಕುಳಾವಿಗಳ ಸೀಮಾಗಡಿಗಳ ಮಧ್ಯೆ ಇರುವ ಕಾರಣ ಈ ಗಾವಳಾದೇವಿಯು ಇದು ಕುಳಾವಿಗಳನ್ನು ರಕ್ಷಿಸುವ ಸೀಮಾದೈವವಾಗಿದ್ದಾಳೆ. ಹಾಗಾಗಿ ಈ ಐದು ಕುಳಾವಿಯ ಮಿರಾಶಿಗಳು ಕೂಡಿಕೊಂಡ ಪಂಚಮಿರಾಶಿ ಸಮಿತಿ ಇದ್ದು ಅದರ ಪ್ರಮುಖ ಕಣ್ಣೆ ಕುಳಾವಿಯ ಮಿರಾಶಿಯಾಗಿರುತ್ತಾನೆ.

ಗಾವಳಾದೇವಿಯ ವಿಶೇಷವೆಂದರೆ ಜಾತ್ರೆಯ ಸಂದರ್ಭದಲ್ಲಿ ಸುತ್ತಲ ಕುಳಾವಿಗಳಿಂದ ಆಗಮಿಸುವ ಕುಣಬಿ ಭಕ್ತರು ಹರಕೆಯ ರೂಪದಲ್ಲಿ ಸೀರೆಗಳನ್ನು ದೇವಿಗೆ ಸಲ್ಲಿಸುತ್ತಾರೆ. ಹೀಗೆ ಸಲ್ಲಿಸಲಾದ ಸೀರೆಗಳನ್ನು ಮಿರಾಶಿಗಳು ಹುತ್ತಕ್ಕೆ ಹಿಡಿದರೆ ಸಾಕು ಹುತ್ತ ತನಗೆ ತಾನೇ ಸೀರೆಯನ್ನು ಹುಟ್ಟಿಕೊಳ್ಳುತ್ತಾಳೆಂಬ ನಂಬಿಕೆ ಕುಣಬಿಗಳಲ್ಲಿದೆ. ಸಾವಿರಾರು ಭಕ್ತರ ಎದುರು ಜರುಗುವ ಈ ಸೀರೆ ಸೆಳೆದುಕೊಳ್ಳುವ ಕ್ರಿಯೆ ಜರುಗುತ್ತದೆ(ಐದು ಕುಳಾವಿಯ ಮಿರಾಶಿಗಳು ಸೀರೆಯನ್ನು ಹುತ್ತಕ್ಕೆ ಹಿಡಿಯುತ್ತಾರೆ. ಅತಿ ಪುರಾತನವಾದ ಹುತ್ತದ ಸಣ್ಣ ಸಣ್ಣ ಕಲ್ಲುಗಳು ಚೂಪಾಗಿದ್ದು, ಸೀರೆ ಹಿಡಿದಾಗ ಅಂಟಿಕೊಳ್ಳುತ್ತವೆ. ಇದನ್ನು ಹುತ್ತವೇ ಸೀರೆ ಉಟ್ಟುಕೊಳ್ಳುತ್ತದೆಂದು ನಂಬಲಾಗುತ್ತಿದೆ). ಎಲ್ಲಿಯೂ ಗಂಟು ಹಾಕದೇ ಸೀರೆ ತನ್ನಿಂದ ತಾನೇ ಸುತ್ತಿಕೊಳ್ಳುತ್ತಿರುವ ವಿಚಾರ ದೇವಿ ಮಹಾತ್ಮೆ ಎಂದು ನಂಬಲಾಗುತ್ತಿದ್ದು ಈ ಪವಾಡವನ್ನು ವೀಕ್ಷಿಸಲು ಸಾವಿರಾರು ಜನಸ್ತೋಮ ಜಾತ್ರೆಯಲ್ಲಿ ಸೇರಲಾಗುತ್ತದೆ.

ಕೇವಲ ಎರಡು ದಶಕಗಳ ಹಿಂದೆ ಆದಿವಾಸಿಗಳ ಸರಳ ಸೀಮಾದೈವವಾಗಿ ಕುಣಬಿಗಳ ಸೀಮಾಚರಣೆಗೆ ಸೀಮಿತವಾಗಿದ್ದ ಗಾವಳಾದೇವಿ ಜಾತ್ರೆ ಸೀರೆ ಉಡುವ ಪವಾಡದ ಕಾರಣಕ್ಕೆ ಪ್ರಖ್ಯಾತಗೊಂಡು, ಕುಣಬಿಗಳಲ್ಲದ ಇತರೆ ಸಮುದಾಯ, ರಾಜ್ಯ ಮತ್ತು ಗೋವಾ ಭಾಗಗಳಿಂದ ಹೆಚ್ಚು ಹೆಚ್ಚು ಜನರು, ಸೇರಲಾಗುತ್ತಿದ್ದು, ಕುಣಬಿಗಳಿಗೆ ಸೀಮಿತವಾಗಿದ್ದ ಸೀಮಾದೈವವೀಗ ಸಾರ್ವತೀಕರಣಗೊಂಡು ಮುಖ್ಯವಾಹಿನಿಯ ಹಿಂದೂ ದೈವವಾಗಿ ಮಾರ್ಪಾಟುಗೊಳ್ಳುತ್ತಿರುವ ಸ್ಥಿತ್ಯಂತರದ ಸನ್ನಿವೇಶವನ್ನು ಈ ಸಂದರ್ಭದಲ್ಲಿ ಗಮನಿಸಬಹುದಾಗಿದೆ. ಕಾಡಿನ ಮಧ್ಯೆ ಕೇವಲ ಹುತ್ತದ ರೂಪದಲ್ಲಿದ್ದ ಈ ಜಾಗದಲ್ಲಿ ಬೃಹದಾಕಾರದ ದೇವಸ್ಥಾನ ತಲೆ ಎತ್ತಿ ನಿಂತಿದೆ. ನೋಡು ನೋಡುತ್ತಿದ್ದಂತೆ ಕುಣಬಿಗಳಲ್ಲದವರೂ ಒಳನುಗ್ಗಿ ಕಮಿಟಿ ತಯಾರಿಸಲಾಗಿದೆ.

ಅದರ ಅಧ್ಯಕ್ಷತೆಯನ್ನು ಗೋವಾ ರಾಜ್ಯದ ಅನ್ಯಕೋಮಿನವ ಅಲಂಕರಿಸಿದ್ದಾನೆ. ಸಾವಿರಾರು ಜನ ಸೇರಲಾಗುತ್ತಿರುವ ಕಾರಣ ಜಾತ್ರೆಯ ಹರಕೆ, ಭಕ್ತರ ಕಾಣಿಕೆ, ರಾಜಕೀಯ ಪುಢಾರಿಗಳ ಅನ್ನದಾನಗಳು ಹೆಚ್ಚಾದ ಕಾರಣ ಬ್ರಾಹ್ಮಣ ಪುರೋಹಿತರು ಸಂಸ್ಕಾರದ ನೆಪ ಮಾಡಿ ಒಳತೂರಿ ಪೂಜೆಯ ಮತ್ತು ಯಜಮಾನಿಕೆಯ ಚುಕ್ಕಾಣಿ ಹಿಡಿದಿದ್ದಾರೆ. ಆದಿವಾಸಿಗಳ ಸೀಮಾದೈವವೊಂದು ತನ್ನ ಮೂಲ ಆಶಯಗಳಿಂದ ವಂಚಿತಗೊಂಡು ಆದಿಮಸ್ಥಿತಿಯ ಆಚರಣೆಗಳನ್ನು ದಾಟಿ ಮುಖ್ಯವಾಹಿನಿಯ ಅಲೆಗೆ ಒಳಗೊಂಡ ಕುಣಬಿ ಸೀಮಾದೈವದ ದಾರುಣತೆಯನ್ನು ಎರಡು ದಶಕದಲ್ಲಿ ಕಣ್ಣೆದುರೇ ಘಟನೆಗಳನ್ನು ದಾಖಲು ಮಾಡಿಕೊಳ್ಳುವ 'ಮೂಕ ಸಾಕ್ಷಿಯ' ಸಂದರ್ಭ ಸಂಶೋಧಕನಿಗೆ ಒದಗಿ ಬಂದಿದೆ.

**ದೇವಗತ**

ಬಹಳ ಹಿಂದೆ ಗೋವಾದಿಂದ ಕರ್ನಾಟಕದ ಜೋಯಿಡಾ ಭಾಗಕ್ಕೆ ಕುಣಬಿ ಪೂರ್ವಜರು ನಡೆದುಕೊಂಡು ಬಂದದಾರಿಯನ್ನು 'ದೇವಗತ'ವೆಂದು ಕರೆಯುತ್ತಾರೆ. ಉದಾಹರಣೆಗೆ ಗೋವಾ 'ಕಾಜರಾ' ಗ್ರಾಮಮೂಲದಿಂದ ಇಲ್ಲಿಗೆ ವಲಸೆ ಬಂದ ಕುಣಬಿಗಳು ಜೋಯಿಡಾ ತಾಲ್ಲೂಕಿನ ಅನೇಕ ಕುಳಾವಿಗಳನ್ನು ನಿರ್ಮಿಸಿಕೊಂಡರು. ಅವುಗಳಲ್ಲಿ ಕರಂಬಾಳೆ, ಮೈನೊಳ, ಕಾರ್ಟೊಳಿ, ಮೂಡಿಯೇ, ಅಣಸಿ, ಡೇರಿಯೆ, ಪೈಸೊಡ ಮುಂತಾದ ಕುಳಾವಿಯ ಕುಣಬಿ ಪೂರ್ವಿಕರು ತಾವು ಗೋವಾ ಮಾರ್ಗದಿಂದ ಬರುವಾಗ ತಮ್ಮ ದೈವಗಳನ್ನು ಹೊತ್ತು, ಇಳಿಸಿ, ಪೂಜೆ ಮಾಡಿದ ಮಾರ್ಗದ ದಾರಿಗೆ ದೇವಗತವೆಂದು ಕರೆಯುತ್ತಾರೆ. ತಮ್ಮ ಪೂರ್ವಿಕರು ನಡೆದುಬಂದ ದಾರಿ ಎಂಬ ಕಾರಣಕ್ಕೆ ಬೇರೆ ಬೇರೆ ಹಬ್ಬ ಜಾತ್ರೆಗಳ ಸಂದರ್ಭಗಳಲ್ಲಿ ವಿಶೇಷ ಪೂಜೆ ಸಲ್ಲಿಸಿ ಕೋಳಿಯ ಬಲಿಯನ್ನು ಕೊಡಲಾಗುತ್ತದೆ.

**ಮಿಟಪೇರಜೆ ಮತ್ತು ಕುಣಬಿ ಮೂಲ**

ಮಿಟಪೇರಜೆ ಎಂದರೆ ಉಪ್ಪು ಚೆಲ್ಲುವುದು ಎಂದರ್ಥವಿದೆ. ಗೋವಾ ಭಾಗದಿಂದ ಕರ್ನಾಟಕಕ್ಕೆ ಯಾವಾಗ ಮತ್ತು ಯಾವ ಕಾರಣಗಳಿಗಾಗಿ ಜೋಯಿಡಾ ತಾಲ್ಲೂಕಿಗೆ ವಲಸೆ ಬಂದರೋ ಗೊತ್ತಿಲ್ಲ. ಬಹುಶಃ ಪೋರ್ಚುಗೀಸರು ಗೋವಾಕ್ಕೆ ಪ್ರವೇಶವಾದ ನಂತರ ಅವರು, ಕ್ರೈಸ್ತಧರ್ಮಕ್ಕೆ ಬಲವಂತವಾಗಿ ಮತಾಂತರ ಮಾಡುವ ಬಲಪ್ರಯೋಗದ ಭಾಗವಾಗಿ ಕುಣಬಿಗಳು ಇಲ್ಲಿಗೆ ವಲಸೆ ಬಂದರೆಂದು ಊಹಿಸಬಹುದಾಗಿದೆ ಅಥವಾ ವಲಸೆ ಪ್ರವೃತ್ತಿಯ ಸಮುದಾಯ ಕುಣಬಿಯಾದ್ದರಿಂದ ಪ್ರವೃತ್ತಿಯ ಮಾರ್ಗ ಇರದಿರಬಹುದಾಗಿದೆ. ಹೀಗೆ ವಲಸೆ ಬರುವ ನಿರ್ಧಾರ ಮಾಡಿದ ಕುಣಬಿಗಳು ಮತ್ತೊಮ್ಮೆ ಮೂಲಗ್ರಾಮಗಳಿಗೆ ಬರುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಉಪ್ಪು ಚೆಲ್ಲಿ ಬರುವ ಪ್ರಕ್ರಿಯೆಯೇ ಮಿಟಪೇರಜೆ.

ಉಪ್ಪು ಚೆಲ್ಲುವುದು ಎಂದರೆ ಸಂಬಂಧ ಕಡಿದು ಹಾಕುವುದು ಎಂದರ್ಥ ಗೋವಾದಿಂದ ಉಪ್ಪು ಚೆಲ್ಲಿ ಬಂದ ಕುಟುಂಬಗಳಾವುವು ಪುನಃ ಗೋವಾದ ತಮ್ಮ ಮೂಲ ಸ್ಥಾನಗಳಿಗೆ ಹೋಗಿಲ್ಲ. ಉದಾಹರಣೆಗೆ ಗೋವಾದ ಕಾಜರಾ ಭಾಗದಿಂದ ಬಂದ ತೆಲೂಲಿ ಜನ ಕಾಜರಾಕ್ಕೆ ಎಂದೂ ಹೋಗಿಲ್ಲ. ಈ ಕುಣಬಿಗಳು ದೇವರಿಗೆ ಹೇಳಿಕೆ ಮಾಡುವಾಗ "ಕಾಜರ ಭೂಮಕಾ ಪಾಟೆಗಾಡುವ್ ತೆಲೊನ್ಸ ರಾಬಿ ಭೂಮಿಕಾ ಜೊಡಲೆಲ" ದೈವ ಮುಂದೆ ಬರಬೇಕೆಂದು ದೇವರಿಗೆ ಹೇಳಿಕೆ ಮಾಡುವಾಗ ಅಲ್ಲಿಂದ ಶಬ್ದ(ಆದೇಶ) ಪಡೆಯಲಾಗುತ್ತದೆ. ಗೋವಾದ ಗಾವಡಗಿರಿ ಮಲ್ಲಿಕಾರ್ಜುನ ದೇವರಿಗೆ ಸಂಬಂಧಿಸಿದ ಕುಟುಂಬಗಳು ಕಾಟೇಲ್, ಹೆಣಕೊಳ್ ಗ್ರಾಮಗಳಲ್ಲಿವೆ. ಇವರು ಮಿಟಪೇರಜೆ ಅಂದರೆ ಉಪ್ಪು ಚೆಲ್ಲಿ ಬಂದಿಲ್ಲವಾದ್ದರಿಂದ ಈ ಜನ ಸೀಗೋ ಹಬ್ಬದ ಸಂದರ್ಭದಲ್ಲಿ ಗೋವಾದ ಗಾವಡಗಿರಿ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿ ಬರುವ ಪ್ರತೀತಿ ಇದೆ. ಇದೇ ರೀತಿ ಕುರಾವಲಿ, ಗುಂಡಾಳಿ, ಕೊಂದರ್, ಭರಾಕಿ, ಕುಳಾವಿಯ ಜನಗಳ ತಮ್ಮ ಪೂರ್ವ ಗೋವಾ ಮೂಲಕ ಹಳ್ಳಿಯ ದೈವಗಳಿಗೆ ಬೇಟಿ ನೀಡುವ ಪದ್ಧತಿಯನ್ನು ಗಮನಿಸಿದಾಗ ಕುಣಬಿಗಳು ಗೋವಾ ಭಾಗದಿಂದ ಬಹಳ ಹಿಂದೆ ವಲಸೆ ಬಂದು ಇಲ್ಲಿ ನೆಲೆಸಿದ್ದಾರೆ ಹಾಗೂ ಇಲ್ಲಿ ಬಂದ ನಂತರವೇ ಬೇರೆ ಬೇರೆ ಕುಳಾವಿಯ ಮತ್ತು ಕಾಡಿನ ಭಾಗಗಳಲ್ಲಿ ಪರಸ್ಪರ ಕಾಡಿನ ಸಂಪನ್ಮೂಲಗಳ ಹಂಚಿಕೆ ಮತ್ತು ದೈವೋಪಾಸನೆಗಳ ಸಲುವಾಗಿ ಗಡಿರೇಖೆಗಳನ್ನು ಗುರ್ತಿಸಿಕೊಂಡು ಸೀಮಾಪದ್ಧತಿಯ ನಿರ್ಮಾಣವನ್ನು ಮಾಡಿಕೊಂಡಿರ ಬಹುದೆಂದು ಮಿಟಪೇರಜೆ ಪ್ರಕ್ರಿಯೆಯಿಂದ ಊಹಿಸಬಹುದಾಗಿದೆ. ಕುಣಬಿಗಳು ಪಂಚಭೂತ ಗಳಲ್ಲಿ ಹೆಚ್ಚಿನ ನಂಬಿಕೆ ಹೊಂದಿರುತ್ತಾರೆ. ಪಂಚಭೂತಗಳ ನಂಬಿಕೆಯ ಆಧಾರವಾಗಿಟ್ಟುಕೊಂಡೇ ಸೀಮಾಗಡಿ ಮತ್ತು ದೈವಗಳ ಸ್ಥಾಪನೆಯಾಗಿರಬಹುದಾಗಿದೆ.

**ಕುಣಬಿಯರ ಹಬ್ಬಗಳಲ್ಲಿ ಸೀಮಾದೈವಗಳು**

ಕುಣಬಿಯರ ಪ್ರತಿಯೊಂದು ಹಬ್ಬ, ಜಾತ್ರೆ, ದೈವಾಚರಣೆಗಳಲ್ಲಿ ಸೀಮಾದೈವ ಮತ್ತು ಯಾವುದೇ ಕಾರ್ಯ ಜರುಗುವಾಗ ಸೀಮಾದೈವಗಳಿಗೆ ಹೇಳಿಕೆ ಮಾಡದೇ, ಕೋಳಿ ಬಲಿ ಕೊಟ್ಟು ಪೂಜೆ ಸಲ್ಲಿಸಿ ಅನುಮತಿ ಪಡೆಯದೇ ಯಾವುದೇ ಶುಭಕಾರ್ಯಗಳಾಗಲಿ ಅಥವಾ ಯಾವುದೇ ತರಹದ ನಡೆಯಾಗಲೀ ಜರುಗುವುದಿಲ್ಲ.

**ಯುಗಾದಿ**

ಹೊಸ ವರ್ಷದ ಯುಗಾದಿ ಕುಣಬಿ ಹಬ್ಬಗಳಲ್ಲಿ ಮೊದಲೇ ಹಬ್ಬ. ಮೂರು ದಿವಸದ ಆಚರಣೆಯಲ್ಲಿ ಮೊದಲ ದಿನ ಸೀಮಾದೈವಗಳಿಗೆ ಕೋಳಿ ಬಲಿ ನೀಡಿ ರಾಗಿ ಬಿತ್ತನೆಗೆ ಚಾಲನೆ

ನೀಡಲಾಗುತ್ತದೆ. (ಮೂಲ ಮುಟ್ಟೆ) ಮೇಟಿ ಹೊಡೆಯಲಾಗುತ್ತದೆ. ಹೊಲ ಗದ್ದೆಗಳಿಗೆ ಗೊಬ್ಬರ, ಸೊಪ್ಪನ್ನು ಹಾಕಲಾರಂಭಿಸಲಾಗುತ್ತದೆ. ಸೀಮಾ ಕುಲದೈವಗಳಿಗೆ ಪೂಜೆ ಮಾಡಿ ವಾಡಿ ತುಂಬಲಾಗುತ್ತದೆ. ಅಂದು ಕೆಲವು ಕುಳಾವಿಗಳಲ್ಲಿ ಸೀಮಾದೈವ 'ಪಾಯಕ'ದ ವಿಶೇಷ ಪೂಜೆ ಸಲ್ಲಿಸಲಾಗುತ್ತದೆ. ಕಳಸಾಯಿ ಕುಳಾವಿಯಲ್ಲಿ ಸೀಮಾದೈವ ಪಾಯಕದ ಜಾತ್ರೆಯನ್ನು ನೆರವೇರಿಸಲಾಗುತ್ತದೆ. ಯುಗಾದಿಯ ಎರಡನೇ ದಿನ ತನ್ನ 'ನಷ್ಟ ಪಾಡವೇ ದಿವಸವೆಂದು' ಕರೆಯುತ್ತಾರೆ. ಅಂದು ಯಾರೂ ಯಾವ ಕೆಲಸವನ್ನೂ ಮಾಡುವುದಿಲ್ಲ. ನೆಂಟರಿಷ್ಟರ ಜೊತೆಗೂಡಿ ಕುಳಾವಿಯಿಂದ ಹೊರಗೆ ಕಾಡಿನ ದಡದಲ್ಲಿ ಅಡುಗೆ ಮಾಡಿ ಊಟ ಮಾಡಿ ಬರುತ್ತಾರೆ. ನದಿಯಲ್ಲಿ ಮೀನು, ಏಡಿ ಮತ್ತು ಕಾಡುಪ್ರಾಣಿಗಳ ಬೇಟೆಯಾಡಿ ಅಡುಗೆ ಮಾಡಿ ಊಟ ಮಾಡುವುದು ನಷ್ಟಪಾಡವೇ ವಿಶೇಷವಾಗಿದೆ.

ಯುಗಾದಿಯ ಮೂರನೇ ದಿನ ವರ್ಷತೊಡೋ ಅಂತ ಆಚರಣೆ ಮಾಡುತ್ತಾರೆ. ಅಂದು ಇಡೀ ವರ್ಷ ಮಾಡಬೇಕಾದ ಒಟ್ಟಾರೆ ಕಾರ್ಯಕ್ರಮಗಳ ಬಗ್ಗೆ ಪ್ರಮುಖರ ಜೊತೆಗೂಡಿ ಯೋಜನೆಗಳನ್ನು ರೂಪಿಸಲಾಗುತ್ತದೆ.

### ಕುಣಬಿ ಹಬ್ಬಗಳಲ್ಲಿ ಸೀಮಾದೈವಗಳು

ಬುಡಕಟ್ಟು ಸಂಸ್ಕೃತಿಯಲ್ಲಿ ವಾಸಿಸುವ ಕುಣಬಿಗಳು ತಮ್ಮದೇ ಆದ ಸಂಸ್ಕೃತಿಯಲ್ಲಿ ಅನೇಕ ಹಬ್ಬಗಳನ್ನು ಆಚರಿಸಿಕೊಂಡು ಬಂದಿದ್ದಾರೆ. ವರ್ಷದ ಪ್ರಾರಂಭದಲ್ಲಿ ಯುಗಾದಿ ಹಬ್ಬವನ್ನು ಆಚರಿಸುತ್ತಾರೆ. ಯುಗಾದಿ ಹಬ್ಬವನ್ನು ಮೂರು ದಿವಸ ಆಚರಣೆ ಮಾಡಲಾಗುತ್ತದೆ. ಪಾತಿಯೊ, ನಷ್ಟ ಪಾಡಿಯೊ ವರ್ಸತಡೊ, ಅಂತ ಹೇಳಿ ಮೂರು ದಿನ ಆಚರಣೆ ಮಾಡಲಾಗುತ್ತಿದೆ. ಪಾಡಿಯೊದಿನ ಹೊಸವರ್ಷದ ಆಚರಣೆ ಮಾಡಲಾಗುತ್ತದೆ. ಈ ದಿನ ಕೋಳಿಯನ್ನು ಕತ್ತರಿಸಲಾಗುತ್ತದೆ. ನಂತರ ಮಾಲ್ ಮುಚ್ಛೈಮ ಹಾಕಲಾಗುತ್ತದೆ. ಮೂಲ ಮುಟ್ಟೆ ಅಂದರೆ ರಾಗಿ ಭತ್ತದ ಬಿತ್ತನೆ ಮಾಡಲು ಇಂದಿನಿಂದಲೇ ಚಾಲನೆ ನೀಡಲಾಗುತ್ತದೆ. ಮೇಟ ಹೊಡೆಯಲಾಗುತ್ತದೆ. ಅಂದರೆ ಇವತ್ತಿನಿಂದಲೇ ಹೊಲದಲ್ಲಿ ಕೆಲಸ ಮಾಡಬಹುದಾಗಿದೆ. ಹೊಲಗದ್ದೆಗಳಿಗೆ ಗೊಬ್ಬರ ಸೊಪ್ಪು ಹಾಕಲೂ ಪ್ರಾರಂಭಿಸಲಾಗುತ್ತದೆ. ಅಂದು ಹೊಸ ಹಲಸಿನ ಕಾಯಿ ತಂದು ಪೂಜೆ ಮಾಡಿ ತಿನ್ನಲು ಪ್ರಾರಂಭಿಸಲಾಗುತ್ತದೆ. ಎಲ್ಲರ ಮನೆಯಲ್ಲಿ ಮೂರನೆಯ ದಿನ ಕುಲದೇವರಿಗೆ ಪೂಜೆ ಮಾಡಿ 'ವಾಡಿ' ತುಂಬಲಾಗುತ್ತದೆ. ಯುಗಾದಿಯ ದಿನ ಮನೆಯಲ್ಲಿ ಕಡ್ಡಾಯವಾಗಿ ಪಾಯಸ ಮಾಡಲಾಗುತ್ತದೆ. ಸಂಜೆ ಶಿವಯೊ ತೆಗೆಯಲಾಗುತ್ತದೆ. ಶೆವಯೋಂದಿಗೆ ಕೊಬ್ಬರಿಯ 'ಆಪರೊಪ' ಮಾಡಲಾಗುತ್ತದೆ. ನೆಂಟರನ್ನು ಕರೆಯಿಸಿ ಊಟ ಮಾಡಲಾಗುತ್ತದೆ. ಅನೇಕ ಗ್ರಾಮಗಳಲ್ಲಿ ಅಂದು ಜಾಗರಣೆಯನ್ನು ಕೂಡ ಮಾಡಲಾಗುತ್ತದೆ.

**ಗಡಿವೈಲೆ ಮಾತನ್ ಹಬ್ಬ**

ಗಡಿವೈಲೆ ಮಾತನ್ ಇದು ಗ್ರಾಮದ ಸುತ್ತಲೂ ಇರುವ ಗಡಿದೇವರನ್ನು ಭೂಯಭಾಗ ದೇವರು ಹಾಗೂ ಕುಲದೇವರನ್ನು ಪೂಜಿಸುವ ಹಬ್ಬ ಯುಗಾದಿಯ ನಂತರ ವರ್ಷದ ಎರಡನೆಯ ಹಬ್ಬವಾಗಿದೆ. ಗಡಿ ಅಂದರೆ ಸೀಮೆಯ ದೇವರನ್ನು ಜಾಗ್ರತ ಮಾಡುವ ಹಬ್ಬವಾಗಿದೆ. ಮರದ ಎಲೆಯನ್ನು ಕಾಡಿನಿಂದ ತಂದು ಈ ಎಲೆಯ ಮೇಲೆ ದೇವರಿಗೆ ವಾಡಿ ತುಂಬಲಾಗುತ್ತದೆ. ಕರಂಬಳ ಮರ ಪೂಜನೀಯ ಮರವಾಗಿರುತ್ತದೆ. ಈ ಮರದ ಹಣ್ಣುಗಳನ್ನು ಕಾಡುಪ್ರಾಣಿಗಳು ತಿನ್ನುತ್ತವೆ. ಈ ಮರಕ್ಕೆ ಬರುವ ಹಣ್ಣಿನ ಮೇಲೆ ಕುಣಬಿಗಳು ಪ್ರತಿ ವರ್ಷ ಮಳೆಯನ್ನು ನಿರ್ಧರಿಸುತ್ತಾರೆ. ಈ ಕರಂಬಳ ಮರದ ಟೊಂಗೆಗೆ ತುದಿಯವರೆಗೆ ಹಣ್ಣುಗಳು ಬಂದರೆ ಮಳೆ ಪ್ರಾರಂಭದಿಂದ ಅಂತ್ಯದವರೆಗೆ ಸಮನಾಗಿ ಬೀಳುತ್ತದೆ ಎಂದು ನಂಬಲಾಗುತ್ತದೆ.

ಈ ಕರಂಬಳ ಮರದ ಎಲೆಯು ದೊಡ್ಡದಾಗಿ ಬರುತ್ತಿದ್ದರಿಂದ ಇದು ಊಟ ಮಾಡಲು ಬಳಸಲಾಗುತ್ತದೆ. ಗಡಿವೈಲೆ ಮಾತನ್ ದಿನ ಬುಧವಾರ ಅಥವಾ ರವಿವಾರದಂದು ಹಾಕಲಾಗುತ್ತದೆ. ಈ ದಿನ ಮನೆಯಲ್ಲಿ ಹಬ್ಬದ ವಾತಾವರಣ ಇರುತ್ತದೆ. ಕರಂಬಳ ಎಲೆಯನ್ನು ಬೆಳೆಸಿ ಹೋಗಿ ಕಾಡಿನಿಂದ ತರಲಾಗುತ್ತದೆ. ನಂತರ ಮಿರಾಶಿ ಈ ಎಲೆಯ ಮೇಲೆ ಭೂಮಭಾಗ ದೇವರಿಗೆ ಈ ಎಲೆಯ ಮೇಲೆ ಅಕ್ಷತೆ ಹಾಗೂ ಚೊರು(ಅನ್ನ) ಇಡಲಾಗುತ್ತದೆ. ನಂತರ ಗಡಿದೇವರಿಗೆ ಅಂದರೆ ಗ್ರಾಮದ ಸುತ್ತಲೂ ಇರುವ ಸೀಮೆಯ ದೇವರಿಗೆ ಈ ಕರಂಬಳ ಎಲೆಯ ಮೇಲೆ ವಾಡಿ ತುಂಬಲಾಗುತ್ತದೆ. ನಂತರ ಮನೆ ದೇವರು ಈ ಕರಂಬಳ ಎಲೆಯ ಮೇಲೆ ವಾಡಿ ಇಡಲಾಗುತ್ತದೆ. ಅಂದು ಕರೆಯಿಸಿದ ನೆಂಟರಿಗೆ ಈ ಕರಂಬಳ ಎಲೆಯ ಮೇಲೆ ಊಟ ಬಡಿಸಲಾಗುತ್ತದೆ. ನಂತರ ಮನೆಯವರೆಲ್ಲರು ಅಂದು ಈ ಕರಂಬಳ ಎಲೆಯ ಮೇಲೆಯೇ ಊಟ ಮಾಡುತ್ತಾರೆ.

ಝುರಿ ನೀರು ಕೂಡ ಈ ಮಾತನ್ ದಿನ ಉಪಯೋಗಿಸಲಾಗುತ್ತದೆ. ಮಿರಾಶಿಯ ಪತ್ನಿ ಒಂದು ಬೆಳಿಗ್ಗೆ ಸ್ನಾನ ಮಾಡಿಕೊಂಡು ಗ್ರಾಮದ ಹತ್ತಿರ ಹರಿಯುವ ಝುರಿ ನೀರಿನಿಂದ ಕೊಡ ತುಂಬಿ ತರಲಾಗುತ್ತದೆ. ಮಾತನ್ ದಿನ ಈ ಝುರಿ ನೀರಿನಿಂದಲೇ ದೇವರ ಅಡಿಗೆ ಮಾಡಲಾಗುತ್ತದೆ. ಈ ಕರಂಬಳ ಎಲೆಯ ಮೇಲೆ ವಾಡಿ ಇಡಲಾಗುತ್ತದೆ. ಊಟ ಮಾಡಲಾಗುತ್ತದೆ. ದೇವಕೇಳ, ರಾನಕೇಳ, ಏಕೋದ, ಕರಂಬಳ ಚಾಂದೊ ಖುಂಬಿ ವಿಳಾಸ್ ಎಲೆಯ ಊಟ ಮಾಡಲು ಮಾತನ್ ಆದ ನಂತರದ ಬಳಕೆ ಮಾಡಲಾಗುತ್ತದೆ.

**ಆಶಾಡಿ ಏಕಾದಶಿ**

ಆಶಾಡಿ ಏಕಾದಶಿಯನ್ನು ಬುಡಕಟ್ಟು ಕುಣಬಿ ಸಾಂಪ್ರದಾಯದಂತೆ ವಿಜೃಂಭಣೆಯಿಂದ ಆಚರಣೆ ಮಾಡಲಾಗುತ್ತದೆ. ಆಶಾಡ ಏಕಾದಶಿಗೆ ಹಲಸಿನ ಕಾಯಿಯ ಫರೆ, ಹಣ್ಣಾದ

ಹಲಸಿನ ಘರೆ, ಬಿಕಣಾ ಪಾಯಸ್ ಅಂದರೆ ಕೊಂಕಣಿ ಭಾಷೆಯಲ್ಲಿ ಫಳಾಸ ಕಾಂಗು ಫಳಾಸ ಮಾಡಲಾಗುತ್ತದೆ. ಈ ಆಶಾಡಿ ಏಕಾದಶಿಯನ್ನು ಫಣಸಾ(ಹಲಸು) ಏಕಾದಶಿಯಂತಲೂ ಕರೆಯಲಾಗುತ್ತದೆ. ಈ ಏಕಾದಶಿಗೆ ಉಪವಾಸ ಮಾಡಲಾಗುತ್ತದೆ. ಅಂದು ಎಲ್ಲರೂ ಈ ಫಲಾಹಾರವನ್ನೇ ತಿನ್ನುತ್ತಾರೆ. ಅಂದು ಅನ್ನ ಊಟ ಮಾಡುವುದಿಲ್ಲ. ಆಶಾಡಿ ಏಕಾದಶಿಯಂದು ಗದ್ದೆ ಕೆಲಸ ಮಾಡುವುದಿಲ್ಲ.

ಆಶಾಡಿ ಏಕಾದಶಿಯಂದು ಮಿರಾಶಿ ಕುಲದೇವರಿಗೆ ಈ ಎಲ್ಲಾ ತರದ ಪದಾರ್ಥವನ್ನು ದೇವರಿಗೆ ಇಡಲಾಗುತ್ತದೆ. ದೇವರಿಗೆ ಇಟ್ಟ ಈ ಘರೆ, ಫಳಾರವನ್ನು(ತಿಂಡಿ)ಎಲ್ಲರೂ ದೇವರ ಮನೆಯಲ್ಲಿ ಕುಳಿತು ತಿನ್ನುತ್ತಾರೆ.

ಆಶಾಡ ಏಕಾದಶಿಯ ಇನ್ನೊಂದು ಮಹತ್ವದ ಘಟ್ಟವೆಂದರೆ ಈ ಏಕಾದಶಿ. ಇದಾದ ನಂತರ ಕುಣಬಿಗಳಲ್ಲಿ ಮದುವೆ ಮಾಡುವುದಿಲ್ಲ. ಅಂದು ವರ ವಧುವಿನ ಮನೆಗೆ ಕಡ್ಡಾಯವಾಗಿ ಹೋಗಬೇಕು. ಅಂದು ವರನಿಗೆ ಪೂಜೆ ಮಾಡಲಾಗುತ್ತದೆ. ಮದುವೆಯಾದ ಹುಡುಗಿಯವರಿಗೆ ಈ ಆಶಾಡ ಏಕಾದಶಿ ಹಬ್ಬದ ವಾತಾವರಣ ತರುತ್ತದೆ. ವರನು ತನ್ನ ಧಡೊದೊಂದಿಗೆ ವಧುವಿನ ಮನೆಗೆ ಹೋಗುತ್ತಾನೆ. ಅಂದು ಕಂಬಳಿ, ಛತ್ರಿ, ಹೊಸಬಟ್ಟೆಯನ್ನು ವರನಿಗೆ ಕೊಡಲಾಗುತ್ತದೆ. ವಧುವಿಗೆ ಕಂಬಳಿ ಕೊಲ್ಲೆ, ಕತ್ತಿ, ಕೊಮಿಲೆ(ಭತ್ತ ಕಟ್ಟ ಮಾಡುವ ಕೊಯಿಲೆ) ಹೊಸ ಬಟ್ಟೆಯನ್ನು ಅಂದು ನೀಡಲಾಗುತ್ತದೆ.

ಮಾರನೆಯ ದಿನ ದ್ವಾದಶಿಯನ್ನು ಆಚರಣೆ ಮಾಡಲಾಗುತ್ತದೆ. ಅಂದು ಕುಲದೇವರಿಗೆ ಅಕ್ಷತೆ ಇಟ್ಟು ಪೂಜೆ ಮಾಡಲಾಗುತ್ತದೆ. ನೆಂಟರಿಷ್ಟರನ್ನು ಕರೆಯಿಸಿ ಪೂಜೆ ಮಾಡಲಾಗುತ್ತದೆ. ವರನು ಏಕಾದಶಿ ದ್ವಾದಶಿ ಎರಡು ದಿವಸ ವಧುವಿನ ಮನೆಯಲ್ಲಿ ಇರಬೇಕಾಗುತ್ತದೆ. ಈ ಎರಡು ದಿನದ ಪೂಜಾ ಕಾರ್ಯದಲ್ಲಿ ವರನು ಸಂಪೂರ್ಣವಾಗಿ ಪಾಲ್ಗೊಳ್ಳುತ್ತಾನೆ. ಆಶಾಡಿ ಏಕಾದಶಿ ಮತ್ತು ದ್ವಾದಶಿಯಂದು ಸೀಮೆಯ ದೇವರು ಭೂಮಭಾಗ ದೇವರುಗಳಿಗೆ ಪೂಜೆ ಮಾಡುವ ಪದ್ಧತಿ ಇರುವುದಿಲ್ಲ. ಏಕಾದಶಿಗೆ ಕುಲದೇವರಿಗೆ ಮಾತ್ರ ಪೂಜೆ ಮಾಡಲಾಗುತ್ತದೆ. ದ್ವಾದಶಿಯಂದು ವರನು ತನ್ನ ಪತ್ನಿಯೊಂದಿಗೆ ಸ್ವಮನೆಗೆ ಹೋಗುತ್ತಾನೆ. ಮನೆಯವರೆಲ್ಲರೂ ಪಾಟಪಾವಲಾ ಅಂದರೆ ವಧು ವರನಿಗೆ ಮನೆಯಿಂದ ಸ್ವಲ್ಪ ದೂರದವರೆಗೆ ಕಳುಹಿಸಲು ಬರುವುದನ್ನು ಪಾಟಪಾವಲಾ ಅಂತಲೂ ಕರೆಯಲಾಗುತ್ತದೆ. ವಧು ತಾಯಿಯ ಮನೆಯಿಂದ ಗಂಡನ ಮನೆಗೆ ಹೋಗುವಾಗ ಅಳುತ್ತಾ ಹೋಗುತ್ತಾಳೆ. ತಾಯಿ ಮನೆಯವರಿಗೂ ಹಿಂದೆ ತಿರುಗಿ ನೋಡಲಾಗುತ್ತದೆ. ಹುಡುಗಿ ಮನೆಯಿಂದ ಏಕಾದಶಿ ದ್ವಾದಶಿ ಮುಗಿಸಿ ಗಂಡನ ಮನೆಗೆ ಹೋಗುವ ಹುಡುಗಿಯ ಭತ್ತದ ವಾಲೊ, ಬಿಕಣಾ, ಕಾಯಲಿತತಯ್ಯೊ, ಘರ್ನ್ಯಾಚೊ ಬಾಕರಿ ವರಯಾಚ್ಯೊಲಾಯೊ ಹಲಸು ಭೆಟ ಅಂತ ಕೊಡಲಾಗುತ್ತದೆ. ಶ್ರಾವಣ ಮಾಸವನ್ನು

ಕುಣಬಿಗಳು ಸಂಪ್ರದಾಯಬದ್ಧವಾಗಿ ಮತ್ತು ಇದನ್ನು ವಿಶಿಷ್ಟವಾಗಿ ಆಚರಣೆ ಮಾಡುತ್ತಾರೆ. ಶ್ರಾವಣ ಮಾಸವನ್ನು ಆಚರಣೆ ಮಾಡಲು ಕುಣಬಿಗಳು ತಮ್ಮದೇ ಆದ ಕಾರಣವನ್ನು ನೀಡುತ್ತಾರೆ. ಕುಣಬಿಗಳು ಶಿವ ಮತ್ತು ಶಕ್ತಿಯ ಆರಾಧಕರು, ಕುಣಬಿಗಳಲ್ಲಿ ಸಿದ್ಧನಾಥ ಮಲ್ಲಿಕಾರ್ಜುನ, ಕಾಶಿವಿಶ್ವನಾಥ, ರಾಮಲಿಂಗೇಶ್ವರ, ಸಿದ್ಧೇಶ್ವರ, ಗಳಗೇಶ್ವರ, ವಾಚಿಮಾರ್ಗೇಶ್ವರ, ಮಹಾದೇವ ಹೀಗೆ ಶಿವ ದೇವರನ್ನು ಪೂಜಿಸಿದರೆ, ಗವಳಾ ದೇವಿ ಚಾಪಲಾ ದೇವಿ, ಸಾತೇರಿ ದೇವಿ ಹೀಗೆ ದೇವಿಯನ್ನು ಕೂಡ ಪೂಜಿಸಲಾಗುತ್ತದೆ. ಹಾಗಾಗಿ ಕುಣಬಿಗಳು ಶಿವ ಮತ್ತು ಪಾರ್ವತಿಯ ಅಥವಾ ಶಕ್ತಿ ದೇವಿಯ ಆರಾಧಕರಾಗುತ್ತಾರೆ. ಬುಡಕಟ್ಟುಗಳು ಸಾಮಾನ್ಯವಾಗಿ ಶಿವ ಮತ್ತು ಶಕ್ತಿ ದೇವರನ್ನು ಆರಾಧಿಸುವುದರೊಂದಿಗೆ ಪಂಚಭೂತ, ಪರಿಸರ, ಕಾಡು, ಕಲ್ಲು, ಬಂಡೆ, ಪರ್ವತವನ್ನು ಕೂಡ ಪೂಜೆ ಮಾಡಿಕೊಂಡು ಬಂದಿರುತ್ತಾರೆ.

ಶ್ರಾವಣ ಮಾಸದಲ್ಲಿ ಅತಿ ಮುಖ್ಯವಾಗಿ ಬೇಟೆ ಆಡುವುದು ಸಂಪೂರ್ಣ ನಿಷಿದ್ಧವಾಗಿರುತ್ತದೆ. ಏಡಿ, ಮೀನು ಕೂಡ ಹಿಡಿಯುವುದಿಲ್ಲ. ಒಂದು ತಿಂಗಳು ಕಾಲ ಬೇಟೆ ನಿಷೇಧಿಸಿರುವುದಿರಂದ ಕಾಡುಪ್ರಾಣಿಗಳ ಸಂತತಿ ಉಳಿಯಲು ಹೆಚ್ಚು ಸಹಕಾರಿಯಾಗಿದೆ. ಇದೂ ಕೂಡ ನಿಯಮವಾಗಿದೆ. ಈ ಶ್ರಾವಣ ಮಾಸದಲ್ಲಿ ಯಾರೂ ಮಾಂಸವನ್ನು ಸೇವಿಸುವುದಿಲ್ಲ. ಕಾಡುನಾಯಿಗಳು ಬೇಟೆ ಆಡಿ ಸಿಕ್ಕರೂ ಕೂಡ ತಿನ್ನದೇ ಅದನ್ನು ಒಣಗಿಸಿ ಸಂಗ್ರಹ ಮಾಡಿ ಇಡಲಾಗುತ್ತಿತ್ತು. ಶ್ರಾವಣ ಮಾಸ ಮುಗಿದ ನಂತರ ಮಾಂಸ, ಮೀನು, ಏಡಿ ತಿನ್ನಲಾಗುತ್ತದೆ. ಶ್ರಾವಣ ತಿಂಗಳಲ್ಲಿ ಏಡಿ, ಮೀನು, ಮಾಂಸ ತಿನ್ನದೇ ಇರುವುದು ಮತ್ತು ಅದನ್ನು ಕುಣಬಿ ಕಾನೂನಿಗೆ ರೂಪ ನೀಡಬೇಕಾದ ಅಗತ್ಯವಿದೆ. ಕಾರಣ ಪ್ರಾಣಿಗಳು ಮತ್ತು ಪರಿಸರ ಉಳಿಯಬೇಕಾಗಿದೆ. ಶ್ರಾವಣ ಮಾಸದಲ್ಲಿ ಶಿವ ದೇವಾಲಯಗಳಲ್ಲಿ ಭಜನೆ ಕೀರ್ತನೆ ಮಾಡಲಾಗುತ್ತದೆ.

**ಬಾರ್ಸಿ ಹಬ್ಬ**

'ನಯೆ ಪರಬ' ಅಂದರೆ ವರ್ಷದ ಮೊದಲ ಹಬ್ಬವೇ ಆಗಿದೆ. ಈ ಹಬ್ಬಕ್ಕೆ ಬುಡಕಟ್ಟು ಕುಣಬಿಗಳು ತಾವು ಬೆಳೆದ ಗೆಡ್ಡೆ ಗೆಣಸುಗಳು ಕಾಡಿನಲ್ಲಿ ಸಿಗುವ ಗೆಡ್ಡೆ ಗೆಣಸುಗಳನ್ನು ತಂದು ಪೂಜೆ ಮಾಡಲಾಗುತ್ತದೆ. ಗೆಡ್ಡೆ ಗೆಣಸುಗಳಾದ ಕೋನ, ನಾಗರಕೋನ, ಮುಳ್ಳಿ ವನನಲ್ಲಿ ಬೆಳೆಯುವ ಕಾಟೆಕಣಂಗ, ಝುಡಾಕಣಂಗ ತವಸೆಗಳನ್ನು ಕೂಡ ತಂದರೆ ಕಾಡಿನ ಗೆಡ್ಡೆ ಗೆಣಸುಗಳಿಂದ ಪಿರಸೆ, ಫೆಗಲಾ, ಗೊಮಾಟೆ, ಮರದ ಮೇಲೆ ಬೆಳೆಯುವ ತೆರೊಮವನ್ನು ತರಲಾಗುತ್ತದೆ. ಕಾಡಿನಲ್ಲಿ ಸಿಗುವ ಕರಂಬಳ ಎಲೆಯನ್ನು ತಂದು ಆ ದಿನ ದೇವರಿಗೆ ಪೂಜೆ ನೆರವೇರಿಸಲಾಗುತ್ತದೆ. ಈ ಎಲ್ಲಾ ಪೂಜೆಯನ್ನು ಸೀಮಾದೈವಗಳಾದ ಜನ್ಮಿ, ಭಯೋಚನಾಸ್, ಚುಡುಗೋನಾಸ್, ವಾಘ್ರೋ ಮುಂತಾದ ದೈವಗಳ ಮುಂದೆ ಬಾರ್ಸಿ ಹಬ್ಬವನ್ನು ಆಚರಿಸಲಾಗುತ್ತದೆ.

ಈ ನಯಾಪರಬದಲ್ಲಿ ಮುಖ್ಯವಾಗಿ ಭತ್ತದ ಪೊಸು(ಕಟ್ಟು) ತರಲಾಗುತ್ತದೆ. ಈ ಭತ್ತದ ಪೊಸುವನ್ನು ಕುಲದೇವರ ಮನೆಯಲ್ಲಿ ತಂದು ಪೂಜೆ ಮಾಡಲಾಗುತ್ತದೆ. ಬುಡಸಮೇತ ತಂದ ಈ ಪೊಸು ಕುಲದೇವರಿಗೆ ಇಡಲಾದ ನಂತರ ಗದ್ದೆಗೆ ಉಪಯೋಗಿಸುವ ನೇಗಿಲು ಪವಾಡ, ಜುವ ಅಕ್ಕಿಗೆ ಪಾತ್ರೆಗಳಿಗೆ ಕಟ್ಟಲಾಗುತ್ತದೆ. ಈ ಸಂಪ್ರದಾಯ ಕುರಾವಳಿ ಕುಂಡಲ್ ಗ್ರಾಮಗಳಲ್ಲಿ ಇಂದಿಗೂ ಕಾಣಬಹುದಾಗಿದೆ. ಈ ಹಬ್ಬವನ್ನು ಗಡಿದೈವಗಳಾದ ಜನ್ಮಿ ಆತ್ಮಗಳು, ದೈವಗಳು ಸಮಕ್ಷಮದಲ್ಲಿ ನೆರವೇರಿಸಲಾಗುತ್ತದೆ.

"ಬಾರಸಿ ದಿವಸ" ಹೊಲದಲ್ಲಿ ಭತ್ತವನ್ನು ಕತ್ತರಿಸಿ ತರಲಾಗುತ್ತದೆ. ಇದಕ್ಕೆ 'ಪೊಸು' ಅಂತ ಕರೆಯಲಾಗುತ್ತದೆ. ಪೊಸು ಕತ್ತರಿಸುವಾಗ ಧೂಳು, ಕಂಸಾಳೆ ವಾದ್ಯಗಳು ಬಾರಿಸಲಾಗುತ್ತದೆ. ಬಂದೂಕಿನಿಂದ ಪೇಟ ಹೊಡೆಯಲಾಗುತ್ತದೆ. ಈಗ ಪಟಾಕಿ ಹಚ್ಚಲಾಗುತ್ತದೆ. ಪೊಸುವನ್ನು ಕತ್ತರಿಸಿ ಕರಿ ಕಂಬಳಿಯಲ್ಲಿ ಮಿರಾಶಿ ಶ್ರೀ ಸಿದ್ಧನಾಥ ದೇವಸ್ಥಾನ ಒಳಗೆ ಪೊಸು ಕಟ್ಟಲಾಗುತ್ತದೆ. ದೇವಸ್ಥಾನದಲ್ಲಿ ಚೋರು(ಅನ್ನ ಪ್ರಸಾದ) ಮಾಡಲಾಗುತ್ತದೆ. ಅಂದು ಬಾರಸಿಯಾದ್ದರಿಂದ ಹಿಟ್ಟಿನಿಂದ ಹಳದ ಎಲೆ ಸುತ್ತಿ ಸಣ್ಣ ಸಣ್ಣ ರೊಟ್ಟಿ ಮಾಡಲಾಗುತ್ತದೆ. ಇದನ್ನು ದೇವರಿಗೆ ಇಡಲಾಗುತ್ತದೆ. ಬಾರಸಿ ಹಬ್ಬದಲ್ಲಿ ಎಲ್ಲರೂ ಅಂದರೆ ಬುದವಂತ, ಮಿರಾಶಿಗಳು ಮತ್ತು ಗ್ರಾಮಸ್ಥರು ಎಲ್ಲರೂ ದೇವಸ್ಥಾನದ ಕಡೆ ಬರಲಾಗುತ್ತದೆ. ನಂತರ ಬುದವಂತ, ಸೀಮೆ ದೇವರು ಭೂಯಭಾಗ ದೇವರಿಗೆ ಕುಲದೇವರಿಗೆ ಹೇಳಿಕೆ ಮಾಡಿ ಖಂಡಗಳನ್ನು ನಿಲ್ಲಿಸಿ ಉತ್ತಮವಾದ ಶಿಲೆ ಬಾಲೊ ಚಡೊ ವಾಡೊ ಶಬ್ದಗಳನ್ನು ಹೇಳಿಕೆಯಲ್ಲಿ ಪಡೆಯಲಾಗುತ್ತದೆ. ನಂತರ ಭೂವಂಡಿಗೆ ಚಾಲನೆ ನೀಡಲಾಗುತ್ತದೆ. ಬುದವಂತನ ಈ ಪೊಸುವನ್ನು ಭೂಮಿಭಾಗದ ಜನ್ಮಿ ಮತ್ತು ಇತರ ಎಲ್ಲಾ ದೇವತೆಗಳಿಂದ ದೇವತೆಗೆ 'ಕೆವಣಿ' ಬಡಿಗ ಕಟ್ಟೆ ಇಡಲಾಗುತ್ತದೆ. ಈ ಕೆವಣಿ ಬಳ್ಳಿ(ವಾಯೇ)ಯಿಂದ ಸಂಪ್ರದಾಯ ಇಂದಿಗೂ ಪಾಲಿಸಿಕೊಂಡು ಬರಲಾಗಿದೆ. ಗಡಿ ಗ್ರಾಮದ ಎಲ್ಲಾ ದೇವರಿಗೆ ಈ ಪೊಸುವನ್ನು ಕಟ್ಟಲಾಗುತ್ತದೆ.

ಭೂಮಭಾಗದ ದೇವರಿಗೆ ಪೊಸು ಕಟ್ಟಲಾದ ನಂತರ ಮಿರಾಶಿ ಉಳಿದ ಪಸುವನ್ನು ಕುಲದೇವರ ಮನೆಗೆ ತರುತ್ತಾರೆ. ಕುಲದೇವರಿಗೆ ಈ ಪೊಸು ಕಟ್ಟಿದ ನಂತರ ಕಟ್ಟೆ ಕುರಾಡಿ ದಾತೆ ಅಡಿಗೆ ಪಾತ್ರೆಗಳು ಮುಖ್ಯದ್ವಾರ, ತುಳಸಿ, ಹತ್ತರಿ, ನೇಗಿಲು, ಜುವ, ವಾವರೊ, ಫಳೆ ನಿವಳೊ ಇವುಗಳಿಗೆ ಪೂಜೆ ಮಾಡಿ ಈ ಪೊಸು ಕಟ್ಟಲಾಗುತ್ತದೆ. ದನದ ಕೊಟ್ಟಿಗೆಯ ಮುಖ್ಯ ಕಂಬಕ್ಕೆ, ಮನೆಯ ಮುಖ್ಯದ್ವಾರಕ್ಕೆ ಈ ಪೊಸು ಕಟ್ಟಲಾಗುತ್ತದೆ. ಪೊಸುವಿನ ಸಣ್ಣ ತುಂಡು ಕೂಡ ಎಲ್ಲೂ ಬೀಳದ ಹಾಗೆ ನೋಡಿಕೊಳ್ಳಲಾಗುತ್ತದೆ ಉಳಿದ ಪೊಸುವಿನ ಮಡೆ ಕಟ್ಟೆಯನ್ನು ದೇವಸ್ಥಾನಗಳಲ್ಲಿ ಕಟ್ಟಿ ಇಡಲಾಗುತ್ತದೆ.

ಬಾರಸಿ ದಿನ ಮನೆಯಲ್ಲಿ ಹಬ್ಬದ ವಾತಾವರಣ ಇರುತ್ತಿದ್ದು ಮಧ್ಯಾಹ್ನ ಊಟಕ್ಕೆ ಗೆಡ್ಡೆ ಗೆಣಸುಗಳ ಸಾಂಬಾರ ಮಾಡಲಾಗುತ್ತದೆ. ಸ್ತ್ರೀಯರನ್ನು ಕರೆಯಿಸಿ ಅವರ ಪೂಜೆ ಮಾಡಿ

ಊಟ ಮಾಡಲಾಗುತ್ತದೆ. ಈ ಎಲ್ಲಾ ಶಾಸ್ತ್ರವನ್ನು ಮಿರಾಶಿ ಮಾಡುತ್ತಾರೆ. ಅಂದಿನಿಂದ ಕಾಡಿನ ಗೆಡ್ಡೆ ಗೆಣಸುಗಳೂ ಮನೆಯಲ್ಲಿ ಬೆಳೆ ಗೆಡ್ಡೆ ಗೆಣಸುಗಳನ್ನು ತಿನ್ನಲೂ ಉಪಯೋಗಿಸಲಾಗುತ್ತದೆ. ಇದಕ್ಕಿಂತ ಮುಂಚೆ ಉಪಯೋಗಿಸುವಂತಿಲ್ಲ.

**ಮಹಾಲಯ**

ಕುಣಬಿಗಳು ತಮ್ಮ ನಿಜ ದೇವರಾದ ಪೂರ್ವಜರ ಮಡಿದ ಆತ್ಮವನ್ನು ಪೂಜಿಸುವ ಕುಲದೇವರನ್ನು ಆರಾಧಿಸುವ ಹಬ್ಬವೇ ಮಹಾಲಯವಾಗಿದೆ. ಕುಣಬಿಗಳು ಆಚರಿಸುವ ಎಲ್ಲಾ ಹಬ್ಬಗಳಿಗಿಂತಲೂ ಮಹಾಲಯ ಹಬ್ಬಕ್ಕೆ ಹೆಚ್ಚು ಮಹತ್ವ ನೀಡಲಾಗುತ್ತದೆ. ಹುಣ್ಣಿಮೆಯಿಂದ ಅಮಾವಾಸ್ಯೆವರೆಗೆ ಅಂದರೆ 16 ದಿನಗಳನ್ನು ಪಿತೃ ಅಮಾವಾಸ್ಸೆ ಎಂದು ಕರೆಯಲಾಗುತ್ತದೆ. ಕುಣಬಿಗಳ ಕುಲದೇವರು ಗ್ರಾಮಕ್ಕೆ ಒಂದೇ ಆಗಿರುತ್ತದೆ. ಅವರ ವಂಶದಲ್ಲಿ ಯಾರು ಮಡಿದರೂ ಅವರನ್ನು ಅದೇ ಕುಲದಲ್ಲಿ ತಂದು ಹಾಕಲಾಗುತ್ತದೆ. ಹಾಗಾಗಿ ಒಂದೊಂದು ಗ್ರಾಮದಲ್ಲಿ ಒಂದೊಂದು ದಿನ ಮಹಾಲಯ ಆಚರಿಸಿಕೊಂಡು ಬರಲಾಗುತ್ತದೆ.

ತೆಲೂಲಿ ಭಾಮಣೆ ದ್ವಾದಶಿಯಲ್ಲಿ ಸಿಸೈ ಗ್ರಾಮಗಳ ಪಂಚಮಿಗೆ, ಬೊಂಡೇಲಿಗೆ ನವಮಿ, ಅಂಬರ್ಡಾ ದಶಮಿ, ದಿಗಳೆಂಬ, ಚಾಪೋಲಿ ಕರಂಬಾಳ, ಪೊಟೋಲಿಗಳಲ್ಲಿ ಅಮಾವಾಸ್ಸೆಗೆ ಮಹಾಲಯ ಆಚರಣೆ ಮಾಡಲಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಹಳ್ಳಿಗಳಲ್ಲಿ ಆಯಾಯ ನಿಗದಿ ಪಡಿಸಿದ ದಿನದಂದು ಮಹಾಲಯ ಆಚರಣೆ ಮಾಡಲಾಗುತ್ತದೆ. ಕುಣಬಿ ಪೂರ್ವದಲ್ಲಿ ಆಕಾರ ಮತ್ತು ರೌದ್ರಿಯೂ ಆ ಗ್ರಾಮದಲ್ಲಿ ಈ ಮಹಾಲಯ ಅವಧಿಯಲ್ಲಿ ಯಾವಾಗ ಸ್ಥಾಪನೆ ಮಾಡಲಾಗಿತ್ತೋ ಆ ದಿನ ಮಹಾಲಯವನ್ನು ಆಚರಣೆ ಮಾಡಿಕೊಂಡು ಬರಲಾಗಿದೆ. ಈ ಗ್ರಾಮದಲಿ ಬೇರೆಯವರು ಬೇರೆ ಬೇರೆ ದಿನದಂದು ಮಾಡಿದರೂ ಕೂಡ ಮಹಾಲಯ ದಿನದಂದೇ ಅವರ ಪೂಜೆ ಮಾಡಲಾಗುತ್ತದೆ. ಮಹಾಲಯ ಇದೊಂದು ಆತ್ಮದ ಪೂಜೆಯ ಹಬ್ಬವಾಗಿದೆ. ಹಿರಿಯರು ಯಾರು ಮಡಿದರೂ ಕೂಡ ಇವರನ್ನು ಒಂದೇ ಕುಲದಲ್ಲಿ ಘಾಡಿಗಳನ್ನು ಕರೆಯಿಸಿ ಕುಲದೇವರಿಗೆ ಯಾವುದೇ ಧಾತುವಿನಲ್ಲಿ ಇವರ ಆತ್ಮವನ್ನು ಇಟ್ಟು ಪೂಜೆ ಹಾಕಲಾಗುತ್ತದೆ. ಅನೇಕ ಸಲ ಸ್ಮಶಾನದಿಂದ ಘಾಡಿಗಳು ಆತ್ಮವನ್ನು ತಂದು ಧಡೆಯ ಮೇಲೆ ಅಂದರೆ ಮಾವು ಅಥವಾ ಹಲಸಿನ ಮರದ ಮೇಲೆ ಇಡಲಾಗುತ್ತದೆ. ಅಲ್ಲಿ ಪೀಳಿಗೆಯ ಎಲ್ಲರಿಗೂ ಒಳ್ಳೆಯದನ್ನು ಮಾಡಿದ ಹಿರಿಯರ ಆತ್ಮವನ್ನು ಕುಲದೇವರಲ್ಲಿ ಮಿಲನ ಮಾಡಲಾಗುತ್ತದೆ. ಇದನ್ನು ಕೊಂಕಣಿ ಭಾಷೆಯಲ್ಲಿ 'ತೊಡುನ ಹಾಡಚಿವೆ' ಎಂದು ಕರೆಯಲಾಗುತ್ತದೆ. ಹೀಗೆ ಮಡಿದವರ ಎಲ್ಲಾ ಆತ್ಮವನ್ನು ಆಕಾರ ಮತ್ತು ರೌದ್ರಿ ಕಡೆ ಒಂದೇ ಬಗೆಯಲ್ಲಿ ಇರುವುದನ್ನು ಕುಲದೇವ ಎಂದು ಕರೆಯಲಾಗುತ್ತದೆ. ಈ ಕುಲದೇವರ ಪೂಜೆ ಮಾಡುವುದೇ ಮಹಾಲಯವಾಗುತ್ತದೆ.

"ಮಡಿದವರ ಹಿರಿಯ ಆತ್ಮದ ಪೂಜೆ ಮಾಡುವುದೇ ಮಹಾಲಯ ಅಥವಾ ಸರ್ವ ಪಿತೃ ಅಮಾವಾಸ್ಯೆಯಾಗಿದೆ. ಕುಣಬಿಗಳು ತಿಂಗಳಿಗೊಮ್ಮೆ ಬರುವ ಅಮಾವಾಸ್ಸೆಯನ್ನು ಪೂಜಿಸುವುದಿಲ್ಲ. ಗದ್ದೆಯ ಕೆಲಸದಲ್ಲಿ ಅಮಾವಾಸ್ಸೆಯ ದಿನ ಎತ್ತುಗಳನ್ನು ಕೆಲಸಕ್ಕೆ ಬಳಸುವುದಿಲ್ಲ. ಮಹಾಲಯದ ಅಮಾವಾಸ್ಸೆಯ 15 ದಿನ ದೇವರ ಸ್ವರ್ಗದ ಬಾಗಿಲು ತೆರೆದಿರುತ್ತದೆ ಎಂದು ಕುಣಬಿಗಳು ನಂಬಿರುತ್ತಾರೆ. ಈ ಅವಧಿಯಲ್ಲಿ ಅಂದರೆ ಮಹಾಲಯ ಅಮಾವಾಸ್ಸೆಯ 15 ದಿನದಲ್ಲಿ ಯಾರಾದರೂ ಮಡಿದರೆ ನೇರವಾಗಿ ಸ್ವರ್ಗಕ್ಕೆ ಹೋಗಲಾಗುತ್ತದೆ. ಇದಕ್ಕಾಗಿಯೇ ಮಹಾಲಯದಲ್ಲಿ ನರಕದಲ್ಲಿ ಯಾರಾದರೂ ಬಂಧಿತ ಆತ್ಮ ಇದ್ದರೆ ಅದನ್ನು ಬಿಡಿಸಿ ತರಲು 'ಬಂದೊವೊಡಿತಲೆ' 'ಸೂರ್ತಾಂತತಿ' ಹಾಡು ಹಾಡಲಾಗುತ್ತದೆ. ಇದನ್ನು ಕುರಾವಲಿ ಗ್ರಾಮದ ಶ್ರೀ ಆಪಿಗೂಣೊ ವೆಳಿಪ, ತೆಲೊಳಿ ಗ್ರಾಮದ ಶ್ರೀಕೃಷ್ಣಾಮ್ಹಾದು ಗಾವಡ ಇವರು ಮಹಾಲಯ ಸಂದರ್ಭಗಳಲ್ಲಿ ಹಾಡುತ್ತಾರೆ.

ಮಹಾಲಯ ಅಮಾವಾಸ್ಸೆಯ 15 ದಿನಗಳಲ್ಲಿ ಮನೆಯಲ್ಲಿ ಯಾರಾದರು ಮಡಿದವರು ಇದ್ದರೆ ಅವರನ್ನು ಸ್ಮಶಾನದಿಂದ ಬಿಡಿಸಿ ತರುವ ಕೆಲಸ ಮಹಾಲಯದ ಸಂದರ್ಭದಲ್ಲಿಯೇ ಮಾಡಲಾಗುತ್ತದೆ. ಇದನ್ನು 'ತೊಡನ್ ಹಾಡಚೆಲೆ' ಅಥವಾ 'ಸೂಡೊನ್ ಹಾಡತೆಲೆ' ಎಂದು ಕೊಂಕಣಿ ಭಾಷೆಯಲ್ಲಿ ಕರೆಯಲಾಗುತ್ತದೆ. ಅಂದರೆ ಈ ಮಹಾಲಯ ಸಂದರ್ಭದಲ್ಲಿ ಮನೆಗೆ ಘಾಡಿಯವರನ್ನು ಕರೆಯಿಸಿ ಮಡಿದವರನ್ನು ಹೂಳಲಾದ, ಅಂದರೆ ಸ್ಮಶಾನಕ್ಕೆ ಹೋಗಿ ಅಲ್ಲಿ ಹೇಳಿಕೆ ಮಾಡಿ ಸೇಡಿಮೇಲನಿಂದ ಮಣ್ಣನ್ನು ತರಲಾಗುತ್ತದೆ. ನಂತರ 'ಸ್ಮಶಾನ ಕಾಳ'ಕ್ಕೆ ಕೋಳಿ ಬಲಿಯನ್ನು ನೀಡಲಾಗುತ್ತದೆ. ಅಲ್ಲಿಂದ ಆತ್ಮವನ್ನು ಕೇಳುತ್ತಾರೆ. ಧಡೆಯ ಮೇಲಿರುವುದಾದರೆ ಅದನ್ನು ಹಲಸು ಅಥವಾ ಇನ್ನಾವುದೊ ಆತ್ಮಕ್ಕೆ ಇಷ್ಟ ಇರುವ ಹಣ್ಣು ಹಂಪಲ ಕೊಡುವ ಮರದ ಮೇಲೆ ಇಡಲಾಗುತ್ತದೆ. ಒಂದೆರಡು ವರ್ಷ ಇಟ್ಟು ಧಡೆಯ ಮೇಲಿನಿಂದ ಈ ಆತ್ಮ ಎಲ್ಲರಿಗೂ ಸರಿಯಾಗಿ ನೋಡಿಕೊಂಡಿದ್ದಲ್ಲಿ ಅದನ್ನು ಮತ್ತೆ ಘಾಡಿಗೆ ಕರೆಯಿಸಿ ಕುಲದೇವರಲಿ ಆಕಾರ ತಡೆ ಹಾಕಲಾಗುತ್ತದೆ. ಈ ಕೆಲಸವನ್ನು ಮಹಾಲಯ ಸಂದರ್ಭದಲ್ಲಿ ಮಾಡಲಾಗುತ್ತದೆ. ಓೀಗಾಗಿ ಕುಣಬಿಗಳು ಹೆಚ್ಚು ಮಹಾಲಯ ಹಬ್ಬಕ್ಕೆ ಮಹತ್ವ ನೀಡುತ್ತಾರೆ. ಸ್ಮಶಾನ ಕಾಳವು ಸ್ಮಶಾನದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಸ್ಮಶಾನದಲ್ಲಿ ಅಪಮೃತ್ಯುವಿನಿಂದ ಮೃತಪಟ್ಟವರು ಅಂದರೆ ಮರದ ಮೇಲಿನಿಂದ ಬಿದ್ದು, ಗುಡ್ಡದ ಮೇಲಿನಿಂದ ಬಿದ್ದು ಅಥವಾ ನೇಣು ಹಾಕಿಕೊಂಡು ಯಾರಾದರೂ ಸಾವನ್ನಪ್ಪಿದರೆ ಅವರನ್ನು ಕ್ಷೇತ್ರಿ ಎಂದು ಕರೆಯಲಾಗುತ್ತದೆ. ಮಹಿಳೆಯರು ಹೆರಿಗೆ ಸಂದರ್ಭದಲ್ಲಿ ಮತ್ತು ತೊಂದರೆ ಅಪಮೃತ್ಯುವಿನಿಂದ ಸಾವನ್ನಪ್ಪಿದವರೂ ಇದ್ದರೆ. ಇದನ್ನು ವಾರಗತ ಅಂತಲೂ ಕರೆಯಲಾಗುತ್ತದೆ. ವಾರಗತಗಳನ್ನು 'ಸ್ಮಶಾನಾತಲೊ ಕಾಳೊ' ಕ್ಷೇತ್ರಿ ಬಂಧನದಲ್ಲಿ ಇಡಲಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಮಿರಾಶಿ ಬುದವಂತ ದೇವರಿಗೆ ಹೇಳಿಕೆ ಮಾಡುವಾಗ ಸ್ಮಶಾನ ಖಂಡಗಳನ್ನು ಕೂಡ ಹೇಳಿಕೆಯಲ್ಲಿ ಈ ಹಿಂದಿನಂತೆ

ಹಾಗೇ ಇರಬೇಕೆಂದು ಹಚ್ಚಲಾಗುತ್ತದೆ. ಈ ರೀತಿ ಉತ್ತಮವಾಗಿ ಕೆಲಸ ಮಾಡಿದ ಮಡಿದವರ ಆತ್ಮವನ್ನು ಬಿಡಿಸಿ ಮನೆಗೆ ತರುವುದು ದುರ್ಮರಣದಿಂದ ಮಡಿದವರ ಆತ್ಮಕ್ಕೆ ಅಷ್ಟೇ ಬಂಧಿಸಿ ಇಡುವ ಕೆಲಸ ಮಹಾಲಯ ಸಂದರ್ಭಗಳಲ್ಲಿ ಮಾಡಲಾಗುತ್ತದೆ.

ಕುಣಬಿಗಳ ಕುಲದೇವರಿಗೆ ಹೆಸರಿಲ್ಲ. ಮಡಿದವರ ಆತ್ಮಗಳೇ ಕುಲದೇವರು. ಆಕಾರ ರೌದ್ರಿಗಳೇ ಕುಲದೇವರು. ಈ ಆತ್ಮಗಳ ಪೂಜೆ ಮಾಡುವುದೇ ಮಹಾಲಯವಾಗಿದೆ. ಈ ಮಹಾಲಯ ಹಬ್ಬವನ್ನು ಮನೆಗೊಂದರಂತೆ ಮಾಡಬಾರದು. ಈ ಹಿಂದೆ ಇದ್ದ ಮೂಲ ಕುಲದೇವರ ಮನೆಯಲ್ಲಿ ಮಹಾಲಯ ಆಚರಣೆ ಮಾಡಿದರೆ ಎಲ್ಲರಿಗೂ ಉತ್ತಮವಾಗಲಿದೆ ಎಂದು ನಂಬಲಾಗುತ್ತದೆ. ಈ ಕುಲದೇವರು ನಾಲ್ಕು ಜನ ಅಂದರೆ ಪೀಳಿಗೆಯ ಎಲ್ಲರೂ ಸೇರಿ ಸ್ಥಾಪನೆ ಮಾಡಿರುವುದರಿಂದ(ಧಾಲೊಕಾಲೊ ಶಬ್ದ) ಹತ್ತು ಜನರ ಶಬ್ದ ಇಲ್ಲಿ ಇರುತ್ತದೆ. ಮಿರಾಶಿಗೆ ಇಲ್ಲಿ ಪೂಜೆ ಮಾಡುವ ಅಧಿಕಾರ ನೀಡಿರುವುದಿಲ್ಲ. ಬುದವಂತ ಮಿರಾಶಿಗಳು ದೇವರಿಗೆ ಹೇಳಿಕೆ ಮಾಡಿದರೆ ದೇವರು ಅವರ ಮಾತನ್ನು ಕೇಳಿ ಉತ್ತಮ ಕೆಲಸಗಳು ಆಗುತ್ತವೆ. ಆದರೆ ಇಂದು ಮನೆಗೆ ಒಂದರಂತೆ ಕುಲದೇವರು ಮಾಡುವುದರಿಂದ ಧಾಲೊಕಾಲೊ ಶಬ್ದ ಇಲ್ಲದೇ ದೇವರ ದಯೆ.

ಮಹಾಲಯ ನಡೆಯುವ ಹತ್ತಾರು ದಿನಗಳ ಮುಂಚೆಯಿಂದಲೇ ಕುಣಬಿಗಳು ತಯಾರಿಯಲ್ಲಿ ತೊಡಗಿಕೊಂಡಿರುತ್ತಾರೆ. ಮಹಾಲಯಕ್ಕೆ ಅತಿಮುಖ್ಯವಾಗಿ 'ಆಸಣ' ಮರದಿಂದ ಹೊಸ ಕಟ್ಟಿಗೆಯನ್ನು ತರಲಾಗುತ್ತದೆ. ಮಹಾಲಯದ ಕಟ್ಟಿಗೆ ಮಾಡಲು ಪರುಷರು ಒಂದು ದಿನವನ್ನು ಮೀಸಲಿಡುತ್ತಾರೆ. ನಿಗದಿಪಡಿಸಿದ ದಿನದಂದು ಗ್ರಾಮದ ಎಲ್ಲರೂ ಸೇರಿ ಕಟ್ಟಿಗೆ ಮಾಡಲು ಹೋಗುತ್ತಾರೆ. ಹತ್ತಿರದಲ್ಲಿ "ಆಸಣ" ಮರ ಸಿಗದಿದ್ದರೂ ದೂರದ ಕಾಡಿನಿಂದಲಾದರೂ ಆಸಣ ಮರದ ಕಟ್ಟಿಗೆಯನ್ನು ಕಡಿದುಕೊಂಡು ಬರುತ್ತಾರೆ. ಈ ಆಸಣ ಮರದ ಕಟ್ಟಿಗೆಯಿಂದಲೇ ಮಹಾಯಲ ದಿನ ಪಿತೃಗಳಿಗೆ ಬೇಕಾಗಿರುವ ಎಲ್ಲಾ ತರದ ಅಡುಗೆಯನ್ನು ಮಾಡಲಾಗುತ್ತದೆ. ಗುಡಕ್ಕೆ ಹೋಗಿ ರಾನಕೇಳ ಗಿಡದಿಂದ ಮಹಾಲಯಕ್ಕೆ ಬರುವ ನೆಂಟರಿಷ್ಟರಿಗೆ ಊಟ ಬಡಿಸಲು ಎಲೆಯನ್ನು ತರಲಾಗುತ್ತದೆ. ಎಲೆ ತರಲೆಂದು ಒಂದು ದಿನವನ್ನು ಮೀಸಲಿಡಲಾಗುತ್ತದೆ. ಪಿತೃಗಳಿಗೆ ಊಟದ ಸಲುವಾಗಿ ಬಾಳೆ ಎಲೆಯನ್ನು ಉಪಯೋಗಿಸಲಾಗುತ್ತದೆ. ಇದಕ್ಕಾಗಿ ಇನ್ನೊಂದು ದಿನವನ್ನು ಮೀಸಲಿಡಲಾಗುತ್ತದೆ. ದೇವರ ಮನೆಯನ್ನು ಸೇಡಿ ಮಣ್ಣು ಸಗಣಿ ತೆಗೆದು ಶೃಂಗರಿಸಲಾಗುತ್ತದೆ. ಸಾಮಾನು ಮತ್ತು ಇತರೆ ಮನೆಯಲ್ಲಿ ಬೆಳೆಸಿದ ತರಕಾರಿಯನ್ನು ಗೆಡ್ಡೆ, ಗೆಣಸುಗಳನ್ನು ಕಡ್ಡಾಯವಾಗಿ ಊಟಕ್ಕೆ ಬಡಿಸಲಾಗುತ್ತದೆ. ಇದಕ್ಕಾಗಿಯೇ ಒಂದು ದಿನವನ್ನು ಮೀಸಲಿಡಲಾಗುತ್ತದೆ. ಮಹಾಲಯ ಮುಂಚೆ ಗ್ರಾಮದ ಎಲ್ಲರೂ ಒಂದೇ ಕಡೆ ಚೌಕಿಯಲ್ಲಿ ಕುಳಿತು ನೆಂಟರಿಷ್ಟರನ್ನು(ಶೈಮರೆಗಳನ್ನು) ಕರೆಯಲು ಸಭೆ ಸೇರಲಾಗುತ್ತಿದ್ದು ಯಾವ ಯಾವ ಭಾಗಕ್ಕೆ ಯಾರ್ಯಾರು ನೆಂಟರಿಷ್ಟರನ್ನು ಕರೆಯಲು ಹೋಗಬೇಕೆಂದು ಕೆಲಸ

ಹಂಚಿಕೊಳ್ಳಲಾಗುತ್ತದೆ. ಸಯರೆ ಕರೆಯಲು ಹೋದವರು ಹೂವರ ದಿಂಡೊ ಸವಾಸಿಣಗಳನ್ನು ಕರೆಯಿಸಿ ಬರುತ್ತಾರೆ. ರಾತ್ರಿ ಬಂದು ಮತ್ತೆ ಸಭೆ ಸೇರಿ ನೆಂಟರಿಷ್ಟರನ್ನು ಮಹಾಲಯಕ್ಕೆ ಕರೆಯಲು ಯಾರಾನ್ನಾದರೂ ಬಿಟ್ಟಿದ್ದರ ಬಗ್ಗೆ ಚರ್ಚೆ ಮಾಡಲಾಗುತ್ತದೆ.

ಮಹಾಲಯ ದಿನ ಬೆಳಿಗ್ಗೆ ಎದ್ದು ಬುದವಂತ ಮಿರಾಶಿಗಳು ಮಿರಾಶಿಣಿ ಮತ್ತು ಕುಟುಂಬದ ಎಲ್ಲರೂ ಸ್ನಾನ ಮಾಡಿಕೊಂಡು ಮನೆತುಂಬ ಗೋಮೂತ್ರವನ್ನು ಸಿಂಪಡನೆ ಮಾಡಲಾಗುತ್ತದೆ. ಇದರಿಂದ ಮನೆಯನ್ನು ಶುದ್ಧೀಕರಣಗೊಳಿಸಲಾಗುತ್ತದೆ. ನಂತರ ಹಿಟ್ಟಿನಿಂದ ಪಿಂಡಗಳನ್ನು ತಯಾರು ಮಾಡಿ ಎಲ್ಲರೂ ಕೈ ಮುಗಿಯುತ್ತಾರೆ. ಪಿಂಡಗಳನ್ನು ಮಡಿದವರ ಹೆಸರಿನಲ್ಲಿ ತಯಾರು ಮಾಡಲಾಗುತ್ತದೆ.

ನಂತರ ಮಿರಾಶಿಯ ಹೆಂಡತಿ ಮಿರಾಶಿಣಿ ಆಸಣ ಮರದ ಕಟ್ಟಿಗೆಯನ್ನು ತಂದು ದೇವರ ಒಲೆಗೆ ಬೆಂಕಿ ಹಾಕಿ ಅಡಿಗೆಗೆ 'ಹಾದನ' ಇಡುತ್ತಾರೆ. ನಂತರ ಮನೆಗೆ ಬಂದ ಗ್ರಾಮದ ಎಲ್ಲಾ ಮಹಿಳೆಯರು ಸೇರಿ ಪಕ್ವಾನ್ನಗಳನ್ನು ತಯಾರುಮಾಡುತ್ತಾರೆ. ತಾವು ಬೆಳೆದ ಗೆಡ್ಡೆ, ಗೆಣಸುಗಳನ್ನು ತಂದು ಅಡುಗೆ ಮಾಡುತ್ತಾರೆ.

**ಬಂದವೊಡ ಬಿಡಿಸುವ ಪದ್ಧತಿ**

ಪಿತೃಗಳ ಹಾಗೂ ಬಂದ ನೆಂಟರಿಷ್ಟರ ಮತ್ತು ಕುಟುಂಬದ ಎಲ್ಲಾ ಸದಸ್ಯರ ಊಟ ಆದ ನಂತರ "ಬಂದವೊಡ ಬಿಡಿಸುವುದು". ಬಂದವೊಡ ಬಿಡಿಸುವುದು ಅಂದರೆ ಹಾಡು ಹಾಡಲಾಗುತ್ತದೆ. ಈ ಬಂದವೊಡಿತಲೆ ಗಾಣೆಯನ್ನು ಸೂರ್ತಾತತಿ ಗಾಣೆ ಅಂತಲೂ ಕರೆಯಲಾಗುತ್ತದೆ. ಅಂದರೆ ಈ ಬಂದವೊಡಿ ಹಾಡಿನಲ್ಲಿ ಬಿಡಿಸಲಾಗುತ್ತದೆ. ಹಾಡು ಹೇಳುವವನ ಎರಡು ಬದಿಯಲ್ಲಿ ಒಬ್ಬೊಬ್ಬರಾಗಿ ಕೂತು ಸೂರ್ತ ಹಿಡಿಯುವುದರಿಂದ ಇದನ್ನು ಸೂರ್ತಾತ್ತತಿ ಗಾಣೆ ಅಂತಲೂ ಕರೆಯಲಾಗುತ್ತದೆ. ಈ ಹಾಡು ಹಾಡುವ ಮುಖ್ಯವಾದ ಉದ್ದೇಶ ಮಡಿದವರ ಆತ್ಮಗಳು ಕೆಟ್ಟ ಕೆಲಸ ಮಾಡಿ ಎಲ್ಲಿಯಾದರೂ ಹೊರಗಡೆ ಅತಂತ್ರವಾಗಿ ಉಳಿದರೆ ಅದನ್ನು ಈ ಬಂದವೊಡ ಬಿಡುವ ಹಾಡಿನ ಮೂಲಕ ಆತ್ಮಗಳಿಗೆ ಶಾಂತಿ ಕೋರಲಾಗಿ ಈ ಮಹಾಲಯ ಸಂದರ್ಭದಲ್ಲಿ ಬಂದವೊಡ(ಸ್ವರ್ಗ) ಖುಲ್ಲಾ ಇರುವುದರಿಂದ(ಸ್ವರ್ಗ ಬಾಗಿಲು ತೆರೆದಿದ್ದು) ಇರುವುದರಿಂದ ಈ ಸ್ವರ್ಗದಲ್ಲಿದ್ದ ಆತ್ಮಗಳು ಶಾಂತವಾಗುತ್ತದೆ ಎಂದು ನಂಬಿಕೆಯಿಂದ ಈ ಬಂದವೊಡ ಬಿಡಿಸಲಾಗುತ್ತದೆ. ಈ ಬಂದವೊಡ ಬಿಡಿಸುವ ಹಾಡನ್ನು "ಸೂರ್ತಾತತಿ ಗಾಣೆ" ಕೇಳಿದರೆ ಹೆಚ್ಚು ಪುಣ್ಯ ಬರುತ್ತದೆ ಎಂದು ನಂಬಲಾಗಿದ್ದು ಎಲ್ಲರೂ ಕುಳಿತುಕೊಂಡು ಈ ಬಂದವೊಡ ಬಿಡಿಸುವ ಕಾರ್ಯವನ್ನು ಹಾಡಿನ ಮೂಲಕ ಮಹಾಲಯ ದಿನದಂದು ಪ್ರತಿವರ್ಷ ಮಾಡಲಾಗುತ್ತದೆ. ಈ ಬಂದವೊಡ ಬಿಡಿಸುವ ಹಾಗೂ ಕೇವಲ ಮಹಾಲಯ ಸಂದರ್ಭದಲ್ಲಿ ಮಾತ್ರ ಈ ಹಾಡನ್ನು ಹಾಡಲಾಗುತ್ತದೆ.

## ಮೂಟ ಮತ್ತು ಉಸ್ಟಾನ್

ಪ್ರತಿ ವರ್ಷ ಮಳೆ ಪ್ರಾರಂಭವಾಗುತ್ತಿದ್ದಂತೆ ಮುಟ್ಯೆ ಹಾಕಿದ ನಂತರ ಬಿತ್ತನೆ ಕಾರ್ಯ ನಾಟಿ ಮಾಡಿ ಮುಗಿಸಲಾಗುತ್ತದೆ. ಕುಂಬರಿ ಜಮಿನಿನಲ್ಲಿ ಬೆಳೆದ ರಾಗಿಯ ಮೂಟೆಯನ್ನು ದೀಪಾವಳಿ ಪಾಡಯೋ ದಿನ ಸಾಮಾನ್ಯವಾಗಿ ಎಲ್ಲಾ ಕಡೆ ಮಾಡಲಾಗುತ್ತದೆ. ಹೊಲದಲ್ಲಿ ಬೆಳೆದ ಭತ್ತದ ಮೂಟೆ ಕಾರ್ತಿಕ ತುಳಸಿ ವಿವಾಹವಾದ ನಂತರ ಮಾಡಲಾಗುತ್ತದೆ. ಅಂದರೆ ಕಾರ್ತಿಕ ಮಾಸದಲ್ಲಿ ಭತ್ತದ ಬೆಳೆ ಕಟಾವಿಗೆ ಬಂದಿರುತ್ತದೆ. ಅನೇಕ ಗ್ರಾಮಗಳಲ್ಲಿ ಕಾರ್ತಿಕ ಮಾಸದ ದ್ವಾದಶಿಯಂದು ಮೂಟ ಮಾಡಲಾಗುತ್ತದೆ. ತೆಲೋಲಿ ಗ್ರಾಮದಲ್ಲಿ ದ್ವಾದಶಿಯಂದು ಪ್ರತಿವರ್ಷ ಮೂಟ ಮಾಡಲಾಗುತ್ತದೆ.

ಮೂಟ ಎಂದರೆ ಭತ್ತದ ಬೆಳೆ ಕಟಾವು ಮಾಡಲು ಚಾಲನೆ ನೀಡುವುದು ಎಂದರ್ಥ. ಮೂಟ ಮಾಡಿದ ನಂತರ ಭತ್ತ ಕಟಾವಿಗೆ ಬಂದರೆ ಯಾವತ್ತೂ ಕಟಾವು ಮಾಡಬಹುದಾಗಿದೆ. ಮೂಟ ಮಾಡುವ ಕೆಲಸ ದೇವರ ಹೊಲದಲ್ಲಿ ಪ್ರತಿವರ್ಷ ಒಂದೇ ಜಾಗೆಯ ಮೇಲೆ ಮಾಡಲಾಗುತ್ತದೆ.

ಗ್ರಾಮದ ಮಿರಾಶಿ ಚವತಿ ಸಂದರ್ಭದಲ್ಲಿ ಮಾಟೊಲಿಗೆ ಕಟ್ಟಲಾದ ಮಹಾದೇವರ ಕಾಯಿಯನ್ನು ತೆಗೆದುಕೊಂಡು ಮೂಟ ಮಾಡಲಿಕ್ಕೆ ಹೊಲಕ್ಕೆ ಹೋಗುತ್ತಾರೆ. ಮೊದಲು ಕುಲದೇವರಿಗೆ ಹೇಳಿಕೆ ಮಾಡಲಾಗುತ್ತದೆ. ನಂತರ ಭೂಯಿತ್ ಹೋಗಿ ದೇವರಿಗೆ ಹೇಳಿಕೆ ಮಾಡಿ ದೇವರ ಹೊಲದಲ್ಲಿ ಈ ಹಿಂದೆ ಮುಟ್ಯೆ ಹಾಕಲಾದ ಸ್ಥಳಕ್ಕೆ ಹೋಗಿ ಕಾಯಿ ಇಡಲಾಗುತ್ತದೆ. ನಂತರ ಭೂಯಭಾಗ ದೇವರಿಗೆ ಕುಲದೇವರಿಗೆ ಹೇಳಿಕೆ ಮಾಡಿಕೊಂಡು ಹೊಲದಲ್ಲಿ ಬೆಳೆದ ಭತ್ತದ ತೆನೆಯನ್ನು ಕತ್ತರಿಸಿ ತಂದು ಮೊದಲು ಜನ್ಮಿ ಮತ್ತು ಭೂಮಿತ್ ಇರುವ ಎಲ್ಲಾ ದೇವರಿಗೆ ಭತ್ತದ ತೆನೆಯನ್ನು ಇಡಲಾಗುತ್ತದೆ. ನಂತರ ಈ ತೆನೆಯನ್ನು ಕುಲದೇವರಿಗೆ ಇಡಲಾದ ನಂತರ ಮುಖ್ಯ ಬಾಗಿಲಿಗೆ ತುಳಸಿಗೆ ಇಡಲಾಗುತ್ತದೆ. ಹೊಲದಿಂದ ಕತ್ತರಿಸಿ ತರಲಾದ ಭತ್ತವನ್ನು ಕುಟ್ಟಲಾಗುತ್ತದೆ. ಇದರ ಅಕ್ಕಿ ತಯಾರು ಮಾಡಿ ಈ ಹೊಸ ಅಕ್ಕಿಯಿಂದಲೇ ಅನ್ನ ಪಾಯಸ ಮಾಡಲಾಗುತ್ತದೆ.

ಉಸ್ಟಾಣ ದಿನ ಮಿರಾಶಿ ಭೂಮಿತ್ ಹೋಗಿ ಈ ಹೊಸ ಅನ್ನದಿಂದಲೇ ಚೊರು (ಪ್ರಸಾದ) ಮಾಡಲಾಗುತ್ತದೆ. ಹೊಸ ಅಕ್ಕಿಯಿಂದ ದೇವರಿಗೆ ಅಕ್ಷತೆ ಹಚ್ಚಲಾಗುತ್ತದೆ. ಹೊಸ ಅಕ್ಕಿ ಯಿಂದಲೇ "ವಾಡಿ" ಇಡಲಾಗುತ್ತದೆ. ಉಸ್ಟಾಣ ದಿವಸ ಭೂಮಭಾಗದ ದೇವರಿಗೆ ಗಡಿ ದೇವರಿಗೆ ಹೊಸ ಅಕ್ಕಿಯಿಂದ ಮಾಡಲಾದ ಚೊರು ಮತ್ತು ವಾಡಿ ಇಟ್ಟು ಪೂಜೆ ಮಾಡಿದ ನಂತರ ಕುಲದೇವರಿಗೂ ಹೊಸ ಅಕ್ಕಿಯಿಂದ ಅಕ್ಷತೆ ಮತ್ತು ಹೊನ್ನ ಅಕ್ಕಿಯಿಂದ ಮಾಡಲಾದ ಅನ್ನದ ವಾಡಿ, ಪಾಯಸ ಇಡಲಾಗುತ್ತದೆ. ಉಸ್ಟಾಣ ದಿನ ಮುಳ್ಳಿ ಸಾರು(ಕೆಸವು) ಮಾಡಲಾಗುತ್ತದೆ.

ಹೊಸ ಅಕ್ಕಿಯಿಂದ ಮಾಡಿದ ಪಾಯಸ ವಿಶೇಷವಾಗಿರುತ್ತದೆ. ಉಸ್ವಾಣ ಊಟಕ್ಕೆ ನೆಂಟರನ್ನು(ಸೆಟೋ) ಕರೆಯಲಾಗುತ್ತದೆ. ಆಕಳಿಗೆ ಅನ್ನದ ಭಣೆ ನೀಡಲಾಗುತ್ತದೆ. ಎಲ್ಲರೂ ಸೇರಿ ದೇವರ ಮನೆಯಲ್ಲಿ ಊಟ ಮಾಡುತ್ತಾರೆ. ಮೂಟ ಮಾಡಿ ಉಸ್ವಾಣ ಮಾಡಿದ ಮಾರನೆಯ ದಿನ ಬೇಟೆ(ಭೂವಂಡಿ) ತೆಗೆಯಲಾಗುತ್ತದೆ. ಇದನ್ನು 'ಮೂಟಾಚಿ ಭೂವಂಡಿ' ಎಂದು ಕರೆಯಲಾಗುತ್ತದೆ. ಈ ಮೂಟೆ ಭೂವಂಡಿಗೆ ಶಿಕಾರಿ ಮಾಡಿದರೆ ಭೂಮಿತ್ ದೇವರ ಕಡೆ ತಂದು ಎಲ್ಲರಿಗೂ ಪಾಲು ಮಾಡಿ ತಿನ್ನಲಾಗುತ್ತಿತ್ತು.

**ಬೈಲ ಘುಂಡಾವಣೆ**

ಬೆಳೆ ಕಟಾವು ಆದ ನಂತರ ಎಲ್ಲರೂ ತಮ್ಮ ತಮ್ಮ ಹೊಲದಲ್ಲಿ ಭತ್ತದ ಬಣವೆ ಹಾಕು ವುದನ್ನು ಘುಡಿ ಹಾಕುವುದು ಎಂದು ಕರೆಯಲಾಗುತ್ತದೆ. ಎಲ್ಲರ ಭತ್ತ ಕಟಾವು ಮಾಡಿ ಘುಡಿ ಹಾಕಿದ ನಂತರ ರವಿವಾರ ಅಥವಾ ಬುಧವಾರ ದಿನವನ್ನು ನೋಡಿ ಬೈಲ ಘುಂಡಾವಣಿ ಮಾಡುವ ಶಾಸ್ತ್ರ ಮಾಡಲಾಗುತ್ತದೆ. ದೇವರ ಹೊಲದಲ್ಲಿ ಬೈಲ ಘುಡಾವಣಿ ಮಾಡಲು ಒಂದು ಸವರೇಟ ಭತ್ತದ ಬೊರೊ ಕಟ್ಟಿ ಇಡಲಾಗುತ್ತದೆ. ಮಿರಾಶಿ ಘುಡಿಯ ಮೇಲೆ ಹತ್ತಿಕೊಂಡು ಬೈಲ ಘುಂಡಾವಣಿ ದಿವಸ ಈ ಭತ್ತದ ಬೊರೊವನ್ನು ಕರಿ ಕಂಬಳಿಯಲ್ಲಿ ಸುತ್ತಿಕೊಂಡು ಭೂಯಿತ್ ದೇವರ ಮುಂದೆ ಇರುವ ತುಳಸಿ ಹತ್ತಿರ ಈ ಬೋರೊ ಕೂಡಲಾಗುತ್ತದೆ. ಇದರ ಮೇಲಿನಿಂದ ಐದು ಸುತ್ತು ಎತ್ತನ್ನು ತಿರುಗಿಸಲಾಗುತ್ತದೆ. ಇದನ್ನು ಬೈಲ ಘುಂಡಾವಣಿ ಅಂತ ಕರೆಯಲಾಗುತ್ತದೆ. ಈ ಬೈಲ ಘುಂಡಾವಣಿ ಆದ ನಂತರ ಮಳಣಿ ಕೆಲಸ ಮಾಡಬಹುದಾಗಿದೆ. ಬೈಲ ಘುಂಡಾವಣಿ ಮಾಡದೇ ಗ್ರಾಮದಲ್ಲಿ ಯಾರೂ ಭತ್ತ ಒಕ್ಕಲೂ ಹಾಕುವ ಕೆಲಸ ಮಾಡು ವುದಿಲ್ಲ. ಈ ಸಂಪ್ರದಾಯ ಇಂದಿಗೂ ಪಾಲಿಸಿಕೊಂಡು ಬರಲಾಗಿದೆ. ಬೈಲ ಘುಂಡಾವಣಿಯನ್ನು ಪ್ರತಿಯೊಂದು ಗ್ರಾಮದಲ್ಲಿ ಕುಣಬಿಗಳು ಮಾಡುತ್ತಾರೆ.

**ಹೋಳಿ ಹಬ್ಬ ಸಿಗ್ಮೋ**

ಹೋಳಿ ಹಬ್ಬ ಕುಣಬಿಗಳಲ್ಲಿ ಪ್ರಮುಖ ಹಬ್ಬಗಳಲ್ಲಿ ಒಂದಾಗಿದೆ. ಶಿವರಾತ್ರಿಯಿಂದಲೇ ಅನೇಕ ಗ್ರಾಮಗಳಲ್ಲಿ ಹೋಳಿ ಹಬ್ಬದ ವಾತಾವರಣ ಮನೆ ಮಾಡಿರುತ್ತದೆ. ಹದಿನೈದು ದಿನಗಳ ಹಿಂದಿನಿಂದಲೇ ಸಿಗ್ಮೋ ಹಬ್ಬದ ತಯಾರಿ ಮಾಡಿಕೊಳ್ಳಲಾಗುತ್ತದೆ. ಹೊಸದಾಗಿ ಸಿಗ್ಮೋಖೇಳ ಕಲಿಯುವ ಗ್ರಾಮದಲ್ಲಿ ಶಿವರಾತ್ರಿ ಆದ ನಂತರ ಪ್ರಾರಂಭಿಸಲಾಗುತ್ತದೆ.

ಸಿಗ್ಮೋದಲ್ಲಿ ತೊಣಮಾಚೊಖೇಳ ಮತ್ತು ಹಿರಾಣಾ ತಲೊಖೇಳ ಎಂದು ಎರಡು ವಿಧ ಇರುತ್ತದೆ. ತೊಣಮಾಚೊಖೇಳ ಅಂದರೆ ಕೈಯಲ್ಲಿ ಕೋಲು ಹಿಡಿದು ಕುಣಿಯುವ ಆಟವಾಗಿರುತ್ತದೆ. ಹಿರಾಣಾ ತಲೊಖೇಳ ಅಂದರೆ ಮೈಮೇಲೆ ದೇವರು ಬರುವುದರೊಂದಿಗೆ ಬಲೆ ಬಲೆ ನೆಬೈಯಂದು ಬಾರಿಸಿ ಹಾಡಿ ಕುಣಿಯುವ ಖೇಳವನ್ನು ಹಿರಾಣಾತಲೊ ಖೇಳ

ಅಥವಾ ಹಾಂಡಪಟಿಚೊ ಖೇಳ ಅಂತಲೂ ಕರೆಯಲಾಗುತ್ತದೆ. ತೋಣಮಾಚೋಖೇಳ ತೆಲೋಲಿ ಕುಂಡಲ್ ಕಾರಸಿಂಗಳ ಮೈನೋಳ್, ಕುರಾವಳಿ, ಕುಂಗಾಳ, ಫಾಟ್ನೆ, ಕುಸಾವಳಿ, ಡೇರಿಯೆ, ಭಾರಾಡೆ, ಅಣಶಿ, ಗುಂದ, ಸಿಸ್ಯೆ, ಡಿಗ್ಗಿ, ಬೊಂಡೇಲಿ, ಜೋಯಿಡಾ, ಗಾವಡೆ ವಾಡಾ, ಕಾರ್ಟೋಳಿ, ತೆರಾಳಿನುಜ್ಜಿ, ಕಾಳಸಾಯಿ ಹೀಗೆ ಅನೇಕ ಗ್ರಾಮಗಳಲ್ಲಿ ತೋಣಮಾಚೋಖೇಳ ಸಿಗ್ಮೋ ಹಬ್ಬದ ಏಕಾದಶಿಯಂದು ತೆಗೆಯಲಾಗುತ್ತದೆ. ಹಿರಾಣಾತಲೊ ಅಥವಾ ಹಾಂಡ ಪಟಿತಲೊ ಖೇಳ ಪ್ರಸ್ತುತ ಕುಂಡಲ್ ಗ್ರಾಮದಲ್ಲಿ ಮಾತ್ರ ಚಾಲನೆಯಲ್ಲಿ ಇದೆ. ಹಾಂಡಪಟಿಚೊ ಖೇಳ ಮತ್ತು ತೋಣಮಾಚೊಖೇಳ ಈ ಹಿಂದೆ ಲಾಂಡೆ ಗ್ರಾಮದಲ್ಲಿಯೂ ಚಾಲನೆಯಲ್ಲಿತ್ತು ಈಗ ನಿಲ್ಲಿಸಲಾಗಿದೆ. ತೋಣಮಾಚೊಖೇಳ ಆಡುವ ಘಟೆಗಳಿಗೆ ಕಡ್ಡಾಯವಾಗಿ ಘೋಷಾಕು ಹಾಕಲಾಗುತ್ತದೆ. ಘಡೆಗೆ ತಲೆಗೆ ಫೇಟಾ ಪೂರ್ತಿ ಕೈ ಮುಟ್ಟುವ ಶಚನ್ ಅದರ ಮೇಲೆ ಖಾಂದವಲ ಧೋತರ ಹಾಕಿ ಅದರ ಮೇಲೆ ತರಂಗ ಕಟ್ಟಲಾಗುತ್ತದೆ. ಕೈಯಲ್ಲಿ ಎರಡು ತೋಣಿ ಅಂದರೆ ಕೋಲು ಇರುತ್ತದೆ. ಹರಿದಾಸನ ಕೈಯಲ್ಲಿ ಒಂದು ಝಾಂಜಿ ಅಥವಾ ಕಂಸಾಳೆ ಡೋಲು ಇರುತ್ತದೆ. ಕುಣಿಯುವ ಸಂದರ್ಭವನ್ನು ಬದಲಿಸುವಾಗ 'ಸಮ್ ಅಂತ ಹರಿದಾಸ್' ಹೇಳುತ್ತಾನೆ. ಸಿಗ್ಮೋ ಏಕಾದಶಿ ದೇವರಿಗೆ ಹೇಳಿಕೆ ಮಾಡಿ ಮಾಂಡ ಮೇಲೆ ಖೇಳ ತೆಗೆದರೆ ಮಾತ್ರ 'ಸಮ್' ಅಂದರೆ ತಯಾರಿ ಅಂತ ಅರ್ಥೈಸಲಾಗುತ್ತದೆ. ಇದನ್ನು ಹೇಳಬೇಕಾಗುತ್ತದೆ. ಇಲ್ಲವೆಂದರೆ ಹೇಳುವಂತಿಲ್ಲ.

ಹೋಳಿಯಲ್ಲಿ ಎರಡು ವಿಧ ಇರುತ್ತದೆ. ಮಾಲಚಿ, ಹೋಳಿ ಮತ್ತು ಗಾವಚಿ ಹೋಳೀ ಎಂದು ಇರುತ್ತದೆ. ಮಾಲಚಿ ಹೋಳಿ ತೆಲೋಲಿ ಕಸಂಬಾ, ಗಾಂಗೋಡಾ ಗ್ರಾಮಗಳಲಿ ಇದ್ದಾರೆ. ಗಾವಚಿ ಹೋಳಿ ಸಾಮಾನ್ಯವಾಗಿ ಎಲ್ಲಾ ಗ್ರಾಮಗಳಲ್ಲಿ ಇರುತ್ತದೆ. ಕುಂಡಲ್, ಕೆಲೋಲಿ, ಕಾರಸಿಂಗಳ, ಜೋಯಿಡಾ ಕಾರ್ಟೋಳಿ, ಡೇರಿಯೆ ಝುಳಾವಳಿ ಹೀಗೆ ಅನೇಕ ಗ್ರಾಮಗಳಲ್ಲಿ ಗಾವಚಿ ಹೋಳಿ ಇರುತ್ತದೆ. ಇದರಲ್ಲಿ ಮಾಲಚಿ ಹೋಳಿ ಪ್ರಮುಖವಾಗಿದೆ. ಈ ಮಾಲಿಚಿ ಹೋಳಿಗೆ ಬೇರೆ ಬೇರೆ ಗ್ರಾಮದ ಸಂಬಂಧ ಇರುತ್ತದೆ. ಈ ಹೋಳಿಗೆ ಅನೇಕ ಗ್ರಾಮದಿಂದ ಜನರು ಸೇರುತ್ತಾರೆ. ಮಾಲಚಿ ಹೋಳಿ ಮೊದಲು ನೇಮದಿನ ರಾತ್ರಿ ಗ್ರಾಮದ ಎಲ್ಲರೂ ಸೇರಿ ದೇವರಿಗೆ ಹೇಳಿಕೆ ಮಾಡಿಕೊಂಡು ಹೋಳಿತರಲಿಕ್ಕೆ ಹೋಗಲಾಗುತ್ತದೆ. ತೆಲೋಲಿ ಗ್ರಾಮದಲ್ಲಿನ ಬುದವಂತ, ಮಿರಾಶಿ ಮತ್ತು ಈ ದೇವರಿಗೆ ಸಂಬಂಧ ಪಟ್ಟವರೆಲ್ಲರೂ ಸೇರಿ ಸಂಜೆಯಾಗುತ್ತಿದ್ದಂತೆ ಎಲ್ಲರೂ ಶ್ರೀ ಸಿದ್ಧನಾಥಾ ದೇವಸ್ಥಾನ ಕಡೆ ಜಮಾವಣೆಗೊಳ್ಳುತ್ತಾರೆ. ನಂತರ ಶ್ರೀ ಭೀವಾ ಪಾವಟೊ ಗಾವಡಾ ಗ್ರಾಮದ ಬುದವಂತ ದೇವರಿಗೆ ಹೇಳಿಕೆ ಮಾಡಿಕೊಂಡು ಗ್ರಾಮದ ಗಡಿದೇವರಿಗೆ ಹೇಳಿಕೆ ಮಾಡಿಕೊಂಡು ಜಾಗೃತ ಮಾಡಲಾಗುತ್ತದೆ. ತೆಲೋಲಿ ಗ್ರಾಮದ ಹೋಳಿ ನೆರೆಯ ಗ್ರಾಮವಾದ ತಳಸೋಡಾ ಗ್ರಾಮದಿಂದ 'ಪಾವ' ಮರದಿಂದ ತರಬೇಕಾಗಿದ್ದರಿಂದ ತಳಸೊಡೆ ಹುಮಟ ಮತ್ತು ಗಾವುಡ ಪುರುಷ ದೇವರಿಗೆ ಹೇಳಿಕೆ ಮಾಡಿ

ಹೋಳಿ ಕಂಬ ತರಲು ಯಾವುದೇ ಅಡಚಣೆ ಆಗಬಾರದೆಂದು ಬೇಡಿಕೊಳ್ಳಲಾಗುತ್ತದೆ. ಭೂಯಿತ್ ದೇವರಿಗೂ ಹೇಳಿಕೆ ಮಾಡಿ ನಂತರ ಗ್ರಾಮದ ಅನೇಕರು ಹೋಳಿ ತರಲು ಹೋಗುತ್ತಾರೆ. ಮೊದಲನೆಯ ದಿನ ಹಗಲಿನಲ್ಲಿ ಹೋಗಿ ನೋಡಿಕೊಂಡು ಬರಲಾದ ಪಾವ ಮರದ ಹೋಳಿ ಕಂಬಕ್ಕೆ ಪೂಜೆ ಮಾಡಿ ಕತ್ತರಿಸಿ 'ತಾಳುಕ್ ಬಾಂಧುನ್' ತರಲಾಗುತ್ತದೆ.

ನಂತರ ಪ್ರಮುಖ ಶ್ರೀ ಸಿದ್ಧನಾಥ ದೇವರಿಗೆ ಕಾಯಿ ಹೊಡೆದು ಎಲ್ಲರಿಗೆ ಕೊಬ್ಬರಿಯ ತುಂಡು ಕೊಟ್ಟು ಪ್ರಸಾದ ಹಂಚಲಾಗುತ್ತದೆ. ಬೆಳಗ್ಗಿನ ನಸುಕಿನ ಜಾವು ಮೈಮೇಲೆ ದೇವರು 'ಮಡಬಾಸ' ಬರುವ, ದೇವರಿಗೆ ಹೇಳಿಕೆ ಮಾಡುವ ಪ್ರಮುಖ ಘಟ್ಟ ನಡೆಯುತ್ತದೆ. ದೇವರಿಗೆ ಹೇಳಿಕೆ ಮಾಡುವ ಬುದವಂತ ಶ್ರೀ ಭೀಮಾ ಪಾವಟೊ ಗಾವಡಾ ಕೈಯಲ್ಲಿ ದೇವರ ಭಗತ ಹಿಡಿದು ದೇವರಿಗೆ ಹೇಳಿಕೆ ಮಾಡಲು ಪ್ರಾರಂಭಿಸುತ್ತಾರೆ. ಮೊದಲು ಮಕ್ಕಳು ಆಗದೇ ಇದ್ದವರು, ಅನಾರೋಗ್ಯಗೊಂಡವರು, ಉದ್ಯೋಗ ಸೇರಿದಂತೆ ಎಲ್ಲಾ ರೀತಿಯಲ್ಲಿ ಸಮಸ್ಯೆಗಳಿಗೆ ಒಳ್ಳೆಯದಾಗಬೇಕೆಂದು ಉದ್ದೇಶದಿಂದ ಅದೇ ಗ್ರಾಮದವರು ಮತ್ತು ಹೊರಗಡೆಯಿಂದ ಬಂದ ಭಕ್ತರು ಹೇಳಿಕೆ ಮಾಡಿಕೊಳ್ಳುತ್ತಾರೆ. ನೂರಾರು ಜನರು ತಮ್ಮ ಇಷ್ಟ ಕಾಮನೆಗಾಗಿ ದೇವರಲ್ಲಿ ಹೇಳಿಕೆ ಮಾಡಿಕೊಳ್ಳುತ್ತಾರೆ.

ನಂತರ ಅತಿ ಪ್ರಮುಖವಾದ ಘಟ್ಟ ಮಡಬಾಸಗಳು ಮೈಮೇಲೆ ಬರುವುದು. ಬುದವಂತ ಸಾಂಗಣ್ಯಾಮಡಬಾಸ ಅಂದರೆ ಹೇಳಿಕೆ ಮಾಡುವ ದೇವರು ಮೈಮೇಲೆ ಬರುತ್ತದೆ. ಈ ಹೇಳಿಕೆ ಮಾಡುವ ಮಡಬಾಸ ಸಾಂಗಣ್ಯ ಮಡಬಾಸದಿಂದ ಭಗತ್ ಅಂದರೆ ಕುಣಬಿಗಳ ಧರ್ಮದಂಡ, ಇದನ್ನು ಕೈಯಲ್ಲಿ ಹಿಡಿದು ದೇವರಿಗೆ ಹೇಳಿಕೆ ಮಾಡಿ ಬುದವಂತ ಪ್ರಾರಂಭಿಸುತ್ತಾರೆ. ಧರ್ಮದಂಡ ಇದು ಗ್ರಾಮದ ಮುಖ್ಯವಾದ ದಂಡವಾಗಿದೆ.

ಕುಳಾವಿಯ ಸೀಮೆಗೆ ಬರುವ ಗಡಿ ದೇವರಿಗೆ ಹೇಳಿಕೆ ಮಾಡಿ ಅಲ್ಲಿಂದ ಒಳ್ಳೆಯ ಚಿತ್ತಗಳು ಬೇಡಿ ಭೂಯಿತ್ ಸ್ಥಾಪನೆ ಮಾಡಲಾಗುತ್ತದೆ. ಗಡಿಯಲ್ಲಿ ಸೀಮೆಯಲಿ ಇರುವ ಕೆಟ್ಟ ಖಂಡಗಳನ್ನು ಒಂದು ವರ್ಷದ ನಿಯಮದಿಂದ ಅಲ್ಲಿಯೇ ನಿಲ್ಲಿಸಲಾಗುತ್ತದೆ. ಹೀಗೆ ಗ್ರಾಮದ ಸುತ್ತಲೂ ಇರುವ ಎಲ್ಲಾ ಗಡಿ ದೇವರ ದೇವತಾಕಾರ್ಯಗಳನ್ನು ನಿಲ್ಲಿಸಿದ ನಂತರ ಭೂಯಿತ್ ಇರುವ ಖಂಡಗಳನ್ನು ಪಾಶ್ಚಾತ್ಯ ಶಬ್ದದಿಂದ ನಿಲ್ಲಿಸಲಾಗುತ್ತದೆ. ಕೊನೆಯಲ್ಲಿ ಭೂಯಿತ್ ಇರುವ ಎಲ್ಲ ಖಂಡಗಳನ್ನು ಸಾಂಗಣೆ ಮಡಬಾಸ್‌ದಿಂದ ನಿಲ್ಲಿಸಿದ ನಂತರ ಭೂಯಿತ್ ಇರುವ ದೇವರ ಎಲ್ಲಾ ವಜನಗಳು ಎಲ್ಲಿಯೂ ನಿಲ್ಲಬಾರದು. ಅದು ಈ ಹಿಂದಿನಂತೆ ಹಾಗೇಯೆ ಆಡಬೇಕು ಎಂದು ಬುದವಂತ ಹೇಳಿಕೆಯಲ್ಲಿ ಹೇಳಿದಾತ ಮಡಬಾಸಗಳು ಮೈಮೇಲೆ ಬರುತ್ತದೆ. ಮೈಮೇಲೆ ಮಡಬಾಸ ಬಾರ ಬಂದ ಅವಸ್ಥೆಯಲ್ಲೇ ಮಿರಾಶಿ ದೇವರ ಗರ್ಭಗುಡಿಗೆ ಹೋಗಿ ದೇವರ ಹಿಂದೆ ಪೂಜಿಸಲಾದ ತರವಾಲ ತರುತ್ತಾರೆ, ಉಳಿದ ಎಲ್ಲರೂ

ಗೋವಿಂದಾ ಭಲೆ ಭಲೆ ಎಂದು ಬೊಬ್ಬೆ ಹಾಕುತ್ತಾರೆ. ಢೋಲು, ಕಂಸಾಳೆ, ಗುಮಟೆ ಬಾರಿಸುತ್ತಾರೆ. ನಂತರ ಭಾರ ಬರುವರೆಲ್ಲರು ಮೈಮೇಲೆ ಮಡಬಾಸ ಬಂದ ಅವಸ್ಥೆಯಲ್ಲಿ ದೇವಸ್ಥಾನದಿಂದ ಹೊರಗೆ ಬರುತ್ತಾರೆ. ದೇವಸ್ಥಾನದ ತುಳಸಿಕಟ್ಟೆ ಮುಂದೆ ಭಾರ ಬಂದ ಅವಸ್ಥೆಯಲ್ಲೆ ತಲವಾರನ್ನು ಬೀಸಿ ಮೈಗೆ ಹೊಡೆದುಕೊಳ್ಳಲಾಗುತ್ತದೆ. ಹೀಗೆ ಎಷ್ಟು ಜನರ ಮೇಲೆ ಮಡಬಾಸ ಭಾರ ಬಂದವರು ಹಾಂಡಪಟ ಮಾಡಿದ ನಂತರ ಎಲ್ಲರೂ ದೇವಸ್ಥಾನದ ಒಳಗೆ ಹೋಗಿ ದೇವರಿಗೆ ಕೈ ಮುಗಿಯುತ್ತಾರೆ. ಭಗತ ಮತ್ತು ತಲವಾರ ದೇವರ ಹಿಂದೆ ಇಡಲಾಗುತ್ತದೆ.

ಹೀಗೆ ಖೇಳಗಳು ಉಪಯೋಗಿಸಿದ ಎಲ್ಲ ತರದ ವಸ್ತುಗಳನ್ನು ಹೆಸರಿಸಿಕೊಂಡು ಖೇಳ ರಂಗೈತಾ, ಖೇಳ ಥಾಂಬೈತಾ ಎಂದು ಹೇಳಿ ಖೇಳ ನಿಲ್ಲಿಸಲಾಗುತ್ತದೆ. ನಂತರ ಮಾಂಡ ಮೇಲೆ ಐದು ಕಾಯಿ ಹೊಡೆಯಲಾಗುತ್ತದೆ. ತಣಯಾಚಿ ಜೋಡಿ ಒಂದು ಮಾಂಡ ಮೇಲೆ ಇಟ್ಟ ನಂತರ ಖೇಳೆ ಹಳ್ಳಕ್ಕೆ ಸ್ನಾನ ಮಾಡಲು ಹೋಗುತ್ತಾರೆ. ಇದಕ್ಕಿಂತ ಮುಂಚೆ ಖೇಳ ತೆಗೆದ ದಿನದಿಂದ ಇಂದಿನವರೆಗೆ ಖೇಳೆ ಸ್ನಾನ ಮಾಡುವಂತಿಲ್ಲ. ಮೈಮೇಲೆ ತೊಟ್ಟ ಸಿಗ್ಮೋದ ಬಟ್ಟೆಗಳನ್ನು ಬಿಚ್ಚಿ ಹಳ್ಳದ ಕೊಂಡಿಯಲ್ಲಿ ಸ್ನಾನ ಮಾಡಿ ಬರುವಾಗ ಬೆಂಕಿ ಹಾರಿಕೊಂಡು ಮನೆಗೆ ಬರಲಾಗುತ್ತದೆ. ಬೆಂಕಿ ಹಾರುವುದು ಎಂದರೆ ಖೇಳ ತಂಡದ ಸದಸ್ಯರಿಗೆ ಸೀಮೆಯ ಹೊರಗಡೆಯಿಂದ ಏನಾದರೂ ಕೆಟ್ಟದ್ದು ಬಾಧಿಸಿದರೆ ಅದು ಬಿಟ್ಟುಹೋಗಬೇಕೆಂಬ ಉದ್ದೇಶದಿಂದ ಬೆಂಕಿ ಹಾರಿಕೊಂಡು ಬರಲಾಗುತ್ತದೆ.

ನಂತರ ಭೂವಂಡಿಗೆ ಹೋಗಲಾಗುತ್ತದೆ. ಕಾಡಿಗೆ ಭೂವಂಡಿಗೆ ಹೋದಾಗ ಏನಾದರೂ ಶಿಕಾರಿ ಮಾಡಿದಲ್ಲಿ ಈ ಭೂವಂಡಿಗೆ ಭೂಯಿತ್ ತರುವುದಿಲ್ಲ. ಹೊರಗಡೆ ಜಂಗಲದಲ್ಲಿ ಪಾಲು ಮಾಡಿ ಎಲ್ಲರಿಗೆ ಹಂಚಲಾಗುತ್ತದೆ. ಈ ಭೂವಂಡಿಯನ್ನು 'ಟಯೋಚೆ' ಭೂವಂಡಿ ಅಂತ ಕರೆಯಲಾಗುತ್ತದೆ. ಇದು ತೆಲೋಲಿ ಗ್ರಾಮದಲ್ಲಿ ಹೋಳಿ ಹಬ್ಬ ಆಚರಣೆಯ ಪದ್ಧತಿಯಾಗಿದೆ. ಹೀಗೆ ಕುಣಬಿಗಳ ಪ್ರತಿಯೊಂದು ಹಬ್ಬ, ಕಾರ್ಯ, ಸಾಂಸ್ಕೃತಿಕ ಚಟುವಟಿಕೆ, ಕುಲಕಸುಬು, ಬೇಟೆ, ಕಿರು ಅರಣ್ಯ, ಉತ್ಪನ್ನಗಳ ಶೇಖರಣೆ, ಚಿಕಿತ್ಸೆ, ನ್ಯಾಯತೀರ್ಮಾನ ಯಾವುದೇ ತರಹದ ವಿಧಿ ವಿಶೇಷ ಆಚರಣೆಗಳನ್ನು ಹಬ್ಬವಾಗಿ ಕುಣಬಿಗಳು ಆಚರಣೆಯಲ್ಲಿ ತರುತ್ತಾರೆ. ಬಹಳ ಪ್ರಮುಖವಾದ ಅಂಶವೆಂದರೆ ಪ್ರತಿಯೊಂದು ಹಬ್ಬಗಳೂ ಸೀಮಾದೈವಗಳ ಹೊರತಾಗಿ ಯಾವುದೂ ನಡೆಯುವುದಿಲ್ಲ. ಕುಣಬಿಗಳ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಪ್ರತಿಯೊಂದು ಉಪಾಸನೆ ಮತ್ತು ಆಚರಣೆಗಳು ಹೆಜ್ಜೆ ಹೆಜ್ಜೆಗೂ ಸೀಮಾದೈವಗಳು ಜೊತೆ ಜೊತೆಗೇ ಬಲೆಯ ರೂಪದಲ್ಲಿ ಹೆಣೆದುಕೊಂಡು ಒಂದಕ್ಕೊಂದು ಪರಸ್ಪರ ಅವಲಂಬನೆ, ಸಮಾಲೋಚನೆ, ಅನುಮತಿ ಮತ್ತು ಅನುಸಂಧಾನಗಳ ಮೂಲಕವೇ ಇಡೀ ಸಮುದಾಯದ ಸಾಮಾಜಿಕ ಜೀವನ ಗಣಿತದ ಕರಾರುವಕ್ಕಾದ ಸೂತ್ರದ ರೀತಿಯಲ್ಲಿ ನಿರ್ದಿಷ್ಟವಾದ ಸೀಮಾದೈವಗಳ

ಜೊತೆ, ಸೀಮಾವಲಯದ ವ್ಯಾಪ್ತಿಯೊಳಗೆ ಹೊರಪ್ರಪಂಚಕ್ಕೆ ಗೋಚರಿಸದಂತೆ ಅವಿರತವಾಗಿ ನಡೆದುಕೊಂಡು ಬರಲಾಗುತ್ತಿದೆ.

ಕುಣಬಿ ಬುಡಕಟ್ಟುಗಳಲ್ಲಿನ ಹಬ್ಬಗಳ ಆಚರಣೆಗಳು ಕುಣಬಿಗಳಲ್ಲಿನ ಸೀಮಾಪದ್ಧತಿಯ ಸೀಮಾದೈವಗಳ ಉಪಾಸನೆಯ ಪ್ರತಿ ಹೆಜ್ಜೆಗಾಗಿ ಕುಣಬಿಗಳಲ್ಲಿ ಸೀಮಾಪದ್ಧತಿ ಎಷ್ಟು ಗಾಢವಾಗಿ ಸಮುದಾಯವಾಗಿವನ್ನು ಆವರಿಸಿಕೊಂಡಿದೆ ಎಂಬುದನ್ನು ಮೇಲೆ ವಿವರಿಸಲಾಗಿರುವ ಹಬ್ಬಗಳು ಪ್ರತಿಬಿಂಬಿಸುವುದನ್ನು ಇಲ್ಲಿ ಕಾಣಬಹುದಾಗಿದೆ.

ಕುಣಬಿ ಬುಡಕಟ್ಟು ಸಾಮಾಜಿಕ ಸಾಂಸ್ಕೃತಿಕ 'ಸಾವಿನ ನಂತರದ ಬದುಕು' ಹೆಚ್ಚು ಪ್ರಾಮುಖ್ಯತೆ ಪಡೆಯುವುದನ್ನು ಸೀಮಾಪದ್ಧತಿಯಲ್ಲಿ ಗಮನಿಸಬಹುದಾಗಿದೆ. ಪ್ರಸ್ತುತ ಮೂರ್ತ ರೂಪದ ಬದುಕಿಗಿಂತ ಅವರ ಸಾವಿನ ನಂತರ ಮಡಿದವರ ಪೂರ್ವಿಕರ ಆತ್ಮಗಳ ಅಮೂರ್ತ ರೂಪದ ಇನ್ನೊಂದು ಲೋಕವೇ ಹೆಚ್ಚು ಪ್ರಾಧಾನ್ಯತೆ ಪಡೆದಿದ್ದು ಮೂರ್ತ ಮತ್ತು ಅಮೂರ್ತಗಳು ಕೂಡಿಕೊಂಡ ವಿಶಿಷ್ಟ ಆಚರಣೆಗಳ ಮೊತ್ತವೇ ಸೀಮಾಪದ್ಧತಿಯಾಗಿದೆ. ಸೀಮಾಪದ್ಧತಿಯ ಮೂಲ ಆಶಯ ತಮ್ಮ ಸಮುದಾಯದ ಪೀಳಿಗೆ ಸೀಮಾವಲಯದೊಳಗೆ ಯಾವುದೇ ಆಹಾರ, ಸಂತತಿ, ಇಡೀ ಸಾಂಸ್ಕೃತಿಕ ಆಚರಣೆ ಮತ್ತು ಸಾಮಾಜಿಕ ಕಾರ್ಯ ಚಟುವಟಿಕೆಗಳ ಭದ್ರತೆಯಾಗಿದೆ. ಅದಕ್ಕಾಗಿ ಆದಿವಾಸಿಗಳು ಕಾಡಿನ ಸಂಕುಲಗಳ ಮತ್ತು ಮಡಿದ ಪೂರ್ವಿಕರ ಆತ್ಮಗಳ ಹಾಗೂ ಕಾಡಿನ ಪಂಚಭೂತಗಳ ಜೊತೆ ಪರಸ್ಪರ ಸೌಹಾರ್ದತೆಯ ಒಪ್ಪಂದ ಮಾಡಿಕೊಂಡು ಕೊಡು–ಕೊಳ್ಳುವಿಕೆಯ ಜೊತೆ ದುಷ್ಟಶಕ್ತಿ, ಹೊರಶತ್ರುಗಳಿಂದ ತೊಂದರೆಯಾಗದಂತೆ ರಕ್ಷಣೆ ಪಡೆಯುವ, ಒಟ್ಟಾರೆ ಆದಿವಾಸಿ ಕಟ್ಟಿಕೊಂಡ ಸಾಂಸ್ಕೃತಿಕ ಕಟ್ಟುಪಾಡುಗಳಿಂದ ಸೀಮೋಲ್ಲಂಘನೆಗೊಳ್ಳದಂತೆ ಪರಸ್ಪರ ರಕ್ಷಣೆ ಪಡೆದು ಸಾಮಾಜಿಕ, ಸಂಸ್ಕೃತಿ ಮತ್ತು ಆಧ್ಯಾತ್ಮಿಕ ನೆಮ್ಮದಿ ಕಾಣುವುದೇ ಸೀಮಾಪದ್ಧತಿಯ ತಿರುಳಾಗಿದೆ ಎಂಬುದನ್ನು ಕುಣಬಿ ಹಬ್ಬಗಳಲ್ಲಿನ ಸೀಮಾದೈವೋ ಉಪಾಸನೆಯಲ್ಲಿ ಕಾಣಬಹುದಾಗಿದೆ. ನೈಸರ್ಗಿಕವಾದ ಕಾಡಿನ ಜೀವಿಗಳ ಸೀಮಾಪದ್ಧತಿಯ ಆಶಯವೂ ಇದೇ ತೆರನಾಗಿರುವುದನ್ನು ಕಾಣಬಹುದು. ಆದರೆ ಅದು ಸಂಪೂರ್ಣ ಆದಿಮ ಸ್ಥಿತಿಯಲ್ಲಿರುತ್ತದೆ. ಆದ್ದರಿಂದ ಆದಿವಾಸಿಗಳಲ್ಲಿನ ಸೀಮಾಪದ್ಧತಿಯ ಜೀವಪರಿಸರದಲ್ಲಿ ಇದ್ದ ಒಂದು ನಡವಳಿಕೆಯ ಒಂದು ಸಂಕೀರ್ಣಗೊಂಡ ವಿಕಸಿತ ಭಾಗವೆಂದು ಹೇಳಬಹುದಾಗಿದೆ.

**ಸಮಾರೋಪ**

ಪ್ರಸ್ತುತ ಅಧ್ಯಾಯದಲ್ಲಿ ಕುಣಬಿ ಸಮುದಾಯದಲ್ಲಿರುವ ಸೀಮಾಪದ್ಧತಿಯ ಕುರಿತ ವಿವರಗಳನ್ನು ಚರ್ಚಿಸಲಾಗಿದೆ. ಇದಕ್ಕೆ ನಾನು ಈ ಅಧ್ಯಯನಕ್ಕಾಗಿ ಮಾಡಿದ ಕ್ಷೇತ್ರಕಾರ್ಯದ ವಿವರಗಳು ಸಹಕಾರಿಯಾಗಿವೆ. ಇಲ್ಲಿನ ಅಂಕಿ–ಅಂಶಗಳನ್ನು ನಿಶ್ಚಿತ ಪ್ರಶ್ನಾವಳಿಯ ಮೂಲಕ

ಪಡೆಯಲಾಗಿದೆ. ಒಟ್ಟಾರೆ ಈ ಅಧ್ಯಾಯದಲ್ಲಿ ಕುಣಬಿಯರ ಭೌಗೋಳಿಕ ವಿವರ, ಸಾಮಾಜಿಕ ಆರ್ಥಿಕ, ಪಾರಂಪರಿಕ ವಿಧಿನಿಷೇಧಗಳು ಮತ್ತು ದೈವಾರಾಧನೆಯಲ್ಲಿ ಸೀಮೆಯ ಕುರಿತ ಅವರ ಆಲೋಚನೆ ಮತ್ತು ಆಚರಣೆಗಳನ್ನು ವಿವೇಚಿಸಲಾಗಿದೆ. ಮುಂದಿನ ಅಧ್ಯಾಯದಲ್ಲಿ ಕರ್ನಾಟಕದ ಇತರೆ ಬುಡಕಟ್ಟುಗಳ ಸೀಮಾಪದ್ಧತಿಯನ್ನು ತೌಲನಿಕ ಚರ್ಚೆಗೆ ಒಳಪಡಿಸಲಾಗಿದೆ.

**ಅಡಿ ಟಿಪ್ಪಣಿಗಳು**

1. ಮಹೇಂದ್ರ ಕುಮಾರ್ ಬಿ ಪಿ, ಬುಡಕಟ್ಟು ಜನಾಂಗದಲ್ಲಿ ಸೀಮೆಯ ಪರಿಕಲ್ಪನೆ, ಆದಿವಾಸಿ ಆಖ್ಯಾನ, ಪು 280, 2006
2. ಬೋರಲಿಂಗಯ್ಯ ಹಿ.ಚಿ. ಕುಣಬಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಪು.18–25, 2010.
3. ಸಂದರ್ಶನ: ಸುಭಾಷ್ ಗಾವಡ, ತೆಲೂಲಿ, ಜೋಯಿಡಾ ತಾ, ಉ.ಕ.ಜಿ.
4. ಸಂದರ್ಶನ: ವಿಷ್ಣು ವೆಳಿಪ್, ಕೊಂದರ್, ಜೋಯಿಡಾ ತಾ, ಉ.ಕ.ಜಿ.

## ಅಧ್ಯಾಯ: ಮೂರು

# ಕರ್ನಾಟಕ ಬುಡಕಟ್ಟುಗಳಲ್ಲಿ ಸೀಮಾಪದ್ಧತಿ: ತೌಲನಿಕ ಚರ್ಚೆ

**ಪೀಠಿಕೆ**

ಪ್ರಸ್ತುತ ಅಧ್ಯಾಯದಲ್ಲಿ ಕರ್ನಾಟಕದ ಆಯ್ದ ಬುಡಕಟ್ಟುಗಳಲ್ಲಿನ ಸೀಮಾಪದ್ಧತಿ ಕುರಿತು ವಿವರಣೆಗಳನ್ನು ನೀಡಿ ತಾತ್ವಿಕ ವಿವೇಚನೆಗೆ ಒಳಪಡಿಸಲಾಗಿದೆ. ಕರ್ನಾಟಕದಲ್ಲಿರುವ ವಿವಿಧ ಮೂಲ ಕಸುಬುಗಳಿಗಡ ಆಧಾರಿತವಾಗಿ ಜೀವನ ನಡೆಸುತ್ತಿರುವ ಬುಡಕಟ್ಟುಗಳ ವೈವಿಧ್ಯತೆಯ ಆಧಾರದಲ್ಲಿ 1. ಆಹಾರ ಸಂಗ್ರಹಕ ಬುಡಕಟ್ಟುಗಳಾದ ಬೆಟ್ಟಕುರುಬ, ಜೇನುಕುರುಬ 2. ಬೇಟೆ ಆಧಾರಿತ ಸಮುದಾಯವಾದ ಮ್ಯಾಸಬೇಡ, 3. ಪಶುಪಾಲಕ ಸಮುದಾಯವಾದ ಕಾಡುಗೊಲ್ಲ, 4. ಕೃಷಿ ಆಧಾರಿತ ಬುಡಕಟ್ಟುಗಳಾದ ಸೋಲಿಗರು, ಸಿದ್ಧಿಗಳು ಮತ್ತು ಹಾಲಕ್ಕಿಗಳು 5. ಸ್ಥಳಾಂತರಗೊಂಡ ಬುಡಕಟ್ಟುಗಳಲ್ಲಿ ಸೀಮಾಪದ್ಧತಿಗಳ ಕುರಿತು ಈ ಅಧ್ಯಾಯದಲ್ಲಿ ವಿವರಣೆ ನೀಡಿ ಚರ್ಚಿಸಲಾಗಿದೆ.

ಆಹಾರ ಸಂಗ್ರಾಹಕ ಬುಡಕಟ್ಟುಗಳಾದ ಬೆಟ್ಟಕುರುಬ ಮತ್ತು ಜೇನುಕುರುಬ ಸಮುದಾಯಗಳು ಕರ್ನಾಟಕದ ಅತ್ಯಂತ ಆದಿಮ ಬುಡಕಟ್ಟುಗಳಾಗಿವೆ. ಮೈಸೂರು. ಚಾಮರಾಜನಗರ, ಕೊಡಗು ಜಿಲ್ಲೆಯ ದಟ್ಟಕಾಡಿನಲ್ಲಿ ವಾಸಿಸುತ್ತಿರುವ ಈ ಸಮುದಾಯಗಳು, ಈ ಜಿಲ್ಲೆಗಳಿಗೆ ಅಂಟಿಕೊಂಡಂತಿರುವ ಕೇರಳ, ತಮಿಳುನಾಡು ಮತ್ತು ಕರ್ನಾಟಕದ ಮೂರು ಗಡಿಗಳು ಕೂಡುವ ಸ್ಥಳಗಳಲ್ಲಿ ವಾಸಿಸುತ್ತಿದ್ದಾರೆ. ತಮಿಳುನಾಡಿನ ನೀಲಗಿರಿ ಭಾಗದಲ್ಲಿ ಕುರುಂಬರು, ಕುಟ್ಟ, ಬಾವಲಿ ಗಡಿಯ ವೈನಾಡು ಕೇರಳದ ಭಾಗದಲ್ಲಿ ಇವರನ್ನು ಕಾಟುನಾಯಕ ಎಂದು ಕರೆಯುತ್ತಾರೆ. ಇವರು ಅಲ್ಲಿಂದ ವಲಸೆ ಬಂದವರೆಂದು ಹೇಳಲಾಗುತ್ತಿದೆಯಾದರೂ, ಮೂರು ರಾಜ್ಯಗಳ ಗಡಿಗಳು ಕೂಡುವ ಭಾಗದಲ್ಲಿ ಈ ಸಮುದಾಯಗಳು ಆಡಳಿತಗಳು ಗಡಿಗುರುತಿಸುವ ಪೂರ್ವದಿಂದಲೂ ತಮ್ಮದೇ ಸಾಂಪ್ರದಾಯಿಕ ಗಡಿಗಳನ್ನು ಗುರುತಿಸು ಬದುಕುತ್ತಿದ್ದವೆಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಮಾನವ ಕೃಷಿಯ ಅನ್ವೇಷಣೆಯ ಪೂರ್ವದಲ್ಲಿ ಕಾಡಿನ ಗೆಡ್ಡೆಗೆಣಸು, ಹಣ್ಣು ಹಂಪಲು. ಬೇಟೆಗಳ ಮೂಲಕ ಆದಿಮ ಸ್ಥಿತಿಯಲ್ಲಿ ಜೀವಿಸುತ್ತಿದ್ದ ಈ ಸಮುದಾಯಗಳೊಳಗಿನ

ಸೀಮಾಪದ್ಧತಿಯನ್ನು ಈ ಸಮುದಾಯಗಳು 'ಜಮ್ಮಾ'ಪದ್ಧತಿ ಎಂದು ಕರೆಯುತ್ತವೆ. ಇತರ ಬುಡಕಟ್ಟುಗಳಿಗಿಂತ ಆದಿಮ ಬದುಕು ಸಾಗಿಸುತ್ತಿರುವ ಈ ಸಮುದಾಯಗಳಲ್ಲಿರುವ ಜಮ್ಮಾ/ ಸೀಮಾಪದ್ಧತಿಯೂ ಕೂಡ ಅತ್ಯಂತ ಪ್ರಾಚೀನವಾದದ್ದು ಮತ್ತು ವಿಭಿನ್ನವಾದುದಾಗಿದೆ.

ಬೇಟೆ, ಪಶುಪಾಲಕ ಸಮುದಾಯಗಳಾದ ಮ್ಯಾಸಬೇಡ ಮತ್ತು ಕಾಡುಗೊಲ್ಲರ ನೆಲೆಗಳು ಇತರ ಬುಡಕಟ್ಟುಗಳಂತೆ ದಟ್ಟ ಕಾಡಿನಲ್ಲಿ ನೆಲೆಸಲಿಲ್ಲ. ಬದಲಾಗಿ ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳು ಕೂಡುವ ಹುಲ್ಲುಗಾವಲು ಬಯಲುಸೀಮೆಯಾದ ಕೊಪ್ಪಳ, ಕೂಡ್ಲಿಗಿ, ಮೊಳಕಾಲ್ಮೂರು, ಚಳ್ಳಕೆರೆ, ಚಿತ್ರದುರ್ಗ, ಹಿರಿಯೂರು, ಪಾವಗಡ, ತುಮಕೂರು, ಗುಬ್ಬಿ ತಾಲ್ಲೂಕುಗಳಲ್ಲಿ ಈ ಸಮುದಾಯಗಳು ನೆಲೆ ನಿಂತಿವೆ. ಪಶುಪಾಲನೆ ಮತ್ತು ಬೇಟೆ ಈ ಸಮುದಾಯಗಳ ಬದುಕಿನ ಮೂಲ ಸೆಲೆ. ಕಾಡಿನ ಆದಿವಾಸಿಗಳಿಗೂ ಬಯಲುಸೀಮೆಯ ಆದಿವಾಸಿಗಳಿಗೂ ಸೀಮಾಪದ್ಧತಿಗಳಲ್ಲಿ ವಿಭಿನ್ನತೆಗಳನ್ನು ಕಾಣಬಹುದಾಗಿದೆ.

ಕೃಷಿ ಆಧಾರಿತ ಸಮುದಾಯಗಳಾದ ಸೋಲಿಗರು, ಸಿದ್ಧಿಗಳು ಮತ್ತು ಹಾಲಕ್ಕಿಗಳಲ್ಲಿ, ಸೋಲಿಗರ ಜಮ್ಮಾಪದ್ಧತಿಯು ಜೇನುಕುರುಬ ಮತ್ತು ಬೆಟ್ಟಕುರುಬರ ಸಾಮ್ಯತೆಗಳು ಹೆಚ್ಚಿದೆ. ಸಿದ್ಧಿ ಮತ್ತು ಹಾಲಕ್ಕಿಗಳಲ್ಲಿರುವ ಸೀಮಾಪದ್ಧತಿಯು ಕುಣಬಿಗಳ ಸೀಮಾಪದ್ಧತಿಯ ಕೆಲವು ಸಂದರ್ಭಗಳಲ್ಲಿ ಸ್ವಾಮ್ಯತೆಗಳಿದ್ದರೂ ಪರಸ್ಪರ ಭಿನ್ನವಾದ ಸಾಂಸ್ಕೃತಿಕ ರೂಪಗಳನ್ನು ಹೊಂದಿರುತ್ತದೆ. ಸೋಲಿಗರು ಮೈಸೂರು ಜಿಲ್ಲೆಯ ಚಾಮರಾಜನಗರ, ಬಿಳಿಗಿರಿರಂಗನ ಬೆಟ್ಟ, ಮಹದೇಶ್ವರ ಬೆಟ್ಟ, ಯಳಂದೂರು, ಹೆಚ್.ಡಿ ಕೋಟೆ, ಹುಣಸೂರು, ಬೆಂಗಳೂರು, ಮಂಡ್ಯ, ತುಮಕೂರು, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಕೋಲಾರ ಮತ್ತು ಚಿತ್ರದುರ್ಗಗಳಲ್ಲಿ ವಿಸ್ತೃತವಾಗಿ ತಮ್ಮ ಬದುಕನ್ನು ವಿಸ್ತರಿಸಿಕೊಂಡಿರುವುದು ಕಂಡುಬರುತ್ತದೆ. ಆದರೆ ಸಿದ್ಧಿಗಳು ಮತ್ತು ಹಾಲಕ್ಕಿಗಳು ಉತ್ತರ ಕನ್ನಡ ಜಿಲ್ಲೆಗೆ ಸೀಮಿತವಾಗಿ ತಮ್ಮ ನೆಲೆಯನ್ನು ಸೀಮಿತಗೊಳಿಸಿಕೊಂಡಿರುವುದು ಕಂಡುಬರುತ್ತದೆ. ಕರ್ನಾಟಕದ ಈ ಬೇರೆ ಬೇರೆ ಭೌಗೋಳಿಕ ಮತ್ತು ವೈವಿಧ್ಯ ಜೀವನ ಮೂಲ ಬುಡಕಟ್ಟುಗಳಲ್ಲಿ ಸಂಗ್ರಹಿಸಿರುವ ಸೀಮಾಪದ್ಧತಿಗಳನ್ನು ಕುಣಬಿ ಸೀಮಾಪದ್ಧತಿಗೆ ಹೋಲಿಸಿ ಈ ಅಧ್ಯಯನದಲ್ಲಿ ತೌಲನಿಕವಾಗಿ ವಿಶ್ಲೇಷಿಸಲಾಗಿದೆ.

1. ಕರ್ನಾಟಕ ಬುಡಕಟ್ಟುಗಳಲ್ಲಿ ಸೀಮಾಪದ್ಧತಿ
2. ಆಹಾರ ಸಂಗ್ರಹಕ ಬುಡಕಟ್ಟುಗಳಲ್ಲಿ–ಬೆಟ್ಟಕುರುಬ, ಜೇನುಕುರುಬ
3. ಬೇಟೆ ಸಮುದಾಯಗಳಲ್ಲಿ–ಮ್ಯಾಸ ಬೇಡ
4. ಪಶುಪಾಲಕ ಸಮುದಾಯಗಳಲ್ಲಿ–ಕಾಡುಗೊಲ್ಲ
5. ಕೃಷಿಕ ಸಮುದಾಯಗಳಲ್ಲಿ–ಸೋಲಿಗರು, ಸಿದ್ಧಿಗಳು, ಹಾಲಕ್ಕಿ
6. ಸ್ಥಳಾಂತರ ಬುಡಕಟ್ಟು ಸಮುದಾಯಗಳಲ್ಲಿ ಸೀಮಾಪದ್ಧತಿ

## ಜೇನುಕುರುಬರ ಕಿರು ಪರಿಚಯ

ಕರ್ನಾಟಕದಲ್ಲೇ ತುಂಬಾ ಹಿಂದುಳಿದ ಅತ್ಯಂತ ಆದಿಮ ಸ್ಥಿತಿಯ ಸಂಸ್ಕೃತಿಯನ್ನು ಹೊಂದಿರುವ ಎರಡು ಬುಡಕಟ್ಟುಗಳಲ್ಲಿ ಜೇನುಕುರುಬ ಸಮುದಾಯವೂ ಒಂದು. ಕೇಂದ್ರ ಸರ್ಕಾರವು ಜೇನುಕುರುಬ ಮತ್ತು ಕೊರಗ ಸಮುದಾಯಗಳನ್ನು Primitive tribe ಎಂದು ಘೋಷಿಸಿದೆ. ಭಾರತದ ಅತ್ಯಂತ ಪ್ರಾಚೀನ ಮೂಲ ಸಂಸ್ಕೃತಿ ಹೊಂದಿರುವ ಆದಿವಾಸಿಗಳಲ್ಲಿ ಜೇನುಕುರುಬರು ಪಶ್ಚಿಮಘಟ್ಟದ ಮೂಲನಿವಾಸಿಗಳಾಗಿದ್ದಾರೆ.

ಪಶ್ಚಿಮ ಘಟ್ಟದ 5 ಜಿಲ್ಲೆಗಳ ದಟ್ಟಕಾಡಿನಲ್ಲಿ ಜೀವಿಸುತ್ತಿರುವ ಜೇನುಕುರುಬರು ಕೇರಳದ ವೈನಾಡ್ ಜಿಲ್ಲೆಯ ಮಾನಂದವಾಡಿ ಪ್ರದೇಶದಲ್ಲಿ 'ಕಾಟುನಾಯಕ' ಎಂತಲೂ, ತಮಿಳುನಾಡಿನ ನೀಲಗಿರಿ ಜಿಲ್ಲೆಯ ಉದಕ ಮಂಡಳ ಕಾಡುಗಳಲ್ಲಿ 'ಕುರುಂಬರು' ಎಂತಲೂ, ಕರ್ನಾಟಕ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ, ಪಿರಿಯಾಪಟ್ಟಣ, ಹುಣಸೂರು, ನಂಜನಗೂಡು, ಕೊಡಗು ಜಿಲ್ಲೆಯ ವಿರಾಜಪೇಟೆ, ಸೋಮವಾರಪೇಟೆ, ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ, ಹಾಸನ ಜಿಲ್ಲೆಯ ಅರಕಲಗೂಡು ಹಾಗೂ ಸಕಲೇಶಪುರದ ಪಶ್ಚಿಮಘಟ್ಟದ ಕಾಡಿನಂಚುಗಳಲ್ಲಿ ಜೇನುಕುರುಬರ ವಾಸಸ್ಥಳಗಳನ್ನು ಕಾಣಬಹುದಾಗಿದೆ. ಭೂಖಂಡಗಳು ಚದುರುವ ಮೊದಲು(Continental Drift) 50 ಸಾವಿರ ವರ್ಷಗಳ ಹಿಂದಿನ ಚರಿತ್ರೆಯಲ್ಲಿ ಬದುಕಿದ್ದರೆಂಬ ಮಾನವಶಾಸ್ತ್ರ ದಾಖಲೆ ಆಧಾರಗಳು ಅಧ್ಯಯನಗಳಿಂದ ತಿಳಿದುಬಂದಿದೆ.

ಕರ್ನಾಟಕದ ಪಶ್ಚಿಮಘಟ್ಟದಲ್ಲಿ ಮೈಸೂರು, ಕೊಡಗು, ಚಾಮರಾಜನಗರ ಜಿಲ್ಲೆಗಳಲ್ಲಿ ಸುಮಾರು 61,500ಕ್ಕೂ ಹೆಚ್ಚಿನ ಜನಸಂಖ್ಯೆಯಲ್ಲಿ ವಾಸಿಸುತ್ತಿರುವ ಜೇನುಕುರುಬರು ತಮ್ಮ ಪುಟ್ಟ ಪುಟ್ಟ ಹಳ್ಳಿಗಳನ್ನು 'ಹಾಡಿ' ಎಂದು ಕರೆಯುತ್ತಾರೆ. ಅತ್ಯಂತ ಸರಳವಾದ ಗುಡಿಸಲು ಕಟ್ಟಿಕೊಳ್ಳುವ ಇವರು ಬಿದಿರು, ಮಣ್ಣು, ಸೋಲೆ ಹುಲ್ಲನ್ನು ಬಳಸಿ 10–15 ಅಡಿ ಆವರಣದೊಳಗೆ ಗುಡಿಸಲನ್ನು ನಿರ್ಮಿಸಿಕೊಳ್ಳುತ್ತಾರೆ. ನೂರಾರು ವರ್ಷಗಳ ಹಿಂದೆ ಮರಗಳ ಮೇಲೆಯೇ ಗುಡಿಸಲು ನಿರ್ಮಿಸಿ ಬದುಕುವ ಕಲೆ ಅವರಿಗೆ ತಿಳಿದಿತ್ತೆಂದು ಹೇಳಲಾಗುತ್ತಿದೆ. ಮನೆಯಲ್ಲಿ ಸಾವಾದರೆ, ಗುಡಿಸಲು ಮಸಿ ಹಿಡಿದರೆ ಬದಲಿಸಿ ಹೊಸದನ್ನು ಕಟ್ಟಿಕೊಳ್ಳುತ್ತಾರೆ. ಆಹಾರ ಸಂಗ್ರಾಹಕ ಬುಡಕಟ್ಟುಗಳಾದ ಇವರು ಕಾಡಿನ ಗೆಡ್ಡೆ ಗೆಣಸು, ಜೇನು, ಅಣಬೆ, ಬೇಟೆ ಇವುಗಳ ಆಹಾರದಲ್ಲೇ ಜೀವನ ಸಾಗಿಸುತ್ತಿದ್ದವರು. ಕುಂಬರಿ ಬೇಸಾಯ ಮಾಡಿಕೊಂಡಿದ್ದು ಪ್ರಮುಖವಾಗಿ ರಾಗಿ ಬೆಳೆಯುತ್ತಿದ್ದರು. ಜೇನು, ಬೇಟೆ ಮತ್ತು ಆನೆ ಪಳಗಿಸುವುದರಲ್ಲಿ ಅತ್ಯಂತ ನುರಿತ ಜ್ಞಾನವನ್ನು ಹೊಂದಿರುವವರು ಜೇನುಕುರುಬರು. ಜೇನಿನ ಬಗ್ಗೆ ಅತ್ಯಂತ ಸೂಕ್ಷ್ಮ ಜ್ಞಾನವನ್ನು ಹೊಂದಿರುವ ಈ ಸಮುದಾಯ ಜೇನಿನ ಎಲ್ಲಾ ಚಲನವಲನಗಳನ್ನು ಅರಿತಿರುವ ಹಾಗೂ ಜೇನನ್ನು ಮುಖ್ಯ ಆಹಾರವಾಗಿ ಬಳಸಿದ ಕಾರಣ ಈ ಸಮುದಾಯಕ್ಕೆ

'ಜೇನುಕುರುಬ' ಎಂಬ ಹೆಸರು ಪ್ರಾಪ್ತಿಯಾಗಿರಬೇಕು. ಒಂದು ಸಮುದಾಯದ ಜಾನಪದ ಕಥೆ ಮತ್ತು ಹಾಡುಗಳಲ್ಲಿ ಯಥೇಚ್ಛವಾಗಿ ಬಳಕೆಯಾಗುವುದು ಅವರ ಮೂಲ ಕುಲ ಕಸುಬಾಗಿರುತ್ತದೆ. ಹಾಗಾಗಿ ಜೇನುಕುರುಬಬರಲ್ಲಿ ಹೆಚ್ಚಿನ ಜಾನಪದ ಹಾಡುಗಳು ಜೇನಿಗೆ ಸಂಬಂಧಪಟ್ಟದ್ದಾಗಿದೆ. ಜೇನು ಕೀಳುವಾಗಲೂ ಜೇನಿನ ಹಾಡನ್ನೆ ಬಳಸಿ ಕೀಳುತ್ತಾರೆ. ಜೇನನ್ನು ಆಕಾಶದರಮನೆಗೆ ಹೋಲಿಸಿ ಹಾಡುತ್ತಾರೆ.

"ಜೇನು ಹುಟ್ಟುವಾಗ ಏಳಾಳು ಅಣ್ಣತಮ್ಮ
ಜೇನೇ ಹುಟ್ಟುವಾಗ ಏಳಾಳು ಅಣ್ಣತಮ್ಮ
ಜೇನೇ ಬೆಳೆದಾಗ ದಿಕ್ಕಪಾಲು ॥ಜೇನೇ ಬುಡುಬುಡು॥
ಜೇನೇ ಹೋಗುವಾಗ ಒಂದೇ ದಾರಿ
ಜೇನೇ ಬರುವಾಗ ದಿಕ್ಕಾಪಾಲು
ಜೇನೇ ರಾಗೀಯ ಹೂವ ಕೀದು
ಜೇನೇ ರಾಗ ಮಾಡಿ ಲೆಂಗಿದೋ ॥ಜೇನೇ ಬುಡುಬುಡು॥
ಜೇನೇ ತಾರೀಯ ಹೂವಕೀದು
ಜೇನೇ ತಾರಾಡಿ ಲೆಂಗಿದೋ ॥ಜೇನೇ ಬುಡುಬುಡು॥
ಜೇನೇ ಏಳು ಬೆಟ್ಟದಾಚೆ ಕಪ್ಪುಗಾಗಿ
ಜೇನೇ ಒರೆಕಾರ ಬಂದನೀಗ
ಜೇನೇ ಪೂಣೆ ವರಜಿ ತಂದಾನೀಗ ॥ಜೇನೇ ಬುಡುಬುಡು॥
ಜೇನೇ ಏಳುನೂರು ಹಗ್ಗತಂದು
ಜೇನೇ ಏಳುನೂರು ಮಣಿತಂದು ॥ಜೇನೆ ಬುಡುಬುಡು॥
ಜೇನೇ ಏಳುನೂರು ಒತ್ತೆ ತಂದು
ಜೇನೇ ಏಳುನೂರು ಒತ್ತೆ ಬೆಳಗಿ ॥ಜೇನೇ ಬುಡುಬುಡು॥
ಜೇನೇ ಆಕಾಶ ಎಂಬ ಅರಮನೆ
ಜೇನೇ ನಿನಗೆ ಕಾಣೆ ಸುಖನಿದ್ರೆ ॥ಜೇನೇ ಬುಡುಬುಡು॥
ಜೇನೇ ಮುಂದೆ ಬಂದು ಹೂವಿನ ತಟ್ಟೆ
ಜೇನೇ ಹಿಂದೆ ಬರಾದೆ ತಲೆಯಾ ತುಪ್ಪ ॥ಜೇನೇ ಬುಡುಬುಡು ॥ದ
ಜೇನೇ ಕೊಂಬು ಕೊಂಬಲೆ ತೂಗವನ

ಜೇನೇ ಸಾಕಿದು ಪೂಣೆಬಿಟ್ಟ ॥ ಜೇನೇ ಬುಡುಬುಡು ॥

ಜೇನೇ ನಾಕೀಯಾದೆ ಬಂಡೆಪಟ್ಟೆ

ಜೇನೇ ತಮ್ಮ ಕಿಯ್ಯಾದೆ ನೂಲುವರಜಿ ॥ಜೇನೇ ಬುಡುಬುಡು॥

ಜೇನೇ ಜೇನು ಕೀಯಾನ ಹೆಂಡ್ತಿ ಮುಂಡೆಬಾಳು

ಜೇನೇ ಪೂಣಿ ಹಿಡಿಯಾನ ಹೆಂಡ್ತಿ ಸುಖಬಾಳು॥ ಜೇನೇ ಬುಡುಬುಡು ॥[1]

ಎಲ್ಲಾ ಸಮುದಾಯಗಳಲ್ಲಿರುವಂತೆ ಹಾಡಿಯ ಹಿರಿಯರು, ಮಡಿದ ಪೂರ್ವಿಕರ ಆತ್ಮಗಳೇ ಇವರ ದೈವಗಳು. ಹೆತ್ತಜ್ಜ, ಅಜ್ಜಮ್ಮಗಳೇ ಇವರಿಗೆ ಆಪ್ಯಾಯಮಾನ. ಇವರ ಬೊಮ್ಮ ಬೊಮ್ಮಿ, ಮಾಚ, ಮಾಚಿ, ಕ್ಯಾತ (ಕೇತ) ಸಿದ್ದ, ಸಿದ್ದಿ, ಕೆಂಚ, ಕೆಂಚಿ, ತಿಮ್ಮ, ತಿಮ್ಮಿ, ಸಣ್ಣ, ಸಣ್ಣಿ, ತಿಮ್ಮ, ತಿಮ್ಮಿ, ಪುಟ್ಟ, ಪುಟ್ಟಿ, ರಂಗ, ರಂಗಿ ಇತ್ಯಾದಿ ಅಚ್ಚಕನ್ನಡ ಸರಳ ಹೆಸರುಗಳಿಂದ ಕರೆಯುತ್ತಾರೆ.

ಹಾಡಿಯಲ್ಲಿ ದೇವರಗುಡ್ಡ ಅಥವಾ ಗುಡ್ಡಯ್ಯನೆಂಬ ಧಾರ್ಮಿಕ ಮುಖಂಡನಿರುತ್ತಾನೆ. ಇತರ ಬುಡಕಟ್ಟುಗಳಲ್ಲಿ ಬುಧವಂತ, ಬಿಂಜೆಕಾಳ, ಅಜ್ಜಯ್ಯಗಳು ಇರುವ ಹಾಗೆ ಗುಡ್ಡಯ್ಯ ಹಾಡಿಯ ಮುಖ್ಯ ಕೇಂದ್ರ ಬಿಂದು ಶಮನ್ ಆಗಿರುತ್ತಾನೆ. ಯಾವುದೇ ಸಮಸ್ಯೆಗಳಿಗೂ ಈತನ ಮೈಮೇಲೆ ದೈವಗಳು ಆವಾಹನೆಗೊಂಡು ಸಮಸ್ಯೆಗಳನ್ನು ಪರಿಹರಿಸುವ ಕಾರ್ಯವನ್ನು ಗುಡ್ಡಯ್ಯ ಮಾಡುತ್ತಾನೆ. ಸರಳವಿವಾಹ, ಸಮಾನತೆ, ಸಹಕಾರ, ಹಂಚಿ ಬದುಕುವ, ತಾರತಮ್ಯ, ನಿರೀಕ್ಷಣೆಗಳಿಲ್ಲದ ನೆಮ್ಮದಿಯ ಬದುಕು ಜೇನುಕುರುಬರದ್ದು.

ಹಾಡಿಗಳಲ್ಲಿನ ನ್ಯಾಯತೀರ್ಮಾನ ಅತ್ಯಂತ ಸರಳವಾದದ್ದು. ಗುಡ್ಡಯ್ಯ ಮತ್ತು ಹಾಡಿಯ ಹಿರಿಯರು ಕೂತು ನ್ಯಾಯತೀರ್ಮಾನ ಮಾಡುತ್ತಾರೆ. ಬಹುತೇಕ ಕಡೆ ಕ್ರಮಿಸುವ ನಿರ್ಧಾರಗಳೇ ಹೆಚ್ಚಾಗಿರುತ್ತವೆ. ಒಳಜಗಳಗಳಲ್ಲಿ ಎಲೆ-ಅಡಿಕೆ ಪರಸ್ಪರ ವಿನಿಮಯದ ಮೂಲಕ ರಾಜಿ ಇಲ್ಲ. ಅತ್ಯಲ್ಪದಂಡ, ಮನಸ್ಸಿನ ಪರಿವರ್ತನೆಗೆ ತಿದ್ದಿಕೊಳ್ಳುವುದಕ್ಕೆ ಆಸ್ಪದ ಸೌಹಾರ್ದಯುತವಾದ ವಾತಾವರಣ ನಿರ್ಮಾಣ ಜೇನುಕುರುಬರ ನ್ಯಾಯತೀರ್ಮಾನದಲ್ಲಿ ಕಾಣಬಹುದಾಗಿದೆ. ಎರಡು ಮೂರು ಹಾಡಿಗಳ ತಕರಾರು ಬಂದಲ್ಲಿ 'ಜಮ್ಮಾ'/ಗಡಿ ನ್ಯಾಯಕ್ಕೆ ಹಾಕಲಾಗುತ್ತದೆ. ನ್ಯಾಯಕಟ್ಟೆಯಲ್ಲಿ ಹತ್ತಾರು ಹಾಡಿಯ ಹಿರಿಯರು ಕೂಡಿಕೊಂಡು ಸರಳ ರೀತಿಯ ತೀರ್ಪನ್ನು ಕೊಡುವ ಮೂಲಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲಾಗುತ್ತದೆ.

**ಜೇನುಕುರುಬರಲ್ಲಿ ಜಮ್ಮಾ/ಸೀಮಾಪದ್ಧತಿ**

ಮೈಸೂರು, ಚಾಮರಾಜನಗರ, ಕೊಡಗು ಹಾಗೂ ಹಾಸನ, ಸಕಲೇಶಪುರ ಪಶ್ಚಿಮಘಟ್ಟದ ಕಾಡಿನಲ್ಲಿ ವಾಸಿಸುವ ಜೇನುಕುರುಬರಲ್ಲಿ ಸೀಮಾಪದ್ಧತಿಯು ಅತ್ಯಂತ ಆದಿಮ ರಚನೆಯುಳ್ಳದ್ದಾಗಿದೆ.

ಜೇನುಕುರುಬರು ಸೀಮಾವನ್ನು 'ಜಮ್ಮಾ'ವೆಂದು ಕರೆಯುತ್ತಾರೆ. ಕುಣಬಿಗಳಲ್ಲಿ ಕಾಡಿನೊಳಗಿನ ಪ್ರತಿಯೊಂದು ಕುಳಾವಿಗೊಂದು ಪ್ರತ್ಯೇಕವಾದ ಸೀಮಾವಲಯ ಇರುವಂತೆ ಜೇನುಕುರುಬ ಜಮ್ಮಾಪದ್ಧತಿಯಲ್ಲಿ ಇರುವುದಿಲ್ಲ. ಬದಲಾಗಿ 10–20 ಹಾಡಿಗಳಿಗೆ ಪ್ರತ್ಯೇಕವಾದ ಕಾಡಿನ ದೊಡ್ಡ ಕ್ಷೇತ್ರವಲಯವೇ ಜಮ್ಮವಾಗಿರುತ್ತದೆ. ಒಂದೇ ಪಂಗಡಕ್ಕೆ ಸೇರಿದ ಹಾಡಿಗಳ ಗುಂಪು ಸೇರಿಕೊಂಡು ಕಾಡಿನ ಒಂದು ಭಾಗವನ್ನು ತಮ್ಮ ಜಮ್ಮಾ ಕ್ಷೇತ್ರವನ್ನಾಗಿ ಮಾಡಿಕೊಂಡಿರುತ್ತಾರೆ. ಹೆಚ್.ಡಿ.ಕೋಟೆಯ ಜೇನುಕುರುಬರ ಹಿರಿಯ ಸೋಮಣ್ಣ ಬುಡಕಟ್ಟು ಹೋರಾಟಗಾರ, ನಾಯಕನಾಗಿ ರೂಪಗೊಂಡವ, ಜೀವನದುದ್ದಕ್ಕೂ ಆದಿವಾಸಿಗಳಿಗಾಗಿ ಹೋರಾಡುತ್ತಲೇ, ಚಳುವಳಿಗಳನ್ನು ರೂಪಿಸುತ್ತಲೇ ಬೆಳೆದವರು ಅವರೊಂದಿಗೆ 'ಜಮ್ಮಾ' ಕುರಿತು ಸಂದರ್ಶನ ಕೈಗೊಂಡಾಗ ಜೇನುಕುರುಬರಲ್ಲಿ ಜಮ್ಮಾ ವಿಂಗಡಣೆಯಾದ ಬಗ್ಗೆ ವಿವರಣೆಗಳ ಕಂತೆಯನ್ನೇ ನನ್ನ ಮುಂದೆ ಬಿಚ್ಚಿಟ್ಟರು.

### ಆದಿವಾಸಿ ಹೋರಾಟಗಾರ ಜೇನುಕುರುಬ ಸೋಮಣ್ಣನೊಟ್ಟಿಗೆ ಸಂದರ್ಶನ

ಹೆಗ್ಗಡದೇವನ ಕೋಟೆ ತಾಲ್ಲೂಕಿನ ಮೊತ್ತ ಹಾಡಿಯ ಸೋಮಣ್ಣ 59 ವರ್ಷದ ಹಿರಿಯ. ತಂದೆ ಹಾಡಿಯಿಂದ ಹಾಡಿಗೆ ವಲಸೆ ಹೋದ ಕಾರಣ ಕಚ್ಚನಹಾಡಿ, ಅಣ್ಣೂರ್, ಹೊಸಳ್ಳಿ, ಮಾರ್‍ನಾಡಿ, ಸೀಗೂರ್ ಹಾಡಿ, ಹುಣಸೆಕೊಪ್ಪ ಹಾಡಿಗಳಿಗೆ ಬಾಲ್ಯದಲ್ಲೆ ಓಡಾಡಿದ ಅನುಭವ. ತಂದೆ ಕುನ್ನಯ್ಯನಿಗೆ ಕಚ್ಚಮ್ಮನಹಳ್ಳಿ ಮಾರಮ್ಮ ಮೈಮೇಲೆ ಬರುತ್ತಿದ್ದಳು. ಸೋಮಣ್ಣ 3 ವರ್ಷದವರಿದ್ದಾಗಲೇ ತಂದೆ ತೀರಿ ಹೋದ ಕಾರಣ ಬಸಮ್ಮ ತಾಯಿಯೇ ಎಲ್ಲಾ ಸರ್ವಸ್ವ ತಾಯಿ ಹೇಳಿದ ತನ್ನ ಸಮುದಾಯದ ಜಾನಪದ ಕಥೆಯನ್ನು ಒಂದೂ ಮರೆಯದಂತೆ ತನ್ನ ಸ್ಮೃತಿಪಟಲದಲ್ಲಿ ಅಳಿಯದಂತೆ ದಾಖಲು ಮಾಡಿಕೊಂಡಿರುವ ಸೋಮಣ್ಣ ಒಬ್ಬ ಅದ್ಭುತ ಆದಿವಾಸಿ. ಬುಡಕಟ್ಟು ಹೋರಾ ಗಾರ. ತನ್ನ ಜೀವನದುದ್ದಕ್ಕೂ ಆದಿವಾಸಿಗಳಿಗಾಗಿ ಹೋರಾಡುತ್ತಲೇ, ಚಳುವಳಿಗಳನ್ನು ರೂಪಿಸುತ್ತಲೇ ಬೆಳೆದವ. ಆದಿವಾಸಿಗಳಿಗಾಗಿ ಶಾಸಕ ಸ್ಥಾನಕ್ಕೂ ನಿಂತು ಸೋತು ಗೆದ್ದವ. ನಾನು ಹೀಗೆ ಜಮ್ಮಾ ಬಗ್ಗೆ ಅಧ್ಯಯನ ನಡೆಸುತ್ತಿದ್ದೇನೆ ಮಾಹಿತಿ ನೀಡಿ ಎಂದಾಗ ಆ ಬಗ್ಗೆ ತಾಯಿ ಹೇಳಿದ ಜಮ್ಮಾ ವಿಂಗಡನೆ ಬಗ್ಗೆ ವಿವರಣೆಗಳ ಕಂತೆಯನ್ನೇ ನನ್ನ ಮುಂದೆ ಬಿಚ್ಚಿಟ್ಟ.[2]

ಆಗ ಜೇನುಕುರುಬರ ಸಂಖ್ಯೆ ಬಹಳ ಕಡಿಮೆಯಿತ್ತು. ಜಮ್ಮಾ ಆಗಲಿ ಅಥವಾ ಗಡಿಗಳಾಗಲೀ ಅಸ್ತಿರಲಿಲ್ಲ. ಯಾವಾಗ ರಾಜ ಮಹಾರಾಜರುಗಳ ಶಕೆ ಶುರುವಾಯಿತೋ ಆಗ ಮೂರನೇ ವ್ಯಕ್ತಿಗಳು ತಮ್ಮ ಜಮ್ಮಾ ಗಡಿಯೊಳಗೆ ತೂರಿಬಂದರು. ಕಪ್ಪ ಕಾಣಿಕೆಗಳನ್ನು ವಸೂಲಿಗೆ ಶುರುವಿಟ್ಟುಕೊಂಡರು. ಹೊರ ನಾಗರಿಕ ಜಗತ್ತಿನ ಚಾಲಾಕಿತನ ಗೊತ್ತಿಲ್ಲದ ಮುಗ್ಧ ಆದಿವಾಸಿಗಳು ಕಾಡಿನ ನಿಯಮಗಳ ಮೀರಿ ನಿಂತು ತಮ್ಮ ಪವಿತ್ರತೆಗಳನ್ನು ಹಾಳು

ಮಾಡಿಕೊಳ್ಳುವಂತಾಯಿತು. ಪಿರಿಯಾಪಟ್ಟಣದ ಕಾಳಗಗಳಲ್ಲಿ ಬುಡಕಟ್ಟುಗಳನ್ನು ಎರಡು ಗುಂಪುಗಳಿಗೆ ಬಳಸಿಕೊಂಡು ಮೊದಲ ಬಾರಿಗೆ ದ್ವೇಷ, ಗುಂಪುಗಾರಿಕೆ ಶುರುವಿಟ್ಟುಕೊಂಡಿತು. ಆಗಲೇ ಹುಟ್ಟಿಕೊಂಡದ್ದು ಎರಡು ಗುಂಪು. ಒಂದು ಐಗೋಲಿ ಗುಂಪು ಇನ್ನೊಂದು ಅಂಬಾಳೆ ಗುಂಪು. ಎರಡು ಗುಂಪುಗಳು ಬೇರೆ ಬೇರೆ ದೈವಗಳಿಗೆ ನಡೆದುಕೊಳ್ಳಲು ಶುರು ಮಾಡಿದರು. ಮೊದಲ ಬಾರಿ ರಾಜರುಗಳ ಮಧ್ಯವರ್ತಿಗಳ ಮೂಲಕ ಹೆಂಡ ಕುಡಿಯಲು, ದ್ವೇಷ ಮಾಡಲು, ಮೋಸ ಮಾಡಲು ಕಲಿತು, ಜಮ್ಮಾ ಮತ್ತು ದೈವಗಳ ನೇಮವನ್ನು ಬಿಟ್ಟು ಅಪವಿತ್ರರಾದರು. ಇದರಿಂದ ದೈವಗಳಿಗೆ ಸಿಟ್ಟುಬಂದು ಶಾಪ ಕೊಟ್ಟ ಕಾರಣ ತಾಯಿಯ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳು ಬುದ್ಧಿಮಾಂದ್ಯರಾಗಿಯೋ ಇಲ್ಲ ಗರ್ಭಸ್ರಾವವಾಗಿಯೋ ಕಾಯಿಲೆಯಿಂದಾಗಿಯೋ ತೀರಿಕೊಂಡು ಬಿಡುತ್ತಿದ್ದವು. ಆಗ ಗುಡ್ಡಯ್ಯಗಳು ದೇವರೊಟ್ಟಿಗೆ ಸಂಭಾಷಣೆ ನಡೆಸಿ ವಾದಕ್ಕಿಳಿದರು. ಆಗ ದೇವರು ನೀವು ನನ್ನ ಮಾತು ತಪ್ಪಿದ್ದೀರಿ. ಹಾಗಾಗಿ ನಿಮ್ಮಲ್ಲಿ ಈ ಸಮಸ್ಯೆ ಬರಬಾರದೆಂದರೆ ಒಂದು ಉಪಾಯ ಮಾಡಿ, ಹೊಸಳ್ಳಿ ಹತ್ತಿರ ಒಂದು ದೇವರಿದೆ. ಆ ಗುಂಪಿಗೆ ಹೋಗಿ ಆ ಜಮ್ಮಾ ದೈವಗಳಿಗೆ ನಡೆದುಕೊಳ್ಳಿ. ಆ ದೈವಗಳು ನಿಮಗೆ ತೊಂದರೆ ಕೊಡುವುದಿಲ್ಲ. ನಿಮಗೆ ನನ್ನ ಶಾಪವೂ ತಟ್ಟುವುದಿಲ್ಲ ಎಂದು ದೇವರು ಹೇಳುತ್ತದೆ. ಅದರ ಪ್ರಕಾರ ಗುಂಪು ಮೂರ್ಕಲ್ ಗಡಿ ಒಂದು ಗುಂಪು, ತರಿಕಲ್ ಗಡಿ ಒಂದು ಗುಂಪು, ಸೀಗೂರ್ ಗಡಿ ಒಂದು ಗುಂಪು, ಕಟ್ಟೆಮ್ಮನ ಗಡಿ ಇನ್ನೊಂದು ಗುಂಪುಗಳಾದವು.

1. ಮೂರ್ಕಲ್ ಗಡಿಗೆ–ಹುಣಸೂರಿನ ಒಂದಷ್ಟು ಕಾಡು, ಕೊಡಗಿನ ಕಾಡು, ಎಚ್.ಡಿ.ಕೋಟೆ ಕಾಡಿನ ಭಾಗಗಳು ಕೂಡಿಕೊಂಡು ಜಮ್ಮಾ ಗುರ್ತಿಸಿಕೊಳ್ಳಲಾಯಿತು.

2. ತರೀಕಲ್ ರಂಗಯ್ಯನ ಕೊಪ್ಪಲ ಗಡಿಗೆ–ಹುಣಸೂರು, ಪಿರಿಯಾಪಟ್ಟಣ, ಕೊಡಗಿನ ಉಳಿದ ಕಾಡಿನ ಭಾಗದಲ್ಲಿ ಜಮ್ಮಾ ವಿಂಗಡಿಸಲಾಯಿತು.

3. ಉರದಗಡಿಗೆ– ಸರಗೂರು, ದೊಡ್ಡಬರಗಿ ಗುಂಡ್ಲುಪೇಟೆ, ಮದ್ದೂರು, ನಂಜನಗೂಡು, ಕಾರೇಮಾಳ, ಬ್ಯಾರಂಬಡಿ ಗಡಿಗಳಲ್ಲಿ ಜಮ್ಮಾ ವಿಂಗಡಿಸಲಾಯಿತು.

4. ಸೀಗೂರುಗಡಿಗೆ– ಕೇರಳ, ಗುಂಡ್ಲುಪೇಟೆ, ಬಳ್ಳೆ, ಕಾರಾಪುರದ ಹಾಡಿ, ಮಂಜೇಗೌಡನ ಹಳ್ಳದ ಹಾಡಿ, ಕೊತ್ತನ ಹಳ್ಳಿ, ಕೆಂದಳ್ಳಿ, ದಮನಕಟ್ಟೆ, ಕೆಂಜಳ್ಳಿ ಹಾಡಿ, ಹುಣಸೆ ಕುಪ್ಪೆ, ಮಾರ್‍ನಾಡಿ, ಮಾಳದ ಹಾಡಿ, ಉದ್ದೂರು, ಈರೆಹಾಡಿ, ಬಳ್ಳೆ, ಗೋಳೂರು, ಆನೆಮಾಳ, ಮಚ್ಚೂರು, ದೊಡ್ಡಮಸಾಲೆ, ಸಣ್ಣ ಮಸಾಲೆ.

5. ಕಟ್ಟೇಮನೆ ಗಡಿಗೆ– ಬೀಮನಹಳ್ಳಿ, ರಾಜುಗೌಡನಗುಂಡಿ, ಎಲೆಗುಂಡಿ, ಹಣ್ಣೂರು ಕಕ್ಕೇರಿಹಾಡಿ, ಬಸವರಾಜನ ಕಟ್ಟೆ, ಪ್ರಭಾನಗರ, ವಡ್ಡರಗುಡಿ, ಪಡುಕೋಟೆಹಾಡಿ, ಚಿಕ್ಕೆರೂರು, ಚಾಮನಹಳ್ಳಿ ಹುಂಡಿ, ತೊಟ್ಲುಗುಡಿ, ಮೊತ್ತಕೆರೆ ಹಾಡಿ, ಹೀರಳ್ಳಿ ಎ ಕಾಲೋನಿ

ಈ ಪ್ರಕಾರ ಬೇರೆ ಬೇರೆ ಗಡಿ ಗಡಿಗಳೊಳಗೆ ಜಮ್ಮಾ ಹಾಗೂ ಆ ಹಾಡಿಯಲ್ಲಿ ಮಡಿದವರ ಹಿರೀಕರ ಆತ್ಮಗಳು ಬೇರೆ ಬೇರೆ ದೈವಗಳಾದವು. ಹಾಗೆಯೇ ಹೊಸ ಹೊಸ ಗುಡ್ಡಯ್ಯಗಳು ಆಯಾ ಜಮ್ಮಾಗಳಿಗೆ ನೇಮಕವಾದರು.

ಉದಾಹರಣೆಗೆ ಹೊಸಳ್ಳಿ ಮಾರಮ್ಮನ ಗುಡಿಯ ಜನ ತಮ್ಮ ಮಕ್ಕಳಿಗೆ ಮಾರ, ಮಾರಿ, ಹೆಸರಿಟ್ಟು ಅದಕ್ಕೆ ನಡೆದುಕೊಳ್ಳುವುದು. ಹಾಗೇ ಆ ಹಾಡಿಯ ನಾಯಕನ ಕನಸಲ್ಲಿ ಬಂದ ಹಾಗೆ ಕೇರಳ ಗಡಿಯ ಬಾಳೆಲೆ ಹತ್ತಿರ ಕುಟ್ಟ ಮಾರಮ್ಮ, ಈಕೆಯೇ ಹೊಸರ್ಲಳಿ ಮಾರಮ್ಮನ ಮತ್ತೊಂದು ರೂಪ. ಆಕೆ ಕನಸಲ್ಲಿ ಬಂದು ನಾನು ಸುಂಟರಗಾಳಿಯಾಗಿ ಬಂದು ನಿಮ್ಮ ಜಮ್ಮಾದ ಮರಕ್ಕೆ ಸುತ್ತಿಕೊಳ್ಳುತ್ತೇನೆ. ಆ ಮರ ಕಡೆದು ಹೊಸಳ್ಳಿ ಮಾರಮ್ಮನ ರೂಪ ಮಾಡಿ ಪೂಜಿಸಿ ಎಂದಿತು. ಹಾಗೆಯೇ ಅದಕ್ಕೆ ನಡೆದುಕೊಂಡವರ ಮಕ್ಕಳಿಗೆ ಮಾರ ಮಾರಿ ಎಂದು ಹೆಸರಿಟ್ಟರು. ಆಗ ಮಕ್ಕಳು ಬುದ್ಧಿಮಾಂದ್ಯರಾಗುವುದು, ಗರ್ಭಸ್ರಾವವಾಗುವುದು, ರೋಗ ರುಜಿನಗಳು ನಿಂತವು. ಹೀಗಾಗಿ ಐಗೋಲಿ ತಾಯಿ ಮತ್ತು ಅಂಬಾಳೆ ತಾಯಿಗಳ ಉಗ್ರರೂಪ ಕಡಿಮೆಯಾಗದೆ ಇದ್ದ ಕಾರಣ ನಿಮ್ಮ ಸಂತತಿಗಳು ಇನ್ನೂ ಮುಂದಕ್ಕೆ ಹೋಗಿ ಎಂದು ಹೊಸಳ್ಳಿ ಮಾರಮ್ಮನು ಆದೇಶ ನೀಡುತ್ತಾಳೆ. ನೆಟ್ಟಗಲ್ಲಯ್ಯ ದೇವಸ್ಥಾನದ ಮೇಟಿ ಕುಪ್ಪೆ ಕಾಡಿನಲ್ಲಿ ಈ ಸಂತತಿ ಮುಂದೆ ಹೋಗಿ ಆ ದೇವರ ಪೂಜಿಸಿ ಮಕ್ಕಳಿಗೆ ನೆಟ್ಟಗಲ್ಲ, ನೆಟ್ಟಗಾಲಿ ಎಂದು ಹೆಸರಿಟ್ಟು ಪೂಜಿಸಿ ಅಲ್ಲಿ ಹೊಸ ಜಮ್ಮಾ ಗಡಿ ಎಲ್ಲೆಗಳನ್ನು ಗುರ್ತಿಸಿಕೊಳ್ಳುತ್ತಾರೆ. ಅಲ್ಲೂ ಸಂತತಿಯಾಗಿ ವೃದ್ಧಿಯಾಗಿ ದೈವ ಇನ್ನೂ ಮುಂದಕ್ಕೆ ಹೋಗಿ ಎಂದಾಗ ಜಿ.ಎಂ.ಹಳ್ಳಿ ಹಾಡಿಯ ಹತ್ತಿರದ ದೈವವಾದ ಅಯ್ಯಪ್ಪನ ಮೊರೆ ಹೋಗುತ್ತಾರೆ. ಇಲ್ಲೂ ಸಂತತಿ ಜಾಸ್ತಿಯಾದಾಗ ಸುಂಕದ ಕಟ್ಟೆ ಹತ್ತಿರ ಹಿರಳ್ಳಿ ಕಾಲೋನಿ ಮತ್ತು ಜಿ.ಆರ್. ಕಾಲೋನಿಗಳ ಹತ್ತಿರ ಎರಡು ಗುಂಪುಗಳು ಬಂದು ಹೊಸ ಜಮ್ಮಾ ಎಲ್ಲೆ ಹುಡುಕಿ ಬದುಕುತ್ತಾರೆ. ಅಲ್ಲಿ ತಾರಕಾಡ್ಯಾಂ ಕಟ್ಟಲಾಗುತ್ತದೆ. ದೈವ ಕೊಂಗಳ್ಳಿಯನ್ನು ಆಶ್ರಯಿಸುತ್ತದೆ. ಅಲ್ಲಿನ ಮಕ್ಕಳಿಗೆ ಕೊಂಗಳ್ಳಿ ಎಂದಿಡುತ್ತಾರೆ. ಅಲ್ಲೂ ಜನಸಂಖ್ಯೆ ಜಾಸ್ತಿಯಾದಾಗ ಒಂದು ಗುಂಪು ಹುಣಸೆ ಮರದೊಡಯ ದೈವವನ್ನು ಆಶ್ರಯಿಸುತ್ತದೆ. ಈ ದೈವವನ್ನು ಆರಾಧಿಸುತ್ತಾ ಹಿರಳ್ಳಿ ಹಾಡಿ, ಕೊಚ್ಚಳ್ಳಿ ಹಾಡಿಗಳಲ್ಲಿ ಜಮ್ಮಾಗಳಾಗುತ್ತವೆ. ಅಲ್ಲಿ ಹುಟ್ಟಿದವರಿಗೆ ಮಾರ, ಮಾರಿ ಎಂದು ಹೆಸರಿಡುತ್ತಾರೆ. ಹೀಗೆ ಒಂದು ಜಮ್ಮಾವಾಗಿದ್ದ ಗಡಿ ಎರಡಾಗಿ ಮೂರಾಗಿ.....ಮೇಲೆ ತಿಳಿಸಿದಂತೆ ವಿಂಗಡನೆಯಾಗುತ್ತಾ ಹೋಗುತ್ತದೆ. ಕೊನೆಗೆ ಅರಣ್ಯ ಇಲಾಖೆಯ ಸುಪರ್ದಿಗೆ ಬರುವ ಮೂಲಕ ಜಮ್ಮಾ ಸಮಾಪ್ತಿಯಾಗುತ್ತದೆ.

## ಜೇನುಕುರುಬರ ಸಮುದಾಯದ ಸೃಷ್ಟಿಪುರಾಣ

### ಕೊಂತ-ಕೊಂತಿ ಪೂಜೆ

ಆದಿವಾಸಿಗಳ ಪ್ರತಿಯೊಂದು ಸೃಷ್ಟಿಪುರಾಣಗಳೂ ಕಲ್ಪನೆ ಮತ್ತು ಊಹೆಗಳ ಪ್ರತೀಕಗಳಾಗಿರುತ್ತವೆ. ಇಹ ಮತ್ತು ಪರ, ಲೌಕಿಕ ಮತ್ತು ಅಲೌಕಿಕ ಜಗತ್ತಿನ ಮಧ್ಯೆ ಸೃಷ್ಟಿ

ಪುರಾಣಗಳು ಸೀಮೆಯ ಸೌಧವನ್ನು ಕಟ್ಟಲಾಗಿರುತ್ತದೆ. ಆದಿವಾಸಿಗಳ ಯಾವುದೇ ಸೃಷ್ಟಿ ಪುರಾಣಗಳನ್ನು ಸತ್ಯಾಸತ್ಯತೆಯ ವಾಸ್ತವಗಳಿಗೆ ಒರೆ ಹಚ್ಚಿ ನೇರವಾಗಿ ಅವರ ಕಥೆಗಳನ್ನು ವಿಶ್ಲೇಷಿಸಬಾರದು. ಅವರ ಪುರಾಣಗಳು ಊಹೆ ಮತ್ತು ಉಪಮೆಯ ಪ್ರತೀಕವಾಗಿದ್ದು, ನೇರವಾಗಿ ನೋಡಲಾಗಿ ಪುರಾಣಗಳು ಅನೇಕ ಮಿಥ್ಯೆಗಳ ಕಂತೆ ಎಂಬಂತೆ ಕಂಡು ಬರುತ್ತವೆಯಾದರೂ ಪುರಾಣಗಳು ಲೋಕದೃಷ್ಟಿಯನ್ನು ನಿರ್ಧರಿಸುವ ರೀತಿಯದ್ದಾಗಿರುತ್ತದೆ.

ಜೀವಸೃಷ್ಟಿಯ ಮೊದಲು ಕೇವಲ ಪ್ರಪಂಚ ನೀರಿನಿಂದ ಆವೃತ್ತವಾಗಿರುತ್ತದೆ. ಅಂತಹ ಜಲರಾಶಿಯ ಮಧ್ಯೆ ಒಂದು ಸೋರೆ ಬುರುಡೆ ತೇಲುತ್ತಾ ಬಂದು ಜಲರಾಶಿಯ ಮಧ್ಯೆ ಇರುವ ಭೂಮಿಯ ಮೇಲೆ ಕುಳಿತುಕೊಂಡಿತು. ಆ ಕಹಿ ಸೋರೆ ಬುರುಡೆಯೊಳಗಿಂದ ಅಣ್ಣ–ತಂಗಿಯರು ಹೊರಬಂದು, ಅಂಗೈಯಲ್ಲಿ ಮಣ್ಣು ಕಲಸಿ ಒಂದು ಹೆಣ್ಣು ಒಂದು ಗಂಡು ಮಗುವನ್ನು ಸೃಷ್ಟಿಸಿದರು. ಹೀಗೆ ಸೃಷ್ಟಿಸಿದ ಬೊಂಬೆಗಳಿಗೆ ಜೀವಾಂಕುರವಾಗಿ ಇವುಗಳಿಂದ ಹುಟ್ಟಿ ಬಂದವರೇ ಈ ಜೇನುಕುರುಬ ಸಮುದಾಯ ಎಂಬ ಪುರಾಣ ಕಥೆಯಿದೆ.

'ಮತ್ತೊಂದು ಪುರಾಣದ ಪ್ರಕಾರ ವಸಂತಕಾಲದಲ್ಲಿ ಮರಗಿಡಬಳ್ಳಿಗಳು ಹೂವು ಹಣ್ಣು ಬಿಡುವ ಕಾಲದಲ್ಲಿ ಗಂಡು ಕೊಂತ, ಹೆಣ್ಣು ಕೊಂತಿ ಹುಟ್ಟಿದ್ದರಂತೆ. ಇವರು ಸಮ್ಮಿಳನಗೊಂಡು ಇವರ ಪೀಳಿಗೆಯೇ ಜೇನುಕುರುಬ ಸಮುದಾಯ ಉದ್ಭವಗೊಳ್ಳಲು ಕಾರಣವಾಯಿತಂತೆ. ಈ ಕ್ರಿಯೆ ನಡೆಯಲು 40 ದಿನ ಬೇಕಾಯಿತಂತೆ. ಹಾಗಾಗಿ ಜೇನುಕುರುಬರು ವಸಂತ ಕಾಲದ 40 ದಿನಗಳಲ್ಲಿ ರಾತ್ರಿಯ ಹೊತ್ತು ಹಳ್ಳ, ಕೆರೆ, ನದಿಗಳಿಂದ ಮಣ್ಣು ತಂದು ಎರಡು ಭಾಗಮಾಡಿ ಒಂದನ್ನು ಗಂಡಿನಾಕಾರ ಮತ್ತೊಂದನ್ನು ಹೆಣ್ಣಿನಾಕಾರದಲ್ಲಿ ಶೃಂಗಾರ ಮಾಡಿ, ಚಪ್ಪರ ಹಾಕಿ, ಸಗಣಿ ಸಾರಿಸಿ, 39 ದಿನಗಳವರೆಗೆ ಹಾಡುನೃತ್ಯ ಪೂಜೆಗಳೊಂದಿಗೆ ಹಬ್ಬವನ್ನು ಆಚರಿಸುತ್ತಾರೆ. ನಲವತ್ತನೆಯ ದಿನ ಬಹಳ ಮುಖ್ಯವಾದದ್ದು. ಅದು ಜೇನುಕುರುಬ ಸೃಷ್ಟಿಯಾದ ದಿನವನ್ನು ಕ್ರಿಯೆಯ ಮೂಲಕ ಅಭಿನಯಿಸುವ ದಿನ. ಆಗ ಹೆಂಗಸರು 'ಸೊಲ್ಲು' ಹಾಕಿ ಹಾಡುತ್ತಾರೆ.

ಕೊಂತಿಯ ಗುಡಿಗೆ ಎಂತವರೂ ಬಂದಲದ

ಕೊಂತಿ ನಿನ ಪೂಜೆ ಕಲಿವಿಲ್ಲ ॥ಕೊಣಣೆ ನಂದನಾವನವೆ॥

ನಲವತ್ತನೆ ದಿನ ಕೊಂತ ಕೊಂತಿ ಮಣ್ಣಿನ ಅಂಗಳ ಚಪ್ಪರದೆದುರು ವೃತ್ತಾಕಾರದಲ್ಲಿ ಹಿರಿಯರು, ನಡುವಯಸ್ಸಿನವರು, ಮದುವೆಯಾದವರು, ಮದುವೆಯಾಗದವರು ಮತ್ತು ಮಕ್ಕಳು ಕೂರುತ್ತಾರೆ. ವೃತ್ತದ ಆ ಬದಿ ಗಂಡು ಹೆಣ್ಣು ಎದುರುಬದುರಾಗಿರುವಂತೆ ವೃತ್ತಾಕಾರವಾಗಿಯೇ ಕುಳಿತಿರುತ್ತಾರೆ. ಹೆಣ್ಣುಮಕ್ಕಳ ಜಾನಪದ ಸೊಲ್ಲು ಹಾಕುತ್ತಿರುತ್ತಾರೆ. ಆಗ ದೇವರಗುಡ್ಡ ಅರೆಬೆತ್ತಲಾಗಿ ವೃತ್ತವನ್ನು ಪ್ರವೇಶ ಮಾಡುತ್ತಾನೆ. ಅರ್ಧಬೆತ್ತಲೆ ದೇವರಗುಡ್ಡ ಸೊಂಟಕ್ಕೆ ಹಗ್ಗಕಟ್ಟಿ ನಡುವಿಗೆ

ಮರದ ತುಂಡನ್ನು ನೇತುಹಾಕಿಕೊಂಡಿರುತ್ತಾನೆ. ಬೇವಿನ ಎಲೆಯಿಂದ ಆಗಾಗ ನಡುವಿನ ಮರದ ತುಂಡಿಗೆ ನೇವರಿಸುತ್ತಿರುತ್ತಾನೆ ಮತ್ತು ತುಂಡನ್ನು ಹಿಂದಕ್ಕೂ, ಮುಂದಕ್ಕೂ ಹೆಣ್ಣುಮಕ್ಕಳ ಸೊಲ್ಲಿನ ಏರಿಳಿತದ ಗತಿಗೆ ತಕ್ಕುದಾಗಿ, ಲಯಕ್ಕೆ ತಕ್ಕಂತೆ ಸಂಭೋಗ ಕ್ರಿಯೆಯಂತೆ ನಟಿಸುತ್ತಿರುತ್ತಾನೆ.

ನಂತರ ಎರಡನೇ ಘಟ್ಟದಲ್ಲಿ ಹುಲಿ ವೇಷದ ಪಾತ್ರ ಆರ್ಭಟಿಸುತ್ತಾ ವೃತ್ತದೊಳಗೆ ನುಗ್ಗಿ ಹುಲಿ ಶಕ್ತಿ ಪ್ರದರ್ಶಿಸುತ್ತದೆ. ಆತನ ಹೆಂಡತಿ ಒಣಶಕ್ತಿ ಒಂದು ಮಗು ಹುಟ್ಟಿಸಲಾಗದ ಗಂಡಸು ಎಂದು ಕಿಚಾಯಿಸುತ್ತಾಳೆ. ಆಗ ಅಶ್ಲೀಲವಾಗಿ ಬೈಯುತ್ತಾ ಅಂಜುಬುರುಕನಂತೆ ವೃತ್ತದಿಂದ ಪಲಾಯನ ಮಾಡುತ್ತಾನೆ. ನಂತರ ವೃತ್ತದೊಳಗೆ ಹೆಂಗಸು ಹೆಂಡತಿಯಂತೆ ನಟಿಸುತ್ತಾ ಬಂದು ಹೆಣ್ಣುಮಕ್ಕಳ ಪ್ರವೇಶ ಮಾಡಿ ಲೈಂಗಿಕತೆಗೆ ಸಂಬಂಧಪಟ್ಟ ಮಾತು ಅಭಿನಯ ಮಾಡಿ ತೆರಳುತ್ತಾರೆ. ನಾಲ್ಕನೆಯ ದೃಶ್ಯದಲ್ಲಿ ಮುದುಕನೊಬ್ಬ ಋಷಿಯಂತೆ ಜುಟ್ಟು ಕಟ್ಟಿಕೊಂಡು, ವಿಭೂತಿ ಉಳಿದುಕೊಂಡು ವೃತ್ತದೊಳಗೆ ಪ್ರವೇಶಿಸುತ್ತಾನೆ. ಬಂದವನೆ ಆಗ ತಾನೆ ಮೈನೆರೆತ ಹುಡುಗಿಯರನ್ನು ಆಸೆಯಿಂದ ಪ್ರಣಯದ ವಿವಿಧ ಮಾತಿನ ಭಾವವನ್ನು ತೋರಿಸುತ್ತಾ, ಭೋಗವಸ್ತುಗಳನ್ನು ಕೊಟ್ಟು ಕರೆಯುವಂತೆ ನಟಿಸುತ್ತಾನೆ.

ಐದನೆಯ ದೃಶ್ಯದಲ್ಲಿ ಮದುವೆಯಾಗದ ಹುಡುಗ ಹುಡುಗಿಯರು ಚಪ್ಪಾಳೆ ತಟ್ಟುತ್ತಾ ಕುಣಿಯುತ್ತಾರೆ, ಕಿಚಾಯಿಸುತ್ತಾರೆ, ಬೆಳಕು ಹರಿಯುವ ತನಕ ಸೃಷ್ಟಿಕ್ರಿಯೆಯ ನಾನಾ ಮುಖಗಳನ್ನು ಚಿತ್ರಿಸುವ ನಾಟಕವಾಗಿ ಕೊಂತ ಕೊಂತಿ ಪೂಜೆ ಮುಗಿಯುತ್ತದೆ. ನಂತರ ಚಪ್ಪರದಿಂದ ಕೊಂತ ಕೊಂತಿ ಮೂರ್ತಿಗಳನ್ನು ಜನರೊಂದಿಗೆ ಮೆರವಣಿಗೆಯ ರೀತಿಯಲ್ಲಿ ತೆರಳಿ ನೀರಿಗೆ ಬಿಟ್ಟು ಬರುತ್ತಾರೆ.

ಹೀಗೆ ಜೇನುಕುರುಬರು ತಮ್ಮ ಸೃಷ್ಟಿಪುರಾಣದಲ್ಲಿ ಕೊಂತ ಕೊಂತಿಯರಿಂದ ಜನಾಂಗವು ಸೃಷ್ಟಿಯಾದ ರೀತಿಯ ನಕಲು ನಾಟಕ ದೃಶ್ಯವನ್ನು ಮರು ಚಿತ್ರಿಸುವ ರೀತಿಯಲ್ಲಿ ಪ್ರತಿ ವಸಂತಕಾಲದಲ್ಲಿ 40 ದಿನಗಳು ಆಚರಿಸುವ ವಿಶಿಷ್ಟವಾದ ಆದಿವಾಸಿ ಹಬ್ಬ ಒಂದು ಅಪರೂಪದ ಬುಡಕಟ್ಟು ಸೃಷ್ಟಿಪುರಾಣದ ಆಚರಣೆಯಾಗಿದೆ.

## ಬೆಟ್ಟಕುರುಬರಲ್ಲಿ ಎಲ್ಲೆ/ಜಮ್ಮ/ಸೀಮಾಪದ್ಧತಿ

### ಬೆಟ್ಟಕುರುಬರ ಸ್ಥೂಲ ಪರಿಚಯ

ಜೇನುಕುರುಬರ ರೀತಿಯಲ್ಲೇ ಬೆಟ್ಟಕುರುಬರ ಬುಡಕಟ್ಟು ಸಮುದಾಯದವೂ ಮೈಸೂರು ಕೊಡಗು, ಚಾಮರಾಜನಗರ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ. ಇವರು ತಮ್ಮ ಗಡಿ/ಸೀಮಾ/ಜಮ್ಮ/ ಪದ್ಧತಿಗೆ 'ಎಲ್ಲೆ' ಎಂದು ಕರೆಯುತ್ತಾರೆ. ಜೇನುಕುರುಬರ ಹಾಗೆ ಜಮ್ಮ ದೈವಗಳು ಹಾಗೂ ಹಿರಿಯರ ಆತ್ಮಗಳ ಜೊತೆ ಅನುಸಂಧಾನ ನಡೆಸುವ ಗುಡ್ಡಯ್ಯ ನಂತಹವನನ್ನು ಬೆಟ್ಟಕುರುಬರು

'ಬಿಂಜೆಕಾಳ'ನೆಂದು ಕರೆಯುತ್ತಾರೆ. ಜಮ್ಮ ನ್ಯಾಯಮಂಡಳಿಯ ನ್ಯಾಯದ ಕಟ್ಟೆಯನ್ನು 'ಅಂಬಾಲವೆಂದು' ಕರೆಯಲಾಗುತ್ತದೆ. ಬಿಂಜೆಕಾಳನನ್ನು ಮೇಗಾಳ್ ಮುತ್ತ ನೆಂತಲೂ ಕರೆಯುತ್ತಾರೆ.

ಬೆಟ್ಟಕುರುಬರು ತಮ್ಮನ್ನು ಅಜ್ಜಯ್ಯನ ಸಂತತಿಯವರೆಂದು ಕರೆದುಕೊಳ್ಳುತ್ತಾರೆ. ಇವರ ನೆಲೆ ಊಟಿ ಹತ್ತಿರದ ನೆರ್ದಿಮಲೆ. ಆ ಭಾಗದ ಗುಡಲೂರು ಅಜ್ಜಯ್ಯನ ಜನ್ಮ ಸ್ಥಳ. ಅಜ್ಜಯ್ಯನ ಸಂತತಿ ಜಾಸ್ತಿಯಾದಾಗ 3 ಗುಂಪುಗಳನ್ನಾಗಿ ಮಾಡಿ ಅವರಿಗೆ ಎಲ್ಲೆಗಳನ್ನು ಅಜ್ಜಯ್ಯ ಗುರ್ತಿಸಿಕೊಡುತ್ತಾನೆ. ಅದರಂತೆ 3 ಆಳ್ತರೆ ಎಲ್ಲೆ, 5 ಆಳ್ತರೆ ಎಲ್ಲೆ, 7 ಆಳ್ತರೆ ಎಲ್ಲೆಗಳನ್ನಾಗಿ ಮಾಡಿ ಜಮ್ಮ ವಲಯಗಳನ್ನು ಹಂಚಲಾಗುತ್ತದೆ. ನಂತರ ಎಲ್ಲೆಯ ಆಧಾರದ ಮೇಲೆ ಅವರ ಕುಲಗಳನ್ನು 'ಮೊಗೆ'ಗಳನ್ನಾಗಿ ವಿಸ್ತರಿಸಲ್ಪಡುತ್ತಾರೆ. ಇಂತಹ 107 ಮೊಗೆ ಕುಲಗಳಿಗೆ ಮೂಲ ಸಿಮಿಲ್ ಮೊಗೆಯಾಗಿರುತ್ತದೆ(ಆ ಮೂರು ವಿಂಗಡಣೆಯಾದ ಎಲ್ಲೆಗಳು ಕೇರಳದ ವೈನಾಡ್, ತಮಿಳುನಾಡು ಮತ್ತು ಕರ್ನಾಟಕಗಳಲ್ಲಿ ವಿಸ್ತರಿಸಲ್ಪಡುತ್ತಾರೆ).

ಬೆಟ್ಟಕುರುಬರು ವಾಸ ಮಾಡುವ ಪ್ರದೇಶವನ್ನು ಹಾಡಿ ಎಂಬುಧಾಗಿ ಕರೆಯಲಾಗುತ್ತದೆ. ಹಾಡಿ, ಪೋಡು, ಮಾಡ ಎಂಬ ಪದಗಳನ್ನು ಗ್ರಾಮ ಎಂಬ ಅರ್ಥ ಬರುವ ರೀತಿಯಲ್ಲಿ ಬಳಸಲಾಗುತ್ತದೆ ಎಂಬುಧಾಗಿ ಹೇಳಲಾಗುತ್ತದೆ. ತಗ್ಗಾದ, ಚಿಕ್ಕದಾದ ಗುಡಿಸಲುಗಳೇ ಇವರ ಮನೆಗಳು. ಅವುಗಳನ್ನು ಹೆಚ್ಚಾಗಿ ಒಂದು ತೊರೆಯ ಸಮೀಪದಲ್ಲಿ ಅಥವಾ ನೀರಿನ ಸೌಕರ್ಯಗಳಿರುವ ಸ್ಥಳಗಳಲ್ಲಿ ನಿರ್ಮಿಸಿಕೊಳ್ಳುತ್ತಾರೆ. ಕಾಡಿನಲ್ಲಿ ಸಿಕ್ಕುವ ಬಿದಿರು, ಹುಲ್ಲು, ಗರಿ ಇತ್ಯಾದಿಗಳಿಗೆ ಮಣ್ಣು, ನೀರು, ನಾರುಗಳನ್ನು ಸೇರಿಸಿ ಇವರು ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಾರೆ. ಹಾಡಿಯನ್ನು ರಚಿಸುವುದಕ್ಕೆ ಮೊದಲು ಇವರು ತಾವು ಆರಿಸಿರುವ ಸ್ಥಳದಲ್ಲಿ ಕಲ್ಲುಗಳನ್ನು ಒಂದರ ಮೇಲೊಂದರಂತೆ ಪೇರಿಸಿಟ್ಟು ಪೂಜೆ ಮಾಡಿ ಹಿಂತಿರುಗಿ ಹೋಗುತ್ತಾರೆ. ಮಾರನೆಯ ದಿನ ಬಂದು ನೋಡಿದಾಗ ಹಿಂದಿನ ದಿನ ಪೇರಿಸಿಟ್ಟಿದ್ದ ಕಲ್ಲುಗಳು ಉರುಳದೆ ಇಟ್ಟಂತೆಯೇ ಇದ್ದುದು ಕಂಡುಬಂದರೆ, ಆಗ ಇವರು ಆ ಸ್ಥಳ, ಗಾಳಿ, ಗರ, ಭೂತ ಇತ್ಯಾದಿ ಅನಿಷ್ಟಗಳಿಂದ ಮುಕ್ತವಾದುದಾಗಿ ತಿಳಿದು ಹಾಡಿಯ ರಚನೆಗೆ ಅದು ಸೂಕ್ತವಾದ ಪ್ರದೇಶ ಎಂಬುಧಾಗಿ ತೀರ್ಮಾನಿಸುತ್ತಾರೆ. ಒಂದು ವೇಳೆ ಕಲ್ಲುಗಳೇನಾದರೂ ಉರುಳಿ ಬಿದ್ದುಬಿಟ್ಟಿದುದು ಕಂಡುಬಂದರೆ, ಆ ಸ್ಥಳದಲ್ಲಿ ಹಾಡಿಯನ್ನು ನಿರ್ಮಿಸುವುದೆಂದರೆ ಅಪಾಯಗಳಿಗೆ, ಅನಿಷ್ಟಗಳಿಗೆ ಆಹ್ವಾನ ನೀಡಿದಂತಾಗುತ್ತದೆ ಎಂಬುದು ಇವರ ನಂಬಿಕೆ.[3]

ಗುಡಿಸಿಲಿನ ಒಳಗೆ ಮಧ್ಯಭಾಗದಲ್ಲಿ ಬಿದಿರಿನ ತಡಕೆ ಇಟ್ಟು ಎರಡು ಭಾಗಗಳಾಗಿ ಮಾಡಿಕೊಂಡು ಕಾಡುಕುರುಬರು ಒಂದು ಭಾಗವನ್ನು ಅಡುಗೆಮನೆಯಾಗಿ ಬಳಸುತ್ತಾರೆ ಹಾಗೂ ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ ಉಳಿದರ್ಧ ಭಾಗವನ್ನು ಉಪಯೋಗಿಸಿಕೊಳ್ಳುತ್ತಾರೆ. ಕೆಲವು ಗುಡಿಸಲುಗಳು ಒಳಭಾಗಗಳಲ್ಲಿ ಎರಡು ಅಥವಾ ಮೂರು ಅಂಕಣಗಳು ಇರುತ್ತವೆ.

ಕೆಲವು ಗುಡಿಸಲುಗಳು ಬಹಳ ತಗ್ಗಾಗಿರುತ್ತವೆ. ಅವುಗಳಲ್ಲಿ ಒಳಕ್ಕೆ ಹೋಗಿ ಬರುವುದಕ್ಕೆ ಕೇವಲ ಒಂದು ತಗ್ಗಾದ ಬಾಗಿಲನ್ನು ಬಿಟ್ಟರೆ ಮತ್ತಾವ ಪ್ರವೇಶದ್ವಾರವೂ ಇರುವುದಿಲ್ಲ. ಕಿಟಕಿಗಳೂ ಕಂಡುಬರುವುದಿಲ್ಲ. ಆದರೆ ಇತ್ತೀಚೆಗೆ ಹಾಕಲಾಗಿರುವ ಕೆಲವು ಗುಡಿಸಿಲುಗಳು, ಸ್ವಲ್ಪಮಟ್ಟಿಗೆ ವಿಶಾಲವಾಗಿವೆ. ಕೆಲವು ಗುಡಿಸಲುಗಳಲ್ಲಿ ಮಣ್ಣಿನ ಗೋಡೆಗಳಿವೆ. ಮತ್ತೆ ಕೆಲವು ಗುಡಿಸಿಲುಗಳ ಹೊರಗೋಡೆಗಳನ್ನು ಮಣ್ಣನ್ನು ಬಳಸಿ, ಕಟ್ಟಿಗೆ ಬಿದಿರಿನ ತೆಳುವಾದ ದಬ್ಬೆಗಳನ್ನು ಚಾಪೆಗಳಂತೆ ಹೆಣೆದು, ಚಾಪೆಯಾಕಾರದ ತಡಿಕೆಗಳನ್ನು ಚೌಕಾಕಾರದ ಆಯಕಟ್ಟಿನ ನಾಲ್ಕು ಮೂಲೆ ಕಂಬಗಳಿಗೆ ಬಿಗಿದು ಕಟ್ಟಿರುತ್ತಾರೆ ಮತ್ತು ಕಾಡಿನ ಸೊಪ್ಪು, ಇಲ್ಲವೆ ತೋಡು(ತೊರೆ, ನದಿ) ತೊಂಡಿಕೆಗಳಲ್ಲಿ ಬೆಳೆಯುವ ಜೊಂಡುಹುಲ್ಲನ್ನು ಇಳಿಜಾರಾಗಿ ಹಾಸಿ ಕಟ್ಟಿ ಹೊದಿಸಿರುತ್ತಾರೆ. ಕೆಲವು ಗುಡಿಸಿಲುಗಳ ಹೊರಭಾಗಗಳಲ್ಲಿ ಒಂದೆಡೆ ಅರೆಯುವ ಕಲ್ಲು, ಇನ್ನೊಂದೆಡೆ ಕೋಳಿಗುಂಡುಗಳು ಇರುತ್ತವೆ. ಗುಡಿಸಲ ಮುಂಭಾಗದಲ್ಲಿ ಗೋಡೆಗೆ ಸೇರಿಸಿದಂತೆ ಮಣ್ಣಿನಿಂದ ನಿರ್ಮಿಸಿ, ಸೆಗಣಿ ಅಥವಾ ಬರೀ ನೀರಿನಿಂದ ಚೆನ್ನಾಗಿ ಸಾರಿಸಲಾಗಿರುವ ಜಗುಲಿಗಳಿರುವುದು ಕಂಡುಬರುತ್ತದೆ. ಸಂಪ್ರದಾಯಾನುಸಾರವಾಗಿ ಹಾಕಿಕೊಳ್ಳುವ ಗುಡಿಸಲುಗಳನ್ನು ಪ್ರವೇಶಿಸುವ ಸಮಾರಂಭವನ್ನು ಇವರು 'ಹೊಸಮನೆ ಸೇರುವುದು' ಎಂಬುಧಾಗಿ ವಿವರಿಸುತ್ತಾರೆ. ಗುಡಿಸಿಲುಗಳಲ್ಲಿ ಇವರೇ ಸ್ವತಃ ಹುಲ್ಲಿನಿಂದ ತಯಾರಿಸಿರುವ ಚಾಪೆಗಳನ್ನು ಬಿಟ್ಟರೆ ಮತ್ತ್ಯಾವ ಪೀಠೋಪಕರಣಗಳೂ ಕಂಡುಬರುವುದಿಲ್ಲ. ಇವರು ಕೆಲವು ಮಣ್ಣಿನ, ಬಿದಿರಿನ ಹಾಗೂ ಕಂಚಿನ ಪಾತ್ರೆಗಳನ್ನು ಉಪಯೋಗಿಸುತ್ತಾರೆ. ಇತ್ತೀಚೆಗೆ ಇವರು ಅಲ್ಯೂಮಿನಿಯಂ ಹಾಗೂ ಸ್ಟೀಲ್‌ಪಾತ್ರೆಗಳನ್ನು ಮಿತವಾಗಿ ಬಳಸುತ್ತಿರುವುದು ಕಂಡುಬರುತ್ತಿದೆ.

ಕಾಡುಕುರುಬರ ಹಾಡಿಗಳು ಚಿಕ್ಕದಾಗಿರುತ್ತವೆ, ಚೊಕ್ಕವಾಗಿರುತ್ತವೆ. ಇವರು ತಮ್ಮ ಬಿದಿರಿನ ಗುಡಿಸಲುಗಳನ್ನು ಪ್ರಾಂಗಣ ನಮೂನೆಯಲ್ಲಿ ಕಟ್ಟಿರುತ್ತಾರೆ. ಅಲ್ಲಿ ನಾಲ್ಕು ಮೂಲೆಗಳೂ ತೆರದ ಹಾದಿಗಳಂತಿರುತ್ತವೆ. ನಡುಮಧ್ಯಭಾಗದಲ್ಲಿರುವ ಬಯಲಿನಲ್ಲಿ ನಾಲ್ಕು ಕಂಬಗಳ ಆಧಾರದ ಮೇಲೆ ನಿರ್ಮಿಸಲಾಗಿರುವ ತೆರದ ಗುಡಿಸಲನ್ನು ಅಂಬಾಲ ಎಂಬುಧಾಗಿ ಕರೆಯುತ್ತಾರೆ. ಅಲ್ಲಿ ವಿಶೇಷ ಸಾಮಾಜಿಕ ಹಾಗೂ ಸಾಂಪ್ರದಾಯಿಕ ಸಂದರ್ಭಗಳಲ್ಲಿ ಬುಡಕಟ್ಟಿನ ಹಿರಿಯರು ಸಭೆ ಸೇರಿ ಕರ್ಮಾಚರಣೆಯ ವಿಷಯ, ಹಾಡಿಯ ಸಮಸ್ಯೆ ಇತ್ಯಾದಿಗಳನ್ನು ಕುರಿತು ಚರ್ಚಿಸುತ್ತಾರೆ. ವಿವಾಹಿತ ಪುರುಷರು ಒಟ್ಟಾಗಿ ಕಲೆತು ಹರಟೆ ಹೊಡೆಯುವುದಕ್ಕೆ ಅಥವಾ ಮಲಗುವುದಕ್ಕೆ ಅಂಬಾಲವನ್ನು ಬಳಸಿಕೊಳ್ಳುವುದುಂಟು. ಅಲ್ಲಿಗೆ ಬರುವಾಗ ಚಪ್ಪಲಿ ಧರಿಸುವುದನ್ನು ನಿಷೇಧಿಸಲಾಗುತ್ತದೆ. ಅನೇಕ ವೇಳೆ ರಾತ್ರಿಯ ಸಮಯದಲ್ಲಿ ಅವಿವಾಹಿತ ಗಂಡುಮಕ್ಕಳೂ ಸಹ ಅಲ್ಲಿ ಮಲಗುವುದುಂಟು. ಬೇಸಗೆಯ ಕಾಲದಲ್ಲಿ ಬಹು ಸೆಕೆಯಾದಾಗ ಹಾಡಿಯ ಸದಸ್ಯರು ತಮ್ಮ ತಮ್ಮ ಗುಡಿಸಿಲುಗಳ ಮುಂದಿರುವ ಅಂಗಳದಲ್ಲಿ ಮಲಗಿಕೊಳ್ಳುತ್ತಾರೆ. ಚಳಿಗಾಲದಲ್ಲಿ ಕೊರೆಯುವ ಶೈತ್ಯದಿಂದ ತಮ್ಮನ್ನು ಕಾಪಾಡಿಕೊಳ್ಳುವುದಕ್ಕಾಗಿ, ಬೆಂಕಿಯನ್ನು ಉರಿಸಿಕೊಂಡು

ಅದರ ಸುತ್ತ ಮಲಗುವ ವಾಡಿಕೆಯನ್ನು ಬಳಸಿಕೊಂಡಿದ್ದಾರೆ. ಸಾಮಾನ್ಯವಾಗಿ ತಮ್ಮ ತಮ್ಮ ಗುಡಿಸಲುಗಳ ಮುಂಭಾಗದಲ್ಲಿ ಬೆಂಕಿಯನ್ನು ಹಾಕಿಕೊಂಡು ಉರಿಸುತ್ತಾ ಇವರು 'ಇದೇ ನಮ್ಮ ಬೆಳಕು, ನಮ್ಮ ದೀಪ' ಎಂದು ಹೇಳಿಕೊಳ್ಳುತ್ತಾರೆ.

ಈ ಸಮುದಾಯದ ದೈವ ಅಜ್ಜಯ್ಯನಾಗಿದ್ದು. ಈ ಅಜ್ಜಯ್ಯನ ಮೇಲೆ ಆದಿಯಯ್ಯ ಮೇಲಿನ ದೊಡ್ಡ ದೈವವಾಗಿರುತ್ತಾರೆ. ಬಗಲೇರ್‌ಮೇರಾವ್ ಜಮ್ಮಾಜಾತ್ರೆ, ಅಣೆಕತೊಡ್, ಕಲ್ಹಾಲ, ಬಿಸಲಾಡಿತಾಯಿ, ಅಮ್ಮಾಳೆದೇವರು, ಅಂಬಾಲ ದೇವರು, ದೊಡ್ಡ ಮಸಾರೆ, ಸಣ್ಣ ಮಸಾರೆ, ಬೈರನ ಕುಪ್ಪೆ ಒಡೆಯ, ಕಲ್ಲಾಳ, ಬಿಲ್ಲ ಕೋಟೆ ಒಡೆಯ, ಗುರೀನ ಒಡೆಯ ಗೊಳೂರ್ ಒಡೆಯ, ಗುಂಡ್ರೆ ಮಾರಮ್ಮ ಕಾಕನಕೋಟೆ ದೇವರು ಬಳ್ಳಗದ್ದೆ ಒಡ್ತಿ, ಅತ್ತುಡ್ ಕೊಲ್ಲಿ ದೇವತೆ, ಕರಾಡಿಕಲ್ಲಿ ಹಮ್ಮಾಳೆತಾಯಿ, ಮಾತಮ್ಮ, ಸಾಳಬಳ್ಳಿ ಒಡ್ತಿ, ಕಾಮಾಲೆತಾಯಿ, ತಿರುನೆಲ್ಲಿ ದೇವಿಕೂಪ್ಪ ದೊಡ್ಡ ದೇವತೆ, ಆನೆಮಾಳ ಒಡೆಯ ಮುಂತಾದವು ಎಲ್ಲೆಯ ದೈವಗಳಾಗಿವೆ.

ಮೈಸೂರು ವಿಶ್ವವಿದ್ಯಾನಿಲಯದ ಮಾನವಶಾಸ್ತ್ರ ವಿಭಾಗದ ಶ್ರೀ ಹರೀಶ್ ಅವರು ನೀಡಿರುವ ಮಾಹಿತಿಯ ಪ್ರಕಾರ ಇವರಲ್ಲಿ ಈ ಕೆಳಕಂಡ ಕುಲಗಳನ್ನು ಕಾಣಬಹುದು.

1. ಮತ್ತೀರುಮಕ್ಕ
2. ತೋಪೆಟ್‌ಮಕ್ಕ
3. ಖಿಂದೀರ್‌ಮಕ್ಕ
4. ಬಾಳೇಜಿಮಕ್ಕ
5. ಬೋಳ್ಗೋಳ್ ಮಕ್ಕ
6. ಸೋಣ್‌ಜೇನ್ ಮಕ್ಕ
7. ಕೆಮ್‌ಸಲ್‌ಮಕ್ಕ
8. ಕಮೆಟಿಮಕ್ಕ
9. ಕೋಟುಮ್‌ಮಕ್ಕ
10. ಗುಮ್ಮೇಟಿಮಕ್ಕ
11. ತಿರುಮಲ್‌ಮಕ್ಕ
12. ಕೂಗುರಕ್‌ನ್‌ಮಕ್ಕ
13. ಬಳ್‌ಕುರ್‌ಮಕ್ಕ
14. ಕೂದೇರ್‌ಮಕ್ಕ
15. ಕಿಂದರಿಮಕ್ಕ
16. ಬಲ್ತವಕ್ಕ
17. ಕೂಪಸ್ಸಮಕ್ಕ
18. ಕೊಜಮಕ್ಕ

**ಬೆಟ್ಟಕುರುಬರ ಸೃಷ್ಟಿಪುರಾಣ**

ಬೆಟ್ಟಕುರುಬರ ಉಗಮದ ಬಗ್ಗೆ ಒಂದು ವಿವರಣೆ ಇದೆ. ಅದರ ಪ್ರಕಾರ, ಮೊದಲು ಈ ಭೂಮಿಯ ಮೇಲೆ ಜೀವಿಗಳಿರಲಿಲ್ಲ, ಬರೀ ನೀರಿದ್ದಿತು. ನೀರಿನ ಮಟ್ಟ ಕೆಳಗೆ ಇಳಿದಾಗ, ಸೋದರ-ಸೋದರಿಯರು ಹುಟ್ಟಿಬಂದರು. ಒಡಹುಟ್ಟಿದವರಾಗಿದ್ದ ಕಾರಣ ಲೈಂಗಿಕ ಸಂಬಂಧ ಬೆಳೆಸಲಾಗದೆ ಹೋಗಿ, ಸಂತಾನಗಳು ತಲೆದೋರಿ ಪೀಳಿಗೆಗಳು ಮುಂದುವರಿಯುವುದು

ಸಾಧ್ಯವಾಗದೆ ಹೋಗಿದ್ದರಿಂದ ಅವರು ದೇವರನ್ನು ಕುರಿತು ಚಿಂತಿಸತೊಡಗಿದರು. ಆಗ ಶಿವದೇವರು ಬಂದು ಅವರು ವಿರುದ್ಧ ದಿಕ್ಕುಗಳಲ್ಲಿ ಪರಸ್ಪರ ಅಭಿಮುಖವಾಗಿ ನಿಲ್ಲುವಂತೆ ಮಾಡಿದರು. ಆಗ ಅವರು ಪುನಃ ಪರಸ್ಪರ ನೋಡಿದಾಗ ಗಂಡ ಹೆಂಡತಿಯರಾದರು. ಅವರು ತಮ್ಮನ್ನು ಬುಡಕಟ್ಟುಗಳವರು ಎಂಬುಧಾಗಿ ಪರಿಭಾವಿಸಿಕೊಂಡರು. ಅವರ ಮಕ್ಕಳನ್ನು ಬೆಟ್ಟಕುರುಬ, ಜೇನುಕುರುಬ ಮತ್ತು ಇತರರು ಎಂಬುಧಾಗಿ ವರ್ಗೀಕರಿಸಲಾಯಿತು. ಜೇನು ಕುರುಬರು ತಮ್ಮನ ಮಕ್ಕಳು ಮತ್ತು ಬೆಟ್ಟಕುರುಬರು ಅಣ್ಣನ ಮಕ್ಕಳು ಎಂಬುಧಾಗಿ ಎಣಿಸಲಾಯಿತು. ಅವರೆಲ್ಲರವೂ ಪುನಃ ಕಾಡಿಗೆ ಹೋದರು. ಅಲ್ಲಿ ಬೆಟ್ಟಕುರುಬರು ಬಿದಿರಿನ ವೃತ್ತಿಯಲ್ಲಿ ಮತ್ತು ಜೇನು ಕುರುಬರು ಜೇನನ್ನು ಸಂಗ್ರಹಿಸುವ ಕಸಬನ್ನು ಕೈಗೆತ್ತಿಕೊಂಡರು. ಈ ಕಾರಣದಿಂದ ಕುರುಬರು ಎಂಬುಧಾಗಿ ಕರೆಯಲಾಗಿದ್ದ ಒಂದೇ ತಾಯಿಯ ಮಕ್ಕಳಾಗಿದ್ದರೂ, ಆರಿಸಿಕೊಂಡಿದ್ದ ಪ್ರತ್ಯೇಕ ವೃತ್ತಿಗಳು ಇವರನ್ನು ಬೇರ್ಪಡಿಸಿದ್ದವು.

ಬೋಮ್ಮದೇವರು, ಗಂಗಾಸ್ಥಾನದ ದೇವರು, ಮುದ್ದಪ್ಪ ಮೂಗಪ್ಪಾಜಿ, ನೂರಳೆಯ್ಯ, ಚಿಕ್ಕದೇವರಮ್ಮ, ಮಾರಮ್ಮ, ಕೂಡಗಿ ತಾತ, ಗುಡ್ಡದ ಒಡತಿ ಗುಡ್ಡದ ತಾಯಿ, ಕುಮಾರ ದೇವರು ಮೊದಲಾದ ಪುರುಷ–ಸ್ತ್ರೀದೇವತೆಗಳನ್ನು ಬೆಟ್ಟಕುರುಬರು ಪೂಜಿಸುತ್ತಾರೆ. ಈ ದೇವರುಗಳಲ್ಲಿ ಹಲವಾರು ಇವರ ಪೂರ್ವಜರೇ ಎಂದು ಹೇಳಲಾಗುತ್ತದೆ. ಒಂದು ವರದಿಯ ಪ್ರಕಾರ, ಕಾಲ್ಕಗೆ ಕಾಡಿಗೆ ಹೋಗುವ ಹಾದಿಯಲ್ಲಿ ಕಲ್‌ಬಲ ಎಂಬಲ್ಲಿ ಬೊಮ್ಮದೇವರ ಗುಡಿಯೊಂದಿದೆ; ಹಾಡಿಯ ಹಿರಿಯರು ಇಂದು ಬೆಟ್ಟಕುರುಬರು ವಾಸಿಸುತ್ತಿರುವ ಪ್ರದೇಶಗಳ ಎಲ್ಲೆಗಳನ್ನು ನಿರ್ಧರಿಸಿದವನು ಈ ದೇವರೆ ಎಂಬುಧಾಗಿ ನಂಬುತ್ತಾರೆ. ಈ ನಿರ್ದಿಷ್ಟ ದೇವರು ಹಾಗೂ ಪೂರ್ವಜರು ತಮ್ಮ ಇರುವ ನೆಲೆಗೆ ಯಾವ ತೊಂದರೆಯೂ ಉಂಟಾಗದಂತೆ ಕಾಪಾಡುವ ಹೊಣೆಗಾರಿಕೆಯನ್ನು ಹೊತ್ತಿರುವವರು ಎಂಬುಧು ಸಹ ಇವರ ನಂಬಿಕೆ. ಕೆಲವು ಸಲ ಬೊಮ್ಮದೇವರನ್ನು ಹಿಂದೂ ಸೃಷ್ಟಿಕರ್ತ ಬ್ರಹ್ಮನಿಗೆ ಸಮವೆಂದು ಪರಿಗಣಿಸಲಾಗುತ್ತದೆ. ಪರಿಶಿಷ್ಟ ವರ್ಗೇತರರು ಈ ರೀತಿಯ ಹೋಲಿಕೆಗೆ ಕಾರಣವಾಗಿರುವಂತಹ ವಿವರಣೆ ಕೊಡುವುದರಿಂದ, ಇದು ಸಂದೇಹಾಸ್ಪದವಾಗಿದೆ. ಮರಗಳ ಬುಡಗಳಲ್ಲಿ, ಮುಖ್ಯವಾಗಿ ಹುಣಸೇಮರಗಳ ತಳದಲ್ಲಿ ಇಡಲಾಗಿರುವ ಕಲ್ಲುಗಳು ಅಥವಾ ಪೇರಿಸಿರುವ ಕಲ್ಲುಗುಂಡುಗಳೇ ಸಾಮಾನ್ಯವಾಗಿ ಇವರ ದೇವರುಗಳು. ಅನೇಕ ವೇಳೆ ಈ ಕಲ್ಲುಗಳಿಗೆ ಅರಿಶಿನ–ಕುಂಕುಮ ಹಚ್ಚಿ ಹೂಚು ಹಾಕಲಾಗಿರುತ್ತದೆ. ಇವರಲ್ಲಿ ಕುಟುಂಬ, ಕುಲ ಹಾಗೂ ಇಡೀ ಬುಡಕಟ್ಟು ಸಮುದಾಯ ದೇವರುಗಳು ಇರುವುದಾಗಿ ಹೇಳಲಾಗುತ್ತದೆ. ಉದಾಹರಣೆಗೆ ಮೂಗಪ್ಪಾಜಿ, ಮಾದಪ್ಪ ಕುಟುಂಬದ ದೇವರುಗಳೆಂಬುದಾಗಿ ಎಣಿಸಲಾಗುತ್ತದೆ. ಇವರುಗಳಲ್ಲಿ ಕುಲಾನುಸಾರವಾಗಿ ಗಂಡು ಹಾಗೂ ಹೆಣ್ಣು ದೇವರುಗಳನ್ನು ಆರಾಧಿಸುವ ಪರಿಪಾಟವಿದೆ. ಉದಾಹರಣೆಗೆ ಹುಣಸೇಕುಪ್ಪೆಯ ಬಿ–ಕಾಲೋನಿಯಲ್ಲಿ ಕ್ಷೇತ್ರ ಸಂಶೋಧನೆಯನ್ನು ನಡೆಸಿದಾಗ ಕುಲ ಅಥವಾ

ಮಗೆಗಳಿಗೆ ಪ್ರತ್ಯೇಕ ಪುರುಷ ಮತ್ತು ಸ್ತ್ರೀ ದೇವರುಗಳುಂಟು ಎಂಬ ವಿಷಯ ತಿಳಿದುಬಂದಿತು. ದೊರಕಿದ ಮಾಹಿತಿಯ ಆಧಾರದ ಮೇಲೆ ಈ ವಿಷಯವನ್ನು ಈ ರೀತಿಯಲ್ಲಿ ಪಟ್ಟಿ ಮಾಡಬಹುದು:

ಅಜ್ಜ, ಅಜ್ಜಮ್ಮ ಇಡೀ ಸಮುದಾಯದ ದೇವರುಗಳೆಂಬುದಾಗಿ ಹೇಳಲಾಗುತ್ತದೆ. ಸಾಮಾನ್ಯವಾಗಿ ಇವರು ಪೂಜಿಸುವ ದೇವರುಗಳನ್ನು ಅವರ ಹಾಡಿಗಳ ಸಮೀಪದಲ್ಲಿ ಒಂದು ಗುಡಿಸಲಿನಲ್ಲಿ ಇಡಲಾಗಿರುತ್ತದೆ. ಕೆಲವು ಸಲ ಸ್ಥಳದ ಹೆಸರಿನ ಮೇರೆಗೆ ದೇವರನ್ನು ಕಾಪಿ ಮಾದೇಶ್ವರ, ಗುಡ್ಲೂರು ಮಾದೇಶ್ವರ ಮುಂತಾಗಿ ಕರೆಯಲಾಗುತ್ತದೆ. ಕುಟ್ಟಲಮ್ಮ ಅಥವಾ ಕರಿಂಕಾಳಿ(ಭಗವತಿಯ) ಆರಾಧಕರಾಗಿರುವ ಕೆಲವರು ಆ ದೇವತೆಯ ವಿಚಾರದಲ್ಲಿ ಬಹು ಭಯ-ಭಕ್ತಿಗಳಿಂದ ನಡೆದುಕೊಳ್ಳುತ್ತಾರೆ.

**ಬುಂಡೆ ಅಥವಾ ಮುತಲ ಕರೆಯುವುದು**

ಬುಂಡೆ ಕರೆಯುವುದು, ಅಂದರೆ ದೇವರನ್ನು ಕರೆಯುವುದು, ಅವನೊಡನೆ ಮಾತನಾಡುವುದು ಎಂಬ ವಿಶಿಷ್ಟವಾದ ಧಾರ್ಮಿಕ ಆಚರಣೆಯೂ ಬೆಟ್ಟಕುರುಬರಲ್ಲಿದೆ. ಯಾವುದೇ ಕೆಲಸವನ್ನು ಆರಂಭಿಸುವುದಕ್ಕೆ ಮೊದಲು ಈ ಆಚರಣೆಯನ್ನು ಸಾಮಾನ್ಯವಾಗಿ ಅನುಸರಿಸಲಾಗುತ್ತದೆ. ಈ ಕಾರ್ಯವನ್ನೇ ಮಾಡುವ ಪ್ರತ್ಯೇಕವಾದ ಕುಟುಂಬಗಳಿರುತ್ತವೆ. ಸುಮಾರು 10-15 ಮಂದಿ ಸೇರಿ ದೇವರನ್ನು ಕರೆಯುವ ಈ ಪದ್ಧತಿಯನ್ನು ಬಿಂಜೆಕಾಳ ಸೇರಿ ದೇವರನ್ನು ಕರೆಯುವ ಈ ಪದ್ಧತಿಯನ್ನು 'ಬಿಂಜೆಕಳುವುಗ' ಎಂದು ಕರೆಯುತ್ತಾರೆ. ಈ ಸಮಯದಲ್ಲಿ ಇದಕ್ಕೆ ಸಂಬಂಧಪಟ್ಟಿರುವ ಹಾಡನ್ನು ಹಾಡಲಾಗುತ್ತದೆ. ಮತ್ತು ಈ ಹಾಡಿಗೆ 'ಬಿಂಜೆಪಾಡುಗ' ಎಂದೆನ್ನಲಾಗುತ್ತದೆ. ಬಿಂಜೆ ಪಾಡುಗಳನ್ನು ಹಾಡುವಾಗ ಇವರು ಬಿದಿರಿನಿಂದ ತಯಾರಿಸಲಾಗಿರುವ ಸಣ್ಣಮೊರದಂತಹ ಬಿದಿರ ವಸ್ತುವಿಗೆ ನಾಲ್ಕೈದು ಗೆಜ್ಜೆಗಳನ್ನು ಕಟ್ಟಿರುತ್ತಾರೆ. ಇದನ್ನು 'ಬೀನ್‌ಮರ್', 'ಮುತ್ತಲು' ಎಂಬುದಾಗಿ ಕರೆಯುತ್ತಾರೆ. ಇದು ಸಾಧಾರಣವಾಗಿ ಬಿಂಜೆ ಪಾಡುಗ ಹಾಡುವ ಸಮೂಹದ ಹಿರಿಯನ ಬಳಿ ಇದ್ದೇ ಇರುತ್ತದೆ. ಈ ಪವಿತ್ರ ಕಾರ್ಯ ಆರಂಭವಾಗುವುದಕ್ಕೆ ಮೊದಲು ಹಿಂದಿನ ದಿನಗಳಲ್ಲಿ ಈ ಮುತ್ತಲುವನ್ನು ಹಿಡಿದು ಅಳ್ಳಾಡಿಸಿಕೊಂಡು ಈ ಕೆಲಸಕ್ಕೆ ಇರುವ ಎಂಟು-ಹತ್ತು ಮಂದಿ ಒಟ್ಟಾಗಿ ಸೇರಿ ಬಿಂಜೆಪಾಡುಗಳನ್ನು ಹಾಡುತ್ತಾರೆ. ಇದು ಬಹು ಚಿತ್ತಾಕರ್ಷಕವಾದ ಸನ್ನಿವೇಶವಾಗಿರುತ್ತದೆ. ಹಿನ್ನೆಲೆ ವಾದ್ಯದಂತೆ ಬಳಸಲಾಗುವ ಮುತ್ತಲುವಿಗೆ ಕಟ್ಟಿರುವ ಗೆಜ್ಜೆಗಳ ನಾದದೊಂದಿಗೆ ತಮ್ಮ ಧ್ವನಿಯನ್ನು ಸೇರಿಸಿ ಜೋರಾಗಿ ಹಾಡುವವರು ರಾತ್ರಿಯಿಡೀ ಕುಳಿತು ಹಾಡುತ್ತಿರುತ್ತಾರೆ ಮತ್ತು ತಮ್ಮ ಇಡೀ ವಂಶದ ಕಥೆಯನ್ನು ಇಡೀ ರಾತ್ರಿ ಹಾಡುಗಳ ರೂಪದಲ್ಲಿ ಪ್ರೇಕ್ಷಕರಿಗೆ ವರ್ಣಿಸುತ್ತಾರೆ. ಆಗ ಆವೇಶ ಬರುವ ಆ ಹಾಡುಗಾರರ ವೃಂದದ ನಾಯಕನು ಮುತ್ತಲುವನ್ನು ಕೈಯಲ್ಲಿ ಹಿಡಿದು ಅಳ್ಳಾಡಿಸುತ್ತಾ ಇರುತ್ತಾನೆ. ಆ

ಸಮಯದಲ್ಲಿ ಒಂದು ಮೊರದಲ್ಲಿ ಎಲೆ ಅಡಿಕೆ, ಬಾಳೆಹಣ್ಣು, ಹೂವು, ಸುಗಂಧಕಡ್ಡಿ, ಇತ್ಯಾದಿ ಮಂಗಲದ್ರವ್ಯಗಳನ್ನಿಟ್ಟುಕೊಂಡು ಪೂಜೆ ಮಾಡಲಾಗುತ್ತದೆ. ಆವೇಶ ಬಂದಾಗ ಆ ನಾಯಕ ಪ್ರಶ್ನೆಗಳಿಗೆ ಉತ್ತರಿಸುತ್ತಾನೆ. ಅಗತ್ಯವಿಲ್ಲದಿದ್ದಾಗ ಈ ಹಾಡುಗಳನ್ನು ಹಾಡುವುದು, ಆ ಹಾಡುಗಾರರನ್ನು ಕರೆಯುವುದು, ದೇವರನ್ನು ಆಹ್ವಾನಿಸುವುದು ನಿಷಿದ್ಧ ಮತ್ತು ಇದಕ್ಕೆ ಗುಂಪಿನ ಯಜಮಾನನ ಅನುಮತಿಯನ್ನು ಪಡೆಯಬೇಕಾದುದು ಅನಿವಾರ್ಯ.

ಬೆಟ್ಟಕುರುಬರು ಬಿದಿರಿನ ಕೆಲಸಗಳಾದ ಮೇಲೆ ಸಾಮಾನ್ಯವಾಗಿ ಯುಗಾದಿ ಹಬ್ಬದ ಸಮಯದಲ್ಲಿ ಕೋಟೆ ಮಾರಿಯಮ್ಮ, ಕನ್ನಂಬಾಡಿಯಮ್ಮ ಹಾಗೂ ಪಿರಿಯಾಪಟ್ಟಣದಮ್ಮ ಮೊದಲಾದ ತಮ್ಮ ತಮ್ಮ ಮನೆದೇವರುಗಳಾದ ಸ್ತ್ರೀದೇವತೆಗಳನ್ನು ಆರಾಧಿಸಿ, ಹಾಡಿಯ ಎಲ್ಲರೂ ಸೇರಿಕೊಂಡು ಊಟವನ್ನು ಕೊಡುತ್ತಾರೆ. ಆ ಸಮಯದಲ್ಲಿ ಚಪ್ಪರ ಹಾಕಿ ಸುಳಿಬಾಳೆಲೆ ಇಟ್ಟು ಅದರ ಮೇಲೆ ಕೋಳಿ, ಹಣ್ಣು, ಕಾಯಿ ಇತ್ಯಾದಿಗಳನ್ನಿಟ್ಟು ಎಡೆಹಾಕಿ ಪ್ರಶ್ನೆಗಳನ್ನು ಕೇಳುತ್ತಾರೆ. ಇದಕ್ಕೆ ಮಾತು ಹಾಕ್ತಾರೆ ಎನ್ನುತ್ತಾರೆ. ಅಂದರೆ ಪ್ರಶ್ನೆ ಕೇಳಿ ಉತ್ತರ ಪಡೆಯುವುದು ಎಂದರ್ಥ. ಆಗ ಇವರು ನಿಷ್ಠಾವಂತರಾಗಿದ್ದರೆ ದೈವ(ಪಿರಿಯಾಪಟ್ಟಣದಮ್ಮ) ಬಂದು ಇವುಗಳನ್ನು ತೆಗೆದುಕೊಂಡು ಹೋಗುತ್ತದೆ(ಅಂದರೆ ಆ ದೇವತೆ ಮೈಮೇಲೆ ಬರುತ್ತಾಳೆ) ಎಂಬ ನಂಬಿಕೆ ಇವರಲ್ಲಿದೆ. ಆಗ ಇವರು ಬೆಳಕು ಹರಿಯುವ ತನಕ ಕೂರಬೇಕು. ಅದು ಕಟ್ಟುನಿಟ್ಟಾದ ನಿಯಮ.

**ಬೆಟ್ಟಕುರುಬರ ಸೀಮಾಪದ್ಧತಿ**

ಬೆಟ್ಟಕುರುಬರಲ್ಲಿ ಸೀಮಾಪದ್ಧತಿಯನ್ನು 'ಜಮ್ಮಾ'ವೆಂದೂ, 'ಎಲ್ಲೆ' ಎಂದೂ ಹಾಗೂ 'ಮಗೆ' ಎಂದೂ ಕರೆಯಲಾಗುತ್ತದೆ. ತಮ್ಮ ಸಮುದಾಯದಲ್ಲಿ 'ಜಮ್ಮಾ' ಪದ್ಧತಿಯು ನಿರ್ಮಾಣವಾದ ಬಗ್ಗೆ ನಿಖರವಾದ ಕಥೆಯನ್ನು ಸಮುದಾಯದ ಹಿರಿಯರು ಹೇಳುತ್ತಾರೆ. ಅವರ ಪ್ರಕಾರ ತಮಿಳುನಾಡಿನ ಊಟಿಯ ಹತ್ತಿರವಿರುವ 'ನೆರ್ದಿಮಲೆ' ಇವರ ಮೂಲಸ್ಥಾನ. ನೆರ್ದಿಮಲೆಯ ಗುಡಲೂರಿನ ಅಜ್ಜಯ್ಯ ಬೆಟ್ಟಕುರುಬರ ಮೂಲಪುರುಷ, ತಮ್ಮ ಸಮುದಾಯದ ಸಂತತಿ ಜಾಸ್ತಿಯಾದಂತೆ ಅಜ್ಜಯ್ಯ ಜಮ್ಮಾವನ್ನು ಮೂರು ಭಾಗಗಳಾಗಿ ವಿಂಗಡಿಸಿ ಎಲ್ಲೆಯನ್ನು ಗುರ್ತಿಸಿಕೊಡುತ್ತಾನೆ. ಆನೆ, ಬೇವಿನ ಮತ್ತು ಕೊಳ್ಳಿ ಎಂಬ ಮೂರು ಭಾಗಗಳನ್ನು ಮಾಡಿ 1. ಆಳ್ತರೆ ಮೂರು ಎಲ್ಲೆ: ಇವರಲ್ಲಿ ಮೂರು ಕೊಪ್ಪಲು(ಹಾಡಿಗಳು)ಕೂಡಿಕೊಂಡು ಆದ ಜಮ್ಮಾ ಎಲ್ಲೆ ಆಗುತ್ತದೆ. ಇದನ್ನು ಮೂರಾಡಿ, ಮೂಳ್ತೆಲ್ಲೆ ಎಂದೂ ಕರೆಯುತ್ತಾರೆ. 2. ಐದು ಅಳ್ತರ ಎಲ್ಲೆ : ಐದು ಹಾಡಿ ಕೂಡಿಕೊಂಡು ಐದು ಜಮ್ಮಾದ ಎಲ್ಲೆ ಕೊಪ್ಪಗಳ ಕುಲಗಳಿಂದ ಆದ ಐದು ಆಳ್ತರೆ ಎಲ್ಲೆ ಅಥವಾ ಜಮ್ಮಾ 3. ಏಳು ಆಳ್ತರೆ ಎಲ್ಲೆ: ಏಳು ಹಾಡಿ ಕೂಡಿಕೊಂಡು ಆದ ಏಳು ಕೊಪ್ಪಲ ಕುಲಗಳ ಜಮ್ಮಾ ಇದನ್ನು ಏಳ್ತಾಡಿ, ಏಳಾಡಿ ಎಂದೂ

ಕರೆಯುತ್ತಾರೆ. ನೆರ್ದಿಮಲೆಯ ಬೆಟ್ಟಕುರುಬರ ಮೂಲಪುರುಷ ಅಜ್ಜಯ್ಯ ಹೀಗೆ ಬೆಟ್ಟಕುರುಬರಿಗೆ ಜಮ್ಮಾ/ಸೀಮಾವನ್ನು ಮೂರು ಭಾಗವಾಗಿ ಕಾಡಿನ ಕ್ಷೇತ್ರವನ್ನು ಹಂಚಿ ಆಯಾ ಕ್ಷೇತ್ರಗಳಲ್ಲಿ ಹೋಗಿ ತಮ್ಮ ಸಂತತಿ ವಿಸ್ತರಿಸಿಕೊಳ್ಳಲು ಸೂಚಿಸುತ್ತಾನೆ. ಹೀಗೆ ಸಮುದಾಯವು ತಮ್ಮ ಎಲ್ಲೆ/ಸೀಮೆಯನ್ನು ವಿಸ್ತರಿಸುವಾಗ ತಮ್ಮ ಎಲ್ಲೆಯ(ಸೀಮೆ)ಆಧಾರದ ಮೇಲೆ ತಮ್ಮ ಕುಲಗಳನ್ನು ಹಾಗೂ ಮಗೆಗಳನ್ನು ವಿಂಗಡಿಸಿ ಹಂಚಿಕೊಂಡು ವಿಸ್ತರಿಸಲ್ಪಡುತ್ತಾರೆ. ಹೀಗೆ ವಿಂಗಡಣೆಯಾದ ಎಲ್ಲೆಗಳು ಕೇರಳದ ವೈನಾಡ್, ತಮಿಳುನಾಡಿನ ನೆರ್ದಿಮಲೆ ಮತ್ತು ಕರ್ನಾಟಕದ ಚಾಮರಾಜನಗರ, ಕೊಡಗು ಮತ್ತು ಮೈಸೂರು ಜಿಲ್ಲೆಗಳಲ್ಲಿ ವಿಸ್ತರಿಸಲ್ಪಡುತ್ತಾರೆ. ಈ ಮೂರು ವಿಭಾಗಗಳು ಭೌಗೋಳಿಕವಾಗಿ ಅವಲೋಕಿಸಿದಾಗ ಪಶ್ಚಿಮ ಘಟ್ಟದ ಮೂರು ರಾಜ್ಯಗಳ ಗಡಿಗಳು ಸಂದಿಸುವ ವೃತ್ತಾಕಾರದ ಪರಿಧಿಯ ವಲಯದಲ್ಲಿ ಬೆಟ್ಟಕುರುಬರು ಸೀಮಾ/ಜಮ್ಮ/ಎಲ್ಲೆಯ ಕ್ಷೇತ್ರವನ್ನು ವಿಸ್ತರಿಸಿ ತಮ್ಮ ವಾಸಸ್ಥಳವನ್ನಾಗಿ ರೂಪಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಬೆಟ್ಟಕುರುಬರಲ್ಲಿ ಮಗೆ ಮತ್ತು ಕುಲಗಳು ಜಮ್ಮಾ ವಿಂಗಡಣೆಯ ಭಾಗವಾಗೇ ವಿಭಜಿತವಾಗಿವೆ ಎಂದು ಹೇಳಲಾಗುತ್ತಿದೆ. ಮಗೆ ಮತ್ತು ಕುಲಗಳ ಹೆಸರುಗಳ ಕಾಡಿನ ಪರಿಸರದ ಜೀವಿಗಳು, ಮರಗಿಡ ಬಳ್ಳಿ, ದೈವಗಳು ಹಾಗೂ ಪ್ರದೇಶವನ್ನು ಸೂಚಿಸುವ ಹೆಸರುಗಳಾಗಿರುವುದನ್ನು ಕಾಣಬಹುದಾಗಿದೆ. ಅಂದಾಜು 107 ಮಗೆಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ ಇಲ್ಲಿ ಪಟ್ಟಿ ಮಾಡಲಾಗಿದೆ.

**ಬೆಟ್ಟಕುರುಬರ ಕುಲಗಳು**

1. ಕಲ್ಕರ್ ಮಗೆ 2. ಕಮಟ್ ಮಗೆ 3. ಕಣ್ಮೀನ್ ಮಗೆ 4. ಕಲಿಕೀರ್ ಮಗೆ 5. ಕಲ್ಲೀರ್ ಮಗೆ

2. ಕಳ್ನಾರ್ ಮಗೆ 6. ಕಳೇರ್ ಮಗೆ
3. ಕಕ್ಕೇರ್ ಮಗೆ
4. ಕಲಿಕೀನ್ಡ್ ಮಗೆ
5. ಕಳ್ನಾರ್ ಮಗೆ
6. ಕಡ್ಡೀನ್ ಜೀರ್ಗಲ್ ಮಗೆ
7. ಕಣಾರ್ ಜೀರ್ಗಲ್ ಮಗೆ
8. ಕಿಂದ್ದೀರ್ ಮಗೆ
9. ಕಿತ್ತೀರ ಮಗೆ
10. ಕೇಮೀನ್ ಮಗೆ
11. ಕೆಂಸಲ್ ಮಗೆ
12. ಕೆಂರ್ಜಿ ಮಗೆ
13. ಕೈಪಾಟ್ ಮಗೆ
14. ಕಾಸ್ಪರ್ ಮಗೆ
15. ಕ್ವಾಟ್ ಮೇಲ್ ಮಗೆ
16. ಕ್ವಾಟ್ ಕೀನ್ಡ್ ಮಗೆ
17. ಕ್ವಾಲ್ತೀರ್ ಮಗೆ
18. ಕ್ವಾಲಂ ಬೊಟ್ಪ್ ಮಗೆ
19. ಕುಪ್ಪೇರ್ ಮಗೆ

20. ಕುಪ್ಪೊಚ್ಚಿ ಮಗೆ
21. ಕುಂಭರೇಲ್ ಮಗೆ
22. ಕೂದೇರ್ ಮಗೆ
23. ಕೊಂಜೇರ್ ಮಗೆ
24. ಕೋಯ್ಲೆರ್ ಮಗೆ
25. ಕೊಡುಂಭ್ ಮಗೆ
26. ಕೋಯ್ಲೀರ್ ಮಗೆ
27. ಗುಮೊಟ್ ಮಗೆ
28. ಚಾಂಬಳ್ ಮಗೆ
29. ಚಾಗೋಡ್ ಮಗೆ
30. ಚೆಂಕೀರ್ ಮಗೆ
31. ಚೇಲೇರ್ ಮಗೆ
32. ಚೆರ್ಗೆಲ್ ಮಗೆ
33. ತಿರುಮಂಗಲ್ ಮಗೆ
34. ತಿರ್‌ಂಬೊಟ್ಟಿ ಮಗೆ
35. ತೆರ್ಕೆಲ್ ಮಗೆ
36. ತೆನ್ಕಲ್ ಮಗೆ
37. ದಡ್ ದಲ್ ಮಗೆ
38. ತ್ವಾಪೊಟ್ಟ ಮಗೆ
39. ದಣಗಲ್ ಮಗೆ
40. ದಾಳ್ ಮಗೆ
41. ನಿಮ್ಮಿಲ್ ಮಗೆ
42. ನಿಸ್ಮಿನ್ನೇರಿ ಮಗೆ
43. ನಾಣ್ಚಿ ಮಗೆ
44. ಪಳೇರ್ ಮಗೆ
45. ಪ್ಯಾರ್ ಮಗೆ
46. ಫಿರ್ಕಡ್ ಮಗೆ
47. ಫಿಲಿಕಲ್ಪಾರ್ ಮಗೆ
48. ಪೇಡ್ರಿ ಮಗೆ
49. ಪೆರ್ಕ್ಯಡ್ ಗೇರ್ ಮಗೆ
50. ಪೊಡಜ್ಜನ್ ಮಗೆ
51. ಬಗ್ಲೇರ್ ಮಗೆ
52. ಬಳ್ಳಿಲ್ ಮಗೆ
53. ಬಾಡೇರ್ ಮಗೆ
54. ಬಾಳ್ಕೀರ್ ಮಗೆ
55. ಬಾಳಾಜಿ ಮೆ
56. ಬಲ್ತಲ್ ಮಗೆ
57. ಬೀರ್ತಲ್ ಮಗೆ
58. ಬಿಲ್ತಜ್ಜನ್ ಮಗೆ
59. ಬೋಗೋಳ್ ಮಗೆ
60. ಬೊಳ್ ಜೇರ್ ಮಗೆ
61. ಬೂಟೆಮೆಲ್ ಮಗೆ
62. ಬೊಣ್ಗೊಟ್ ಮಗೆ
63. ಮತ್ತೀರ್ ಮಗೆ
64. ಮಾವೇರ್ ಮಗೆ
65. ಮಾಜೇಲ್ ಮಗೆ
66. ಮುತ್ತಿಂಗ್ ಮಗೆ
67. ಸಿಂಕೀರ್ ಮಗೆ
68. ಮೋಟ್ಲ ಮಗೆ
69. ಮೊನ್ಗೊಡ್ ಮಗೆ
70. ಮೆರ್ಗೇರ್ ಮಗೆ
71. ಯುನೆಲ್ ಮಗೆ

72. ಯುವರ್ಗಲ್ ಮಗೆ
73. ಯಾನ್ಬಾರ್ ಮಗೆ
74. ಹಡ್ಲಾಟ್ ಮಗೆ
75. ಹಡೀರ್ ಮಗೆ
76. ಹಚ್ಚೇರ್ ಮಗೆ
77. ಹಡ್ಲೇಲ್ ಮಗೆ
78. ಹೇರ್ಕೋಟ್ ಮಗೆ
79. ಆಡ್ಕಾಲ್ ಮಗೆ
80. ಅಂಬುಗೊಟ್ ಮಗೆ
81. ಹೊಸೆಲ್ ಮಗೆ
82. ಎತ್ತೀರ್ ಮಗೆ
83. ಎಳ್ಗೋರ್ ಮಗೆ
84. ಸರ್ಕಲ್ ಮಗೆ
85. ಸುಂಡಜ್ಜ ಮಗೆ
86. ಸುಳ್ಕೋಡ್ ಮಗೆ
87. ಸಿಂಗೆರ್ ಮಗೆ
88. ವಾಳ್ಗೋಡ್ ಮಗೆ
89. ಜೋಡ್ಲ್ ಮಗೆ
90. ನಡ್ಬೊಟ್ಟೆ ಮಗೆ
91. ಕಿಪೆರ್ ಮಗೆ
92. ಮೊಜೆರ್ ಮಗೆ
93. ಶಂಬಗೇರ್ ಮಗೆ
94. ಚೆನ್ಕೀರ್ ಮಗೆ
95. ಪುಂಜೇರ್ ಮಗ್
96. ಪಾಂಬಾರ್ ಮಗೆ
97. ಅಡ್ವೇರ್ ಮಗೆ
98. ಮಾವಾಳ್ ಮಗೆ
99. ಕೈರೋಡ್ ಮಗೆ
100. ತರಿಕಿರ್ ಮಗೆ
101. ಆಟಂಗಾಲ್ ಮಗೆ
102. ಪೆರ್ಕೀರ್ಲ್ ಮಗೆ
103. ಹಡ್ಡೆ ಮಗೆ
104. ವೈಲ್ ಮಂಜಿಲ್ ಮಗೆ
105. ಪೆಲಜನ್ ಮಗೆ
106. ತೋಪಟ್ಟಿ ಮಗೆ
107. ಅಡಮೇಲ್ ಮಗೆ

| | |
|---|---|
| 1. ದಾಳು | ಕೋಮರ್(ಗಂಡು ದೇವರು) |
| 2. ಕಲ್ಲರ್ | ನೂರಾಸೇಶ್ವರ(ಗಂಡು ದೇವರು) |
| 3. ಕುಂಪಳ್ಳೀ | ಕುಮ್ರಳ್ಳೀ ಒಡೆಯ(ಗಂಡು ದೇವರು) |
| 4. ಶಂಕಿರಲ್ | ಭತ್ತೇರಿ ಮಾರಮ್ಮ(ಸ್ತ್ರೀ ದೇವತೆ) |
| 5. ಓಲ್ ಮಂಜಲ್ | ಸ್ವಾಯ್ ದೇವರು(ಗಂಡು ದೇವರು) |
| 6. ಸರ್ಕಲಕ್ಕಿನ್ | ಕುಟ್ಟಮಾರಮ್ಮ(ಸ್ತ್ರೀ ದೇವತೆ) |
| 7. ಸಾಂಬಾಳಕ್ಕನ್ | ಸಾಂಬಾಳಜ್ಜ(ಗಂಡು ದೇವರು) |
| 8. ಜೇಡ್ಲ್ | ಕಾಟಿಮಾರಮ್ಮ ಇತ್ಯಾದಿ |

ಮೈಸೂರು ವಿಶ್ವವಿದ್ಯಾನಿಲಯದ ಮಾನವಶಾಸ್ತ್ರದ ವಿಭಾಗದ ಶ್ರೀ ಹರೀಶ್ ಅವರು ನೀಡಿರುವ ಮಾಹಿತಿಯ ಪ್ರಕಾರ ಈ ಕೆಳಕಂಡ ಕುಲಗಳನ್ನು ಹೆಸರಿಸಲಾಗಿದೆ. ಬೆಟ್ಟಕುರುಬರು ತಮ್ಮ ಕುಲಗಳನ್ನು ಸಾಲುಗಳು ಎಂಬುದಾಗಿ ಕೂಡ ಕರೆಯುತ್ತಾರೆ.

ಬೆಟ್ಟಕುರುಬರಲ್ಲಿ ಹೀಗೆ ಸೀಮಾ ವಿಂಗಡಣೆಯಾಗಿ ಮಗೆ, ಕುಲಗಳು ಸೀಮಾ ಸಂಕೇತವಾಗಿ ಆ ಸಮುದಾಯವನ್ನು ಪ್ರತಿಬಿಂಬಿಸುತ್ತವೆ. ಈ ಮಗೆ ಮತ್ತು ಕುಲಗಳಲ್ಲಿ ಸಮುದಾಯದ ಏಳಿಗೆಗಾಗಿ ಮಡಿದ ಪೂರ್ವಿಕರ ಆತ್ಮಗಳು ದೈವಗಳಾಗುತ್ತವೆ. ಮೇಲೆ ಹೆಸರಿಸಲಾಗಿರುವ ವಿವಿಧ ದೈವಗಳು ಬೆಟ್ಟಕುರುಬರ ಜಮ್ಮಾ/ಸೀಮಾದೈವಗಳಾಗಿ ಅವರ ಸೀಮಾವಲಯವನ್ನು ಹಾಗೂ ಬೆಟ್ಟಕುರುಬರನ್ನು ದುಷ್ಟಶಕ್ತಿಗಳನ್ನು ಕಾಪಾಡುತ್ತಿರುತ್ತವೆಂಬ ನಂಬಿಕೆ ಈ ಸಮುದಾಯದ್ದಾಗಿದೆ.

ಬೆಟ್ಟಕುರುಬರಲ್ಲಿನ ಸೃಷ್ಟಿಪುರಾಣದ ಮೂಲ ಆಶಯವೂ ಜಮಾ ವಿಂಗಡಣೆಯಾಗಿದೆ. ಸೃಷ್ಟಿಪುರಾಣದಲ್ಲಿ ಬಿಂಜೆಪವ್ವವಿದ್ದು, ಅವೇ ಕುಲಗಳಾಗಿವೆ. ಕುಲಗಳು ಮಗೆಗಳಿಂದ ಸೃಷ್ಟಿಯಾಗಿದೆ. ಮಗೆಯೇ 'ಜಮ್ಮಾ' ಆಧಾರದ ಮೇಲೆಯೇ ಮಗೆಗಳಾಗಿವೆ. ಇದಕ್ಕೆ ಮೂಲ ಕಾರಣಕರ್ತ ಸುಂಡಜ್ಜ. ಬೆಟ್ಟಕುರುಬರಲ್ಲಿ ಆಡಳಿತವನ್ನು ಮತ್ತು ಆಗಿನ ಸಂವಿಧಾನದಂತಹ ವ್ಯವಸ್ಥೆಯನ್ನು ಸೃಷ್ಟಿಸಿದವ ಸುಂಡಜ್ಜ. ಈತನನ್ನು ಬುದ್ಧ, ಬಸವಣ್ಣ ಮತ್ತು ಅಂಬೇಡ್ಕರ್‌ರಂತೆ ಬೆಟ್ಟಕುರುಬರ ಸಮುದಾಯ ಸುಂಡಜ್ಜನನ್ನು ಗೌರವಿಸುತ್ತದೆ.

ಬೆಟ್ಟಕುರುಬರಲ್ಲಿ 'ಮಗೆ' ಅಂದರೆ ಜಮ್ಮಾ/ಸೀಮಾ ವಿಂಗಡಣೆಯನ್ನು ಮೊದಲು ಸೃಷ್ಟಿಯಾದ 'ಪೆಲಜನ್ ಮಗೆ'. ಇವರು ಬೆಟ್ಟಕುರುಬರ ಸಮಾಜದಲ್ಲಿ ಹಿರಿಯರೆಂದು ಗುರ್ತಿಸಿಕೊಳ್ಳುವವರು. ಇವರಿಂದಲೇ ಕುಲಗಳ ವಿಂಗಡಣೆಯಾಯಿತೆಂದು ಬೆಟ್ಟಕುರುಬರು ತಿಳಿಸುತ್ತಾರೆ. ಕುಲ, ಮಗೆಗಳೇ ಸೀಮಾ ವಿಂಗಡಣೆಯ ಆಧಾರವಾಗಿತ್ತು ಎಂಬುಧಕ್ಕೆ ಸಾಕ್ಷಿ ನಿದರ್ಶನ ಆಧಾರವಾಗಿ ಬೆಟ್ಟಕುರುಬರು ಹೇಳಿದ ಕತೆಯಲ್ಲಿದ್ದಂತೆ ಈಗಲೂ ಇರುವ ಹಳ್ಳಿಗಳ ಹೆಸರು ಮತ್ತು ಅವರ ಮಗೆಗಳ ಹೆಸರೂ ಒಂದೇ ಆಗಿರುವುದು ಕಂಡುಬರುತ್ತದೆ. ಉದಾಹರಣೆಗೆ 'ಕಲ್ಕೆರೆ' ಎನ್ನುವ ಹಳ್ಳಿ ಈಗಲೂ ಕಂದಾಯ ಗ್ರಾಮ ಅರಣ್ಯದಲ್ಲಿನ ಈ ಗ್ರಾಮ ಕಂದಾಯದ ನಕಾಶೆಯಲ್ಲಿದೆ. ಇದು 'ಕಲ್ಕರ್' ಮೊಗೆಯಿಂದ ಸೃಷ್ಟಿಯಾದದ್ದು. ಹಾಗೆಯೇ 'ಬಳೆ' ಗ್ರಾಮವಿದೆ. ಅದು 'ಬಳ್ಳಿಲ್' ಮೊಗೆಯಿಂದ ಸೃಷ್ಟಿಯಾದದ್ದು. 'ನಾಣ್ಚಿ' ನಾಗರಹೊಳೆಯಿಂದ ಕುಟ್ಟಕ್ಕೆ ಹೋಗುವ ಗಡಿಯಲ್ಲಿ ಗ್ರಾಮವಿದೆ. ಅದೂ ಕೂಡ ನಾಣ್ಚಿ ಮೊಗೆಯಿಂದ ಸೃಷ್ಟಿಯಾದದ್ದು, ಕುಟ್ಟ ಎರ್ಪು ದೇವರ ರಸ್ತೆಯಲ್ಲಿ(ಬ್ರಹ್ಮಗಿರಿ ಬೆಟ್ಟ) (ಇರಪ್ಪು ಜಲಪಾತದ ಹತ್ತಿರ) ಬೀರ್ಗ ಎಂಬ ಗ್ರಾಮವಿದೆ. ಅದು ಬಿರುಲ್ ಮಗೆಯಿಂದ ಸೃಷ್ಟಿಯಾದದ್ದು, ಕುಟ್ಟದ ಹತ್ತಿರ ಕೇರಳದಲ್ಲಿ 'ತೋಳ್ಪಟ್ಟಿ' ಎಂಬ ಗ್ರಾಮವಿದೆ. ಇದು ತೋಪಪಟ್ಟಿಮೊಗೆಯಿಂದ ಸೃಷ್ಟಿಯಾದದ್ದು. ಮುಂದೆ ಆನೆಬೇಗೂರು ಎಂಬ

ಗ್ರಾಮವಿದೆ. ಅದು ಬೋಗೋಳ್ ಮಗೆಯಿಂದ ಸೃಷ್ಟಿಯಾದದ್ದು. ನಂತರ ಬತ್ತೇರಿ ಭಾಗದಲ್ಲಿರುವ ಎಡಮಲೆಗ್ರಾಮವು ಅಡಮೇಲ್ ಮಗೆಯಿಂದ ಸೃಷ್ಟಿಯಾದದ್ದು. ಈ ಮಗೆಯ ಮನೆತನದ ಮಾಸ್ತರರೊಬ್ಬರು ತಮ್ಮ ಜಮ್ಮಾವನ್ನು ಅಲ್ಲಿಯ ಶಾಲೆ ಮತ್ತು ಬ್ಯಾಂಕಿಗಾಗಿ ದಾನ ನೀಡಿದ್ದನ್ನು ಸ್ಮರಿಸುತ್ತಾರೆ. ಗುಂಡ್ಲುಪೇಟೆಯಿಂದ ಬತ್ತೇರಿಮಾರ್ಗದಲ್ಲಿ 'ಕುಪ್ಪಾಡಿ' ಗ್ರಾಮವಿದೆ. ಅದು ಕುಪ್ಪೇರ್ ಮಗೆಯಿಂದ ಸೃಷ್ಟಿಯಾದದ್ದು. ಬೆಟ್ಟಕುರುಬರಲ್ಲಿ, ಜೇನುಕುರುಬರ ರೀತಿ ಸೀಮಾಪದ್ಧತಿಯು ಆದೀಮ ಸ್ಥಿತಿಯ ರೀತಿಯದ್ದಾಗಿದೆ. ಬೆಟ್ಟಕುರುಬರಲ್ಲಿ ಹಲವಾರು ಹಾಡಿ ಅಥವಾ ಹಾಡಿಗಳ ಸಮೂಹದ ಹತ್ತಿರದ ಕಾಡಿನ ಒಂದು ದೊಡ್ಡ ಭೌಗೋಳಿಕ ಪ್ರದೇಶವೇ ಜಮ್ಮಾ ಭಾಗವಾಗಿರುವುದನ್ನು ಕಾಣಬಹುದಾಗಿದೆ.

ಉದಾಹರಣೆಗೆ: ಕೊಡಗಿನ ಪಶ್ಚಿಮಕ್ಕೆ ಇರುವ ನಾಣ್ಚಿ ಮೊಗೆಯ ಜಮ್ಮಾ ಪ್ರದೇಶವು ಪಶ್ಚಿಮಕ್ಕೆ ಲಕ್ಷ್ಮಣತೀರ್ಥ ಪೂರ್ವಕ್ಕೆ ಎಚ್.ಡಿ.ಕೋಟೆ, ದಕ್ಷಿಣಕ್ಕೆ ಅಣಪೆತೋಡ್(ಬಳ್ಳೆ ಅರಣ್ಯ) ಉತ್ತರಕ್ಕೆ ಪೊನ್ನಪುಸಂತೆ. ಹೀಗೆ ಅಂದಾಜು ನಾಣ್ಚಿ, ಮೂಪು, ಆಳೇ, ಪಗ್ದಿ, ಕಾಟಲ್ಕೆರ್ ಜೋಡ್ಲಮಗೆ. ಉಪಮಗೆ ಸೇರಿ ಒಟ್ಟು ಐದು ಹಾಡಿಗಳಿಗೆ ಅಂದಾಜು 15 ಕಿ.ಮೀ. ಚದುರ ವೃತ್ತದ ಪರಿಧಿಯ(Radius) ಕಾಡಿನ ವಿಸ್ತೀರ್ಣವೂ ಈ 5 ಹಾಡಿಗಳಿಗೆ ಜಮ್ಮಾವಾಗಿರುತ್ತದೆ.

**ಇತರೆ ದೈವಗಳು:** ನಾಣ್ಚಿ ಅರಣ್ಯದೊಳಗಿನ ಅಮ್ಮಾಳೆ(ಬಾಳೆಕೊಪ್ಪಕಾಡು) ಅಯ್ಯಪ್ಪ(ಶಾಂತಪುರ), ಕೊತ್ತೂರು ಮಾರಮ್ಮ, ಇಲ್ಲಿ ಕಾಟೆ ಜಾತ್ರೆ ಜರಗುತ್ತದೆ. ಕುಟ್ಟದಲ್ಲಿ ಕಿರಂಗಾಲಿ ಜಾತ್ರೆಯಾಗುತ್ತದೆ. ಪಟ್ಟಯ್ಯ, ಭದ್ರಕಾಳಿ, ಎರಡು ಮಾಡು ಇಸ್ವರ, ಚಾಮುಂಡಿ

## ಮ್ಯಾಸಬೇಡ ಸಮುದಾಯದ ಸೀಮಾ ಪದ್ಧತಿ

### ಮ್ಯಾಸಬೇಡರ ಕಿರು ಪರಿಚಯ

ಆಂಧ್ರಭಾಗದ ಶ್ರೀಶೈಲದ ಕಡೆಯಿಂದ ಹಸಿರನರಸಿ ಆಂಧ್ರದ ಗಡಿಭಾಗಗಳಾದ ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು, ಜಗಳೂರು, ಬಳ್ಳಾರಿ, ತುಮಕೂರಿನ ಜಿಲ್ಲೆಯ ಗಡಿಗಳಲ್ಲಿ ವಲಸೆ ಬಂದ ಸಮುದಾಯ ಮ್ಯಾಸಬೇಡರೆನ್ನಲಾಗಿದೆ. ಮೂಲತಃ ಬೇಡರು, ಬೇಟೆಯಾಡುವವರು, ತಮ್ಮ ಬದುಕಿನ ಆಹಾರದ ಮೂಲವಾಗಿ ಕಾಡಿನಲ್ಲಿ ಬೇಟೆಯಾಡಿಕೊಂಡೇ ಜೀವನ ನಡೆಸುತ್ತಿದ್ದ ಇವರು ಪ್ರೊಟೋ ಅಸ್ಟ್ರಾಯಿಡ್ ಮೂಲದ್ರಾವಿಡ ಜನಾಂಗಕ್ಕೆ ಸೇರಿದ ಆದಿ ಸಮುದಾಯ ಬೇಡರ ಜನಾಂಗವಾಗಿದೆ.

ಬೇಡರಲ್ಲಿ ಎರಡು ಪಂಗಡಗಳನ್ನು ಕಾಣಬಹುದು. ಒಂದು ಊರ ನಾಯಕರು ಎರಡನೆಯದು ಮ್ಯಾಸನಾಯಕರು. ಊರನಾಯಕರಿಗೂ ಮ್ಯಾಸನಾಯಕರಿಗೂ ಸಂಬಂಧಗಳಿಲ್ಲ. ಅವರ ರೀತಿ ರಿವಾಜು, ಸಾಂಸ್ಕೃತಿಕ ಆಚರಣೆಗಳೇ ಬೇರೆ ಬೇರೆಯದೇ ಆಗಿವೆ. ಊರನಾಯಕರು

ಈಗಾಗಲೇ ಗ್ರಾಮಾಂತರ ಪ್ರದೇಶ, ಪಟ್ಟಣಗಳನ್ನು ಸೇರಿ ಸಾಕಷ್ಟು ವಿದ್ಯೆ, ಉದ್ಯೋಗಗಳನ್ನು ಗಳಿಸಿ ಮುಖ್ಯವಾಹಿನಿಗೆ ಬಂದು ನಾಗರಿಕರೆನಿಸಿಕೊಂಡಿದ್ದಾರೆ. ಆದರೆ ಮ್ಯಾಸನಾಯಕರು ಬುಡಕಟ್ಟುಗಳ ಲಕ್ಷಣಗಳನ್ನು ಹೊಂದಿದ್ದು, 50–60 ಗುಡಿಸಲುಗಳಲ್ಲಿ ಪ್ರತ್ಯೇಕವಾಗಿ ಊರಾಚೆ ವಾಸಿಸುತ್ತಾರೆ. ಅವರ ವಾಸಸ್ಥಳವನ್ನು 'ಹಟ್ಟಿ'ಗಳೆಂದು ಕರೆಯಲಾಗುತ್ತದೆ.

ಮ್ಯಾಸಬೇಡರ ಹಟ್ಟಿಯ ಸುತ್ತಲೂ ಮುಳ್ಳಬೇಲಿ ಹಾಕಿಕೊಂಡಿರುತ್ತಾರೆ. ಅಂಚೆ ಹುಲ್ಲು, ಲಕ್ಕಿಬರಲು ಮತ್ತು ಕಲ್ಲು ಮಣ್ಣುಗಳಿಂದ ಗುಡಿಸಲು ಕಟ್ಟಿಕೊಳ್ಳುತ್ತಾರೆ. ಗುಡಿಸಿಲು ವೃತ್ತಾಕಾರವಾಗಿದ್ದು ಪುಟ್ಟದಾಗಿರುತ್ತದೆ. ಈಗೀಗ ಸರ್ಕಾರದ ಆಶ್ರಯ ಮನೆಗಳು ಗುಡಿಸಿಲು ಬದಲು ತಲೆ ಎತ್ತಿವೆ. ಬೇಡನಾಯಕರ ಮೈಬಣ್ಣ ದ್ರಾವಿಡರ ಲಕ್ಷಣದಂತೆ ಕಪ್ಪು, ಉದ್ದಶರೀರ, ಆಜಾನುಬಾಹುಗಳು, ಶೌರ್ಯ, ಪ್ರತಾಪ, ವೀರರು, ಧೈರ್ಯ ಪರಾಕ್ರಮಿಗಳು ಮತ್ತು ಉಗ್ರ ರೂಪದ ಸ್ವಭಾವವುಳ್ಳ ಬೇಡರು ಬೇಟೆಗೆ ಹೇಳಿ ಮಾಡಿಸಿದ ದೇಹ ರಚನೆ ಮತ್ತು ಸ್ವಭಾವದ ಲಕ್ಷಣಗಳನ್ನು ಹೊಂದಿದ್ದಾರೆ. ಮ್ಯಾಸಬೇಡರು ಬೇಟೆಯೊಂದಿಗೆ ಬದುಕಿಗಾಗಿ ಪಶುಪಾಲನೆಯನ್ನು ನಂಬಿಕೊಂಡು ಜೀವನ ನಡೆಸುತ್ತಿರುವವರು. ಹೀಗಾಗಿ ದನಕರುಗಳನ್ನು ಮೇಯಿಸುತ್ತಿರುವ ಬೇಡರೆಂಬ ಕಾರಣಕ್ಕೆ ಮೇಯಿಸುವವರು ಪದದಿಂದ ಮ್ಯಾಸಬೇಡ ಪದನಿಷ್ಪತ್ತಿಯಾಗಿರಬಹುದೆಂದು ಊಹಿಸಲಾಗಿದೆ.

## ಮ್ಯಾಸಬೇಡರಲ್ಲಿನ ಸೀಮಾ ವಿಂಗಡಣೆ

ಈ ಸಮುದಾಯವು ಹುಲ್ಲಗಾವಲಿನ ಗಡಿ ಮತ್ತು ಪಶುಗಳಿಗಾಗಿ ಅನೇಕ ಕದನಗಳನ್ನು ಮಾಡಿವೆ. ಅದಕ್ಕಾಗಿ ಮಡಿದವರು ದೈವಗಳಾಗಿದ್ದಾರೆ. ವಿಶೇಷವಾದ ಸೀಮಾಪದ್ಧತಿಯನ್ನು ಪ್ರತಿಬಿಂಬಿಸುವ ಮ್ಯಾಸ ಬೇಡ(ಮ್ಯಾಸ–ಮೇಯಿಸುವವರು) ಕಾಟಿ ಮಲ್ಲನಾಯ್ಕ ಮತ್ತು ಆತನ 7 ಜನ ಅಕ್ಕತಮ್ಮಂದಿರ ಮೂಲಗೊಂಡುಪಾಲೆದೇವರು, ಒಬ್ಬಳದೇವರು, ಕಂಪಳದೇವರು, ಬೋಸೇದೇವರು, ಗದರದೇವರಿಂದ ಹಿಡಿದು ನಲ್ಲಜವರಯ್ಯ, ದಡ್ಡಿಸೂರನಾಯಕ, ಗಾದ್ರಿಪಾಲಯ್ಯ, ನಾಯಕನಹಟ್ಟಿಮಲ್ಲಪ್ಪ, ಭರಮಣ್ಣನಾಯ್ಕ, ಮೋಟಿದೇವರು, ಸುಕ್ಕಲಮಲ್ಲಯ್ಯ, ದಡ್ಡಿಕಾಮನಾಯ್ಕ, ದಡ್ಲು ಮಾರಮ್ಮ, ಬೋರೆದೇವರು ಹೀಗೆ ಪಶುಪಾಲನೆಯ ರಕ್ಷಣೆಗಾಗಿ ಹೋರಾಡಿದ ವೀರರೆಲ್ಲಾ ದೈವತ್ವ ಪಡೆದು ದೇವರುಗಳಾಗಿ ಪೂಜೆ ಜಾತ್ರೆಗಳ ಆಚರಣೆಗೊಳಗಾಗಿದ್ದಾರೆ.

ಶೈವ ಮತ್ತು ವೈಷ್ಣವ ಪಂಥಗಳ ಪ್ರಭಾವಕ್ಕೆ ನಂತರ ಒಳಗಾಗಿ ದಡ್ಡ ಸೂರನಾಯ್ಕ, ಕಂಪಲ ದೇವರು ಮತ್ತು ಬೊರೆ ದೇವರುಗಳಾಗಿ ವಿಂಗಡೆಯಾಗಿ ಇತರರಿಗಿಂತಲೂ ಮೂಲದಲ್ಲಿ ಮಡಿದ ವೀರರುಗಳ 12 ಪೆಟ್ಟಿಗೆ ದೇವರುಗಳನ್ನು ಹಂಚಿಕೊಂಡಿದ್ದಾರೆ. ಅದರ ಪ್ರಕಾರ 1. ಕಂಪಲದೇವರು, 2. ಹುಡೆಗಳ ಚಿತ್ರದೇವರು, 3. ಮುತ್ತೆಗಳು ಮಾರಮ್ಮ, 4. ದಡ್ಲಮಾರಮ್ಮ, 5. ಗಾದ್ರಿಪಾಲನಾಯ್ಕ, 6. ಬೋಸೆದೇವರು, 7. ಬೊಮ್ಮದೇವರು, 8. ಬಂಗಾರುದೇವರು, 8.

ಕಾಟಪ್ರ, 10. ಓಬಳದೇವರು, 11. ಸೂರಮು, 12. ಮ್ಯಾಸಬೇಡರ ಕುಲಗಳು ಎರಡು ಬಗೆಯಾಗಿದೆ. 1. ಸೂರ್ಯವಂಶದವರು, 2. ಚಂದ್ರವಂಶದವರು, ಇವುಗಳ ಕೆಳಗೆ ಬೆಡಗುಳಿಗೆ ಅನುಸಾರವಾಗಿ ಗುಂಪುಗಳಾಗಿವೆ. ಇವರ ಪಶುಪಾಲನ ಗಡಿಗಳ ವ್ಯಾಜ್ಯ, ನ್ಯಾಯಗಳಿಗಾಗಿ 12 ಕಟ್ಟೆಮನೆಗಳನ್ನು(ಮೂಲತಃ ಕಟ್ಟೆಮನೆ ಕಟ್ಟಳೆಮನೆ ಈಗ ಕಟ್ಟೆಮನೆಯಾಗಿದೆ) ಈ 12 ಕಟ್ಟೆಮನೆಗಳನ್ನು ನೋಡಿಕೊಳ್ಳುವ 12 ದೊರೆ ಮನೆತನಗಳನ್ನು ಆ ದೊರೆಗಳಿಗೆ 30–133 ಹಳ್ಳಿಗಳನ್ನು ನೋಡಿಕೊಳ್ಳುವ ಪಾಳೇಗಾರಿಕೆ ಹೊಂದಿರುತ್ತಾರೆ. ಕಟ್ಟೆಮನೆಗಳು ಕ್ರಮವಾಗಿ 1. ಗೋನೂರು(ಚಿತ್ರದುರ್ಗ), 2. ಕಾಮ್ಮಗೇತನಹಳೀ(ಜಗಳೂರು), 3. ಹಿರೇಹಳ್ಳಿ(ಚಳ್ಳಕೆರೆ), 4. ಅಡವಿಮಾರೇನಹಳ್ಳಿ(ಚಳ್ಳಕೆರೆ), 5. ಓಬೇನಹಳ್ಳಿ(ಚಳ್ಳಕೆರೆ), 6. ಮಲವರಳ್ಳಲಿ, 7. ಕೋನಸಾಗರ(ಮೊಳಕಾಲ್ಮೂರು), 8. ತಾಳಿಕರೆ(ಮಡಕಶಿರಾ), 9. ಮುತ್ತಿಗಾರಳ್ಳಿ (ಮೊಳಕಾಲ್ಮೂರು), 10. ನಾಯಕನಹಟ್ಟಿ(ಚಳ್ಳಕರೆ), 11. ಹಿರೇಮಲ್ಲನ ಹೊಳೆ(ಚಳ್ಳಕರೆ), 12. ನನ್ನಿವಾಳ(ಚಳ್ಳಕೆರೆ) ಇವರು ಮುಖ್ಯವಾಗಿ ಮುಂಗಾರಿ ಹಬ್ಬ, ನಾಗಪ್ಪನ ಪೂಜೆ, ಹಿರಿಯರ ಹಬ್ಬ, ಮಾರಮ್ಮನದು, ಮಳೆಗಾಗಿ ಪಾಪನಾಯಕನನ್ನು ಹೊರಡಿಸುವುದು, ಕಂಪಲದೇವರ ಜಾತ್ರೆ, ತಿಪ್ಪೇಸ್ವಾಮಿ ಜಾತ್ರೆ, ಗೌರಸಮುದ್ರ ಮಾರಮ್ಮನಜಾತ್ರೆ, ಪಾಲನಾಯಕ ಜಾತ್ರೆ, ಗಾದ್ರಿಪಾಲಯನ ಜಾತ್ರೆ, ಬೊರೇದೇವರ ಜಾತ್ರೆ, ದೇವರಳ್ಳಿ ಮಾರಮ್ಮನ ಉತ್ಸವಗಳು ಮ್ಯಾಸಬೇಡರು ಆಚರಿಸುವ ಜಾತ್ರೆಗಳಾಗಿವೆ.

### ಮ್ಯಾಸಬೇಡರ ಸೃಷ್ಟಿಪುರಾಣ

ಮ್ಯಾಸಬೇಡರ ಬುಡಕಟ್ಟಿನ ಮೂಲಕಥೆಗಳಿಗೆ ಹೋದರೆ, ಅವರ ಜನಾಂಗದ ಉತ್ಪತ್ತಿ ಆದುದು ಅವರು ಆರಾಧಿಸುವ ದೈವವಾದ ಪಶುವಿನ ಕಾಲಗೊರಸಿನಿಂದಲೇ ಎಂದು ಅವರ ಕುಲಮೂಲದ ದಂತಕಥೆಗಳು ಹೇಳುವುವು. ಸೃಷ್ಟಿಪಾಲನೆಯ ಆದಿದೈವಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ಭೂಲೋಕವನ್ನು ಸುತ್ತಿಕೊಳ್ಳುತ್ತ ಬೊಮ್ಮಗೊಂಡನ ಕೆರೆಯ ಹತ್ತಿರ ಕಮರದ ಕಾವಲಿನ ಕಡೆ ಬಂದರು. ಆಗ ಬೆಳಗಾಯಿತು. ಆ ಕಮರದ ಕಾವಲಿನಲ್ಲಿ ಒಂದು ನೀರಿನ ಕೊಳವಿತ್ತು. ಅಲ್ಲಿ ಬ್ರಹ್ಮ, ವಿಷ್ಣು ತಂತಮ್ಮ ಹಣೆಯ ಮೇಲೆ ನಾಮ ಇಟ್ಟುಕೊಂಡರು. ಮಹೇಶ್ವರನಿಗೆ ವಿಭೂತಿ ಧರಿಸುವ ಮುನ್ನ ಅದರ ಶುದ್ಧಿಗಾಗಿ ಹಸುವಿನ ಗಂಜಲವು ಬೇಕಾಯಿತು. ಅದನ್ನು ಅಲ್ಲಿಯೇ ಸೃಷ್ಟಿಸಿದ. ಅದರ ಒಂದು ಹನಿ ಗಂಜಲ ತೆಗೆದುಕೊಂಡು ವಿಭೂತಿ ಧರಿಸಿಕೊಂಡ. ಅದನ್ನು ತರಿಸಿಕೊಳ್ಳುವಾಗ ಆ ವಿಭೂತಿಯ ಒಂದು ಕಣವು ಅವನು ಆಗ ತಾನೆ ಸೃಷ್ಟಿ ಮಾಡಿದ್ದ ಹಸುವಿನ ಗೊರಸಿನ ಮೇಲೆ ಬಿತ್ತು. ಆ ವಿಭೂತಿ ಕಣವು ಆ ಹಸುವಿನ ಗೊರಸಿನಲ್ಲೇ ಒಂಬತ್ತು ತಿಂಗಳು ಬೆಳೆದು ಒಂದು ಶಿಶುವಿನ ಜನನವಾಯಿತು. ಆ ಶಿಶುವೇ ಚಟ್ಲುಗೊಟ್ಲಮಲ್ಲಿನಾಯಕನಾದ. ಬೇಡರ ಮೂಲಪುರುಷನೂ ಆದ. ಇದು ಮ್ಯಾಸಬೇಡರ ಉತ್ಪತ್ತಿಯ ಮೂಲ ಕಥೆ. ತದನಂತರ ಚೆಟ್ಲುಗೊಟ್ಲ ಮಲ್ಲಿನಾಯಕ ಒಬ್ಬ ಗಂಧರ್ವ ಕನ್ಯೆಯನ್ನು ವಿವಾಹವಾದ.

ಅರಣ್ಯದಲ್ಲಿ ಹುಟ್ಟಿದ ಚೆಟ್ಲುಗೊಟ್ಲಮಲ್ಲಿನಾಯಕನಿಗೆ ಹಗಲು ರಾತ್ರಿ ಬೆಳಕು ಕೊಡುತ್ತಿದ್ದ ಸೂರ್ಯಚಂದ್ರರೇ ಮೊದಲಿಗೆ ಕಣ್ಣಿಗೆ ಕಂಡ ದೇವತೆಗಳಾದರು. ಈ ಕ್ರಮದಂತೆಯೇ ಅನೇಕ ಬುಡಕಟ್ಟುಗಳು ತಮ್ಮ ಕುಲಮೂಲವನ್ನು ಸೂರ್ಯಚಂದ್ರರಿಂದಲೇ ಗುರುತಿಸಿಕೊಳ್ಳುತ್ತವೆ. ಆದಿ ಮಾನವ ತನ್ನ ದೈನಂದಿನ ಬದುಕಿನ ಕ್ರಮಕ್ಕೆ ಪ್ರಕೃತಿಯ ಒಂದೊಂದು ಅಂಗವನ್ನೂ ಬಳಸಿಕೊಳ್ಳುತ್ತ ಬರುವಲ್ಲಿ, ಸಂಸ್ಕೃತಿ ಮತ್ತು ನಾಗರಿಕತೆಗಳು ಬೆಳೆದ ಕಾಲಕ್ಕೆ ಶಿಷ್ಟರು ಆದಿಮಾನವನ ನಂಬಿಕೆ ನಡವಳಿಕೆಗಳಿಗೆ ಆಚರಣೆಗಳಿಗೆ ಒಂದು ಪರಿಷ್ಕೃತ ಮೂಲರೂಪವನ್ನು ಕೊಟ್ಟರು. ಆದಿಮಾನವ ನಿತ್ಯನಿರಂತರವಾದ, ಜಗತ್ತಿನ ಎಲ್ಲಾ ಚಟುವಟಿಕೆಗಳಿಗೆ ಮೂಲ ಬೀಜವಾದ ಸೂರ್ಯನನ್ನು ತನ್ನ ಕುಲ ಬೆಳೆಯುವುದಕ್ಕೆ, ಜೈವಿಕ ಪ್ರಕ್ರಿಯೆ ನಿರಂತರವಾಗುವುದಕ್ಕೆ ಸಂಕೇತವಾಗಿ ತೆಗೆದುಕೊಂಡರೆ ಮುಂದೆ ಅದೇ ಶಿಷ್ಟರ ನಂಬಿಕೆಯೂ ಆಯಿತು. ಹಾಗಾಗಿಯೇ ಅನೇಕಾನೇಕ ರಾಜಮಹಾರಾಜರೂ ಸೂರ್ಯವಂಶಜರೇ ಆದರು. ಋಷಿಗಳಿಂದ ಹಿಡಿದು ಅತ್ಯುನ್ನತ ಕುಲದವರೆಲ್ಲ ಸೂರ್ಯನನ್ನು ತಮ್ಮ ವಂಶದ ಜೀವಶಕ್ತಿಯ ಸಂಕೇತವಾಗಿ ತೆಗೆದುಕೊಂಡು ಗೌರವಿಸಿ ನದಿ ಮತ್ತು ಸಮುದ್ರ ತಟಗಳಲ್ಲಿ ಮಂತ್ರಪಠಣದೊಂದಿಗೆ ಅರ್ಘ್ಯ ಕೊಟ್ಟರೆ, ಗ್ರಾಮೀಣ ಜನರು ಇಲ್ಲವೇ ಯಾವುದೇ ಬುಡಕಟ್ಟು ಜನಾಂಗದ ವ್ಯಕ್ತಿಗಳು ಹಳ್ಳದಲ್ಲಿಯೋ, ಕೆರೆಯಲ್ಲಿಯೋ, ಇಲ್ಲವೇ ಕೇವಲ ಮನೆ ಮುಂದೆ ಅಥವಾ ಹಿತ್ತಲಿನಲ್ಲಿಯೋ ಮುಖ ಮಾರ್ಜನ ಮಾಡಿದಾಗ ಪೂರ್ವಕ್ಕೆ ಮುಖಮಾಡಿ ಶರಣಾಗುತ್ತಾರೆ. ಹಾಗೆ ಶರಣಾಗುವಾಗ ಪ್ರಾತಃವಂದನೆ, ಸಂಧ್ಯಾವಂದನೆ, ಅರ್ಘ್ಯ ಈ ಪದಗಳೇ ಅವರಿಗೆ ತಿಳಿದಿರುವುದಿಲ್ಲ. ಒಟ್ಟಿನಲ್ಲಿ ಶಿಷ್ಟ ಸಮಾಜದ ಮೂಲಪುರುಷ, ಕುಲದೇವತೆ ಹೇಗೆ ಸೂರ್ಯ ಚಂದ್ರಾಗುತ್ತಾರೆಯೋ ಹಾಗೆ ಬೇಡನಾಯಕರ, ಕಾಡುಗೊಲ್ಲರ ಕುಲಪುರುಷರೂ ಸೂರ್ಯ ಚಂದ್ರರೇ ಆಗಿದ್ದಾರೆ.[4]

ಬೇಡನಾಯಕರಲ್ಲಿ ಕುಲಪಂಗಡಗಳು ಬಹಳ. ತಮ್ಮ ಗುಂಪನ್ನು ಅನೇಕ ಬೆಡಗುಗಳನ್ನಾಗಿ ವಿಂಗಡಿಸಿಕೊಂಡಿದ್ದಾರೆ. ಆ ಒಂದೊಂದು ಬೆಡಗಿನ ಹುಟ್ಟಿಗೂ ಒಂದೊಂದು ಕಥೆಯಿರುವಂತೆ ತೋರುತ್ತದೆ. ಆ ಕಥೆಗಳು ನಿಜವಲ್ಲದಿದ್ದರೂ ಕಾಕತಾಳೀಯವಾಗಿ ಒಂದೊಂದು ಕುಲದ ಹೆಸರಿಗೂ ಹೊಂದಿಕೊಳ್ಳುತ್ತವೆ. ಆದರೆ ಎಲ್ಲ ಬೆಡಗುಗಳ ಹಿನ್ನೆಲೆಯಲ್ಲಿ ಬರುವ ಕಥೆಗಳನ್ನೆಲ್ಲ ಬಲ್ಲ ವಕ್ತೃಗಳು ಇಂದು ಮ್ಯಾಸನಾಯಕ ಜನಾಂಗದಲ್ಲಿ ಇಲ್ಲ. ಇದ್ದರೂ ಆ ಕಥೆಗಳನ್ನೆಲ್ಲ ಸಂಗ್ರಹಿಸಿ ಪ್ರಚಲಿತಕ್ಕೆ ತರುವುದು ಸಮಸ್ಯೆ. ಅವು ಒಂದು ಬಗೆಯಲ್ಲಿ ಒಂದು ಕುಲವನ್ನು ಏರಿಸುವ ಕೆಳಕ್ಕಿಳಿಸುವ ಉದ್ದೇಶವನ್ನು ಹೊಂದಿರುವ ಹಾಗೆ ಕಾಣಿಸುತ್ತವೆ.

ಒಟ್ಟಿನಲ್ಲಿ ಕೆಲವು ಕುಲಗಳ ಹೆಸರನ್ನು ಗಮನಿಸಿದರೆ ಅವರವರ ವೃತ್ತಿಯನ್ನು ಅನುಸರಿಸಿ ಇಲ್ಲ. ಆಯಾ ಕುಲದ ಮೂಲಪುರುಷನ ಹೆಸರನ್ನು ಅನುಸರಿಸಿ ಹುಟ್ಟಿಕೊಂಡಂತೆ ಕಾಣಿಸುತ್ತವೆ. ಕೆಲವು ಕುಲಗಳು ಅಣ್ಣತಮ್ಮಂದಿರ ಗುಂಪಿಗೆ ಸೇರುವುದಾದ್ದರಿಂದ ಆ ಗುಂಪುಗಳಲ್ಲಿ ಪರಸ್ಪರ

ಕೊಳು ಕೊಡುಗೆಗಳು ಇರುವುದಿಲ್ಲ. ಅವರ ಬೆಡಗುಗಳು ಬೇರೆಯಾದರೂ ಅವರು ಅಣ್ಣ ತಮ್ಮಂದಿರ ವರ್ಗಕ್ಕೆ ಸೇರಿದವರು. ಹೆಣ್ಣು ಗಂಡು ಬೇಕಾದಲ್ಲಿ ಬುಡಕಟ್ಟಿನ ಬೇರೆ ಬೆಡಗಿನವರನ್ನೇ ಹುಡುಕಿಕೊಂಡು ಹೋಗಬೇಕು. ಸಾಮಾನ್ಯವಾಗಿ ಈ ಕುಲ–ಬೆಡಗುಗಳ ಕಲ್ಪನೆ ಬೇಡನಾಯಕ ರಂತೆಯೇ ಬೇರೆ ಬೇರೆಯ ಬುಡಕಟ್ಟುಗಳಲ್ಲಿಯೂ ಇದ್ದು, ಅಣ್ಣ ತಮ್ಮಂದಿರು ಎನಿಸಿಕೊಳ್ಳುವ ಬೆಡಗುಗಳ ನಡುವೆ ವಿವಾಹ ಸಂಪರ್ಕ ಸಾಮಾನ್ಯವಾಗಿ ನಿಷೇಧವಾಗಿರುತ್ತದೆ. ಬುಡಕಟ್ಟುಗಳ ಕುಲ ಹೆಸರು ಬಹುಮಟ್ಟಿಗೆ ಪ್ರಕೃತಿಯಲ್ಲಿಯ ವಸ್ತು, ಪ್ರಾಣಿ ಪಕ್ಷಿಯ ಹೆಸರುಗಳನ್ನೇ ಹೊಂದಿರುತ್ತವೆ.

### ಮ್ಯಾಸಬೇಡರಲ್ಲಿನ ಸೀಮಾಪದ್ಧತಿ

ಮ್ಯಾಸಬೇಡರಲ್ಲಿನ ಸೀಮಾವನ್ನು ಗಡಿ ಎಂದೇ ಕರೆಯುತ್ತಾರೆ. ಕರ್ನಾಟಕದ ಬುಡಕಟ್ಟುಗಳಲ್ಲಿ ಬಯಲುಸೀಮೆಯ ಪಶುಪಾಲಕ ಮತ್ತು ಬೇಟೆಯಾಧಾರಿತ ಬುಡಕಟ್ಟುಗಳಾದ ಬೇಡನಾಯಕ ಮತ್ತು ಕಾಡುಗೊಲ್ಲರಲ್ಲಿನ ಗಡಿಪದ್ಧತಿಯು ಕುಣಬಿ, ಸಿದ್ದಿ, ಹಾಲಕ್ಕಿ ಹಾಗೂ ಬೆಟ್ಟಕುರುಬ, ಜೇನುಕುರುಬ, ಸೋಲಿಗರಿಗಿಂತ ಭಿನ್ನವಾದದ್ದು. ಮೂಲದಲ್ಲಿ ಎಲ್ಲಾ ಬುಡಕಟ್ಟು ಸಮುದಾಯಗಳು ವಲಸೆಯ ಪ್ರವೃತ್ತಿ ಹೊಂದಿದ್ದು, ನಿರ್ದಿಷ್ಟ ಭೌಗೋಳಿಕ ಪ್ರದೇಶದ ಕರಾರುವಕ್ಕಾದ ದಾರಿ (ಕಾರಿಡಾರ್)ಯಲ್ಲಿ ಋತುಚಕ್ರಗಳಲ್ಲಿನ ಬದಲಾವಣೆಯ ಅನುಕೂಲ ಮತ್ತು ಅನನುಕೂಲ ಹಾಗೂ ಬೇಟೆ ಆಹಾರ ಸಂಗ್ರಹಣೆ, ಪಶುಪಾಲನೆ ಮತ್ತು ಕುಂಬರಿ ಬೇಸಾಯದ ಉದ್ದೇಶಗಳಿಗಾಗಿ ವಲಸೆ ಹೋಗುವುದು ಜೀವನದ ಒಂದು ಮಾರ್ಗವಾಗಿತ್ತು. ಮೊದಮೊದಲು ಕೇವಲ ಬೇಟೆ ಆಧಾರವಾಗಿ ಜೀವನ ಸಾಗಿಸುತ್ತಿದ್ದ ಮಾವನ ನಂತರದಲ್ಲಿ ಆಹಾರ ಸಂಗ್ರಹಣೆ, ಪಶುಪಾಲನೆ, ಕುಂಬರಿ ಬೇಸಾಯ ಮಾಡಿ(shifting cultivation) ಕೊನೆಗೆ ನೆಲೆ ನಿಂತು ಕೃಷಿ ಬೇಸಾಯಕ್ಕೆ ವಿಕಸಿತನಾದ ಬಗೆಯನ್ನು ಕಾಣಬಹುದಾಗಿದೆ.

ಮ್ಯಾಸಬೇಡರು ಬಹುಶಃ 800 ವರ್ಷಗಳ ಹಿಂದೆ ಆಂಧ್ರದ ಶ್ರೀ ಶೈಲ ಭಾಗದಿಂದ ಕರ್ನಾಟಕದ ಗಡಿ ಚಿತ್ರದುರ್ಗದ ಚಳ್ಳಕೆರೆ, ಮೊಳಕಾಲ್ಮೂರು, ಜಗಳೂರು, ನಾಯಕನಹಟ್ಟಿ, ಬಳ್ಳಾರಿಯ ಕೂಡ್ಲಿಗಿ ತಾಲ್ಲೂಕಿನ ಗುಡೆಕೋಟೆ, ಜರ್ಮಲಿ ಭಾಗಗಳಿಗೆ ಬೇಟೆ ಮತ್ತು ಪಶುಪಾಲನೆಗಾಗಿ ಹುಲ್ಲುಗಾವಲಿನ ಹಸಿರನ್ನರಸಿ ಬಂದಿರಬಹುದು. ಮ್ಯಾಸಬೇಡರ ಮೂಲ ಕಸುಬು ಬೇಟೆ. ನಂತರ ಜೊತೆ ಜೊತೆಗೆ ಪಶುಪಾಲನೆ ಅವರ ವೃತ್ತಿಯಾಗಿದ್ದನ್ನು ಕಾಣಬಹುದು, ನಾಯಕನಹಟ್ಟಿ, ಶಿವಶರಣ ತಿಪ್ಪೇಸ್ವಾಮಿ ಆಗಮಿಸಿ ಲೋಕೋಪಯೋಗಿ ಕೆಲಸಗಳನ್ನು ಅನೇಕ ಪವಾಡಗಳನ್ನು ಮಾಡಿದ. ಈತ ಮಾಡಿದ ಬಹಳ ದೊಡ್ಡ ಪವಾಡವೆಂದರೆ ನಾಯಕನ ಹಟ್ಟಿಯಿಂದ 5–6 ಕಿ.ಮೀ. ದೂರದಲ್ಲಿ ದೊಡ್ಡ ಕೆರೆಯನ್ನು ಅಲ್ಲಿನ ನಾಯಕ ದೊರೆ ಬೋಡಿ ಮಲ್ಲಪ್ಪನಾಯಕನ ಸಹಾಯದಿಂದ ಕಟ್ಟಿಸಿದ. ಆ ಕೆರೆಯ ನೀರನ್ನು ಬಳಸಿ ಕೃಷಿ ಮಾಡುವುದನ್ನು ಹೇಳಿಕೊಟ್ಟ. ಅಲ್ಲಿಂದಲೇ ಮ್ಯಾಸಬೇಡ ಸಮುದಾಯವು ಮೊದಲ ಬಾರಿಗೆ ಬೇಟೆ ಮತ್ತು ಪಶುಪಾಲನೆಯ

ಜೊತೆಗೆ ಕೃಷಿಯನ್ನು ಕೂಡ ತಮ್ಮ ಜೀವನಮಾರ್ಗಕ್ಕಾಗಿ ಅಳವಡಿಸಿಕೊಂಡು ನೆಲೆ ನಿಂತ ಬುಡಕಟ್ಟುಗಳಾಗಿದ್ದನ್ನು ಗಮನಿಸಬಹುದಾಗಿದೆ.

1967ರಲ್ಲಿ ಪ್ರಕಟವಾಗಿರುವ ಚಿತ್ರದುರ್ಗ ಗೆಜೆಟಿಯರ್‌ನಲ್ಲಿ ತಿಪ್ಪೇಸ್ವಾಮಿಯ ಹಿರೇಕೆರೆಯನ್ನು ನಾಯಕನಹಟ್ಟಿ ಹತ್ತಿರ ನಿರ್ಮಾಣ ಮಾಡಿಸಿದ್ದರ ಕುರಿತು ವಿವರಿಸುತ್ತಾ The oldest tank in challakere taluk in the Nayakanahatti, Hirekere built by Sri Tippeswamy some 300 years ago... ಎಂದು ದಾಖಲಿಸಿದ್ದಾರೆ. ಹಾಗಾಗಿ ಕೇವಲ 300-400 ವರ್ಷಗಳ ಹಿಂದೆಯಷ್ಟೆ ಈ ಸಮುದಾಯ ಕೃಷಿಯನ್ನು ಕಲಿತು ನೆಲೆ ನಿಂತಿರಬಹುದೆಂದು ಊಹಿಸಬಹುದಾಗಿದೆ.

ಬೇಟೆ, ಪಶುಪಾಲನೆಯ ಸಂದರ್ಭದಲ್ಲಿ ಈ ಸಮುದಾಯದ ಜೊತೆ ಜೊತೆಗೆ ಬದುಕಿ ಬಾಳುತ್ತಿರುವ ಕಾಡುಗೊಲ್ಲ ಸಮುದಾಯವು ಈ ಬುಡಕಟ್ಟುಗಳ ಸಹಜವಾದ ಪ್ರತಿಸ್ಪರ್ಧಿಗಳಾಗಿದ್ದಾರೆ. ಕಾರಣ ಕಾಡುಗೊಲ್ಲ ಸಮುದಾಯವೂ ಕೂಡ ಪ್ರಮುಖವಾಗಿ ಭೌಗೋಳಿಕ ಕ್ಷೇತ್ರ ಹಾಗೂ ವಾಸಿಸುವ ಹಳ್ಳಿಗಳು ಪರಸ್ಪರ ಹತ್ತಿರವಿರುವ ಕಾರಣ ಎರಡೂ ಸಮುದಾಯಗಳ ತಮ್ಮ ತಮ್ಮ ಸೀಮಾಗಡಿಗಳನ್ನು ವಿಂಗಡಿಸಿಕೊಂಡು ತಮ್ಮ ತಮ್ಮ ಹುಲ್ಲುಗಾವಲಿನಲ್ಲಿ ದನಕರುಗಳನ್ನು ಮೇಯಿಸಿಕೊಂಡು ಬಂದ ಹಾಲು, ತುಪ್ಪ, ಮೊಸರು ಹಾಗೂ ದನದ ಮಾಂಸವನ್ನು ಆಹಾರ ಮೂಲವನ್ನಾಗಿಸಿ ಬದುಕಿವೆ. ಹೀಗಾಗಿ ಪರಸ್ಪರ ಗಡಿಯೊಳಗೆ ಹುಲ್ಲುಗಾವಲು ಮತ್ತು ದನಕರುಗಳಿಗಾಗಿ ನಿರ್ದಿಷ್ಟ ಗಡಿ ರೇಖೆಗಳನ್ನು ಪರಸ್ಪರ ಗುರ್ತಿಸಿಕೊಳ್ಳಲಾಗಿದೆ. ಹಾಗೆಯೇ ದನಕರುಗಳಿಗಾಗಿ ಬಹುತೇಕ ಹೋರಾಟಗಳು ಎರಡು ಸಮುದಾಯಗಳ ಮಧ್ಯೆ ಏರ್ಪಟ್ಟು ತಮ್ಮ ಸಮುದಾಯ ಮತ್ತು ದನಕರುಗಳ ರಕ್ಷಣೆಗಾಗಿ ಹೋರಾಟ ಮಾಡಿ, ಮಡಿದವರು ಈ ಸಮುದಾಯದ ಗಡಿದೈವಗಳಾಗಿದ್ದಾರೆ.

**ಮ್ಯಾಸಬೇಡರ 12 ಗಡಿ ದೈವ ಪೆಟ್ಟಿಗೆ ದೇವರುಗಳು**

ತಮ್ಮ ಸಮುದಾಯದ ಏಳಿಗೆ, ದನಕರುಗಳ ರಕ್ಷಣೆಗಾಗಿ ಬೇರೆ ಸಮುದಾಯ ಹಾಗೂ ಹುಲಿ ತೋಳಗಳಿಂದ ಹೋರಾಟ ಮಾಡಿದವರ ಆತ್ಮಗಳನ್ನು ಪೆಟ್ಟಿಗೆಯಲ್ಲಿಟ್ಟು ಪೂಜಿಸಲಾಗುತ್ತದೆ. ಅದನ್ನು 'ಪೆಟ್ಟಿಗೆ ಗಡಿದೈವ'ಗಳೆಂದು ಮ್ಯಾಸಬೇಡರು ಕರೆಯುತ್ತಾರೆ. ಈ ರೀತಿಯ ಹನ್ನೆರಡು ದೈವಗಳನ್ನು ತಮ್ಮ ಪ್ರಮುಖ ದೈವಗಳನ್ನಾಗಿ ಪೆಟ್ಟಿಗೆಯಲ್ಲಿ ಪ್ರತಿಷ್ಠಾಪಿಸಿ ಪೂಜಿಸುತ್ತಾರೆ.

ಮ್ಯಾಸಬೇಡ 12 ಗಡಿ ಪೆಟ್ಟಿಗೆ ದೇವರುಗಳು ಈ ರೀತಿ ಇವೆ.

1. ಮೂಕನಡುಕು 'ಓಬಳ ದೇವರು'

ಇದು ಮೂಕನಡುಕು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆಯಲ್ಲಿದೆ.

2. 'ಕಂಪಲ ದೇವರು'

ಕಂಪಲ ದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

3. ನಲ್ಲ ಜರುಗು 'ಓಬಳ ದೇವರು'

ರುದ್ರಮ್ಮನಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

4. ಗಾದ್ರಿ ಪಾಲನಾಯಕ ದೇವರು

ಬೊಮ್ಮಗೊಂಡನ ಕೆರೆ, ಮೊಳಕಾಲ್ಮೂರು, ಚಿತ್ರದುರ್ಗ ಜಿಲ್ಲೆ

5. ಸೂರನಾಯ್ಕ ದೇವರು

ಕಾಮಗೇತನ ಹಳ್ಳಿ, ಜಗಳೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

6. ಬೆಲಾರೇ ದೇವರು

ಬೋರೇ ದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

7. ಚಿಂತಲಗುಟ್ಟ ಬೋರುವ

ಚಿಂತಲಗುಟ್ಟ, ಚಿತ್ರದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

8. ಬೋಸೇ ದೇವರು

ಬೋಸೇ ದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

9. ರಾಜಲ ದೇವರು

ಮಲಿವರಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

10. ಬಂಜಗೆರೆ ಓಬಳ ದೇವರು

ತಳಕು, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

11. ದಡ್ಡಿ ಸೂರನಾಯಕ

ಹಿರೇಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

12. ಕುರಿಹಟ್ಟಿ ಬೊಮ್ಮದೇವರು

ಕುರಿಹಟ್ಟಿ, ಕೂಡ್ಲಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ

ಈ ಪೆಟ್ಟಿಗೆ ದೇವರುಗಳನ್ನು ಬಿದಿರಿನಲ್ಲಿ ಮಾಡಲಾಗಿರುತ್ತದೆ. ಇದು ಒಂದು ಅಡಿ ಉದ್ದದ, 1/2 ಅಡಿ ಅಗಲದ ಮುಕ್ಕಾಲು ಅಡಿ ಎತ್ತರದವುಗಳಾಗಿರುತ್ತವೆ. ಇವುಗಳ ಒಳಗೆ ಎರಡೆರಡು ಸಾಲಿಗ್ರಾಮಗಳಿರುತ್ತವೆಂದು ಹೇಳುತ್ತಾರೆ. ಈ ಪೆಟ್ಟಿಗೆಯನ್ನು ಪಟ್ಟದ ದೇವರ

ಪೂಜಾರಿ ಬಿಟ್ಟು ಬೇರೆಯಾರೂ ಮುಟ್ಟುವ ಹಾಗಿಲ್ಲ ಮತ್ತು ತೆಗೆದು ತೋರಿಸುವ ಹಾಗಿಲ್ಲ. ತೆಗೆದರೆ ತೆಗೆದವರು ಸುಟ್ಟು ಬೂದಿಯಾಗುತ್ತಾರೆಂದು ನಂಬುತ್ತಾರೆ. ಪೆಟ್ಟಿಗೆಯ ಭದ್ರತೆಗೆ ಕಂಚು, ಹಿತ್ತಾಳೆಯ ಪೆಟ್ಟಿಗೆಯ ಬೆಸುಗೆ ಹಾಕಲಾಗಿರುತ್ತದೆ.

ಬಹಳ ಹಗುರವಾದ ಪೆಟ್ಟಿಗೆಯ ನಿರ್ಮಾಣದ ಹಿಂದೆ ತಾವು ಬೇಟೆಗಾಗಿ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ತಿರುಗುತ್ತಿದ್ದ ಕಾರಣ, ತಾವು ಹೋದಲ್ಲೆಲ್ಲಾ ಪೆಟ್ಟಿಗೆಯನ್ನು ಹೋದ ಕಡೆ ಹೊತ್ತುಕೊಂಡು ಹೋಗಲು ಅನುಕೂಲವಾಗುವಂತೆ ಬಿದಿರಿನ ಹಗರುಪೆಟ್ಟಿಗೆ ಮಾಡಿಕೊಂಡಿಬಹು ದೆಂದು ಹಿರಿಯರ ಹೇಳಿಕೆಯಾಗಿದೆ. ಅಷ್ಟೇ ಅಲ್ಲದೆ ಅಂಚಿ ಹುಲ್ಲು ಮತ್ತು ಬಾದೆ ಹುಲ್ಲು ಹಾಗೂ ಲಕ್ಕಿ ಬರಲು ಕಡ್ಡಿಗಳಿಂದ ಆಗ ಮಾಡಲಾಗುತ್ತಿದ್ದ ಹಗುರ ಗುಡಿಸಿಲನ್ನು ಕೂಡ ವಲಸೆ ಹೋದ ಕಡೆ ಸಾಗಿಸುತ್ತಿದ್ದರೆಂಬ ಮಾಹಿತಿ ಕೂಡ ಅವರಲ್ಲಿದೆ.

## ಬೇಡರ ಎರಡು ಪ್ರಮುಖ ಜಾತ್ರೆಗಳು

### ಕಂಪಲಿ ದೇವರಟ್ಟಿ ಜಾತ್ರೆ

ಕಂಪಲ ದೇವರ ಹಟ್ಟಿ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಮ್ಯಾಸಬೇಡರ ಪುಟ್ಟ ಹಟ್ಟಿ. ಈ ಹಟ್ಟಿ ಜನಿಗೇ ಹಳ್ಳದ ದಡದಲ್ಲಿದೆ. ಸದ್ಯಕ್ಕೆ ಈ ಹಳ್ಳದಲ್ಲಿ ನೀರಿಲ್ಲ. ಪಕ್ಕದಲ್ಲಿ ಸಾವಿರಾರು ಎಕರೆ ಕಮರದ ಮರಗಳಿರುವ ಹುಲ್ಲುಗಾವಲಿದೆ. ಈಗ ಕಮರದ ಮರಗಳನ್ನು ಬೋಳಿಸಿ ಸರ್ಕಾರ 4500 ಎಕರೆ ಜಾಗವನ್ನು ವಿಜ್ಞಾನ ಅಭಿವೃದ್ಧಿಯ ಸಲುವಾಗಿ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ(Defence Research and Development organi-zation-DRDO)ಗಾಗಿ ಕಸಿದುಕೊಂಡಿದೆ. ಈ ಸಂಪೂರ್ಣ ಭಾಗ 43 ಹಟ್ಟಿಗಳ ಹುಲ್ಲುಗಾವಲು ಗಡಿಯೊಳಗಿದ್ದು ಸಾವಿರಾರು ಮ್ಯಾಸಬೇಡರ ದೇವರೆತ್ತುಗಳಿಗೆ ಹುಲ್ಲು ಮೇಯಿಸುವ ಜಾಗವಾಗಿತ್ತು. ಹಾಗೆ ನೋಡಿದರೆ ಮ್ಯಾಸಬೇಡರ ಸೃಷ್ಟಿಪುರಾಣದ ಜಾನಪದ ಕಥೆ ಶುರುವಾಗುವುದೇ ಈ ಕಮರದ ಕಾಡಿನಿಂದ. ಬ್ರಹ್ಮ, ವಿಷ್ಣು, ಮಹೇಶ್ವರರು ಪ್ರಯಾಣ ಮಾಡುತ್ತಾ ಈ ಕಮರದ ಕಾಡಲ್ಲಿ ಇಳಿದು.. ಕಥೆ ಶುರುವಾಗುತ್ತದೆ. ಹಸುವಿನ ಗೊರಸಿನಿಂದ ಹುಟ್ಟಿದ ಜೆಟ್ಟು ಗೊಟ್ಟ ಮಲ್ಲಿನಾಯಕನು ಕೂಡ ಹುಟ್ಟಿ ಬೆಳದದ್ದು ಕೂಡ ಇದೇ ಕಮರದ ಕಾಡಿನಲ್ಲಿ ಪ್ರಸ್ತುತ ಕಂಪಲ ದೇವರಟ್ಟಿ ಜಾತ್ರೆ ಜರುಗುತ್ತಿರುವುದು ಇದೇ ಕಮರದ ಕಾಡಿನ ಮಡಿಲಲ್ಲಿ. ಲಕ್ಕಿಬರಲಿನಿಂದ ಕಟ್ಟಲಾದ ಗುಡಿಸಲೊಳಗೆ ಕಂಪಲ ದೇವರನ್ನು ಪ್ರತಿಷ್ಠಾಪಿಸಲಾಗಿದೆ. ವೈಷ್ಣವ, ದಾಸ, ಪಂಥದ ಪ್ರಭಾವಕ್ಕೆ ಒಳಗಾಗಿರುವ ಈ ಹಟ್ಟಿಯ ಕಂಪಲ ದೇವರ ಜಾತ್ರೆಯಲ್ಲಿ ಪ್ರಾಣಿ ಬಲಿ ಇರದೇ ಬರೀ ಸಾತ್ವಿಕ ಆಹಾರ ಮತ್ತು ಹಾಲು, ತುಪ್ಪ, ಬೆಣ್ಣೆಗಳನ್ನು ನೈವೇದ್ಯಗಳಾಗಿ ಜೊತೆಗೆ ತಾವು ಬೆಳೆದ ಹೊಸದಾನ್ಯ ಹುರುಳಿ, ಶೇಂಗಾ ಮತ್ತು ಜೋಳ, ಬಾಳೆಹಣ್ಣು, ಬೆಲ್ಲಗಳನ್ನು ದೇವರ ಮುಂದಿಡುತ್ತಾರೆ.

ಕಂಪಲದೇವರ ಜಾತ್ರೆಗೆ ದೇವರೆತ್ತುಗಳನ್ನು ಸ್ಥಳಕ್ಕೆ ಕರೆತರಲಾಗುತ್ತದೆ. ಅವುಗಳನ್ನು ಪಾಪನಾಯಕನ ಗುಡಿಯಿಂದ ಕಂಪಲ ದೇವರ ಸ್ಥಾನದವರೆಗೆ ಮೆರವಣಿಗೆ ಹೊರಡಿಸಿಕೊಂಡು ಬರುತ್ತಾರೆ. ದನಗಳ ಮೆರವಣಿಗೆಯೇ ಈ ಜಾತ್ರೆಯ ಮುಖ್ಯ ಜೀವಾಳ. ಜಾತ್ರೆಯಲ್ಲಿ ದಾಸರಿ ಬೆಡಗಿನ ಜನ ಬೆಂಕಿ ಹಚ್ಚಿ ಉರಿಸುತ್ತಾರೆ. ಪಂಜ ಹತ್ತಿಸಿ ಬಾಯಲ್ಲಿ ಬೆಂಕಿ ಕಾರುತ್ತಾರೆ. ಪಂಜಿನ ಮೆರವಣಿಗೆ ಮತ್ತು ಕವಾಯತ್ತು ನಡೆಯುತ್ತದೆ. ಒಂಬತ್ತು ದಿನಗಳ ಕಾಲ ಈ ಜಾತ್ರೆ ಜರುಗುತ್ತದೆ.

ಇವರ ಎರಡನೇ ಪ್ರಮುಖ ಜಾತ್ರೆ ಹೊಳಲ್ಕೆರೆ ತಾಲ್ಲೂಕು ಮಿಂಚೇರಿ ಅರಣ್ಯ ಪ್ರದೇಶದಲ್ಲಿ ಜರುಗುತ್ತದೆ. ಈ ಕಾಡಿನ ತೊರೆಯ ದಡದಲ್ಲಿ ಗಾದ್ರಿ ಪಾಲನಾಯಕನ ಜಾತ್ರೆ ನಡೆಯುತ್ತದೆ. ಈತ ಒಬ್ಬ ಗಡಿ ಮ್ಯಾಸಬೇಡರ ಸಮುದಾಯದ ದನಗಾಹಿ, ಗಡಿರಕ್ಷಕನಾಗಿದ್ದು ನಂತರ ಗೋವುಗಳ ರಕ್ಷಣೆಗಾಗಿ ಹುಲಿಯೊಂದಿಗೆ ಕಾದಾಡಿ ಮಡಿದ ವೀರ. ಈತನ ಬಗ್ಗೆ ನೂರಾರು ತ್ರಿಪದಿ ಜಾನಪದ ಗೀತೆಗಳು ಪ್ರಚಲಿತದಲ್ಲಿವೆ.

ಇದೇ ರೀತಿಯ ಮತ್ತೊಂದು ಜಾತ್ರೆ ಚಳ್ಳಕೆರೆ ಬಳಿಯ ನನ್ನಿದಾಳ ಹಟ್ಟಿಯಲ್ಲಿಯೂ ನೆರವೇರಿಸುತ್ತಾರೆ. ಕಾರಣ ಗಾದ್ರಿ ಪಾಲನಾಯಕನ ವಂಶದ ಒಂದು ಗುಂಪು ನನ್ನಿವಾಳ ಹಟ್ಟಿಯಲ್ಲಿರುವುದೇ ಕಾರಣವಾಗಿದೆ. ಇಲ್ಲಿಯ ಜಾತ್ರೆಯಲ್ಲಿ ಕುರಿಬಲಿ ಕೊಡುವ ಸಂಪ್ರದಾಯವಿದೆ. ಜಾತ್ರೆಯ ಕೊನೆಯ ಅಂಗವೆಂದರೆ ಬೇಡ ನಾಯಕರೆಲ್ಲರೂ ಒಟ್ಟಿಗೆ ಕೂಡಿಕೊಂಡು ಬೇಟೆಗೆ ಹೋಗಿ ಹಂದಿ, ಜಿಂಕೆ, ಮೊಲಗಳನ್ನು ಬೇಟೆಯಾಡಿ ಬರುತ್ತಾರೆ. ಹೆಂಗಸರು ಆರತಿ ಎತ್ತಿ, ಬೇಟೆಯಿಂದ ಹಬ್ಬದ ಔತಣ ಮಾಡಿ ಆಚರಿಸುತ್ತಾರೆ.

ಮೇಲಿನ ಜಾತ್ರೆಗಳನ್ನು ಹೊರತುಪಡಿಸಿ ದೇವರಳ್ಳಿ ಮಾರಮ್ಮ ಹಾಗೂ ತಮ್ಮ ತಮ್ಮ ಹಟ್ಟಿಗಳಲ್ಲಿ ಪೆಟ್ಟಿಗೆ ದೇವತೆಗಳ ಹಬ್ಬಗಳನ್ನು ಆಚರಿಸಲಾಗುತ್ತದೆ. ಈ ಎರಡೂ ಜಾತ್ರೆ ಮತ್ತು 12 ಪೆಟ್ಟಿಗೆ ದೈವಗಳು ತಮ್ಮ ಸೀಮೆಯ ಗಡಿಯಲ್ಲಿನ ದನಕರುಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರರದ್ದಾಗಿದ್ದು ಇದು ಆದಿವಾಸಿಗಳಲ್ಲಿನ ರೀತಿಯಲ್ಲೆ ಈ ಆತ್ಮಗಳು ದೈವತ್ವ ಪಡೆದು ಗಡಿ ದೈವಗಳಾಗಿ ಪೂಜಿಸುವುದನ್ನು ಗಡಿಪದ್ಧತಿಯ ಸೀಮಾಪದ್ಧತಿಯ ದ್ಯೋತಕವಾಗಿ ಆಚರಣೆಯನ್ನು ನಡೆಸುತ್ತಿರುವುದು ಸೀಮಾಪದ್ಧತಿಯ ಚಹರೆಯ ಕುರುಹುಗಳಾಗಿವೆ.

ಹೀಗೆ ಸೀಮಾಪದ್ಧತಿಯನ್ನು ಪ್ರತಿಬಿಂಬಿಸುವ ವೀರ ದೈವಗಳಾದ ಕಾಟಿ ಮಲ್ಲನಾಯ್ಕ ಮತ್ತು ಆತನ 7 ಜನ ಅಕ್ಕತಮ್ಮಂದಿರ ಮೂಲಗೊಂಡು ನಾಯಕನ ಹಟ್ಟಿ ಮಲ್ಲಪ್ಪ, ಭರಮಣ್ಣನಾಯ್ಕ, ಮೋಟೆ ದೇವರು, ಸುಕ್ಕುಲಮಲ್ಲಯ್ಯ, ದಡ್ಡಿ ಕಾಮನಾಯ್ಕ, ದಡ್ಲು ಮಾರಮ್ಮ, ಹುಡೆಗಳ ಚಿತ್ರ ದೇವರು, ಬಂಗಾರು ದೇವರು, ಕಾಟಪ್ಪ, ಕಾಟಿ ಮಲ್ಲನಾಯ್ಕ, ಹೀಗೆ

ಪಶುಪಾಲನೆಯ ಸಲುವಾಗಿ ಗಡಿ ರಕ್ಷಣೆಗಾಗಿ ಹೋರಾಡಿ ಮಡಿದ ವೀರರೆಲ್ಲ ದೈವತ್ವ ಪಡೆದು ದೈವಗಳಾದ ಇತರ ಮ್ಯಾಸಬೇಡರ ಗಡಿದೈವಗಳಾಗಿವೆ.

**ಮ್ಯಾಸಬೇಡರ ಹನ್ನೆರಡು ದೇವತೆಗಳು ಹೀಗೆ ಬರುತ್ತವೆ**

1. ಮಾಕನಡುಕು ಓಬಳದೇವರು, ಮಾಕನಡುಕು, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ.
2. ಗೆದ್ದಲಗಟ್ಟೆ ಓಬಳದೇವರು, ಗೆದ್ದಲಗಟ್ಟೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ.
3. ನಲ್ಲಜರುಗು, ಓಬಳದೇವರು ರುದ್ರಮ್ಮನಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
4. ಗಾದ್ರಿಪಾಲನಾಯಕದೇವರು, ಬೊಮ್ಮಗೊಂಡನ ಕೆರೆ, ಮೊಳಕಾಲ್ಮೂರು, ಚಿತ್ರದುರ್ಗ ಜಿಲ್ಲೆ.
5. ಸೂರಲಿಂಗೇಶ್ವರ ದೇವರು, ಕಾಮಗೇತನ ಹಳ್ಳಿ, ಜಗಳೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
6. ರಾಜಲದೇವರು ಮಲುವರಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
7. ಬೆಲಾರೇ ದೇವರು, ಬೋರೇ ದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
8. ಬೋಸೇ ದೇವರು, ಬೋಸೇದೇವರ ಹಟ್ಟಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
9. ಚಿಂತಲಗುಟ್ಟ ಬೋರುವ ಚಿಂತಲಗುಟ್ಟ, ಚಿತ್ರದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
10. ಬಂಜೆಗೆರೆ ಓಬಳದೇವರು, ತಳುಕು, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
11. ಕುರಿಹಟ್ಟಿಬೊಮ್ಮದೇವರು, ಕುರಿಹಟ್ಟಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ.
12. ದಡ್ಡಿ ಸೂರನಾಯಕ, ಹಿರೇಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

**ಕಟ್ಟೆಮನೆ: ನ್ಯಾಯತೀರ್ಮಾನಗಳು**

ಬೇಡನಾಯಕರು ತಮ್ಮ ನಡುವಣ ಯಾವುದೇ ರೀತಿಯ ಜಗಳ, ವ್ಯಾಜ್ಯ, ನ್ಯಾಯಗಳನ್ನು ಬೇರೆಲ್ಲ ಬುಡಕಟ್ಟುಗಳಂತೆ, ಅವರೇ ತೀರ್ಮಾನಿಸಿಕೊಳ್ಳುತ್ತಾರೆ. ಬುಡಕಟ್ಟು ಜನಾಂಗದವರು ಯಾರೇ ಆಗಲಿ ಅವರಿಗೆ ಒಗ್ಗಟ್ಟು ಅತ್ಯವಶ್ಯಕವಾಗಿತ್ತು. ಆದಿಮಾನವ ಸಮೂಹ ಗುಂಪು ಗುಂಪಾಗಿ ಬದುಕುತ್ತಿದ್ದಾಗ ಅವರಿಗೆ ಬೇರೊಂದು ಸಂಗತಿಯ ಭಯ ಇದ್ದೇ ಇರುತ್ತಿತ್ತು. ಆ ಭಯ ಪ್ರಾಣಿ ಸಮೂಹದಿಂದ ಬೆಂಕಿ ಅಥವಾ ನೀರಿನಿಂದ ಇದ್ದಿರಬಹುದು. ಇದು ಬಿಟ್ಟರೆ ಇನ್ನೊಂದು ಬುಡಕಟ್ಟಿನವರೊಂದಿಗೆ ಬೇಟೆಯ ವಿಷಯದಲ್ಲಿಯೇ ಹೆಣ್ಣಿನ ವಿಷಯದಲ್ಲಿಯೋ ವೈಮನಸ್ಸು ಬಂದು ಹೊಡೆದಾಡುವ ಸಂದರ್ಭವಿರುತ್ತಿತ್ತು. ಇದಕ್ಕಾಗಿ ಒಂದೊಂದು ಬುಡಕಟ್ಟೂ ಸಾಕಷ್ಟು ಬಲಯುತವಾಗಿರಬೇಕಾಗುತ್ತಿತ್ತು. ಈ ಬಲ ಬರುತ್ತಿದ್ದುದು ಒಗ್ಗಟ್ಟಿನಿಂದಲೇ ಈ

ಒಗ್ಗಟ್ಟು ಬರುತ್ತಿದ್ದುದು ಸೌಹಾರ್ದತೆಯಿಂದ ಕೂಡ. ಒಂದು ವೇಳೆ ಬುಡಕಟ್ಟಿನ ಯಾವುದಾದರೂ ಮನೆತನದಲ್ಲಿ ಜಗಳ, ವ್ಯಾಜ್ಯವಾದರೆ ಅದು ಗುಂಪಿನಿಂದ ಹೊರಗೆ ಹೋಗುವಂತಿಲ್ಲ. ಅಲ್ಲೇ ತೀರ್ಮಾನವಾಗಿ ಬಿಡಬೇಕು. ಎಷ್ಟೇ ದೊಡ್ಡ ಜಗಳ ವ್ಯಾಜ್ಯವಾದರೂ, ಬೇರೆಲ್ಲೋ ಇದ್ದಿರಬಹುದಾದ ಅದೇ ಬುಡಕಟ್ಟಿನ ಯಜಮಾನರುಗಳಿಂದ ಆ ವ್ಯಾಜ್ಯ ತೀರ್ಮಾನವಾಗಲೇಬೇಕಿತ್ತು. ಅಲ್ಲದೆ ಬುಡಕಟ್ಟಿನ ಎಲ್ಲ ಸದಸ್ಯರೂ ಪಂಚಾಯ್ತಿ ದೈವದವರ ತೀರ್ಮಾನಗಳಿಗೆ ತಲೆಬಾಗಲೇ ಬೇಕಿತ್ತು. ಈ ನ್ಯಾಯವ್ಯವಸ್ಥೆ ಹೀಗೆ ಬುಡಕಟ್ಟುಗಳಲ್ಲಿ ಬಿಗಿ ಇದ್ದುದರಿಂದಲೇ ಒಂದೊಂದು ಹಟ್ಟಿ ಅಥವಾ ಗುಂಪುಗಳಲ್ಲಿ ಯಾವುದೇ ರೀತಿಯ ಜಗಳ, ಕದನ, ವೈಮನಸ್ಸು ಏರ್ಪಡುತ್ತಿದ್ದುದಕ್ಕೆ ಅವಕಾಶವಿರಲಿಲ್ಲ. ಇದಕ್ಕೆ ಬದಲಾಗಿ ಪ್ರತಿಯೊಂದು ಹಟ್ಟಿಯ ಜನಗಳ ನಡುವೆ ಹೆಚ್ಚು ಸೌಹಾರ್ದಯುತ ವಾತಾವರಣವಿರುವುದಕ್ಕೆ ಹೆಚ್ಚು ಸಹಾಯಕಾರಿಯಾಗುತ್ತಿತ್ತು. ಆದುದರಿಂದಲೇ ಇವತ್ತಿಗೂ ಯಾವುದಾದರೂ ಬುಡಕಟ್ಟಿಗೆ ಭೇಟಿ ಕೊಟ್ಟರೆ ಅಲ್ಲಿಯ ಎಲ್ಲ ಜನವೂ ಪರಸ್ಪರರನ್ನು ಅಣ್ಣನೆಂತಲೋ, ತಮ್ಮನೆಂತಲೋ ದೊಡ್ಡಪ್ಪ ಎಂತಲೋ, ಚಿಕ್ಕಪ್ಪ ಎಂತಲೋ ಅಜ್ಜನೆಂತಲೋ ಕರೆಯುವುದನ್ನು ನೋಡುತ್ತೇವೆ. ವಾಸ್ತವವಾಗಿ ಅವರು ಕರೆಯುವಂತೆ ಆ ಹೆಸರಿನ ಸಂಬಂಧ ಅವರ ನಡುವೆ ಇರುವುದೇ ಇಲ್ಲ. ಅಣ್ಣ, ತಮ್ಮ ಎಂದರೆ ಅವರು ಅಣ್ಣತಮ್ಮಂದಿರಾಗಿರುವುದಿಲ್ಲ. ಚಿಕ್ಕಪ್ಪ ದೊಡ್ಡಪ್ಪ ಎಂದರೆ, ಹಾಗೆ ಕರೆಯುವವರು ಚಿಕ್ಕಪ್ಪ ದೊಡ್ಡಪ್ಪ ಸಂಬಂಧವುಳ್ಳ ಮಕ್ಕಳಾಗಬೇಕಾಗಿಲ್ಲ.

ಹೀಗೆ ಇಂಥ ಸಂಬಂಧಿಸಿದ ಬುಡಕಟ್ಟು ಬಲಯುತವಾಗಿದ್ದರೂ ಆಗಾಗ್ಗೆ ಅಲ್ಲಿಯೂ ಪರಸ್ಪರ ಜಗಳ ಕಾದಾಟಗಳು ನಡೆಯುತ್ತಿದ್ದವು. ಅವು ಸಣ್ಣಪುಟ್ಟವಾದರೆ ಆಯಾ ಹಟ್ಟಿಯ ಕಟ್ಟೆಮನೆಗಳಿಗೆ ಹೋಗಬೇಕು. ಈ ಕಟ್ಟೆಮನೆಗಳು ಆರೇಳು ಹಟ್ಟಿಗಳಿಗೆ ಒಂದರಂತೆ ಇರುತ್ತಿದ್ದವು ಎಂದು ಕಾಣಿಸುತ್ತದೆ. ಇವು ಮುಖ್ಯವಾಗಿ ನ್ಯಾಯ ನಡೆಯುವ ಸ್ಥಳಗಳೇ ಆಗಿರುತ್ತಿದ್ದವು. ಅಲ್ಲಿ ನ್ಯಾಯ ತೀರ್ಮಾನಕ್ಕಾಗಿಯೇ ಬುಡಕಟ್ಟಿನ ಸದಸ್ಯರಿಂದ ನಿಯಮಿಸಲ್ಪಟ್ಟ ಗೌರವಿಸಲ್ಪಟ್ಟ ಯಜಮಾನರುಗಳಿರುತ್ತಿದ್ದುದು. ಈ ಕಟ್ಟೆಮನೆಗಳು ಸಾಮಾನ್ಯವಾಗಿ ದೇವರುಗಳು ನೆಲೆಸಿದ ಗುಡಿಸಲು ಗುಡಿಯ ಮುಂಭಾಗದಲ್ಲಿರುತ್ತವೆ. ಒಂದು ದೊಡ್ಡ ಜಗುಲಿಯ ನಿರ್ಮಾಣವಾಗಿದ್ದು, ಅದರ ಮೇಲೆ ನೆರಳು ಕೊಡುವ ಮರಗಳಿರಬಹುದು. ಅಪರಾಧಿಗಳಿಗೆ ಒಂದು ವೇಳೆ ಕಟ್ಟೆಮನೆ ಯಲ್ಲಿ ಯಾರ ಭಯ ಇಲ್ಲದಿದ್ದರೂ ದೇವರ ಭಯ ಇದ್ದೇ ಇರುತ್ತಿತ್ತು. ಅಲ್ಲದೆ ನ್ಯಾಯ ಆರಂಭವಾಗುತ್ತಿದ್ದುದೂ ಕೂಡ ಸೂರ್ಯಚಂದ್ರರ ಹೆಸರಿನಿಂದಲೇ. ಬೇಡನಾಯಕರ ಕುಲದೇವತೆ ಮೊದಲೇ ಹೇಳಿದಂತೆ ಸೂರ್ಯ ಗುಡಿಸಿಲೊಳಗಿನ ದೇವತೆಯ ಮುಂದೆ ಒಂದು ವೇಳೆ ಸುಳ್ಳು ಹೇಳಿದರೂ, ಮೇಲೆ ಕಣ್ಣಿಗೆ ಕಂಡಂತೆ ಉರಿಯುತ್ತಿರುವ ಸೂರ್ಯನ ಮೇಲಂತೂ ಆಣೆಯಿಟ್ಟು ಸುಳ್ಳು ಹೇಳುವಂತಿರಲಿಲ್ಲ. ಹಾಗೆ ಸೂರ್ಯನನ್ನು ನೋಡಿ ಸುಳ್ಳು ಹೇಳಿದರೆ ಕುಲನಾಶವಾಗುವ ಸಾಧ್ಯತೆ ಬಹಳ ಇರುತ್ತಿತ್ತೆಂದು ಹಿರಿಯ ಬೇಡನಾಯಕ ವಕ್ತೃಗಳು ತಮ್ಮ

ಬುಡಕಟ್ಟಿನ ನ್ಯಾಯ ಸಂಬಂಧದ ವಿವರಗಳನ್ನು ಕುರಿತು ಹೇಳುತ್ತಾರೆ. ಹೀಗೆಯೇ ಹಿಂದಿನ ಕಾಲಕ್ಕೆ ಶಿಷ್ಟ ಸಮಾಜದವರೂ ಸಹ ಬುಡಕಟ್ಟಿನವರಂತೆ ತಮ್ಮ ಊರು ಪಟ್ಟಗಳೊಳಗಿನ ದೇವಾಲಯಗಳ ರಂಗಮಂಟಪಗಳನ್ನೇ ತಮ್ಮ ವ್ಯಾಜ್ಯ ತೀರ್ಮಾನಗಳಿಗಾಗಿ ಬಳಸಿಕೊಳ್ಳುತ್ತಿದ್ದರು.

ಚಿತ್ರದುರ್ಗ ಜಿಲ್ಲೆಯಲ್ಲಿ ವಾಸಿಸುವ ಮ್ಯಾಸಬೇಡನಾಯಕರಿಗೆ ಹನ್ನೆರಡು ಕಟ್ಟೆ ಮನೆಗಳು ಮುಖ್ಯವಾದುವು. ಅವು ಕ್ರಮವಾಗಿ:

1. ಗೋನೂರು – ಚಿತ್ರದುರ್ಗ ತಾಲ್ಲೂಕು
2. ಕಾಮಗೇತನಹಳ್ಳಿ – ಜಗಳೂರು ತಾಲ್ಲೂಕು
3. ಹಿರೇಹಳ್ಳಿ – ಚಳ್ಳಕೆರೆ ತಾಲ್ಲೂಕು
4. ಅಡವಿಮಾರೇನಳ್ಳಿ – ಚಳ್ಳಕೆರೆ ತಾಲ್ಲೂಕು
5. ಓಬೇನಹಳ್ಳಿ – ಚಳ್ಳಕೆರೆ ತಾಲ್ಲೂಕು
6. ಮಲುವರಳ್ಳಿ – ಚಳ್ಳಕೆರೆ ತಾಲ್ಲೂಕು
7. ಕೋನಸಾಗರ – ಮೊಳಕಾಲ್ಮೂರು ತಾಲ್ಲೂಕು
8. ತಾಳೀಕೆರೆ – ಮಡಕಶಿರಾ ತಾಲ್ಲೂಕು, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ
9. ಮುತ್ತಿಗಾರಳ್ಳಿ – ಮೊಳಕಾಲ್ಮೂರು ತಾಲ್ಲೂಕು
10. ನಾಯಕನ ಹಟ್ಟಿ – ಚಳ್ಳಕೆರೆ ತಾಲ್ಲೂಕು
11. ಹಿರೇಮಲ್ಲನ ಹೊಳೆ – ಚಳ್ಳಕೆರೆ ತಾಲ್ಲೂಕು
12. ನನ್ನಿವಾಳ – ಚಳ್ಳಕೆರೆ ತಾಲ್ಲೂಕು

ಹೀಗೆ ಬರುತ್ತವೆ. ಮೇಲೆ ಹೇಳಿದ ಹನ್ನೆರಡು ಗ್ರಾಮಗಳ ಹಟ್ಟಿ ಮನೆಗಳಲ್ಲಿ ತಾಳಿಕೆರೆ ಕಟ್ಟೆಮನೆ ಬಿಟ್ಟರೆ ಉಳಿದವೆಲ್ಲವೂ ಚಳ್ಳಕೆರೆ, ಜಗಳೂರು, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿಯೇ ಬರುತ್ತವೆ. ಹನ್ನೆರಡು ಕಟ್ಟೆಮನೆಗಳಲ್ಲಿ ಮೂರು ಅತ್ಯಂತ ಮುಖ್ಯವಾದವು. ಗೋನೋರು, ನನ್ನಿವಾಳ ಮತ್ತು ನಾಯಕನ ಹಟ್ಟಿ, ಮಿಕ್ಕ ಒಂಬತ್ತು ಕಟ್ಟೆಮನೆಗಳಲ್ಲಿ ತೀರ್ಮಾನವಾದ ಯಾವುದೇ ಪ್ರಮಾಣದ ನ್ಯಾಯ ವ್ಯಾಜ್ಯಗಳು ನಾಯಕನ ಹಟ್ಟಿ ಗೋನೂರು ನನ್ನಿವಾಳದ ಕಟ್ಟೆಮನೆಯ ಯಜಮಾನರುಗಳ ಸಮ್ಮುಖದಲ್ಲಿ ತೀರ್ಮಾನವಾಗಲೇ ಬೇಕು. ಅಲ್ಲಿಯ ತೀರ್ಮಾನಕ್ಕೆ ಅಪರಾಧಿಗಳು, ಫಿರ್ಯಾದು ತಂದವರು ತಲೆಬಾಗಲೇ ಬೇಕು. ಈ ಮೂರು ಗ್ರಾಮಗಳು ಈ ಹಿಂದೆಯೇ ತಿಳಿಸಿದಂತೆ ಸಣ್ಣ ಸಣ್ಣ ಪಾಳೆಯಪಟ್ಟುಗಳೂ ಆಗಿದ್ದವು.

ಗೋನೂರು ಕಟ್ಟೆಮನೆಯ ವ್ಯಾಪ್ತಿಗೆ ಬರುವ ಬೇಡರ ಹಟ್ಟಿಗಳೆಂದರೆ ಸಾಸಲಟ್ಟಿ, ಮುತ್ತೈನಟ್ಟಿ, ಮಲ್ಲಾಪುರ, ಹೊಸಮಾಳಿಗೆ, ಕೂನಬೇವು, ಚಿಂತಲಕಟ್ಟೆ, ಬೆಳಗಟ್ಟೆ, ಹಾಯಕಲ್ಲು ಮುಂತಾದ ಬೇಡ ಸ್ಥಾನಗಳು ಬರುತ್ತವೆ. ನನ್ನಿವಾಳ ಕಟ್ಟೆಮನೆಗೆ ಬಂಗಾರದೇವರ ಹಟ್ಟಿ, ತೊಡಲಾರ ಹಟ್ಟಿ, ಪೆತ್ತಮ್ಮಾರ ಹಟ್ಟಿ, ಬೋರಪ್ಪನ ಹಟ್ಟಿ, ಕರೆ ಕಾಟ್ಲಟ್ಟಿ, ದೊರಗಳಟ್ಟಿ, ಚಿತ್ರಯ್ಯನ ಹಟ್ಟಿ ಮುಂತಾದವು ಬರುತ್ತವೆ. ನಾಯಕನ ಹಟ್ಟಿ ಕಟ್ಟೆಮನೆಯ ವ್ಯಾಪ್ತಿಗೆ ಬೋಸೇ ದೇವರಟ್ಟಿ, ನಲಗೇತ್ಲಹಟ್ಟಿ, ದೊಣಮಂಡ್ಲಟ್ಟೆ, ಗೌರಿಪುರ, ಮಹದೇವಪುರ, ಮನಮೈನ ಹಟ್ಟಿ, ಖುದಾಪುರ, ಗೆಜ್ಜಿಗಾನಹಳ್ಳಿ, ರಾಮಸಾಗರ, ಓಬಯ್ಯನ್ಟಟ್ಟಿ, ಚನ್ನಬಸಯ್ಯನಹಟ್ಟಿ, ಜಾಗಸೋರ ಹಟ್ಟಿ ಮುಂತಾದವು ಸೇರುತ್ತವೆ. ಕಂಪಳದೇವರಹಟ್ಟಿಯ ಗುರುಸ್ಥಾನವು ಮೇಲೆ ಹೇಳಿದ ಮೂರು ಕಟ್ಟೆ ಮನೆಗಳಿಗಿಂತ ದೊಡ್ಡದು. ಮೂರು ಕಟ್ಟೆಮನೆಗಳಲ್ಲಿ ತೀರ್ಮಾನವಾದ ವ್ಯಾಜ್ಯಗಳು ಗುರುಸ್ಥಾನದಲ್ಲಿ ತೀರ್ಮಾನಗೊಳ್ಳುತ್ತದೆ. ಈ ಕಂಪಳದೇವರಹಟ್ಟಿ ಗುರುಸ್ಥಾನಕ್ಕೆ ಮುಗಲಳ್ಳಿ, ಕೊಂಡ್ಲಳ್ಳಿ, ಕೋನಸಾಗರ, ಕಪ್ಪಡಬಂಡಟ್ಟಿ, ಕುಂಟೋಬಯ್ಯನ ಹಟ್ಟಿ, ಕರಿನಾರಹಳ್ಳಿ, ವೊಡೆಗೊಳ, ಹಾನಗಲ್ಲು, ಕೊಮ್ಮಲಪಟ್ಟಿ, ಪರಿವಾನ ದೇವರ ಹಟ್ಟಿ, ರಾಯಾಪುರ, ಮರೇನಳ್ಳಿ, ಸೂರಮ್ಮನಹಳ್ಳಿ, ಹೂಡೇಮಗ, ಪೂಜಾರಳ್ಳಿ ಮುಂತಾದವೂ ಬರುತ್ತವೆ.

## ಕಾಡುಗೊಲ್ಲ ಸಮುದಾಯದಲ್ಲಿ ಸೀಮಾಪದ್ಧತಿ

### ಕಾಡುಗೊಲ್ಲರ ಕಿರುಪರಿಚಯ

ಮ್ಯಾಸಬೇಡರ ರೀತಿಯದೇ ಆದ ಪಶುಪಾಲನಾ ಬುಡಕಟ್ಟು ಕಾಡುಗೊಲ್ಲರು, ಹೇಳಿಕೆಯ ಪ್ರಕಾರ ಇಬ್ಬರ ಮೂಲಗಳು ಒಂದೇ ಆಗಿತ್ತೆಂದು ಹೇಳಲಾಗುತ್ತಿದೆ. ಇವರೂ ಕೂಡ ಚಿತ್ರದುರ್ಗ, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ. ಇವರ ವಾಸಸ್ಥಾನವನ್ನು ಗೊಲ್ಲರಟ್ಟಿ ಎಂದು ಕರೆಯುತ್ತಾರೆ. ಮ್ಯಾಸಬೇಡರ ರೀತಿಯಲ್ಲೇ ಪಶುಪಾಲನೆ, ಅದರ ರಕ್ಷಣೆ, ಗಡಿರಕ್ಷಣೆ ಹುಲಿ ಮತ್ತು ವಿರೋಧಿ ಗುಂಪುಗಳಿಂದ ಸಮುದಾಯಕ್ಕಾಗಿ ಹೋರಾಡಿದ ವೀರರುಗಳ ದೈವಗಳೆಂದು ಪೂಜಿಸಲ್ಪಡುತ್ತಿದ್ದಾರೆ. ಕಟ್ಟೆಮನೆ ನ್ಯಾಯ ಪೀಠಗಳು ಅವರ ಆಚರಣೆಯಲ್ಲಿವೆ. ಅತ್ಯಂತ ಮಡಿವಂತಿಕೆ ಮತ್ತು ಸೂತಕವನ್ನು ಆಚರಿಸುವ ವಿಶಿಷ್ಟ ಸಮುದಾಯ ಇದಾಗಿದೆ. ಚಿತ್ರಲಿಂಗ, ಕಾಟಲಿಂಗ, ಪಾತೆಲಿಂಗ, ಕ್ಯಾತೇಲಿಂಗ, ರಾಮಲಿಂಗ ದೈವಗಳು ಕಾಡುಗೊಲ್ಲರ ದೈವಗಳಾಗಿವೆ. ಶೈವರ ಪ್ರಭಾವ ಈ ಸಮುದಾಯದಲ್ಲಿರುವುದನ್ನು 'ಲಿಂಗ'ಗಳು ಪ್ರತಿಧ್ವನಿಸುತ್ತದೆ. ಚಿತ್ರಲಿಂಗ ದೇವರನ್ನು ಚಿತ್ತಯ್ಯ, ಚಿತ್ತಪ್ಪನೆಂದು ಕಾಟಂಲಿಂಗವನ್ನು ಕೆಂತೆಲಿಂಗ, ಕಾಟಯ್ಯನೆಂತಲೂ ಕರೆಯಲಾಗುತ್ತದೆ.

ಸಮುದಾಯದ ಗಡಿರಕ್ಷಣೆಗಾಗಿ ಹೋರಾಡಿ ಮಡಿದವರನ್ನು ಈರಗಾರ, ವೀರಗಾರರುಗಳೆಂದು ಕರೆಯುತ್ತಾರೆ. ಜುಂಜಪ್ಪ, ಎತ್ತಪ್ಪ, ಕುಂಬಾರಳ್ಳಿ ಅಜಪ್ಪ, ದೇವರಮಾರಪ್ಪ,

ತೋರಣಗಟ್ಟೆ ಮಲ್ಲಜ್ಜ, ಗೌನಳ್ಳಿ ಕರುವಿನ ಮಲ್ಲಪ್ಪ, ಚಿಕ್ಕಲತಿಪ್ಪೆ ಈರಣ್ಣ, ವೀರಮುದ್ದಣ್ಣ, ಹಿರಿಯೂರುಗೌಡ, ಸಾಣೀಕೆರೆಗಟ್ಟೆಣ್ಣ ಹೆಬ್ಬೂರು ಚಿಕ್ಕಣ್ಣ, ಮದನ ಕುಂಟೆ ಯಕ್ರಿಪ್ಪಾ, ಸಿಂಪಣ್ಣ, ಹುಲಿಯಿಂದ ಮಡಿದ ಹುಲಿ ಮುದ್ದಣ್ಣ, ಹುಲಿಬಿಲ್ಲಪ್ಪ, ಹಾಲಣ್ಣ, ಬೆಟ್ಟದ ಈರಪ್ಪ, ಹಂದಿನೆರೆಯಣ್ಣ ಈರನಾಗಣ್ಣ ಈರತಿಮ್ಮವ್ವ, ಕೆಂಗಪ್ಪಣ್ಣಜ್ಜ, ನಾಗಮ್ಮ, ತಂಗಮ್ಮ, ಕಾಡ್ರಮ್ಮ ಮಾಸಮ್ಮ, ಈರೋಬಿ, ಕೊಂಡದ ಕಾಟವ್ವ ಇವರುಗಳು ಸಮುದಾಯಕ್ಕಾಗಿ ಹೋರಾಡಿದ ಮಹಾಸತಿ ಈರಗಾರ್ತಿಯರು.

ಮ್ಯಾಸಬೇಡರಂತೆ ಇವರು ಎತ್ತುಗಳನ್ನು ಪೂಜಿಸುತ್ತಾರೆ ಮತ್ತು ಜೀವಂತ ಸಮಾಧಿ ಮಾಡುತ್ತಾರೆ. ಅವುಗಳನ್ನು ದೇವರೆತ್ತು ಎಂದು ಕರೆಯುತ್ತಾರೆ. ಇವರಲ್ಲಿ ಸೂರ್ಯವಂಶದವರು, ಚಂದ್ರವಂಶದವರುಗಳೆಂದು ಕುಲಗಳಲ್ಲಿ ಗುಂಪುಗಳಾಗಿವೆ.

**ಸೂರ್ಯವಂಶಸ್ಥರು**

1. ಚಿತ್ತಮುತ್ತಿ, 2. ಮಾರಮತ್ತಿ, 3. ಬಾಲಮುತ್ತಿ, 4. ಅಬಾಲಮುತ್ತಿ ಇವರನ್ನು ಚೆಂಗುರಿಯರು ಎನ್ನುತ್ತಾರೆ.

**ಚಂದ್ರವಂಶಸ್ಥರಾದ**

1. ಸಾಂದ ಮುತ್ತಿ, 2. ಸೋಮಮುತ್ತಿ, 3. ಅಬ್ಬು ಮುತ್ತಿ, 4. ಯಗಡ ಮುತ್ತಿ

ಚಿತ್ರಲಿಂಗೇಶ್ವರ, ವೀರಸಿರಿಯಜ್ಜ, ಕದ್ರಿನರಸಿಂಹ, ಭೂತಲಿಂಗೇಶ್ವರ, ಕಟ್ಟೆಮಾರಮ್ಮ, ಜುಂಜಪ್ಪ, ಭೂತಪ್ಪ ಮತ್ತು ಎತ್ತಪ್ಪಗಳು ಕಾಡುಗೊಲ್ಲನ ಪ್ರಮುಖ ದೈವಗಳು.

**'ಕಾಡುಗೊಲ್ಲ' ಪದದ ನಿಷ್ಪತ್ತಿ**

ಗೊಲ್ಲ ಎಂದರೆ ಗೋವುಗಳನ್ನು ಕಾಯುವವನು ಎಂದೂ, ಕಾಡುಗೊಲ್ಲ ಎಂದರೆ ಕಾಡಿನಲ್ಲಿ ವಾಸಿಸುವ ಗೊಲ್ಲನೆಂದೂ ಅರ್ಥವಾಗುತ್ತದೆ. ಕಾಡುಗೊಲ್ಲರನ್ನು 'ಅಡವಿಗೊಲ್ಲರು', 'ಕರಡಿಗೊಲ್ಲರು', 'ಕಲ್ಲಿಗೊಲ್ಲರು', 'ಕಳ್ಳಿಗೊಲ್ಲರು', 'ಹಟ್ಟಿಗೊಲ್ಲರು' ಎಂಬ ಹೆಸರುಗಳಿಂದಲೂ ಕರೆಯುವ ವಾಡಿಕೆಯಿದೆ. ಅಡವಿ ಎಂದರೆ ಕಾಡು; ಅಡವಿಗೊಲ್ಲರೆಂದು ಕಾಡುಗೊಲ್ಲರೆಂದೇ ಅರ್ಥವಾಗುತ್ತದೆ. ಕರಡಿಗೊಲ್ಲರು ಎಂಬುದು ಕಾಡುಗೊಲ್ಲರ ಒಂದು ಪ್ರಮುಖವಾದ ಪ್ರಭೇದ. ಆದರೆ ಕೆಲವು ಪ್ರದೇಶಗಳಲ್ಲಿ, ಅಂದರೆ ಪಾವಗಡ, ಕೂಡ್ಲಿಗಿ ತಾಲ್ಲೂಕುಗಳಲ್ಲಿ, ಕಾಡುಗೊಲ್ಲರನ್ನು ಕರಡಿಗೊಲ್ಲರೆಂದೇ ಕರೆಯುವ ವಾಡಿಕೆ ಇದೆ. ಈ ಪ್ರದೇಶಗಳ ಜನಕ್ಕೆ 'ಕಾಡುಗೊಲ್ಲರು' ಎಂಬ ಪದವನ್ನು ಬಳಸಿದರೆ ಮಾತ್ರ ಅರ್ಥವಾಗುತ್ತದೆ. ಕಾಡುಗೊಲ್ಲರು ಊರಿನಿಂದ ಹೊರಗೆ ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ವಾಸ ಮಾಡುವುದರಿಂದ ಅವರನ್ನು ಹಟ್ಟಿಗೊಲ್ಲರೆಂದು ಕರೆಯುವ ವಾಡಿಕೆಯೂ ಇದೆ. ಹಟ್ಟಿಗಳ ಸುತ್ತ ಕಳ್ಳಿಯನ್ನು ಹಾಕಿರುವುದರಿಂದ ಕಾಡುಗೊಲ್ಲರನ್ನು 'ಕಳ್ಳಿಗೊಲ್ಲರು' ಎಂದು ಕರೆಯುವ ವಾಡಿಕೆ ಇದೆಯೆಂದು ಶ್ರೀ ಎಚ್.ವಿ.ನಂಜುಂಡಯ್ಯನವರು

ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರು ಸೂಚಿಸಿದ್ದಾರೆ. "ಕಾಡುಗೊಲ್ಲರನ್ನು ಕಲ್ಲಗೊಲ್ಲರೆಂದೂ ಕರೆಯಲಾಗುತ್ತದೆ. ಅವರ ಹಟ್ಟಿಗಳ ಸುತ್ತಲೂ ಕಳ್ಳಿಯ ಗಿಡಗಳನ್ನು ಬೆಳೆಸಿರುತ್ತಾರಾದ್ದರಿಂದ ಅವರಿಗೆ ಕಳ್ಳಿಯ ಗೊಲ್ಲರು ಎಂಬ ಹೆಸರು ಬಂದಿರಬೇಕೆಂಬ ಊಹೆ ಸರಿಯಾದುದಲ್ಲ" ಎಂದು ಡಾ. ಜೀ. ಶಂ. ಪರಮಶಿವಯ್ಯನವರು ಅಭಿಪ್ರಾಯಪಡುತ್ತಾರೆ. ಕಾಡುಗೊಲ್ಲರಿಗೆ ಕಳ್ಳಿಗೊಲ್ಲರು ಎಂಬ ಹೆಸರು ಇರಲಾರದು, ಅದು ಕಲ್ಲಿಗೊಲ್ಲರು ಎಂದು ಇರಬೇಕು ಎಂಬ ಅಭಿಪ್ರಾಯವನ್ನು ಎತ್ತಿಹಿಡಿದು, ಅದನ್ನು ಸಮರ್ಥಿಸಲು ಬಸವರಾಜದೇವರರಗಳೆಯ ಕೆಲವು ಸಾಲುಗಳನ್ನು ಉಲ್ಲೇಖಿಸಿದ್ದಾರೆ. "ಹೆಗಲ ಕಂಬಳಿ, ಕಲ್ಲಿ ಹಾಗೂ ಗೋವಳಿಗೋಲು ಅವರ ಮುಖ್ಯ ಸಾಧನಗಳು. ಅನೇಕ ದಿನಗಳ ಕಾಲ ದನದ ಹಿಂಡುಗಳೊಡನೆ ಕಾವಲುಗಳಿಗೆ ಅವರು ಹೋಗುತ್ತಿದ್ದುದರಿಂದ ಕಲ್ಲಿಯಲ್ಲಿ ಬುತ್ತಿಯನ್ನು ಕಟ್ಟಿಕೊಂಡು ಹೋಗುತ್ತಿದ್ದುದು ಸಹಜ. ನಮ್ಮ ಕಾವ್ಯಗಳಲ್ಲೂ ಜನಪದ ಕಾವ್ಯಗಳಲ್ಲೂ ಗೊಲ್ಲರ ವರ್ಣನೆಗಳಲ್ಲಿ ಈ ಕಲ್ಲಿಯ ಪ್ರಸ್ತಾಪ ಬಂದೇ ಬರುತ್ತದೆ" ಎಂಬ ಮಾತುಗಳನ್ನೂ ಅವರು ಹೇಳಿದ್ದಾರೆ. ಕಳ್ಳಿಗೊಲ್ಲರು ಎಂಬ ಪದ ಅಸಹಜ ವಾದುದು; ಮಾತ್ರವಲ್ಲದೆ ಅದಕ್ಕೆ ಸೂಕ್ತ ಆಧಾರಗಳಿವೆ ಎಂಬುಧು ಡಾ.ಜೀ.ಶಂ.ಪರಮಶಿವಯ್ಯನವರ ನಿಲುವು. ಇವರ ವಾದ ಸೂಕ್ತವಾದ ಆಧಾರಗಳಿಂದ ಬೆಂಬಲಿತವಾಗಿರುವುದರಿಂದ ಕಲ್ಲಿಗೊಲ್ಲರು ಎಂಬ ಪದವನ್ನು ಒಪ್ಪಬೇಕಾಗುತ್ತದೆ. ಕಳ್ಳಿಗೊಲ್ಲರು ಎಂಬ ಪದಕ್ಕೆ ಸಂಬಂಧಿಸಿದಂತೆ ಎಚ್.ವಿ.ನಂಜುಂಡಯ್ಯನವರು ಮತ್ತು ಎಲ್.ಕೆ.ಅನಂತಕೃಷ್ಣ ಅಯ್ಯರ್ ಕೊಟ್ಟಿರುವ ವಿವರಣೆ ಸೂಕ್ತವಲ್ಲ. ಕಾಡುಗೊಲ್ಲರ ಹಟ್ಟಿಗಳ ಸುತ್ತ ಕಳ್ಳಿಯನ್ನು ಬೆಳೆಸುವುದಕ್ಕಿಂತ ಹೆಚ್ಚಾಗಿ ಜಾಲಿ ಮುಳ್ಳು ಅಥವಾ ಬಾರೆ ಮುಳ್ಳು ಹಾಕಿ ಬೇಲಿ ಕಟ್ಟಿರುತ್ತಾರೆ. ಜಾಲಿ ಮುಳ್ಳನ್ನು ಜಾಲಿ ಕಳ್ಳೆ ಎಂದೂ ಬಾರೆ ಮುಳ್ಳನ್ನು ಬಾರೆ ಕಳ್ಳೆ ಎಂದೂ ಕಾಡುಗೊಲ್ಲರು ಕರೆಯುತ್ತಾರೆ. ಕಾಡುಗೊಲ್ಲರು ತಮ್ಮ ಹಟ್ಟಿಯ ಸುತ್ತ ಹಾಕುವ ಬೇಲಿಗೆ ಕಳ್ಳೆಯನ್ನು ಉಪಯೋಗಿಸಿ, ಉಳಿದೆಲ್ಲರಿಂದಲೂ ಪ್ರತ್ಯೇಕವಾಗಿರುವುದರಿಂದ, ಕಳ್ಳೆ ಹಾಕುವುದು ಅವರ ಸಂಸ್ಕೃತಿಯ ಒಂದು ಮುಖ್ಯವಾದ ಲಕ್ಷಣವಾದುದರಿಂದ, ಅವರಿಗೆ ಕಳ್ಳೆಗೊಲ್ಲರು ಎಂಬ ಹೆಸರು ಸರಿಹೊಂದುತ್ತದೆ. ಈ ಪದ ಕೆಲವು ಕಡೆಗಳಲ್ಲಿ ಇಂದಿಗೂ ಬಳಕೆಯಲ್ಲಿದೆ. ಕಾಡುಗೊಲ್ಲರ ವೈಶಿಷ್ಟ್ಯವಿರುವುದು ಅವರು ಊರುಗಳಲ್ಲಿ ವಾಸ ಮಾಡದೆ ಕಾಡುಗಳಲ್ಲಿ ವಾಸ ಮಾಡುವುದರಲ್ಲಿ; ಊರುಗಳ ಮುಖವನ್ನೇ ಕಾಣದ ಎಷ್ಟೋ ಜನ ಕಾಡುಗೊಲ್ಲರು ಇಂದಿಗೂ ಇದ್ದಾರೆ. ಅವರ ಸಂಸ್ಕೃತಿ ರೂಪಿತವಾಗಿರುವುದು ಕಾಡುಗಳಿಂದ. ಇದರಿಂದಾಗಿ ಅವರನ್ನು ಕಾಡುಗೊಲ್ಲರು ಎಂಬ ಹೆಸರಿನಿಂದ ಕರೆಯುವುದೇ ಸೂಕ್ತವಾದುದು. ಕಾಡುಗೊಲ್ಲರ ಬಹುಮುಖ್ಯ ಪುರಾಣವಾದ ಜುಂಜಪ್ಪನ ಕಥೆಯಲ್ಲಿಯೂ ಕಾಡುಗೊಲ್ಲ ಎಂಬ ಪದದ ಪ್ರಯೋಗ ಇದೆ. ಈ ಎಲ್ಲ ಕಾರಣಗಳಿಂದಾಗಿ, ಅರ್ಥವತ್ತಾದ, ವ್ಯಾಪಕತೆಯುಳ್ಳ ಕಾಡುಗೊಲ್ಲ ಎಂಬ ಪದವನ್ನು ಈ ನಿಬಂಧದ ಉದ್ದಕ್ಕೂ ಬಳಸಲಾಗಿದೆ.[5]

## ಕಾಡುಗೊಲ್ಲರು ಮತ್ತು ಇತರ ಬಗೆಯ ಗೊಲ್ಲರು

ಕಾಡುಗೊಲ್ಲರು ತಾವು ಮೂಲತಃ ಯಾದವ ಕುಲಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಾರೆ. ಶ್ರೀಕೃಷ್ಣ ಗೊಲ್ಲರೊಡನೆ ಬೆಳೆದ ಮತ್ತು ಗೊಲ್ಲಭಾಮೆಯರೊಡನೆ ರಾಸಕ್ರೀಡೆಯಾಡಿದ ಎಂಬ ಕಾರಣದಿಂದ ತಾವು ಕೃಷ್ಣನ ಕುಲದವರೆಂದು ಅವರು ಹೇಳಿಕೊಳ್ಳುತ್ತಾರೆ. ಊರುಗೊಲ್ಲರು, ಕೆಟ್ಟಹಟ್ಟಿಗೊಲ್ಲರು, ಮದ್ದಿನಗೊಲ್ಲರು, ಪೆದ್ದೇಟಗೊಲ್ಲರು, ಕಂಚಿಗೊಲ್ಲರು ಮೊದಲಾದ ಕೆಲವು ಬಗೆಗಳನ್ನು ಯಾದವರ ಪಟ್ಟಿಯಲಿ ಕಾಣಬಹುದು. ಆದರೆ ಕಾಡುಗೊಲ್ಲರು ಈ ಎಲ್ಲ ಬಗೆಯ ಗೊಲ್ಲರಿಂದಲೂ ಬೇರೆಯಾಗಿದ್ದಾರೆ. ಊರುಗೊಲ್ಲರ ಮಾತೃಭಾಷೆ ತೆಲುಗು; ಇವರು ಆಂಧ್ರ ಪ್ರದೇಶದಲ್ಲಿ ಹೆಚ್ಚಾಗಿದ್ದಾರೆ. ಕರ್ನಾಟಕದಲ್ಲಿ ಇವರ ಸಂಖ್ಯೆ ಕಡಿಮೆ ಇದ್ದರೂ ಮನೆಯಲಿ ಆಡುವ ಮಾತು ತೆಲುಗು; ಕನ್ನಡವಲ್ಲ. ಆದರೆ ಕಾಡುಗೊಲ್ಲರ ಮಾತೃಭಾಷೆ ಕನ್ನಡ; ಆಂಧ್ರಪ್ರದೇಶದ ಮಡಕಸಿರ, ಕಲ್ಯಾಣದುರ್ಗ ಮತ್ತು ರಾಯದುರ್ಗ ತಾಲ್ಲೂಕುಗಳಲ್ಲಿರುವ ಕಾಡುಗೊಲ್ಲರ ಮನೆಮಾತೂ ಕನ್ನಡ. ಕಾಡುಗೊಲ್ಲರು ಊರಿನಿಂದ ದೂರದಲ್ಲಿ ಕಾಡಿನಲ್ಲಿ ವಾಸಿಸುವುದರಿಂದ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಿದೆ. ಆದರೆ ಊರುಗೊಲ್ಲರು ಊರುಗಳಲ್ಲಿಯೇ ವಾಸ ಮಾಡಿ, ಊರಿನ ಉಳಿದ ಎಲ್ಲಾ ಜಾತಿಯ ಜನರೊಡನೆ ಬೆರೆಯುವುದರಿಂದ ಪ್ರತ್ಯೇಕತೆಯನ್ನು ಉಳಿಸಿಕೊಳ್ಳದೆ ಎಲ್ಲರೊಡನೆ ಒಂದಾಗಿ ಹೋಗಿದ್ದಾರೆ. ಕಾಡುಗೊಲ್ಲರು ಅನಾಗರಿಕರೆಂದು ಊರುಗೊಲ್ಲರು ಅವರನ್ನು ತಿರಸ್ಕಾರದಿಂದ ಕಾಣುತ್ತಾರೆ. ಹಾಗೆಯೇ ಊರುಗೊಲ್ಲರು ಊರು ಸೇರಿ ಕುಡಿಯುವ, ಸೇದುವ ಚಟಗಳಿಗೆ ಬಲಿಯಾಗಿ, ಊರಿನ ಜನರ ಜೊತೆ ಸೇರಿ ಹಾಳಾದರೆಂದು ಕಾಡುಗೊಲ್ಲರು ಅವರನ್ನು ತಿರಸ್ಕಾರದಿಂದ ಕಾಣುತ್ತಾರೆ. ಊರುಗೊಲ್ಲರು ಒಂದು ಜಾತಿ; ಕಾಡುಗೊಲ್ಲರು ಒಂದು ಬುಡಕಟ್ಟು, ಊರುಗೊಲ್ಲರು ಆರ್ಥಿಕವಾಗಿ, ಸಾಮಾಜಿಕವಾಗಿ ಸಾಕಷ್ಟು ಮುಂದುವರಿದಿದ್ದಾರೆ; ಆದರೆ ಕಾಡುಗೊಲ್ಲರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ಜನ. ಅಂತೂ ಒಟ್ಟಾರೆ ಹೇಳುವುದಾದರೆ ಊರುಗೊಲ್ಲರು ಮತ್ತು ಕಾಡುಗೊಲ್ಲರು ತಾವು ಯಾದವ ಕುಲದವರೆಂದು ಹೇಳಿಕೊಂಡರೂ ಪರಸ್ಪರ ಯಾವ ಸಂಬಂಧವನ್ನೂ ಇಟ್ಟುಕೊಳ್ಳದೆಯೇ ಪ್ರತ್ಯೇಕ ವರ್ಗಗಳಾಗಿಯೇ ಬದುಕುತ್ತಿದ್ದಾರೆ. ಸರ್ಕಾರದಿಂದ ಕಾಡುಗೊಲ್ಲರಿಗೆ ದೊರೆತಿರುವ ಕೆಲವು ವಿಶೇಷ ಸೌಲಭ್ಯಗಳನ್ನು ಊರುಗೊಲ್ಲರು ಬಳಸಿಕೊಂಡು ಅವರನ್ನು ಶೋಷಣೆ ಮಾಡಿರುವುದೂ ಉಂಟು. ಕಾಡುಗೊಲ್ಲರು ತಮ್ಮಲ್ಲಿ ಯಾರಾದರೂ ಇತರ ಜಾತಿಯವರನ್ನು ಮದುವೆಯಾದರೆ ಅಥವಾ ತಮ್ಮ ಬುಡಕಟ್ಟಿನಲ್ಲಿಯೇ ವಿಧವೆಯರೊಡನೆ ಲೈಂಗಿಕ ಸಂಬಂಧ ಹೊಂದಿರುವವರನ್ನು ತಮ್ಮ ಹಟ್ಟಿಯೊಳಕ್ಕೆ ಸೇರಿಸುವುದಿಲ್ಲ. ಕಾಡುಗೊಲ್ಲರಲ್ಲಿ ಹೀಗೆ ಬಹಿಷ್ಕೃತರಾದವರನ್ನು ಕೆಟ್ಟ ಹಟ್ಟಿಗೊಲ್ಲರು ಎಂದು ಕರೆಯುತ್ತಾರೆ. ಪ್ರತಿಯೊಬ್ಬ ಕಾಡುಗೊಲ್ಲನಿಗೂ ಒಂದು ಹಟ್ಟಿ ಮತ್ತು ಒಂದು ಕಟ್ಟೆ ಇರಬೇಕು. ಹಟ್ಟಿಯಿಂದ ಉಚ್ಚಾಟಿತರಾದ ಕೆಟ್ಟಹಟ್ಟಿಗೊಲ್ಲರು ಪ್ರತ್ಯೇಕ ಮನೆಯಿಂದಲೂ ಉಚ್ಚಾಟಿತರಾಗಬೇಕಾಗುತ್ತದೆ.

ಹೀಗೆ ಉಚ್ಛಾಟಿತರಾದ ಕೆಟ್ಟಹಟ್ಟಿಗೊಲ್ಲರು ಪ್ರತ್ಯೇಕವಾಗಿಯೇ ವಾಸಮಾಡಬೇಕು; ಹಟ್ಟಿಯೊಳಕ್ಕೆ ಬರುವಂತಿಲ್ಲ. ಪೆದ್ದೇಟಗೊಲ್ಲರು ಆಂಧ್ರದಲ್ಲಿದ್ದಾರೆ. ಕಂಚಿಗೊಲ್ಲರು ಕರ್ನಾಟಕದಲ್ಲಿದ್ದಾರೆ. ಈ ಎರಡು ವರ್ಗದವರೂ ಮಾಟ ಮಾಡುವುದರಲ್ಲಿ ಪ್ರಸಿದ್ಧರು. ಇವರಿಗೂ ಕಾಡುಗೊಲ್ಲರಿಗೂ ಯಾವ ಸಂಬಂಧವೂ ಇಲ್ಲ.

ಕಾಡುಗೊಲ್ಲರಿಗೆ ಬೇಡರು, ಕುರುಬರು ಮತ್ತು ಕುಂಚಿಟಿಗರೊಡನೆ ಬಳಕೆ ಹೆಚ್ಚು. ಬೇಡರು ಶಿಕಾರಿಗೆಂದು ಕಾಡಿನಲ್ಲಿ ಓಡಾಡುವುದರಿಂದ ಕಾಡುಗೊಲ್ಲರೊಡನೆ ಬಳಕೆಯಾಗಿರಲು ಸಾಧ್ಯವಾಗಿದೆ. ಕುರುಬರಿಗೆ ಗೊಲ್ಲರು ಸಾಕುವ ಕುರಿಗಳ ತುಪ್ಪಟ ಬೇಕಾಗುವುದರಿಂದ ಅವರಿಗೆ ಸಹಜವಾಗಿಯೇ ಕಾಡುಗೊಲ್ಲರೊಡನೆ ಹೆಚ್ಚು ಬಳಕೆಯಿದೆ. ಒಂದು ಕಾಲಕ್ಕೆ ಕಾಡುಗೊಲ್ಲರು ಎತ್ತುಗಳನ್ನೂ ಹಸುಗಳನ್ನೂ ಹೋರಿಗಳನ್ನೂ ವಿಶೇಷವಾಗಿ ಸಾಕುತ್ತಿದ್ದುದರಿಂದ, ಒಕ್ಕಲಿಗರ ಕುಂಚಿಟಿಗರಿಗೆ ವ್ಯವಸಾಯಕ್ಕೆ ಎತ್ತುಗಳೂ ಹಾಲಿಗೆ ದನಕರುಗಳೂ ಅಗತ್ಯವಾಗಿದ್ದುದರಿಂದ, ಪರಸ್ಪರ ಬಳಕೆ ಹೆಚ್ಚಾಗಲು ಅವಕಾಶವಾಯಿತು. ಒಕ್ಕಲಿಗರು ತಮ್ಮ ದನಕರುಗಳನ್ನು ಸಾಕುವ ಜವಾಬ್ದಾರಿಯನ್ನು ಕಾಡುಗೊಲ್ಲರಿಗೆ ವಹಿಸುತ್ತಿದ್ದುದುಂಟು; ಅದರಲ್ಲೂ ಬೇಸಿಗೆಯಲ್ಲಿ ವಹಿಸುತ್ತಿದ್ದುದು ಹೆಚ್ಚು. ಸಂಕ್ರಾಂತಿ ಹಬ್ಬದ ಸಂದರ್ಭದಲ್ಲಿ ದನಗಳ ದೇವತೆಯಾದ ಕಾಟಮ್ಮದೇವರ ಪೂಜೆ ಮಾಡುವಾಗ ಒಕ್ಕಲಿಗರು ಕಾಡುಗೊಲ್ಲನನ್ನೇ ಪೂಜಾರಿಯಾಗಿ ನೇಮಿಸುತ್ತಿದ್ದುದುಂಟು. ಕಾಡುಗೊಲ್ಲರ ಪ್ರಮುಖ ಪುರಾಣವಾದ ಜುಂಜಪ್ಪನ ಕಥೆಯಲ್ಲಿ ಮ್ಯಾಸಬೇಡರ, ಅಳುವಿನವರ ಒಕ್ಕಲಿಗರ ಹಾಗೂ ಹಾಲು ಕುರುಬರ ಮತ್ತು ಅಂಡೆಕುರುಬರ ಪ್ರಸ್ತಾಪವಿದೆ. ಜುಂಜಪ್ಪನ ತಂದೆ ಕೆಂಗುರಿ ಮಲ್ಲಪ್ಪನಿಗೆ ಆಶ್ರಯ ಕೊಟ್ಟ ಹೊನ್ನಹಟ್ಟಿ ಆಲೇಗೌಡ ಆಳುವಿನವರ ಒಕ್ಕಲಿಗರವನು; ಆಲೇಗೌಡನ ಹೆಂಡತಿ ಜಾನಕಲ್ಲು ದೊಡ್ಡಕ್ಕ ಕುಂಚಿಟಿಗರವಳು. ಹಾಲುಕುರುಬರು ಮತ್ತು ಅಂಡೆಕುರುಬರು ಕೆಂಗುರಿ ಮಲ್ಲಪ್ಪನಿಗೆ ಸಹಾಯ ಮಾಡುತ್ತಾರೆ. ಆದರೆ ಈ ಕಥೆಯಲ್ಲಿ ಎಲ್ಲಿಯೂ ಕಾಡುಗೊಲ್ಲರು ಮ್ಯಾಸಬೇಡರೊಡನಾಗಲಿ, ಕುರುಬರೊಡನಾಗಲಿ, ಕುಂಚಿಟಿಗರೊಡನಾಗಲಿ ವಿವಾಹ ಸಂಬಂಧ ಬೆಳೆಸಿದ ಉಲ್ಲೇಖವಿಲ್ಲ. ಕುಂಚಿಟಿಗರಿಗೆ, ಕುರುಬರಿಗೆ, ಗೊಲ್ಲರಿಗೆ ಇರುವ ಸಂಬಂಧದ ಬಗ್ಗೆ ಪ್ರೊ. ದೇಜಗೌ ಅವರು ಈ ರೀತಿ ಹೇಳುತ್ತಾರೆ. "ಎಂದು ವೃತ್ತಿ ಅಥವಾ ಕುಲಕಸುಬು ಜಾತಿವಿಂಗಡನೆಯ ಆಧಾರವಾಯಿತೋ ಅಂದೇ ಒಕ್ಕಲಿಗರ ಉದಯವಾಗಿರಬೇಕು. ಇದು ಅತ್ಯಂತ ಪ್ರಾಚೀನವಾದ ಜಾತಿ. ವ್ಯವಸಾಯ ಇವರ ಪ್ರಧಾನ ವೃತ್ತಿ. ಕೃಷಿ ಪ್ರಾರಂಭವಾದೊಡನೆಯೇ ಈ ಜನಾಂಗವೂ ಬೇರೆಯವರಿಂದ ಬೇರ್ಪಟ್ಟಿರಬೇಕು. ಕುಂಚಿಟಿಗರು, ಕುರುಬರು, ಗೊಲ್ಲರು ಮೂಲತಃ ಒಂದೇ ವಂಶದವರಿರಬೇಕು, ಒಂದೇ ಮನೆಯವರಿರಬೇಕು. ಈ ಮೂರು ಜಾತಿಯವರೂ ಹೆಚ್ಚು ಕಡಿಮೆ ಒಂದೇ ಸಂಪ್ರದಾಯದವರು. ಅವರ ನಡೆನುಡಿಗಳಲ್ಲಿ ಭೇದವಿಲ್ಲ. ಒಂದೇ ಕೇರಿಯಲ್ಲಿ ಇಂದಿಗೂ ಅಣ್ಣತಮ್ಮಂದಿರಂತೆ ವಾಸಿಸುತ್ತಾರೆ. ಅಷ್ಟೇ ಅಲ್ಲ, ಕೊಳುಕೊಡೆಯೊಂದನ್ನು ಉಳಿದರೆ ಇವರಲ್ಲಿ

ಭೇದವಾಗಲಿ ಪ್ರತ್ಯೇಕತೆಯಾಗಲಿ ಕಾಣುವುದಿಲ್ಲ. ಮೂಲತಃ ಒಂದೇ ಆಗಿದ್ದ ಜನ ಕಸುಬೇ ಕಾರಣವಾಗಿ ಬೇರೆಯಾದರು. ಬೇರೆಯಾದ ಮೇಲೆ ಕೊಳುಕೊಡೆ ಕೆಲವು ದಿನ ಮುಂದುವರಿದಿರಬೇಕು. ಆಮೇಲೆ ನಿಂತುಹೋಗಿರಬೇಕು. ಈ ನಿಲುಗಡೆಯಿಂದ ಅವರು ಸಂಪೂರ್ಣವಾಗಿ ಬೇರ್ಗೊಂಡರು." ಕಾಡುಗೊಲ್ಲರಿಗೆ ಕುಂಚಿಟಿಗರೊಡನೆ ಮತ್ತು ಕುರುಬರೊಡನೆ ಬಹಳ ಹಿಂದೆ ಸಂಬಂಧ ಇದ್ದಿರಬೇಕೆಂಬುಧು ಈ ಮಾತುಗಳಿಂದ ಸ್ಪಷ್ಟವಾಗುತ್ತದೆ. ಈ ಮೂರು ಜಾತಿಗಳಿಗೂ ಕೆಲವು ಸಂಪ್ರದಾಯಗಳಲ್ಲಿ ಸಾಮ್ಯತೆ ಇರುವುದು ಇದಕ್ಕೆ ಆಧಾರ ನೀಡುತ್ತದೆ. ಆದರೆ ಹಲವಾರು ನೂರು ವರ್ಷಗಳ ಹಿಂದೆಯೇ ಕಾಡುಗೊಲ್ಲರು ಉಳಿದ ಜಾತಿಗಳಿಂದ ಬೇರ್ಪಟ್ಟು ಕಾಡುಗಳಲ್ಲಿ ವಾಸ ಮಾಡಲು ಆರಂಭಿಸಿದ್ದರಿಂದ ಸಹಜವಾಗಿಯೇ ಅವರು ಬುಡಕಟ್ಟಿನ ಸ್ವರೂಪವನ್ನು ಪಡೆದುಕೊಂಡರು; ಅವರ ಸಂಪ್ರದಾಯಗಳು ಮತ್ತು ನಂಬಿಕೆಗಳು ಉಳಿದವರಿಗಿಂತ ಭಿನ್ನವಾಗಲು ಇದು ಕಾರಣವಾಯಿತು. ನಾಗರಿಕತೆಯ ಪ್ರಭಾವದಿಂದ ಕೆಲವಾರು ಪ್ರದೇಶಗಳಲ್ಲಿ ಕಾಡುಗೊಲ್ಲರು ಉಳಿದ ಜನರೊಡನೆ ವಾಸ ಮಾಡುತ್ತಿರುವುದೂ ಉಂಟು; ಆದರೆ ಬಹುಮಟ್ಟಿಗೆ ಕಾಡುಗೊಲ್ಲರು ಇಂದಿಗೂ ಉಳಿದವರಿಂದ ಪ್ರತ್ಯೇಕವಾಗಿಯೇ ಉಳಿದಿದ್ದಾರೆ.

**ಕಾಡುಗೊಲ್ಲರು ವಾಸವಾಗಿರುವ ಪ್ರದೇಶಗಳು**

ಕರ್ನಾಟಕದಲ್ಲಿ ಕಾಡುಗೊಲ್ಲರು ತುಮಕೂರು, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಮತ್ತು ಬೆಂಗಳೂರು ಜಿಲ್ಲೆಯ ಮಾಗಡಿ, ಕನಕಪುರ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳಲಿ ವಾಸವಾಗಿದ್ದಾರೆ. ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿಯೂ ಇದ್ದಾರೆ. ಆಂಧ್ರಪ್ರದೇಶದಲ್ಲಿ ಅನಂತಪುರ ಜಿಲ್ಲೆಗೆ ಸೇರಿದ ಮಡಕಸಿರಾ, ಕಲ್ಯಾಣದುರ್ಗ ಮತ್ತು ರಾಯದುರ್ಗ ತಾಲ್ಲೂಕುಗಳಲ್ಲಿದ್ದಾರೆ. ಹಿರಿಯೂರು, ಚಳ್ಳಕೆರೆ ಮತ್ತು ಸಿರಾ ತಾಲ್ಲೂಕುಗಳನ್ನು ಕಾಡುಗೊಲ್ಲರ ಸಾಂಸ್ಕೃತಿಕ ಕೇಂದ್ರವೆಂದು ಕರೆಯಬಹುದು. ಈ ಮೂರು ತಾಲ್ಲೂಕುಗಳಲ್ಲಿ ಉಳಿದೆಲ್ಲ ಕಡೆಗಳಿಗಿಂತ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕಾಡುಗೊಲ್ಲರು ವಾಸವಾಗಿದ್ದಾರೆ. ಈ ಬುಡಕಟ್ಟಿನ ಪ್ರಮುಖ ದೇವತೆಗಳ ಕೇಂದ್ರಗಳು ಮತ್ತು ಕಟ್ಟೆಮನೆಗಳಿರುವುದು ಈ ಮೂರು ತಾಲ್ಲೂಕುಗಳಲ್ಲಿಯೇ. ಈ ಮೂರು ತಾಲ್ಲೂಕುಗಳನ್ನು ಬಿಟ್ಟು ಉಳಿದ ಪ್ರದೇಶಗಳು ಕಾಡುಗೊಲ್ಲರ ಗಡಿಸಂಸ್ಕೃತಿ ಪ್ರದೇಶಗಳು. ಜಿಲ್ಲೆಗಳನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಕಾಡುಗೊಲ್ಲರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಉಳಿದ ಜಿಲ್ಲೆಗಳಲ್ಲಿ ಕಡಿಮೆ ಎಂದೇ ಹೇಳಬೇಕು.

**ಉಪವಿಭಾಗಗಳು**

ಕಾಡುಗೊಲ್ಲರಲ್ಲಿ ಉಪವರ್ಗಗಳನ್ನು ಬೆಡಗುಗಳೆಂದು ಕರೆಯುತ್ತಾರೆ. ಚಿತ್ತಮುತ್ತಿ ಕುಲದವರು, ಚಂದಮುತ್ತಿ ಕುಲದವರು, ರಾಮೇಗೌಡನ ಕುಲದವರು ಎಂಬ ಮುಖ್ಯವಾದ ವಿಭಾಗಗಳಿವೆ.

ಇವುಗಳಲ್ಲಿ ಒಂದೊಂದು ಕುಲದಲ್ಲಿಯೂ ಕೆಲವಾರು ಬೆಡಗುಗಳಿವೆ. ಆದರೆ ಬೆಡಗುಗಳೂ ಎಷ್ಟು ಎಂಬುಧು ಖಚಿತವಾಗಿ ತಿಳಿಯುವುದಿಲ್ಲ. ಕೆಲವು ಬೆಡಗುಗಳಲ್ಲಿ ಇನ್ನೂ ಕೆಲವು ವರ್ಗಗಳು ಇವೆ. ಶ್ರೀ ಎಚ್.ವಿ.ನಂಜುಂಡಯ್ಯ ಮತ್ತು ಎಲ್.ಕೆ.ಅನಂತಕೃಷ್ಣ ಅಯ್ಯರ್ ಅವರು ಕಾಡುಗೊಲ್ಲರಲ್ಲಿ ಕೆಳಕಂಡ ಬೆಡಗುಗಳನ್ನು ಗುರುತಿಸಿದ್ದಾರೆ.

I. Chittamuttoru

1. Karadiyavaru : Bear
2. Kamberu : Pot

II. Chandranavaru

1. Ajjoru
2. Arishina Kalliyavaru
3. Konanavaru
4. Polanavaru
5. Semanavaru : Moon
6. Yagadinavaru

III. Ramegowdana Kuladevaru

1. Azeyaya : Name of the person
2. Arenavaru : A plant
3. Merenavaru : Flail
4. Belloru : A, hoe
5. Belluravaru : Name of a place
6. Chiranavaru
7. Huruliyavaru : Gram
8. Masinavaru : Name of a Diety
9. Nandihalliyavaru
10. Onakeyavaru : A pestle[6]

ಈ ವಿಭಾಗಕ್ರಮ ಒಟ್ಟಾರೆ ಸರಿಯಾಗಿದೆ. ಆದರೆ ವಿವರಗಳಲ್ಲಿ ಕೆಲವು ತಪ್ಪುಗಳಿವೆ. ಚಿತ್ತಮುತ್ತಿಯ ವಂಶಸ್ಥರಲ್ಲಿ ಎರಡು ವಿಭಾಗಗಳಿವೆ. ಎರಡು ವಿಭಾಗಗಳವರೂ ಕರಡಿಗೊಲ್ಲರೆ. ಆದರೆ ನಂದಿಹಳ್ಳಿ ಗುಡಿಕಟ್ಟಿನವರು ತಾಳಿ ಕಟ್ಟುವುದಿಲ್ಲ; ಬೇವಿನಹಳ್ಳಿ ಗುಡಿ ಕಟ್ಟಿನವರು ತಾಳಿ ಕಟ್ಟುತ್ತಾರೆ. ಇದರಿಂದಾಗಿ ಕರಡಿಗೊಲ್ಲರಲ್ಲಿ ತಾಳಿ ಕಟ್ಟುವವರೇ ಒಂದು ಬಗೆ, ತಾಳಿ ಕಟ್ಟದವರೇ ಒಂದು ಬಗೆ. ಇವರಲ್ಲಿ ತಾಳಿ ಕಟ್ಟದವರನ್ನು ಕರಡಿಗೊಲ್ಲರೆಂದೂ(ಅಥವಾ ನಂದಿಹಳ್ಳಿಯವರೆಂದೂ), ತಾಳಿ ಕಟ್ಟುವವರನ್ನು ಮಾರನವರಗೊಲ್ಲರೆಂದೂ(ಅಥವಾ ಬೇವಿನಹಳ್ಳಿಯವರೆಂದೂ) ಕರೆಯುತ್ತಾರೆ. ತಾಳಿ ಕಟ್ಟದವರು ಶ್ರೀವೈಷ್ಣವ ಸಂಪ್ರದಾಯವನ್ನೂ, ತಾಳಿ ಕಟ್ಟುವವರು ಶೈವ ಸಂಪ್ರದಾಯವನ್ನೂ ಅನುಸರಿಸುತ್ತಾರೆ. ಈ ಅಂಶವನ್ನು ಎಚ್.ವಿ.ನಂಜುಂಡಯ್ಯನವರು ಮತ್ತು ಎಲ್.ಕೆ.ಅನಂಕೃಷ್ಣ ಅಯ್ಯರ್ ಅವರು ಗುರುತಿಸಿಲ್ಲ. ಹಾಗೆಯೇ ಇವರು ನಂದಿಹಳ್ಳಿಯವರನ್ನು ರಾಮೇಗೌಡನ ಕುಲದವರ ಪಟ್ಟಿಯಲ್ಲಿ ಸೇರಿಸಿರುವುದು ಸೂಕ್ತವಲ್ಲ. ಕಂಬಿಯಗೊಲ್ಲರು ಚಿತ್ತಮುತ್ತಿಯ ವಂಶಸ್ಥರಲ್ಲ. ಇದಕ್ಕೆ ಸ್ಪಷ್ಟವಾದ ಆಧಾರ ಜುಂಜಪ್ಪನ ಕಥೆಯಲ್ಲಿಯೇ ದೊರೆಯುತ್ತದೆ. ಜುಂಜಪ್ಪ ಮತ್ತು ಅವನ ತಂದೆ ಕೆಂಗುರಿ ಮಲ್ಲೇಗೌಡ ಮಾರನವರ ಗೊಲ್ಲರು. ಕೆಂಗುರಿ ಮಲ್ಲೇಗೌಡನ ಹೆಂಡತಿ ಚಿನ್ನಮ್ಮ ಕಂಬಿಯಗೊಲ್ಲರ ಹೆಣ್ಣು ಮಗಳು. ಅವಳನ್ನು 'ಕಂಬೇರ ಚಿನ್ನಿ', 'ಕಂಬೇರ ಚಿನ್ನಮ್ಮ' ಎಂದು ಕರೆಯಲಾಗಿದೆ. ಹಾಗೆಯೇ ಚಿನ್ನಮ್ಮನ ಅಣ್ಣಂದಿರೂ ಕಂಬೇಗೊಲ್ಲರು. ಮಾರನವರ ಗೊಲ್ಲರಿಗೆ ಮತ್ತು ಕಂಬೇರಗೊಲ್ಲರಿಗೆ ಇರುವುದು ನಂಟರ ಸಂಬಂಧವೇ ಹೊರತು ಅಣ್ಣತಮ್ಮಂದಿರ ಸಂಬಂಧವಲ್ಲ. ಕಂಬೇರಗೊಲ್ಲರು ರಾಮೇಗೌಡನ ಕುಲಕ್ಕೆ ಸೇರುತ್ತಾರೆ. ಇದೂ ಸಹ ಖಚಿತವಾದ ಅಂಶ. ಕರಡಿಗೊಲ್ಲರೊಡನೆ ಮತ್ತು ಮಾರನವರ ಗೊಲ್ಲರೊಡನೆ ಉಳಿದೆಲ್ಲ ಬೆಡಗಿನ ಗೊಲ್ಲರೂ ಸಂಬಂಧ ಮಾಡುತ್ತಾರೆ. ಆದರೆ ಈಚೀಚೆಗೆ ರಾಮೇಗೌಡನ ಕುಲದವರು ಚಂದ ಮುತ್ತಿಯ ವಂಶಸ್ಥರೊಡನೆ ಸಂಬಂಧ ಮಾಡಲು ಆರಂಭಿಸಿದ್ದಾರೆ. ಮೊದಲಿಗೆ ಈ ಎರಡು ವಂಶದವರೂ ತಾವು ಅಣ್ಣತಮ್ಮಂದಿರೆಂದು ಭಾವಿಸಿ, ಸಂಬಂಧ ಮಾಡುತ್ತಿರಲಿಲ್ಲ. ಚಿತ್ತಮುತ್ತಿಯ ಕುಲಕ್ಕೆ ಸೇರಿದ ಕರಡಿಗೊಲ್ಲರು ಮತ್ತು ಮಾರನವರ ಗೊಲ್ಲರು ತಾವು ಅಣ್ಣ ತಮ್ಮಂದಿರೆಂದು ಭಾವಿಸುವುದರಿಂದ ಪರಸ್ಪರ ಸಂಬಂಧ ಮಾಡುವುದಿಲ್ಲ ಹಾಗೆಯೇ ಚಂದಮುತ್ತಿಯ ಕುಲಕ್ಕೆ ಸೇರಿದ ವಿವಿಧ ಬೆಡಗಿನವರೂ ತಾವು ಅಣ್ಣತಮ್ಮಂದಿರೆಂದು ಭಾವಿಸುವುದರಿಂದ ಪರಸ್ಪರ ಸಂಬಂಧ ಮಾಡುವುದಿಲ್ಲ. ಇದೇ ಮಾತನ್ನು ರಾಮೇಗೌಡನ ಕುಲದವರ ಪಟ್ಟಿಯಲ್ಲಿ ಸೇರಿಸಲಾಗಿದೆ. ಆದರೆ ಇವರು ಚಂದಮುತ್ತಿನ ಕುಲಕ್ಕೆ ಸೇರಿದವರು. ಹುರುಳಿಯನ್ನು ಉಪಯೋಗಿಸದಿರುವುದನ್ನು ಇವರು ಒಂದು ವ್ರತ ಎಂದು ಪರಿಗಣಿಸುವುದರಿಂದ ಇವರನ್ನು ಹುರುಳಿಯವರೆಂದು ಕರೆಯಲಾಗಿದೆ. ಆದರೆ ಚಂದಮುತ್ತಿಯ ಕುಲಕ್ಕೆ ಸೇರಿದ ಯಾವ ಬೆಡಗಿನವರೂ ಹುರುಳಿಯನ್ನು, ನವಣೆಯನ್ನು ಕೈಯಿಂದ ಮುಟ್ಟುವುದಿಲ್ಲ. ಅದು ಅವರಿಗೆ ನಿಷಿದ್ಧ; ಹೀಗಾಗಿ ಹುರುಳಿಗೊಲ್ಲರು ಎಂಬ ಮಾತು ಚಂದಮುತ್ತಿಯ ಕುಲದ ಎಲ್ಲ ಬೆಡಗಿನ ಜನರಿಗೂ ಅನ್ವಯವಾಗುವುದರಿಂದ,

ಅದನ್ನು ಒಂದು ಪ್ರತ್ಯೇಕವಾದ ಬೆಡಗು ಎಂದು ಹೇಳುವುದು ಸರಿಯಲ್ಲ. ಮೇಲಿನ ಪಟ್ಟಿಯಲ್ಲಿ ರಾಮೇಗೌಡನ ಕುಲಕ್ಕೆ ಸೇರಬೇಕಾದ ಕೆಲವು ಬೆಡಗುಗಳನ್ನು ಕೈ ಬಿಡಲಾಗಿದೆ. ಹಾಗೆಯೇ ಚಂದಮುತ್ತಿಯ ಕುಲಕ್ಕೆ ಸೇರಬೇಕಾದ ಸನ್ನರಗೊಲ್ಲರ ಬೆಡಗನ್ನು ಕೈಬಿಡಲಾಗಿದೆ. ಇವುಗಳನ್ನು ಸೇರಿಸಿಕೊಂಡು, ಪರಿಷ್ಕೃತವಾದ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ.

| ಚಿತ್ತಮುತ್ತಿ ಕುಲದವರು | ಚಂದಮುತ್ತಿ ಕುಲದವರು | ರಾಮೇಗೌಡನ ಕುಲದವರು |
|---|---|---|
| 1. ಕರಡಿಗೊಲ್ಲರು | 1. ಅಜ್ಜಿಯವರ ಗೊಲ್ಲರು | 1. ಅರೇನವರ ಗೊಲ್ಲರು |
| 2. ಮಾರನವರ ಗೊಲ್ಲರು | 2. ಸನ್ನರ ಗೊಲ್ಲರು | 2. ಮೇರೆನವರ ಗೊಲ್ಲರು |
| 3. ಸೋಮನವರ ಗೊಲ್ಲರು | 3. ಕಂಬಿಯವರ ಗೊಲ್ಲರು | |
| 4. ಬೊಮ್ಮನವರ ಗೊಲ್ಲರು | 4. ಕಹಳೆಯವರ ಗೊಲ್ಲರು | |
| 5. ಕೋಣನವರ ಗೊಲ್ಲರು | 5. ಒಡೆಯವರ ಗೊಲ್ಲರು | |
| 6. ಪೋಲನವರ ಗೊಲ್ಲರು | 6. ಒನಕೆಯವರ ಗೊಲ್ಲರು | |
| 7. ಎಗಡಿನವರ ಗೊಲ್ಲರು | 7. ಮಾನಸಿನವರ ಗೊಲ್ಲರು | |
| 8. ಅರಿಸಿನಕಲ್ಲಿ ಗೊಲ್ಲರು | 8. ಚೀರವರ ಗೊಲ್ಲರು | |
| 9. ಬೆಳ್ಳೋರ ಗೊಲ್ಲರು | | |
| 10. ಬೆಳ್ಳೂರವರು | | |

ಕರಡಿಗೊಲ್ಲರು ಮತ್ತು ಮಾರನವರ ಗೊಲ್ಲರಲ್ಲಿ ಪ್ರಾದೇಶಿಕ ವ್ಯತ್ಯಾಸಗಳ ಕಾರಣದಿಂದ ಕೆಲವು ಉಪವಿಭಾಗಗಳೂ ಆಗಿರುವುದುಂಟು. ಉದಾಹರಣೆಗೆ ಕರಡಿಗೊಲ್ಲರಲ್ಲಿ ಕರೇ ಓಬೇನಹಳ್ಳಿಯವರೇ ಒಂದು ವರ್ಗ, ಬಾಲೇನಹಳ್ಳಿಯವರೇ ಒಂದು ವರ್ಗ. ಮಾರನವರ ಗೊಲ್ಲರಲ್ಲಿ ಕಳುವಾರಹಳ್ಳಿಯ ಸಂಪ್ರದಾಯದವರೇ ಒಂದು ವರ್ಗ, ಹಾಗಲವಾಡಿಯ ಸಂಪ್ರದಾಯದವರೇ ಒಂದು ವರ್ಗ. ಈ ಉಪವಿಭಾಗಗಳಲ್ಲಿ ಮೂಲಭೂತವಾದ ವ್ಯತ್ಯಾಸಗಳಿರುವುದಿಲ್ಲ. ಹೀಗೇಯ ಚಂದಮುತ್ತಿಯ ಕುಲದಲ್ಲಿ ಮತ್ತು ರಾಮೇಗೌಡನ ಕುಲದಲ್ಲಿ ಪ್ರಾದೇಶಿಕ ವ್ಯತ್ಯಾಸಗಳ ಮೇಲೆ ಇನ್ನೂ ಕೆಲವು ಉಪವಿಭಾಗಗಳೂ ಉಂಟು. ಆದರೆ ಪಟ್ಟಿಯಲ್ಲಿ ಮುಖ್ಯವಾದುವನ್ನು ಮಾತ್ರ ಕೊಡಲಾಗಿದೆ.

**ಸಾಮಾಜಿಕ ಸಂಘಟನೆ**

ಕಾಡುಗೊಲ್ಲರು ಊರುಗಳಿಂದ ಹೊರಗೆ ಕಾಡುಗಳಲ್ಲಿ ಕಟ್ಟಿಕೊಂಡ ಹಟ್ಟಿಗಳಲ್ಲಿ ವಾಸ ಮಾಡುತ್ತಾರೆ. ಈ ಹಟ್ಟಿಗಳನ್ನು ಗೊಲ್ಲರ ಹಟ್ಟಿಗಳು ಎಂದು ಕರೆಯುತ್ತಾರೆ. ಊರಿನಿಂದ

ಬಹಳ ದೂರದಲ್ಲಿರುವ ಯಾವ ಗೊಲ್ಲರ ಹಟ್ಟಿಯೂ ಐದು ಮೈಲಿಗಳ ಅಂತರವನ್ನು ಮೀರಿರುವುದಿಲ್ಲ. ಸಾಮಾನ್ಯವಾಗಿ ಊರಿನಿಂದ ಒಂದು ಫರ್ಲಾಂಗಿನಿಂದ ಹಿಡಿದು ಒಂದು ಮೈಲಿನವರೆಗಿನ ಅಂತರದಲ್ಲಿರುವ ಗೊಲ್ಲರ ಹಟ್ಟಿಗಳೇ ಹೆಚ್ಚು. ಕೆಲವು ಊರುಗಳಲ್ಲಿ ರಸ್ತೆಯ ಒಂದು ಕಡೆಗೆ ಊರು, ಇನ್ನೊಂದು ಕಡೆಗೆ ಗೊಲ್ಲರಹಟ್ಟಿ ಈ ರೀತಿ ಇರುವುದೂ ಉಂಟು. ಇಂತಹ ಕಡೆಗಳಲ್ಲಿ ಕಾಡುಗೊಲ್ಲರು ನಾಗರಿಕತೆಯಿಂದ ತೀವ್ರವಾಗಿ ಪ್ರಭಾವಿತರಾಗಿರುತ್ತಾರೆ. ಆದರೆ ಊರಿನಿಂದ ದೂರವಾಗಿದ್ದು, ಪ್ರತ್ಯೇಕವಾಗಿರುವ ಗೊಲ್ಲಹಟ್ಟಿಗಳ ಸಂಖ್ಯೆಯೇ ಹೆಚ್ಚು. ಹತ್ತು ಗುಡಿಸಿಲುಗಳಿರುವ ಹಟ್ಟಿಗಳೂ ಉಂಟು. ನೂರಿನ್ನೂರು ಗುಡಿಸಿಲುಗಳಿರುವ ಹಟ್ಟಿಗಳೂ ಉಂಟು. ಸಾಮಾನ್ಯವಾಗಿ ಕಾಡುಗೊಲ್ಲರು ತಮ್ಮ ಹಟ್ಟಿಗಳ ಸುತ್ತ ಜಾಲುಮುಳ್ಳು, ಬಾರೆಮುಳ್ಳು ಅಥವಾ ಬೇರೆ ಹತ್ತಿರಲ್ಲಿ ದೊರೆಯುವ ಯಾವುದಾದರೂ ಮುಳ್ಳನ್ನು ಉಪಯೋಗಿಸಿಕೊಂಡು ಬೇಲಿ ಕಟ್ಟಿರುತ್ತಾರೆ. ಈ ಮುಳ್ಳನ್ನು ಕಳ್ಳೆ(ಕಳಲೆ) ಎಂದು ಕರೆಯುತ್ತಾರೆ. ಈ ಕಳ್ಳೆಯ ಬೇಲಿ ಕಾಡುಗೊಲ್ಲರ ಜೀವನದಲ್ಲಿ ಪ್ರಮುಖವಾದ ಪಾತ್ರ ವಹಿಸುತ್ತದೆ. ಈ ಬೇಲಿಗೆ ಮಣ್ಣಿನಿಂದ ಹುದಿ ಹಾಕಿರುತ್ತಾರೆ. ಈ ಬೇಲಿ ಇವರಿಗೆ ಕಾಡುಪ್ರಾಣಿಗಳಿಂದ ರಕ್ಷಣೆ ಕೊಡುತ್ತದೆ. ಓಡಾಡುವುದಕ್ಕಾಗಿ ಒಂದು ಅಥವಾ ಎರಡು ಹೊಳೆಬಾಗಿಲು ಬಿಟ್ಟಿರುತ್ತಾರೆ. ಈಚೀಚೆಗಂತೂ ನಾಗರಿಕತೆಯ ಪ್ರಭಾವದಿಂದಾಗಿ ಕಳ್ಳೆಬೇಲಿ ಹಾಕದೆ ಹಾಗೇ ಬಿಟ್ಟಿರುವುದೂ ಉಂಟು. ಹಟ್ಟಿಗಳಲ್ಲಿ ಗುಡಿಸಿಲುಗಳೇ ಹೆಚ್ಚು ಈಚೀಚೆಗೆ ಕೆಲವು ಮಾಳಿಗೆ ಮನೆಗಳನ್ನು, ಹೆಂಚಿನ ಮನೆಗಳನ್ನೂ ಕಾಣಬಹುದು. ಸೋಗೆಗರಿ, ಬಾದೆಹುಲ್ಲು, ಹಂಚೀಹುಲ್ಲು ಆಪು–ಇವುಗಳಲ್ಲಿ ಯಾವುದು ಹತ್ತಿರದಲ್ಲಿ ದೊರೆಯುವುದೋ ಅದನ್ನೇ ಗುಡಿಸಿಲುಗಳಿಗೆ ಹೊದಿಸಲು ಬಳಸುತ್ತಾರೆ. ಬಹುಪಾಲು ಹಟ್ಟಿಗಳು ಅವ್ಯವಸ್ಥಿತವಾಗಿರುತ್ತವೆ.

ಹಟ್ಟಿಯ ಮಧ್ಯೆ ದೇವಸ್ಥಾನ ಇರುತ್ತದೆ. ಈ ದೇವಸ್ಥಾನವನ್ನು ಬಿದಿರಿನಿಂದ ಮಾಡಿ, ಅದಕ್ಕೆ ಹಂಚಿಹುಲ್ಲು ಅಥವಾ ಬಾದೆಹುಲ್ಲನ್ನು ಹೊದಿಸಿರುತ್ತಾರೆ. ಈ ದೇವಸ್ಥಾನ ಗೋಳಾಕಾರ ವಾಗಿದ್ದು ಚಿಕ್ಕದಾಗಿದ್ದು, ಪೂರ್ವಾಭಿಮುಖವಾಗಿರುತ್ತದೆ. ಒಳಭಾಗವಂತೂ ತೀರ ಕಿಷ್ಕಿಂಧವಾಗಿದ್ದು, ಅಲ್ಲಿ ಇಟ್ಟಿರುವ ದೇವರನ್ನು ಬಿಟ್ಟರೆ ಪೂಜಾರಿ ಮಾತ್ರ ಹೋಗಬಹುದು. ಸ್ವಲ್ಪ ದೊಡ್ಡದಾಗಿರುವ ದೇವಸ್ಥಾನಗಳಲ್ಲಿ ಒಳಗೆ ಪೂಜಾರಿಯೊಡನೆ ಇನ್ನಿಬ್ಬರು ಕೂರಬಹುದು ಅಷ್ಟೆ. ದೇವಸ್ಥಾನವನ್ನು ಯಾರು ಪ್ರವೇಶಿಸಬೇಕಾದರೂ ಬಾಗಿಕೊಂಡೇ ಹೋಗಬೇಕು; ಏಕೆಂದರೆ ಸಾಮಾನ್ಯವಾಗಿ ಯಾವ ದೇವಸ್ಥಾನಕ್ಕೂ ನಾಲ್ಕು ಅಡಿಗಿಂತ ಹೆಚ್ಚು ಎತ್ತರವಾದ ಬಾಗಿಲು ಇರುವುದಿಲ್ಲ. ಈ ದೇವಸ್ಥಾನವನ್ನು 'ಗುಬ್ಬ' ಎಂದು ಕರೆಯುತ್ತಾರೆ. ಈ ಗುಬ್ಬವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ಗಾಯಿಸಬಹುದು. ಈಚೆಗೆ ನಾಗರಿಕತೆಯ ಪ್ರಭಾವದಿಂದ ಗುಬ್ಬಗಳನ್ನು ಕಟ್ಟುವುದಕ್ಕಿಂತ ಹೆಚ್ಚಾಗಿ ಹೆಂಚಿನ ಮನೆಗಳನ್ನು ಕಟ್ಟಿ, ಅದರೊಳಗೆ ದೇವರನ್ನು ಕೂರಿಸುತ್ತಾರೆ. ಕೆಲವು ಕಡೆಗಳಲ್ಲಿ ವ್ಯವಸ್ಥಿತವಾಗಿಯೇ ದೇವಸ್ಥಾನಗಳನ್ನು ಕಟ್ಟಿದ್ದಾರೆ. ಮತ್ತೆ ಕೆಲವು ಕಡೆಗಳಲ್ಲಿ

ಹೆಂಚಿನ ಅಥವಾ ತಾರಸಿಯ ಕಟ್ಟಡವನ್ನು ಕಟ್ಟಿ, ಅದರೊಳಗೆ ಗುಬ್ಬವನ್ನಿಟ್ಟು, ಗುಬ್ಬದಲ್ಲಿ ದೇವರನ್ನು ಇಡುವ ಪದ್ಧತಿಯೂ ಇವೆ. ಹೊಸತು ಹಳತರ ಸಮ್ಮಿಶ್ರವಾದ ಬಗೆಯನ್ನು ಇದರಲ್ಲಿ ಕಾಣಬಹುದು. ಗುಬ್ಬಗಳ ಒಳಗಿರುವ ದೇವರನ್ನು ದೇವರ ಒಡವೆಗಳನ್ನು ಯಾರಾದರೂ ಕದಿಯಬಹುದು ಅಥವಾ ಗುಬ್ಬಕ್ಕೆ ಎಲ್ಲಾದರೂ ಬೆಂಕಿ ಬಿದ್ದೀತು ಎಂಬ ಹೆದರಿಕೆಯಿಂದ ಈ ಬದಲಾವಣೆಯನ್ನು ಮಾಡಿಕೊಂಡಿದ್ದಾರೆ. ಇತರ ದೇವಸ್ಥಾನಗಳಂತೆಯೇ ತಮ್ಮ ದೇವಸ್ಥಾನವೂ ಇರಬೇಕೆಂಬ ಆಸೆಯೂ ಇದಕ್ಕೆ ಕಾರಣವಾಗಿದೆ. ದೇವಸ್ಥಾನದ ಸುತ್ತ ಕಳ್ಳೆಬೇಲಿಯನ್ನು ಹಾಕಿರುತ್ತಾರೆ. ಪ್ರವೇಶಕ್ಕೆ ಒಂದು ಹೊಳೆಬಾಗಿಲನ್ನು ಇಟ್ಟಿರುತ್ತಾರೆ. ಕಳ್ಳೆಬೇಲಿಯ ಒಳಗೆ ಸಾಮಾನ್ಯವಾಗಿ ಬೇವಿನ ಮರ, ಗುತ್ತುಲಿಮರ, ಧೂಪದಮರ ಈ ಮೂರು ಮರಗಳನ್ನು ಬೆಳೆಸಿರುತ್ತಾರೆ. ಕೆಲವು ಕಡೆ ಈ ಮೂರು ಮರಗಳಿಲ್ಲದಿದ್ದರೂ ಇವುಗಳಲ್ಲಿ ಒಂದು ಅಥವಾ ಎರಡು ಮರಗಳಾದರೂ ಇದ್ದೇ ಇರುತ್ತವೆ. ಕೆಲವು ಕಡೆಗಳಲ್ಲಿ ಕಳ್ಳೆಬೇಲಿಯನ್ನು ಕಿತ್ತು ಅದಕ್ಕೆ ಬದಲಾಗಿ ಉದ್ದವಾದ ಹಾಸುಕಲ್ಲುಗಳನ್ನು ಒತ್ತಾಗಿ ನಿಲ್ಲಿಸಿ ಹಾಸುಕಲ್ಲಿನ ಕಾಂಪೌಂಡನ್ನು ಕಟ್ಟಿದ್ದಾರೆ. ಹಿರಿಯೂರು ತಾಲ್ಲೂಕಿನ ಕೂಡಲಹಳ್ಳಿಯ ಪಾತೇದೇವರ ದೇವಸ್ಥಾನದ ಸುತ್ತ ಕಾಂಪೌಂಡನ್ನು ಕಾಣಬಹುದು. ಕಾಡುಗೊಲ್ಲರ ದೇವಸ್ಥಾನದ ಬಾಗಿಲುಗಳಿಗೆ ಹಿತ್ತಾಳೆಯ ತಗಡನ್ನು ಹೊದಿಸಿರುತ್ತಾನೆ. ಈ ತಗಡಿನ ಮೇಲೆ ಸಾಮಾನ್ಯವಾಗಿ ಎರಡು ಚಿತ್ರಗಳನ್ನು ಕಾಣಬಹುದು. 1. ಜುಂಜಪ್ಪನ ಪುರಾಣದಲ್ಲಿ ಬರುವ ಬಡಮ್ಮೈಲ ಎಂಬ ಹೋರಿಯ ಚಿತ್ರ 2. ಎತ್ತಯ್ಯನ ಪುರಾಣದಲ್ಲಿ ಬರುವ ಸೀಳುತಲೆ ಚಿಕ್ಕರಂಭೆ ಎಂಬ ಹಸು ಮತ್ತು ಅದರ ಹಾಲನ್ನು ಕುಡಿಯುತ್ತಿರುವ ಕರುವಿನ ಚಿತ್ರ. ಈ ಎರಡು ಕಾಡುಗೊಲ್ಲರಿಗೂ ಪವಿತ್ರವಾದ ಚಿತ್ರಗಳಾಗಿವೆ.

ಒಂದೊಂದು ಗುಬ್ಬದಲ್ಲಿಯೂ ಸಾಮಾನ್ಯವಾಗಿ ಒಂದೊಂದು ದೇವರನ್ನು ಇಟ್ಟಿರುತ್ತಾರೆ. ಒಂದು ಹಟ್ಟಿಯಲ್ಲಿ ಒಂದು ಗುಬ್ಬದಿಂದ ಹಿಡಿದು ನಾಲ್ಕೈದು ಗುಬ್ಬಗಳವರೆಗೂ ಇರಬಹುದು. ಉದಾಹರಣೆಗೆ, ಹಿರಿಯೂರು ತಾಲ್ಲೂಕಿನ ಇಕ್ಕನೂರಿನಲ್ಲಿ ಐದು ಗುಬ್ಬಗಳಿವೆ. ಒಂದೊಂದು ಗುಬ್ಬದಲ್ಲಿಯೂ ಒಂದೊಂದು ದೇವರನ್ನು ಇಟ್ಟಿರುತ್ತಾರೆ. ಕೆಲವು ಕಡೆಗಳಲ್ಲಿ ಒಂದೇ ಗುಬ್ಬದಲ್ಲಿ ಎರಡು ಮೂರು ದೇವರುಗಳನ್ನು ಇಟ್ಟಿರುವುದು ಉಂಟು.

ಕಾಡುಗೊಲ್ಲರು ತಮ್ಮ ಹಟ್ಟಿಗಳೊಳಗೆ ಹರಿಜನರನ್ನು ಸೇರಿಸುವುದಿಲ್ಲ. ಆದರೆ ಈಚೆಗೆ ಈ ನಿಯಮ ಸ್ವಲ್ಪಮಟ್ಟಿಗೆ ಸಡಿಲವಾಗಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಹರಿಜನರನ್ನು ಗೊಲ್ಲರ ಹಟ್ಟಿಗಳಿಗೆ ನುಗ್ಗಿಸುವ ಕೆಲವು ಪ್ರಯತ್ನಗಳು ನಡೆದವಂತೆ. ಆದರೆ ಅದನ್ನು ಕಾಡುಗೊಲ್ಲರು ತೀವ್ರವಾಗಿ ವಿರೋಧಿಸಿದರಂತೆ. ಹರಿಜನರು ಹಟ್ಟಿಯೊಳಕ್ಕೆ ನುಗ್ಗುವುದನ್ನು ತಡೆಯಲು ಸಾಧ್ಯವಾಗದೆ ಇದ್ದಾಗ ತಮ್ಮ ದೇವರನ್ನು ಗುಬ್ಬದಿಂದ ತೆಗೆದು, ಹಟ್ಟಿಯಿಂದ ಹೊರಕ್ಕೆ ಸಾಗಿಸಿ, 'ಎಲ್ಲಿಯೋ ಬಚ್ಚಿಟ್ಟು, ಅನಂತರ ಗುಬ್ಬವನ್ನು ಶುದ್ಧಿ ಮಾಡಿ ದೇವರನ್ನು ತಂದಿಡುತ್ತಿದ್ದರಂತೆ. ಕಾಲ

ಕಳೆದಂತೆ ಈ ಮಡಿವಂತಿಕೆ ಕಡಿಮೆಯಾಗುತ್ತಿದೆ. ಆದರೆ ಇಂದಿಗೂ ಹಟ್ಟಿಯೊಳಕ್ಕೆ ನೆರಳನ್ನೂ ಸೋಂಕಿಸಿ ಕೊಳ್ಳುವುದಿಲ್ಲ. ಇಂದಿಗೂ ಕೆಲವು ಗೊಲ್ಲರ ಹಟ್ಟಿಗಳ ಒಳಕ್ಕೆ ಚಪ್ಪಲಿ ಹಾಕಿಕೊಂಡು ಪ್ರವೇಶ ಮಾಡುವಂತಿಲ್ಲ. ಚಪ್ಪಲಿಯನ್ನು ಬೇಲಿಯಿಂದ ಹೊರಗೆ ಬಿಟ್ಟೇ ಒಳಕ್ಕೆ ಹೋಗಬೇಕು.

ಕಾಡುಗೊಲ್ಲರ ಸಾಮಾಜಿಕ ಸಂಘಟನೆ ಆರಂಭವಾಗುವುದು ಹಟ್ಟಿಯಿಂದ. ಹಲವಾರು ಹಟ್ಟಿಗಳು ಸೇರಿ ಒಂದು 'ಕಣತಿ', ಅನೇಕ ಕಣತಿಗಳು ಸೇರಿ ಒಂದು 'ಅಂಬು', ಅನೇಕ 'ಅಂಬು'ಗಳು ಸೇರಿ ಒಂದು 'ಗುಡಿಕಟ್ಟು', ಕೆಲವಾರು ಗುಡಿಕಟ್ಟುಗಳು ಸೇರಿ ಒಂದು 'ಕಟ್ಟೆಮನೆ' ಇವುಗಳ ಜೊತೆಗೆ ಗುಡಿಕಟ್ಟುಗಳ ಮತ್ತು ಅಂಗುಗಳ ವ್ಯಾಪ್ತಿಯಲ್ಲಿ ಅಮಾವಾಸ್ಯೆ ಕೇಂದ್ರಗಳು ಬರುತ್ತವೆ. ಕರೇಓಬೇನಹಳ್ಳಿ, ತಾಳವಟ್ಟಿ ಮತ್ತು ರಾಮನಹಳ್ಳಿ ಈ ಮೂರು ಕಾಡುಗೊಲ್ಲರ ಕಟ್ಟೆಮನೆಗಳು. ಕರೇ ಓಬೇನಹಳ್ಳಿ ಇಂದಿಗೂ ಅಸ್ತಿತ್ವದಲ್ಲಿದೆ. ಆದರೆ ತಾಳವಟ್ಟಿ ಮತ್ತು ರಾಮನಹಳ್ಳಿ ಹಾಳೂರುಗಳು ಈ ಕಟ್ಟೆಮನೆಗಳು ಕ್ರಮವಾಗಿ ಯರಬಳ್ಳಿ ಮತ್ತು ಮರಡಿಹಳ್ಳಿಗೆ ವರ್ಗಾವಣೆಗೊಂಡಿವೆ. ಕರೇಓಬೇನಹಳ್ಳಿ ಚಿತ್ತಮುತ್ತಿಯ ಕುಲದವರಿಗೂ ತಾಳವಟ್ಟ (ಅಥವಾ ಯರಬಳ್ಳಿ) ಚಂದಮುತ್ತಿಯ ಕುಲದವರಿಗೂ ರಾಮನಹಳ್ಳಿ(ಅಥವಾ ಮರಡಿಹಳ್ಳಿ) ರಾಮೇಗೌಡನ ಕುಲದವರಿಗೂ ಕಟ್ಟೆ ಮನೆಗಳಾಗಿವೆ. ಈ ಮೂರು ಕಟ್ಟೆಮನೆಗಳಿಗೂ ಅನೇಕ ಗುಡಿಕಟ್ಟುಗಳು ಸೇರಿವೆ. ಕಟ್ಟೆಮನೆಯಲ್ಲಿ ನ್ಯಾಯ ತೀರ್ಮಾನ ಮಾತ್ರ ನಡೆಯುತ್ತಿವೆ. ಉಳಿದ ವಿಷಯಗಳೆಲ್ಲ ಗುಡಿಕಟ್ಟಿನವರದೇ ಮೇಲುಗೈ. ಕಣತಿ, ಅಂಬು, ಗುಡಿಕಟ್ಟುಗಳಲ್ಲಿ ತೀರ್ಮಾನವಾಗದ ಜಗಳಗಳನ್ನು ಮಾತ್ರ ಕಟ್ಟೆಮನೆಯಲ್ಲಿ ತೀರ್ಮಾನ ಮಾಡಲಾಗುತ್ತದೆ. ನ್ಯಾಯವನ್ನು ತೀರ್ಮಾನ ಮಾಡುವುದು ಮಾತ್ರ ಕಟ್ಟೆಮನೆಯ ಕೆಲಸ. ಅದನ್ನು ಜಾರಿಗೆ ತರುವುದು ಗುಡಿಕಟ್ಟಿನ ಕೆಲಸ. ನ್ಯಾಯ ತೀರ್ಮಾನಕ್ಕೆ ಅಪರಾಧಿ, ಫಿರ್ಯಾದಿಗಳು ಕಟ್ಟೆಮನೆಗೇ ಹೋಗಬೇಕೆಂದೇನೂ ಇಲ್ಲ. ಆಯಾ ಗುಡಿಕಟ್ಟಿನ ಗೌಡರು ಮತ್ತು ಯಜಮಾನರು ಮೂರು ಕಟ್ಟೆಮನೆಗಳಿಂದಲೂ ಒಬ್ಬೊಬ್ಬ ಪ್ರತಿನಿಧಿಯನ್ನು ಕರೆಸಿಕೊಂಡು, ಅಲ್ಲಿಯೇ ತೀರ್ಮಾನ ಮಾಡಿ ದಂಡ ವಿಧಿಸಬಹುದು.

ಮೂರು ಕಟ್ಟೆಮನೆಗಳಿಗೂ ಚಳ್ಳಕೆರೆ ತಾಲ್ಲೂಕು ಗೋಸಿಕೆರೆ ಗ್ರಾಮದಲ್ಲಿ ವಾಸವಾಗಿರುವ ಸ್ವಾಮಿಗಳ ವಂಶಸ್ಥರಾದ ಸಾರ್ವಾಡ ಅಯ್ಯನವರು ಗುರುಗಳು 19 ಕರೇಓಬೇನಹಳ್ಳಿಯ ಮಾರಮ್ಮನಿಗೆ ಪೂಜೆಯಾಗುವಾಗ, ತಾಳವಟ್ಟಿ ಕಟ್ಟೆಮನೆಯ ಪೂಜಾರಿಗೆ ಪಟ್ಟಿ ಕಟ್ಟುವಾಗ, ರಾಮನಹಳ್ಳಿಯ ರಾಮಲಿಂಗ ದೇವರಿಗೆ ಅಭಿಷೇಕ ಮಾಡುವಾಗ ಈ ಸಾರ್ವಾಡದ ಅಯ್ಯನವರು ಹೋಗುತ್ತಾರೆ. ಇವರು ವೀರಶೈವರು. ಮೂರು ಕಟ್ಟೆಮನೆಗಳಲ್ಲಿ ಇರುವವರು ಮತ್ತು ಕೆಲವು ಗುಡಿಕಟ್ಟಿನವರು ಮಾತ್ರ ಇವರನ್ನು ಗುರುಗಳೆಂದು ಒಪ್ಪುತ್ತಾರೆ. ಆದರೆ ಬಹುಪಾಲು ಗುಡಿಕಟ್ಟಿಗೆ ಸೇರಿದ ಕಾಡುಗೊಲ್ಲರು ಇವರನ್ನು ಗುರುಗಳೆಂದು ಒಪ್ಪುವುದೇ ಇಲ್ಲ. ಕೆಲವು ಗುಡಿಕಟ್ಟಿನವರು ಶ್ರೀ ವೈಷ್ಣವ ಬ್ರಾಹ್ಮಣರನ್ನು ತಮ್ಮ ಗುರುಗಳನ್ನಾಗಿ ಸ್ವೀಕರಿಸಿದ್ದಾರೆ. ಮತ್ತೆ ಕೆಲವು ಗುಡಿಕಟ್ಟಿನವರು ವೀರಶೈವ ಅಥವಾ ಬ್ರಾಹ್ಮಣಗುರುಗಳನ್ನು ಒಪ್ಪುವುದೇ ಇಲ್ಲ. ಪೂಜಾರಿಗೆ ಪಟ್ಟಿಕಟ್ಟಿ ಬೇಕಾದಾಗ

ತಮ್ಮಲ್ಲಿಯೇ ಒಬ್ಬ ಗುರುವನ್ನು ಆರಿಸಿಕೊಳ್ಳುತ್ತಾರೆ. ವೀರಶೈವರು ಮತ್ತು ಬ್ರಾಹ್ಮಣರು ಕಾಡುಗೊಲ್ಲರ ಮೇಲೆ ಪ್ರಭಾವ ಬೀರಿರುವುದನ್ನು, ಕೆಲವು ಗುಡಿಕಟ್ಟಿನವರು ಈ ಪ್ರಭಾವಕ್ಕೆ ಒಳಗಾಗಿಲ್ಲ ಎಂಬುಧನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದು.

ಗುಡಿಕಟ್ಟುಗಳಿಂದ ದೂರ ಹೋಗಿ ನೆಲಸಿದವರೇ 'ಅಂಬು'ಗಳಲ್ಲಿ ಇರುವವರು. ಗುಡಿಕಟ್ಟನ್ನು ಬಿಟ್ಟು ಹೋಗುವಾಗ ಅಲ್ಲಿಂದ ಒಂದೊಂದು ಬಾಣವನ್ನು ತೆಗೆದುಕೊಂಡು ಹೋಗಿ ಅದನ್ನು ಪೂಜೆ ಮಾಡುವುದರಿಂದ ಇವುಗಳಿಗೆ ಅಂಬುಗಳು ಎಂಬ ಹೆಸರು ಬಂದಿದೆ. ಗುಡಿಕಟ್ಟಿನಲ್ಲಿ ಯಾವ ದೇವರನ್ನು ಪೂಜಿಸುತ್ತಾರೋ ಅದೇ ದೇವರನ್ನೇ ಅಂಬಿನಲ್ಲಿಯೂ ಸಹ ಪೂಜೆ ಮಾಡುತ್ತಾರೆ. ಅದರ ಜೊತೆಗೆ ಸ್ಥಳೀಯವಾದ ಬೇರೆ ಯಾವುದಾದರೂ ಇನ್ನೊಂದು ದೇವರನ್ನು ಪೂಜೆ ಮಾಡಬಹುದು. ಅಂತೂ ಗುಡಿಕಟ್ಟಿನ ದೇವರನ್ನು ಅಂಬಿನಲ್ಲಿಯೂ ಪೂಜೆ ಮಾಡಬೇಕಾದುದು ಅಗತ್ಯ. ಗುಡಿಕಟ್ಟಿನಲ್ಲಿ ಯಾವುದಾದರೂ ಮುಖ್ಯಪೂಜೆ, ಜಾತ್ರೆ ಮೊದಲಾದವು ನಡೆದಾಗ ಆ ಗುಡಿಕಟ್ಟಿಗೆ ಸೇರಿದ ಎಲ್ಲಾ ಅಂಬಿನವರೂ ಒಟ್ಟಾರೆ ಗುಡಿಕಟ್ಟಿನಲ್ಲಿ ಸೇರುತ್ತಾರೆ. ಅಂಬಿನಿಂದ ಚದುರಿ, ಬೇರೆ ಬೇರೆ ಕಡೆ ಹೋದವರೇ ಕಣತಿಗಳಲ್ಲಿ ಇರುವವರು. ಒಂದೊಂದು ಕಣತಿಗೂ ಕೆಲವಾರು ಹಟ್ಟಿಗಳು ಸೇರುತ್ತವೆ. ಅಮಾವಾಸ್ಯೆ ಕೇಂದ್ರದಲ್ಲಿ ಸತ್ತವರಿಗೆ ಕರ್ಮ ಮಾಡುತ್ತಾರೆ. ಕೆಲವು ಕಡೆಗಳಲ್ಲಿ ಒಂದು ಹಟ್ಟಿಯನ್ನು ಆರಿಸಿ, ಅದನ್ನೇ ಅಮಾವಾಸ್ಯೆ ಕೇಂದ್ರವನ್ನಾಗಿ ಮಾಡಿರಬಹುದು. ದೇವರನ್ನು ಪೂಜೆ ಮಾಡುವ ಪೂಜಾರಿ ಸತ್ತವರ ಕರ್ಮ ಮಾಡುವುದಿಲ್ಲ. ಹೀಗಾಗಿ ಅಮಾವಾಸ್ಯೆ ಪೂಜಾರಿಯನ್ನೇ ಪ್ರತ್ಯೇಕವಾಗಿ ನೇಮಕ ಮಾಡಿರುತ್ತಾರೆ. ಈ ಪೂಜಾರಿ ಅಮಾವಾಸ್ಯೆ ದೇವರನ್ನು ಮಾತ್ರ ಪೂಜೆ ಮಾಡುತ್ತಾನೆ. ಸತ್ತವರಿಗೆ ಕರ್ಮ ಮಾಡುವ ಕೆಲಸವನ್ನು ಮಾತ್ರ ಮಾಡುತ್ತಾನೆ.

**ಕಾಡುಗೊಲ್ಲರ ಧಾರ್ಮಿಕ ಕೇಂದ್ರಗಳು**

ಕಾಡುಗೊಲ್ಲರ ದೇವತೆಗಳನ್ನು ಪ್ರಮುಖದೇವತೆಗಳು, ಸಾಮಾನ್ಯ ದೇವತೆಗಳು ಎಂದು ವರ್ಗೀಕರಿಸಬಹುದು. ಎತ್ತಪ್ಪ, ಜುಂಜಪ್ಪ, ಕಾಟಮದೇವರು, ಚಿತ್ರದೇವರು, ಪಾತೇದೇವರು, ಕೇತೇದೇವರು, ನರಸಿಂಹ ತಿಮ್ಮಪ್ಪ, ರಂಗಪ್ಪ ಇವು ಪ್ರಮುಖ ದೇವತೆಗಳು. ಎತ್ತಪ್ಪದೇವರ ಕೇಂದ್ರಗಳು, ಹಿರಿಯೂರು ತಾಲ್ಲೂಕಿನ ವೆಣ್‌ಕಲ್ ಗುಡ್ಡದಲ್ಲಿ ಮತ್ತು ಚಿತ್ರದುರ್ಗ ತಾಲ್ಲೂಕಿನ ತಳುಕಿನ ಗುಡ್ಡದಲ್ಲಿ ಇವೆ. ಜುಂಜಪ್ಪನ ಕೇಂದ್ರಗಳು ಸಿರಾ ತಾಲ್ಲೂಕಿನ ಬೇವಿನಹಳ್ಳಿಯಲ್ಲಿ ಮತ್ತು ಗುಬ್ಬಿ ತಾಲ್ಲೂಕಿನ ಹಾಗಲವಾಡಿಯಲ್ಲಿದೆ. ಚಿತ್ರದೇವರ ಕೇಂದ್ರಗಳು ಮಡಕಸಿರಾ ತಾಲ್ಲೂಕಿನ ಮದನಕುಂಟೆಯಲ್ಲಿ, ಪಾವಗಡ ತಾಲ್ಲೂಕಿನ ಪಾಲೇನಹಳ್ಳಿಯಲ್ಲಿ ಇವೆ. ಈ ಮೂರು ದೇವತೆಗಳನ್ನು ಮಾರನವರಗೊಲ್ಲರು ಪೂಜಿಸಬಹುದು. ಹೀಗೆಯೇ ಮಾಡಬೇಕು ಎಂಬ ನಿಯಮವೇನೂ ಇಲ್ಲ. ಅನಂತಪುರ ಜಿಲ್ಲೆಯ ಕದರಿಯಲ್ಲಿ ನರಸಿಂಹಸ್ವಾಮಿ ದೇವರ

ಕೇಂದ್ರವಿದೆ; ತಿರುಪತಿಯಲ್ಲಿ ತಿಮ್ಮಪ್ಪದೇವರ ಕೇಂದ್ರವಿದೆ. ಹಿರಿಯೂರು ತಾಲ್ಲೂಕಿನ ನಂದಿಹಳ್ಳಿಯಲ್ಲಿ ರಂಗಪ್ಪ ದೇವರ ಕೇಂದ್ರವಿದೆ. ಈ ದೇವತೆಗಳನ್ನು ಕರಡಿಗೊಲ್ಲರು ಮಾತ್ರ ಪೂಜಿಸುತ್ತಾರೆ. ಮಾರನವರ ಗೊಲ್ಲರು ಪೂಜಿಸುವುದಿಲ್ಲ. ಹಿರಿಯೂರು ತಾಲ್ಲೂಕಿನ ಯರಬಳ್ಳಿಯಲ್ಲಿ ಮತ್ತು ಇಕ್ಕನೂರಿನಲ್ಲಿ ಕಾಟಮದೇವರ ಕೇಂದ್ರವಿದೆ. ಇವುಗಳಲ್ಲಿ ಯರಬಳ್ಳಿ ತಾಳಪಟ್ಟಿ ಕಟ್ಟೆಮನೆಗೆ ಸೇರುತ್ತದೆ. ಇಕ್ಕನೂರು ರಾಮನಹಳ್ಳಿ ಕಟ್ಟೆಮನೆಗೆ ಸೇರುತ್ತದೆ. ಸೋಮನವರ ಗೊಲ್ಲರು, ಬೊಮ್ಮನವರ ಗೊಲ್ಲರು, ಕೋಣವನರ ಗೊಲ್ಲರು, ಪೋಲನವರ ಗೊಲ್ಲರು–ಇಷ್ಟು ಬೆಡಗಿನವರನ್ನು ಬಿಟ್ಟು ಉಳಿದ ಎಲ್ಲಾ ಬೆಡಗಿನ ಗೊಲ್ಲರು ಕಾಟಮದೇವರನ್ನು ಪೂಜೆ ಮಾಡುತ್ತಾರೆ. ರಾಮನಹಳ್ಳಿ ಕಟ್ಟೆಮನೆಗೆ ಸೇರಿದ ಎಲ್ಲಾ ಬೆಡಗಿನವರೂ ಕಾಟಮದೇವರನ್ನು ಪೂಜಿಸುತ್ತಾರೆ. ಚಳ್ಳಕೆರೆ ತಾಲ್ಲೂಕು ಚನ್ನಮ್ಮನಾಗತಿ ಹಳ್ಳಿಯಲ್ಲಿ ಕೇತೇದೇವರ ಕೇಂದ್ರವಿದೆ. ಪೋಲನವರ ಗೊಲ್ಲರು ಮಾತ್ರ ಈ ದೇವತೆಗೆ ನಡೆದುಕೊಳ್ಳುತ್ತಾರೆ. ಈ ಆರು ಗಂಡುದೇವತೆಗಳು ಮಾತ್ರವಲ್ಲದೆ ಕಾಡುಗೊಲ್ಲರು ಒಂದು ಹೆಣ್ಣುದೇವತೆಯನ್ನು ಪೂಜಿಸಿರುತ್ತಾರೆ. ಈ ದೇವತೆ ಮಾಯೆಯ ಸ್ವರೂಪದವಳು. ಭಾಗವತದಲ್ಲಿ ವಸುದೇವ ಶ್ರೀಕೃಷ್ಣನನ್ನು ಯಶೋದೆಯ ಬಳಿಯಲ್ಲಿ ಮಲಗಿಸಿ, ಅವಳ ಮಗುವಾದ ಮಾಯೆಯನ್ನು ಎತ್ತಿಕೊಂಡು ಬಂದು ದೇವಕಿಯ ಬಳಿಯಲ್ಲಿ ಮಲಗಿಸುತ್ತಾನೆ. ಕಂಸ ಆ ಮಾಯೆಯನ್ನು ಬಂಡೆಗೆ ಅಪ್ಪಳಿಸಲು ಹೋದಾಗ ಅವಳು ಅವನ ಕೈಯಿಂದ ತಪ್ಪಿಸಿಕೊಂಡು ಆಕಾಶಮಾರ್ಗದಲ್ಲಿ ಹಾರಿ ಮಾಯವಾಗು ತ್ತಾಳೆ. ಈ ಮಾಯೆಯನ್ನೇ ಕಾಡುಗೊಲ್ಲರು ಗೌರಸಂದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇಓಬೇಬನಹಳ್ಳಿ ಮಾರಮ್ಮ, ಗೊಲ್ಲಹಳ್ಳಿಯಮ್ಮ ಎಂಬ ಬೇರೆ ಬೇರೆ ಹೆಸರುಗಳಿಂದ ಬೇರೆ ಬೇರೆ ಪ್ರದೇಶಗಳಲ್ಲಿ ಪೂಜೆ ಮಾಡುತ್ತಾರೆ. ಈ ದೇವತೆ ಎತ್ತಪ್ಪ, ಜುಂಜಪ್ಪ ದೇವತೆಗಳಿಗೆ ತಂಗಿಯಾಗುತ್ತಾಳೆ ಎಂದು ನಂಬುತ್ತಾರೆ. ಒಂದೊಂದು ಪ್ರದೇಶದಲ್ಲಿ ಒಂದೊಂದು ಹೆಸರಿನಿಂದ ಬೂತಪ್ಪನನ್ನೂ ಪೂಜಿಸುತ್ತಾರೆ. ಪುರಲಹಳ್ಳಿಯ ಬೂತಪ್ಪ ಇವುಗಳಲ್ಲೆಲ್ಲಾ ಹೆಚ್ಚು ಪ್ರಸಿದ್ಧವಾದುದು. ಈ ಪ್ರಮುಖವಾದ ದೇವತೆಗಳು ಮಾತ್ರವಲ್ಲದೆ ಕೆಲವು ಚಿಕ್ಕಪುಟ್ಟ ದೇವತೆಗಳನ್ನು ಇವರು ಪೂಜಿಸುತ್ತಾರೆ. ಯಾರಾದರೂ ಒಬ್ಬ ಪೂಜಾರಿ ಉನ್ನತಮಟ್ಟದ ವ್ಯಕ್ತಿಯಾಗಿದ್ದರೆ ಅವನ ಹೆಸರಿನಲ್ಲಿ ಒಂದು ಕತ್ತಿಯನ್ನು ಮಾಡಿಸಿ ಆ ಕತ್ತಿಯನ್ನೇ ದೇವರೆಂದು ಪೂಜಿಸುತ್ತಾರೆ. ಹೀಗೆ ಕತ್ತಿ ಮಾಡಿಸುವುದನ್ನು 'ಆಲಗು ಹುಯ್ಯಿಸುವುದು' ಎಂದು ಕರೆಯುತ್ತಾರೆ. ಪೂಜಾರಿ ಸತ್ತ ಮೇಲೆ ಅವನ ಸಮಾಧಿಯನ್ನೇ ಪೂಜೆ ಮಾಡುತ್ತಾರೆ. ಈ ರೀತಿ ದೇವರಾಗುವ ವ್ಯಕ್ತಿ ಕೇವಲ ಪೂಜಾರಿಯೇ ಆಗಿರಬೇಕೆಂಬ ನಿಯಮವಿಲ್ಲ. ಪರಾಕ್ರಮಶಾಲಿಯಾದ ಒಬ್ಬ ಕಾಡುಗೊಲ್ಲ ಮಹತ್ವಪೂರ್ಣವಾದ ಯಾವುದಾದರೂ ಕೆಲಸ ಮಾಡಿ ತೀರಿಕೊಂಡರೆ ಅವನ ಸಮಾಧಿಯನ್ನು ಪೂಜಿಸುತ್ತಾರೆ. ಕಾಲಕ್ರಮೇಣ ಇಂಥ ವ್ಯಕ್ತಿಗಳನ್ನೇ ದೇವರೆಂದು ಭಾವಿಸಿ, ದೇವಸ್ಥಾನ ಕಟ್ಟಿ ಪೂಜಿಸುತ್ತಾರೆ. ವೀರಣ್ಣ, ಅಜ್ಜಪ್ಪ, ಸಿರಿಯಪ್ಪ, ಯರ್ರಪ್ಪ ಮೊದಲಾದವು ಇಂತಹ ದೇವರುಗಳು.

ಈ ದೇವತೆಗಳ ಸ್ವರೂಪ ಹೇಗಿರುತ್ತದೆ ಎಂಬುಧು ಕುತೂಹಲಕರವಾದ ಅಂಶ. ಕೆಲವರು ಲಿಂಗವನ್ನು, ಕೆಲವರು ಬಾಣವನ್ನು, ಕೆಲವರು ಬಡಿಕೋಲನ್ನು ದೇವರೆಂದು ಪೂಜಿಸುತ್ತಾರೆ. ಹೀಗೆಯೇ ಕಠಾರಿ, ತಾಮ್ರದ ಜಯರೇಖೆ, ಗಂಟೆ, ಧೂಪಾರತಿ, ಗಡಿಗೆ, ಕೇಲು ಮೊದಲಾದ ವಸ್ತುಗಳೂ ದೇವರ ಸಂಕೇತಗಳು. ಈ ಸಂಕೇತಗಳನ್ನೇ ದೇವರೆಂದು ಪೂಜೆ ಮಾಡುತ್ತಾರೆ. ಕಾಡುಗೊಲ್ಲರ ಪುರಾಣಗಳಲ್ಲಿ ಎತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ, ಮೊದಲಾದ ದೇವತೆಗಳು ಮಾನವರೂಪದಲ್ಲಿ ಚಿತ್ರಿಸಲಾಗಿದೆ. ಆದರೆ ಇವರು ಪೂಜಿಸುವುದು ವಸ್ತುಗಳನ್ನೇ ಹೊರತು ಮಾನವ ರೂಪದ ವಿಗ್ರಹಗಳನ್ನಲ್ಲ. ಇದು ಬಹುಮುಖ್ಯವಾದ ಅಂಶ. ಭಾರತದ ಬಹುಪಾಲು ಬುಡಕಟ್ಟುಗಳಲ್ಲಿ ವಸ್ತುಪೂಜೆ ಹೆಚ್ಚು ಬಳಕೆಯಲ್ಲಿದೆಯೆಂದೂ, ಮಾನವರೂಪಾರೋಪಣೆ ಅಪರೂಪವೆಂದು ವೆರಿಯಲ್ ಎಲ್ವಿನ್ ಅವರು ಗುರುತಿಸುತ್ತಾರೆ. "In tribal India anthropomorphic images of Gods are rare. The Baigas make no image of Nanga Baiga, though they picture him in all too human terms; the Murias do not attempt carvins of Lingo pen, the heroic founder of their tribe" ಕಾಡುಗೊಲ್ಲರ ಪ್ರಮುಖ ದೇವರುಗಳಲ್ಲಿ ಮೂಲದೇವರಿಗೆ ಒಂದು ದೇವಸ್ಥಾನ, ಉತ್ಸವ ದೇವರಿಗೆ ಒಂದು ದೇವಸ್ಥಾನ ಇರುತ್ತದೆ. ಉತ್ಸವದ ದೇವರಿಗೆ ಒಡವೆಗಳನ್ನೂ ಹಾಕಿರುತ್ತಾರೆ. ಈ ದೇವತೆಗಳಿಗೆ ಛತ್ರಿ, ಕಠಾರಿ ಮೊದಲಾದವನ್ನು ಜೋಡಿಸಿರುತ್ತಾರೆ. ದೇವರುಗಳನ್ನು ಕದಿಯುವುದೂ, ಪೂಜಾರಿ ಪಟ್ಟಕ್ಕೆ ಜಗಳ ಮಾಡುವುದೂ ಇವರಲ್ಲಿ ಹೆಚ್ಚು. ಈಚೀಚೆಗೆ ಕಾಡುಗೊಲ್ಲರು ಇತರರನ್ನು ಅನುಕರಿಸಿ, ಉತ್ಸವ ದೇವತೆಗಳ ವಿಗ್ರಹಗಳನ್ನು ಮಾಡಿಸುತ್ತಿದ್ದಾರೆ.

**ಕಾಡುಗೊಲ್ಲರ ಸೀಮಾಪದ್ಧತಿಯೊಳಗೆ ಈರಗಾರ-ಈರಗಾರತಿಯರ ಕತೆಗಳು**

ಈರಗಾರ-ಈರಗಾರತಿಯರು ಕಾಡುಗೊಲ್ಲ ಸಮುದಾಯದಲ್ಲಿ ಅವರ ಸೀಮಾವಲಯ ಮತ್ತು ಪಶುಗಳ ರಕ್ಷಣೆಯ ಕಾರಣಕ್ಕಾಗಿ ಹೋರಾಡಿ ಮಡಿದ ವೀರರು ಪ್ರಸ್ತುತದಲ್ಲಿ ದೈವಗಳಾಗಿ ಗುಡಿ, ಪೆಟ್ಟಿಗೆ ದೇವರು ಮತ್ತು ಹಲಗುಗಳನ್ನು ಮಾಡಿಸಿ ರೊಳ್ಳೆಯಲ್ಲಿ ಸ್ಥಾಪಿಸಿ ಪೂಜಿಸಲಾಗುತ್ತಿದೆ. ವೀರ ಪದವು ಹಾಡು ಭಾಷೆಯಲ್ಲಿ ಈರ ಪದವಾಗಿದೆ. ಕಾಡುಗೊಲ್ಲರ ಸಮುದಾಯಗಳಲ್ಲಿ ಈ ತರಹದ ಸೀಮಾದೈವಗಳು ಪ್ರತಿ ಹಟ್ಟಿಗಳಲ್ಲಿ ಕಂಡುಬರುತ್ತವೆ.

ಈರಗಾರ-ಈರಗಾರತಿ ದೈವಗಳ ಪಟ್ಟಿಯನ್ನು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿ ಇಲ್ಲಿ ನೀಡಲಾಗಿದೆ.

**1. ತೋರಣಗಟ್ಟೆ ಮಲ್ಲಜ್ಜ:** ನೂರಾರು ವರ್ಷಗಳ ಹಿಂದೆ ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕಿನ ತೋರಣಗಟ್ಟೆಯಲ್ಲಿ ಈತ ತಮ್ಮ ದನಗಳ ರಕ್ಷಣೆಗೆ ಹುಲಿಯೊಟ್ಟಿಗೆ ಹೋರಾಡಿ 1883ರಲ್ಲಿ ಮಡಿದಿದ್ದ, ಅಲ್ಲಿ ಈತನ ಗುಡಿ ಇದೆ. ಮೇಲಜ್ಜನ ಹೆಸರಲ್ಲಿ ಜಾತ್ರೆಯು ನಡೆಯುತ್ತದೆ.

**2. ಸಾಣೆಕೆರೆ ಗಟ್ಟಣ್ಣ:** ಹಿರಿಯೂರು ತಾಲ್ಲೂಕಿನ ಸಾಣೆಕೆರೆ ಗೊಲ್ಲರಹಟ್ಟಿ ಸಮುದಾಯಕ್ಕಾಗಿ ಹೋರಾಡಿದ ಈತನ ಹೆಸರಲ್ಲಿ ಅಲಗು ಮಾಡಿಸಿ ಪೂಜಿಸಲಾಗುತ್ತಿದೆ.

**3. ವೀರ ಮುದ್ದಣ್ಣ:** ಶಿರಾ ತಾಲ್ಲೂಕಿನ ಹೇಮದೊರೆಯ ಈತ, ತಮ್ಮ ಸೀಮೆಯಲ್ಲಿನ ದನ ಕರುಗಳ ರಕ್ಷಣೆಗಾಗಿ ಬ್ಯಾಡರ ವಿರುದ್ಧ ಹೋರಾಡಿ ಮಡಿದವ.

**4. ಮದನಕುಂಟೆ ಯರ‍್ರಪ್ಪ:** ಹಿರಿಯೂರು ತಾಲ್ಲೂಕಿನ ಮದನಕುಂಟೆ ಹಟ್ಟಿಯ ದನ ಕರುಗಳನ್ನು ತುರುಕರು(ಸಾಬ್ರು)ಕದ್ದೊಯ್ಯುತ್ತಿದ್ದಾಗ ಅದರ ರಕ್ಷಣೆಗಾಗಿ ತಾನು ಸಾಕಿದ್ದ ಕಾಳಿಂಗ ಎಂಬ ಜೂಲುನಾಯಿಯೊಂದಿಗೆ ಹೋರಾಡಿ ಮಡಿದ. ಈತನ ಮತ್ತು ನಾಯಿಯ ಸಮಾಧಿ ಮತ್ತು ಗುಡಿ ಮದನಕುಂಟೆ ಗೊಲ್ಲರಹಟ್ಟಿಯಲ್ಲಿ ಇದೆ.

**5. ಕುಂಬಾರಳ್ಳಿ ಅಜ್ಜಪ್ಪ:** ಶಿರಾ ತಾಲ್ಲೂಕಿನ ಬುಕ್ಕಾಪಟ್ಟಣ ಸಮೀಪದಲ್ಲಿ ಈತನ ಗುಡಿ ಕಟ್ಟಲಾಗಿದೆ.

**6. ಗೌನಹಳ್ಳಿ ಕರುವಿನ ಮಲ್ಲಪ್ಪ:** ಹಿರಿಯೂರು ತಾಲ್ಲೂಕಿನ ಗೌನಹಳ್ಳಿಯಲ್ಲಿ ಈತ ಮಳೆ ಬಂದು ಕೆರೆ ತುಂಬಿ ಕರುಗಳು ಉಳಿದರೆ ರುಂಡ ಕೊಡುವುದಾಗಿ ಹರಕೆ ಹೊತ್ತು ಕೆರೆ ತುಂಬಿದ ನಂತರ ರುಂಡ ಕತ್ತರಿಸಿಕೊಂಡು ದನ ಕರು ಹಟ್ಟಿಗಾಗಿ ತನ್ನನ್ನು ಕೆರೆಗೆ ಹಾರ ಮಾಡಿಕೊಂಡ ತ್ಯಾಗಮೂರ್ತಿ.

**7. ದೇವರ ಮಾರಪ್ಪ:** ಹಿರಿಯೂರು ತಾಲ್ಲೂಕು ದಿಂಡಾವರ ಸಮೀಪ ಈ ಈರಗಾರನ ಹೆಸರಲ್ಲಿ ದೇವರ ಮಾರಪ್ಪನ ಹಟ್ಟಿಯಿದೆ. ಅಲ್ಲಿ ಭರಣಿ ಗುಡಿ ಕಟ್ಟಿ ಪೂಜಿಸಲಾಗುತ್ತಿದೆ.

**8. ಹಿರಿಯೂರು ಗೌಡ:** ಬ್ಯಾಡರ ಬೋರಿ ಜೊತೆ ಹೋರಾಡಿ ಮಡಿದವ.

**9. ಗಿಡ್ಡಮ್ಮ:** ಶಿರಾ ತಾಲ್ಲೂಕಿನ ಗೌಡಿಹಳ್ಳಿ ಬಳಿಯಿರುವ ರಂಗನಾಥಸ್ವಾಮಿ ಗುಡಿ ಬಳಿ ಈಕೆಯ ಪೌಳಿ ಗುಡಿ ಕಟ್ಟಿ ಪೂಜಿಸುತ್ತಾರೆ.

**10. ತಂಗಮ್ಮ, ಈರ ಮಾಸ್ತಮ್ಮ, ಈರೋಬಿ, ಕೊಂಡದ ಕಾಟವ್ವ** ಇವರು ಕೊಂಡ ಹೊಕ್ಕು ಮಹಾಸತಿಯಾದವರು.[6]

- ಭರಮಗಿರಿ ಈರಣ್ಣನ ಮುತ್ತುಗಳು: ಭರಮಗಿರಿಯಲ್ಲಿ ಈತನ ಅಲರು ಇದೆ
- ಹೆಪ್ಪಪ್ಪ–ಮಂಗಣ್ಣ–ಇವರ ಅಲಗು ಶಿರಾ ತಾಲ್ಲೂಕಿನ ಆರೋಗೆರೆಯಲ್ಲಿದೆ
- ಸಾಲಾವಳಿ ಈರಮಾರಣ್ಣ–ಈತನ ಅಲಗು ಹೊಸದುರ್ಗ ತಾಲ್ಲೂಕಿನ ಕಂಚೀಪುರದಲ್ಲಿದೆ
- ಬಿಕ್ಕಲತಿಪ್ಪೆ ಈರಣ್ಣ–ಕಂಬದೂರಲ್ಲಿ ಅಲಗು ಇದೆ.
- ವೀರ ಮುದ್ದಣ್ಣ–ಶಿರಾ ತಾಲ್ಲೂಕಿನ ಹೇಮ ದೊರೆಯಲ್ಲಿ ಈತನ ಅಲಗು ಇದೆ.

- ಹೆಬ್ಬೂರು ಚಿಕ್ಕಣ್ಣ–ದೊಡ್ಡ ಬಳವನಹಳ್ಳಿಯಲ್ಲಿ ಈತನ ಅಲಗು ಇದೆ.
- ಸಿಂಪಣ್ಣ: ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಯರಬಳ್ಳಿ ಗೊಲ್ಲರ ಹಟ್ಟಿಯಲ್ಲಿ ಸಿಂಪಣ್ಣನ ಅಲಗು ಇದೆ.
- ಹುಲಿಮುದ್ದಣ್ಣ: ಶಿರಾ ತಾಲ್ಲೂಕಿನ ಶೀಬಿ ಸಮೀಪದ ಹುಂಜನಾಳು ಬಳಿಯ ಸೀಬಯ್ಯನ ಪಾಳ್ಯದ ಬಳಿ ಈತನ ಸಮಾದಿ ಇದೆ. ಅಲ್ಲೆ ಹುಂಜನಾಳು ಬಳಿ ಎತ್ತಪ್ಪನ ಹಟ್ಟಿಯಲ್ಲಿ ಈತನ ಅಲಗು ಇದೆ.
- ಹುಲಿಬಿಲ್ಲಪ್ಪ: ಚಳ್ಳಕೆರೆ ತಾಲ್ಲೂಕಿನ ಪರಶುರಾಮಪುರದ ಬಳಿ ಪುಟ್ಲೋರಹಳ್ಳಿಯಲ್ಲಿ ಅವನ ಸಮಾದಿ ಮತ್ತು ಅಲಗು ಇದೆ.
- ಹಾಲಣ್ಣ: ಕುಣಿಗಲ್ ಬಳಿ ಈತನ ಅಲಗು ಇದೆ.
- ಬೆಟ್ಟದ ಈರಪ್ಪ: ಪಾವಗಡ ತಾಲ್ಲೂಕಿನ ಜಂಗಮರಳ್ಳಿಯಲ್ಲಿ ಈತನ ಸಮಾದಿ ಮತ್ತು ಅಲಗು ಇದೆ.
- ಹಂದಿಸಿರಿಯಣ್ಣ: ಚಳ್ಳಕೆರೆ ತಾಲ್ಲೂಕಿನ ತಿಮ್ಮನಾಯಕನ ಕೋಟೆಯ ಬಳಿ ಈತನ ಸಮಾಧಿ ಮತ್ತು ಅಲಗು ಇದೆ.
- ಸಾಣೆಕೆರೆ ಚಿಕ್ಕಣ್ಣ: ಚಳ್ಳಕೆರೆ ತಾಲ್ಲೂಕು ಸಾಣೆಕೆರೆ ಗೊಲ್ಲರ ಹಳ್ಳಿಯಲ್ಲಿ ಈತನ ಅಲಗು ಇದೆ.
- ಈರನಾಗಣ–ಈರತಿಮ್ಮಪ್ಪ: ಶಿರಾ ತಾಲ್ಲೂಕಿನ ಯರಬಳ್ಳಿ ಗೊಲ್ಲರಟ್ಟಿಯಲ್ಲಿ ಇವರ ಅಲಗು ಇದೆ.
- ಕೆಂಗಪ್ಪಣ್ಣಜ್ಜ: ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಗುಡ್ಡೇನಹಳ್ಳೀ ಚಿತ್ರದೇವರ ಗೊಲ್ಲರಟ್ಟಿಯಲ್ಲಿ ಈತನ ಅಲಗಿದೆ.
- ಯೋಗಜ್ಜ: ಜಗಳೂರು ತಾಲ್ಲೂಕಿನ ಸಕಲಾಪುರದ ಗೊಲ್ಲರ ಹಟ್ಟಿಯಲ್ಲಿ ಈತನ ಅಲಗಿದೆ.
- ಕೊಂಡದ ಕಾಟವ್ವ: ಹಿರಿಯೂರು ತಾಲ್ಲೂಕಿನ ಹರ್ತಿಣಕೋಟೆ ಕೊಂಡ ಹಾರಿದಾಕೆ. ಅಲ್ಲಿ ಪುಟ್ಟ ಗುಡಿ ಇದೆ.

**ಕಾಡುಗೊಲ್ಲರಲ್ಲಿನ ಸೀಮಾಪದ್ಧತಿ: ಈರಗಾರ ಈರಗಾರ್ತಿಯರ ಹಿನ್ನೆಲೆ**

ಬಯಲುಸೀಮೆಯ ಆದಿವಾಸಿಗಳಲ್ಲಿನ ಸೀಮಾಪದ್ಧತಿಯು ಪಶ್ಚಿಮಘಟ್ಟದ ಕಾಡಿನ ಸೀಮಾಪದ್ಧತಿಗಳಿಗಿಂತ ಭಿನ್ನವಾದದ್ದು. ಬೇಟೆ ಮತ್ತು ಪಶುಪಾಲನೆಯ ಹಿನ್ನೆಲೆಯಲ್ಲಿ ಕುರುಚಲು

ಹುಲ್ಲುಗಾವಲಿನ ಪ್ರದೇಶದಲ್ಲಿನ ಸೀಮಾಪದ್ಧತಿಯು ಕಾಡಿನ ಆಹಾರ ಸಂಗ್ರಹಣೆ, ಬೇಟೆ, ಕಾಡಿನ ಕಿರು ಅರಣ್ಯ ಉತ್ಪತ್ತಿಯ ಸಂಪನ್ಮೂಲಗಳಿಗಾಗಿ ಉಂಟಾಗಿರುವ ಸೀಮಾಪದ್ಧತಿಗಿಂತ ಬಯಲು ಸೀಮೆಯ ಹುಲ್ಲುಗಾವಲಿನ ಸೀಮಾಪದ್ಧತಿ ಕೊಂಚ ವಿಕಸಿತವಾಗಿದೆ. ಇದು ನಾಗರಿಕ ಬದುಕಿನತ್ತ ಹೆಜ್ಜೆ ಹಾಕಿ, ಮುಖ್ಯವಾಹಿನಿಯತ್ತ ಚಲಿಸಿದ ಹಾಗೂ ಸಾಮ್ರಾಜ್ಯಗಳ ಸಂಪರ್ಕಕ್ಕೆ ತೆರೆದುಕೊಂಡು ಪಾಳೇಗಾರಿಕೆ, ಉಂಬಳಿಗಮಾನ್ಯ ಪದ್ಧತಿಯಂತಹ ನಾಗರಿಕ ರಾಜಕೀಯ ವ್ಯವಸ್ಥೆಗೆ ಒಳಗಾದಂತಹ ಸೀಮಾಪದ್ಧತಿಯನ್ನು ಕಾಡುಗೊಲ್ಲ ಮತ್ತು ಮ್ಯಾಸಬೇಡ ಸಮುದಾಯಗಳಲ್ಲಿ ಕಾಣಬಹುದಾಗಿದೆ.

ಕಾಡುಗೊಲ್ಲರು ಮತ್ತು ಮ್ಯಾಸಬೇಡರು ತಮ್ಮ ಸೀಮಾಗಡಿಗಳು ಮತ್ತು ರಕ್ಷಣೆಯ ವಲಯ ಕ್ಷೇತ್ರವನ್ನು ಬಹಳ ಮುಖ್ಯವಾಗಿ ಪಶುಗಳ ರಕ್ಷಣೆಯ ಸಲುವಾಗಿ ನಿರ್ಮಾಣ ಮಾಡಿಕೊಂಡಿರುವುದನ್ನು ಕಾಣಬಹುದಾಗಿದೆ. ತದನಂತರ ಯಾವಾಗ ಕೃಷಿ ಮತ್ತು ಪಾಳೇಗಾರಿಕೆ ಕಾಲಕ್ರಮೇಣ ಈ ಸಮುದಾಯಗಳಲ್ಲಿ ಬದಲಾವಣೆಗಳಾದವೋ ಆಗಿನಿಂದ ಸೀಮಾ ಗಡಿಗಳು ಉಂಬಳಿಗಮಾನ್ಯ ದಿಕ್ಕಿನತ್ತ ಬದಲಾಗಿದ್ದನ್ನು ಗಮನಿಸಬಹುದು. ಸಾಮ್ರಾಜ್ಯಗಳ ಅಧೀನದಲ್ಲಿರುವ ಪಾಳೇಗಾರರಿಗೆ ದೊರೆಗಳ ಪಟ್ಟ ಕಟ್ಟಿ ಇಂತಿಷ್ಟು ಹಟ್ಟಿಗಳಿಂದ ಪಶುಪಾಲನೆ ಮತ್ತು ಕೃಷಿ ಆದಾಯಗಳಿಂದ ತೆರಿಗೆ ಸಂಗ್ರಹ ಮಾಡಲು 'ಕಟ್ಟೆಮನೆ'(ಕಟ್ಲೆಮನೆ)ಗಳನ್ನು ರಚಿಸಲಾಯಿತು. ಒಂದೊಂದು ಕಟ್ಟೆಮನೆಗಳಿಗೆ 30–40 ಹಳ್ಳಿಗಳೂ ಒಳಪಟ್ಟು ಅಷ್ಟು ಹಳ್ಳಿಗಳಿಂದ ಶೇಖರಿಸಲಾದ ತೆರಿಗೆಯ ಕಪ್ಪವನ್ನು ವಿಜಯನಗರದರಸರ ಸಾಮ್ರಾಜ್ಯಶಾಹಿಗಳಿಗೆ ಒಪ್ಪಿಸಬೇಕಾಗಿತ್ತು. ಹಾಗಾಗಿ ಹಟ್ಟಿಗಳಲ್ಲಿ ವಾಸವಾಗಿರುವ ಆದಿವಾಸಿಗಳು ಯುದ್ಧಗಳ ಸಂದರ್ಭದಲ್ಲಿ ವೈರಿಗಳ ವಿರುದ್ಧ ಸೈನಿಕರಾಗಿಯೂ, ತದನಂತರ ಸಾಮಾನ್ಯ ಪಶುಪಾಲಕರಾಗಿಯೂ ಇರುವ ಎರಡು ಕಸುಬುಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಯಿತು. ಹಾಗಾಗಿ ಈ ಎರಡೂ ಸಮುದಾಯಗಳಲ್ಲಿನ ಸೀಮಾಪದ್ಧತಿಯಲ್ಲಿ ಎರಡು ರೀತಿಯ ಸೀಮಾಪದ್ಧತಿಯನ್ನು ಗುರ್ತಿಸಬಹುದಾಗಿದೆ. 1. ಆದೀಮ ಸ್ವರೂಪದ ಸೀಮಾಪದ್ಧತಿ, 2. ಪಾಳೆಗಾರಿಕೆ ಮತ್ತು ಸಾಮ್ರಾಜ್ಯಗಳು ಸ್ಥಾಪನೆಗೊಂಡ ನಂತರದ ಸ್ಥಿತ್ಯಂತರಗೊಳಪಟ್ಟ ಬದಲಾವಣೆಯ ಸ್ವರೂಪದ ಸೀಮಾಪದ್ಧತಿಯನ್ನು ಕಾಣಬಹುದಾಗಿದೆ.

**1. ಆದಿಮ ಸ್ವರೂಪದ ಸೀಮಾಪದ್ಧತಿಯಲ್ಲಿ ಕಾಡುಗೊಲ್ಲರು**

ಮ್ಯಾಸಬೇಡರ ಸಮುದಾಯದಲ್ಲಿರುವಂತೆ ಕಾಡುಗೊಲ್ಲರಲ್ಲಿಯೂ ಸೀಮಾಪದ್ಧತಿ ಹೆಚ್ಚು ಕಡಿಮೆ ಏಕರೂಪದ ಸೀಮಾಪದ್ಧತಿಯನ್ನು ಗಮನಿಸಬಹುದಾಗಿದೆ. ಎರಡೂ ಸಮುದಾಯಗಳು ಪಶುಪಾಲನೆಯ ರಕ್ಷಣೆ ಮತ್ತು ಅಸ್ತಿತ್ವಕ್ಕಾಗಿ ಪರಸ್ಪರ ಗಡಿಗಳನ್ನು ನಿರ್ಮಿಸಿ ನಿರಂತರವಾಗಿ ಕಚ್ಚಾಡಿಕೊಂಡು ಕದನಗಳಲ್ಲೇ ಬದುಕು ಸವೆಸಿದ ಇತಿಹಾಸ ಅವರ ಜಾನಪದ ಕಾವ್ಯ, ಪುರಾಣಗಳಲ್ಲಿ ಪ್ರತಿ ಹೆಜ್ಜೆ ಹೆಜ್ಜೆಗೂ ಪ್ರತಿಧ್ವನಿಸಿರುವುದನ್ನು ಕಾಣಬಹುದಾಗಿದೆ.

ಮ್ಯಾಸಬೇಡರಲ್ಲಿರುವಂತೆಯೇ ಕಾಡುಗೊಲ್ಲರಲ್ಲಿಯ ಪ್ರಮುಖ ಸೀಮಾದೈವಗಳು ಅವರ ಗಡಿಗಾಗಿ, ದನಕರುಗಳ ರಕ್ಷಣೆಗಾಗಿ ಮ್ಯಾಸಬೇಡರಿಂದ ಇಲ್ಲಿ ಹುಲಿ, ಚಿರತೆ, ತೋಳಗಳಿಂದ ಹೋರಾಡಿ ಮಡಿದವರನ್ನು ದೈವಗಳಾಗಿ ಪೂಜಿಸಲಾಗುತ್ತದೆ. ಹಾಗೆ ಮಡಿದ ವೀರರನ್ನು 'ಈರಗಾರ' 'ಈರಗಾರ್ತಿ' ಎಂದು ಕರೆಯಲಾಗುತ್ತದೆ. ಇವರು ತಮ್ಮ ಸಮುದಾಯಕ್ಕಾಗಿ ಮತ್ತು ಗೋವುಗಳಿಗಾಗಿ ಸರ್ವಸ್ವವನ್ನು ತ್ಯಾಗ ಮಾಡಿ ಜೀವ ಬಿಟ್ಟವರು. ಇವರು ಸಮುದಾಯದ ವೀರರು. ಈ ವೀರನೆಂಬುದು ಆಡುನುಡಿಯಲ್ಲಿ 'ಈರ' ಎಂದು ಬದಲಾಗಿ ಇಂತಹ ಮಹಾಪುರುಷರನ್ನು 'ಈರಗಾರ'ರೆಂದೂ ಮಹಾಮಾತೆಯನ್ನು "ಈರಗಾರ್ತಿ"ಯರೆಂದೂ ಕರೆದು, ಅವರ ಸಮಾಧಿ ಕಟ್ಟಿ ಅದರ ಬಳಿ ಕತ್ತಿ ನೆಡುತ್ತಾರೆ. ಅದನ್ನು 'ಅಲಗು' ಹಾಕಿಸುವುದೆಂದು ಕರೆಯಲಾಗುತ್ತದೆ. ಕೆಲವು ವೇಳೆ ಗುಡಿ ಕಟ್ಟಿ ಪೂಜಿಸಲಾಗುತ್ತದೆ. ಜೊತೆಗೆ ವೀರ ಮತ್ತು ವೀರೆಯರ ನೆನಪಿಗಾಗಿ ಅವರ ವಿಶೇಷ ಮುಖವಾಡಗಳು, ಕತ್ತಿ, ಗಂಟೆ, ಗೋಳಾಕಾರದ ಆಯುಧಗಳನ್ನು ಪುಟ್ಟ ಗುಡಿಯಲ್ಲಿಟ್ಟು ಪೂಜಿಸಲಾಗುತ್ತದೆ. ಜೊತೆಗೆ ವೀರ, ವೀರೆಯ ಬಲಿದಾನದ ಸಂಕೇತವಾಗಿ ಪುಟ್ಟ ಗುಡಿಯ ಪಕ್ಕ ನೆಟ್ಟ ಮರದ ಕೆಳಗೆ ಚಪ್ಪಟೆ ಕಲ್ಲನ್ನು ನೆಟ್ಟು, ಅಲ್ಲಿ ಭೂತಾರಾಧನೆಯನ್ನು ಮಾಡುತ್ತಾರೆ. ಅಲ್ಲಿಗೆ ಭೂತಾರಾಧನೆ, ಭೂತ ಸಂಸ್ಕೃತಿಯು ಕಾಡುಕುರುಬರಲ್ಲಿ ಇರುವುದನ್ನು ಕಾಣಬಹುದು. 'ಭೂತಪ್ಪ' ಇವರ ಪ್ರಮುಖ ಸೀಮಾದೈವಗಳಲ್ಲೊಂದು. ಗೊಲ್ಲರ ಹಟ್ಟಿಗಳಲ್ಲಿ ಈ ಕಾರಣಕ್ಕಾಗಿ ಭೂತಪ್ಪನ ಗುಡಿಗಳಿವೆ. ಭೂತಪ್ಪರಿಗೆ ಕುರಿ ಕೋಳಿಯನ್ನು ಬಲಿ ಕೊಟ್ಟು ಪೂಜಿಸಲಾಗುತ್ತದೆ.

ಹೀಗೆ ಮಡಿದ ವೀರ ವೀರೆಯರ ಬಗ್ಗೆ ಅನೇಕ ಜಾನಪದ ಹಾಡುಗಳನ್ನು ಕಟ್ಟಿ ಹಾಡುವ ಇವರ ಸವಿಸ್ತಾರವಾದ ಜಾನಪದ ರಚನೆಗಳನ್ನು ಜನಪದ ಕಾವ್ಯಗಳೆಂದೂ, ಖಂಡ ಕಾವ್ಯಗಳೆಂದೂ ಹಾಗೂ ಗಣೆ ಕಾವ್ಯಗಳೆಂದೂ ಕರೆಯಬಹುದೆಂದು ಈ ಸಮುದಾಯವನ್ನು ಅಧ್ಯಯನ ಮಾಡಿರುವ ವಿದ್ವಾಂಸರಾದ ಜೀಶಂಪ ಅವರು ಹೇಳಿದ್ದಾರೆ.

**ಕಾಡುಗೊಲ್ಲರಲ್ಲಿರುವ ಸೀಮೆಯ ಹುಟ್ಟು**

ಗೊಲ್ಲರ ಹಟ್ಟಿಗಳೇ ಒಂದು ಸೀಮಿತವಾದ ಸೀಮೆಯಾಗಿದೆ. ಇಡೀ ಹಟ್ಟಿಯನ್ನು ಮುಳ್ಳಿನಿಂದ ಮುಚ್ಚಿ ರಕ್ಷಿಸಲ್ಪಟ್ಟಿರುತ್ತದೆ. ಹಟ್ಟಿಯೊಳಗಿನ ಪ್ರವೇಶಕ್ಕೆ ಅನೇಕ ಕಟ್ಟುಪಾಡುಗಳಿವೆ. ಹಟ್ಟಿಯೊಳಗೆ ಚಪ್ಪಲಿ ಹಾಕಿಕೊಂಡು ಹೋಗುವ ಹಾಗಿಲ್ಲ. ಇತ್ತೀಚಿನವರೆಗೂ ಗೊಲ್ಲರಲ್ಲದವರಿಗೆ ಹಟ್ಟಿಗಳಲ್ಲಿ ಪ್ರವೇಶವಿರಲಿಲ್ಲ. ಈಗಲೂ ದಲಿತರಿಗೆ ಹಟ್ಟಿಯೊಳಗೆ ಪ್ರವೇಶವಿಲ್ಲ. ಅವರ ನೆರಳೂ ಹಟ್ಟಿಯೊಳಗೆ ಬೀಳಕೂಡದು.

ಕಾಡುಗೊಲ್ಲರ ಮೊದಲ ಸಾಂಸ್ಕೃತಿಕ ವೀರ/ದೈವ 'ಎತ್ತಯ್ಯ' ಅಥವಾ 'ಎತ್ತಪ್ಪ' ಮತ್ತು ಜುಂಜಪ್ಪಗಳಾಗಿದ್ದಾರೆ. ಇವರು 'ಅಯೋನಿಜರು'. ಅಂದರೆ ಈರಗಾರರುಗಳ ರೀತಿ ತಾಯಿ

ಗರ್ಭದಿಂದ ಹುಟ್ಟಿದವರಲ್ಲ. ಇವರು ದೇವರ ಅವತಾರ ಪುರುಷರಾಗಿರುವುದರಿಂದ ಇವರ ಹುಟ್ಟುಗಳು ಅಸದೃಶವಾಗಿರುತ್ತವೆ. ನಂಬಿಕೆಯ ಪುರಾಣದ ಕಥೆಗಳಲ್ಲಿ ಅಲೌಕಿಕದ ಬದುಕನ್ನು ಬಿಂಬಿಸುತ್ತವೆ. ಆದರೆ ಎತ್ತಪ್ಪನೆಂಬ ಈ ಕಾಡುಗೊಲ್ಲರ ಪುರುಷ ಕಾಡುಗೊಲ್ಲರಲ್ಲಿ ಪ್ರಪ್ರಥಮವಾಗಿ 'ಸೀಮಾಗಡಿ'ಯನ್ನು ಎಳೆದವನಾಗಿದ್ದಾನೆ. ಅದಕ್ಕೂ ಹಿಂದೆ ಗಡಿ, ಸೀಮೆಗಳಿಗೆ ದಿಕ್ಕು ದೆಶೆ ಎಲ್ಲೆಗಳಿಲ್ಲದೆ, ತಮ್ಮ ಸಮುದಾಯದ ಉತ್ಪನ್ನ ಪಶುಸಂಪತ್ತು ಕಳ್ಳಕಾಕರಿಂದ ದೋಚಲ್ಪಡುತ್ತಿದ್ದಾಗ, ಪ್ರಪ್ರಥಮವಾಗಿ ಇಡೀ ಸಮುದಾಯವನ್ನು ಸಂಘಟಿಸಿ ಅದಕ್ಕೆ ಸೀಮೆಯಯನ್ನು ಹಾಕಿ ಅದಕ್ಕೆ ಜನಾಂಗೀಯ ಸಂವಿಧಾನದ ಚೌಕಟ್ಟುಗಳನ್ನು ಹಾಕಿಕೊಟ್ಟವನೇ ಎತ್ತಪ್ಪ. ಕಾಡಿನಲ್ಲಿ ಪ್ರತ್ಯೇಕವಾಗಿ ಗಡಿಯೊಳಗೆ ಬದುಕುವ ಜನಾಂಗದ ಪಾವಿತ್ರ್ಯವನ್ನು ಉಳಿಸಿಕೊಳ್ಳುವ ಮತ್ತು ಸಮುದಾಯಕ್ಕೊಂದು ನೀತಿ, ನಿಯಮ ಹಾಗೂ ಧಾರ್ಮಿಕ ಚೌಕಟ್ಟನ್ನು ವಿಧಿಸಿ ಇಡೀ ಸಮುದಾಯಕ್ಕೆ ಸಾಂಸ್ಕೃತಿಕ ರಕ್ಷಣೆ ಒದಗಿಸಿ 'ಕುಲ-ನೆಲೆ' ಕೊಟ್ಟವನು ಎತ್ತಪ್ಪ. ಅದಕ್ಕಾಗೇ ಕಾಡುಗೊಲ್ಲರು ತಮ್ಮ ಪ್ರಥಮ ಸೀಮಾಪದ್ಧತಿಗೆ 'ಎತ್ತಪ್ಪನ ಕಟ್ಟು' ಎನ್ನುತ್ತಾರೆ. ಹೀಗೆ ತಮ್ಮ ಸಮುದಾಯಕ್ಕೊಂದು ದಿಕ್ಕು ದೆಶೆ ಗಡಿ ರಚಿಸಿ, ಅನೇಕ ಕಷ್ಟ, ನಷ್ಟ, ವೈರಿಗಳನ್ನು ಎದುರಿಸಿ ತಮಗೆ ಬದುಕಿನ ದಾರಿ ತೋರಿಸಿದ ಪ್ರಥಮ ಸಾಂಸ್ಕೃತಿಕ ವೀರ ಕೇವಲ ಮನುಷ್ಯನಾದನು ಹೇಗೆ? ಎಂಬ ನಂತರದ ಪೀಳಿಗೆಯ ಜನಗಳಿಗೆ ಅನ್ನಿಸಿ ಆತ ಅವತಾರ ಪುರುಷನೆಂಬ ಪುರಾಣ ಕಥೆಯನ್ನು ಸೃಷ್ಟಿ ಮಾಡಿರಬಹುದೆಂಬುದು ನನ್ನ ಊಹೆಯಾಗಿದೆ.

**ಎತ್ತಪ್ಪನ ಸೃಷ್ಟಿ ಕಥೆ**

ಬಹಳ ಹಿಂದೆ ಅರೇರಾಯ, ಬೊರೆರಾಯ ದನಗಾಹಿಗಳ ಮಕ್ಕಳಾದ ಅಂಬೆರಾಯ-ತುಂಬೆರಾಯರಿಗೆ ಮದುವೆಯಾಗದ ಕಾರಣ ಮಕ್ಕಳಿರಲಿಲ್ಲ. ವಯಸ್ಸಾದಾಗ ತಮ್ಮ ಅಪಾರ ಸಂಖ್ಯೆಯ ಎತ್ತುಗಳನ್ನು ನೋಡಿಕೊಳ್ಳುವುದು ಹೇಗೆ ಎಂಬ ಬಾಧೆ ಕಾಡಿ ಚಿಂತಿಸುತ್ತಿರುವಾಗ ಅಲ್ಲಿಗೆ ಬಂದ ಗೌರಸಂದ್ರ ಮಾರಕ್ಕ, ನನಗೆ ಕುರಿಕೋಳಿ ಬಲಿ ನೀಡಿ ಜಾತ್ರೆ ಮಾಡೋದಾದರೆ ಕೈಲಾಸಕ್ಕೆ ಹೋಗಿ ಶಿವನ ಎತ್ತುಗಳನ್ನು ಸಾಕುತ್ತಿರುವ ಎತ್ತಪ್ಪನನ್ನು ಒಪ್ಪಿಸಿ ತರುತ್ತೇನೆಂದು ಭಾಷೆ ತೆಗೆದುಕೊಂಡು ಶಿವನಲ್ಲಿ ಹೋಗಿ ಹಟ ಹಿಡಿದು ಒಲಿಸಿ ಭೂಮಿಗೆ ತಂದು 'ಅಂಬೆರಾಯ-ತುಂಬೇರಾಯರಿಗೆ' ನೀಡಿದವಳು ಗೌರಸಮುದ್ರದ ಮಾರಕ್ಕ. ಹಾಗಾಗಿ ಶಿರಾ ತಾಲ್ಲೂಕಿನ ಗೌರ ಸಮುದ್ರದಲ್ಲಿರುವ ಮಾರಮ್ಮನಿಗೆ ಸಾವಿರಾರು ಕುರಿಕೋಳಿ ಬಲಿ ನೀಡಿ ಇಂದಿಗೂ ವಿಜೃಂಭಣೆಯ ಜಾತ್ರೆ ನಡೆಸಿಕೊಂಡು ಬರಲಾಗುತ್ತಿದೆ.

ಈ ಎತ್ತಪ್ಪ ಶಿವನೆತ್ತುಗಳನ್ನು ಕಾಯಲು ಹೋದದ್ದು ಮತ್ತೊಂದು ಪುರಾಣ ಕತೆ. ಕರಿಯೋಬೆನಹಳ್ಳಿ ಮಾರಕ್ಕನ ಉದ್ಯಾನವನದಲ್ಲಿ, ಪ್ರತಿ ರಾತ್ರಿ ಹುಲ್ಲನ್ನು ಹಸುವೊಂದು ಕದ್ದು ತಿನ್ನುತ್ತಿತ್ತಂತೆ. ಯಾವುದಿರಬೇಕೆಂದು ಪ್ರತಿ ರಾತ್ರಿ ಕಾದು ಕುಳಿತಾಗ ದೇವಲೋಕದಿಂದ ಪಂಚಕಲ್ಯಾಣಿ

ಶಿವನ ಆಕಳೆಂದು ತಿಳಿದಳಂತೆ. ತಕ್ಷಣ ಹೊಸ ಸ್ವಾರೆ ತಂದು ತೊಳೆದು ಅದರಲ್ಲಿ ಕುಡಿಯಲು ನೀರಿಟ್ಟಳಂತೆ. ನೀರು ಕುಡಿದ ಶಿವನ ಹಸು ಸ್ವರೆ ತುಂಬ ಹಾಲು ಸೊರಬಿಟ್ಟ ಹೋಯಿತಂತೆ. ಹೀಗೆ ದಿನಾ ಬರುತ್ತಿದ್ದ ಹಸುವು ಪ್ರತಿದಿನ ಸ್ವಾರೆಯೊಳಗೆ ಹಾಲು ತುಂಬಿಸಿದ್ದನ್ನು ಕಾಸಿ ಹೆಪ್ಪಿಟ್ಟು, ಮೊಸರು ಕಡೆದು, ಬೆಣ್ಣೆ ತೆಗೆದು ಕಾಸಿ ಬಂದ ತುಪ್ಪ ಮಡಿಕೆಯಲ್ಲಿ ಹಾಕಿ ನೆಲವಿನಲ್ಲಿ ಹಾಕಿಟ್ಟಳಂತೆ. ಹಾಗೆ ಹಾಕಿಟ್ಟ ತುಪ್ಪದೊಳಗೆ ಪುಟ್ಟ ಶಿಶು ಆಡುತ್ತಿತ್ತಂತೆ. ಆ ಶಿಶುವನ್ನು ತೆಗೆದುಕೊಳ್ಳುವಾಗ ಮಗು ಜಾರಿ ಹುತ್ತದ ಮೇಲೆ ಬಿತ್ತಂತೆ. ಕೆಳಗೆ ಬಿದ್ದ ಮಗುವನ್ನು ಎತ್ತಿರೋ ಅಯ್ಯನ್ನ ಎತ್ತಯ್ಯ, ಅಂದು ಅದೇ ಹೆಸರಿಟ್ಟರಂತೆ. ಈತನನ್ನು ಶಿವ ತನ್ನ ಗೋಮಂದೆಯನ್ನು ಕಾಯಲೂ ಇಟ್ಟುಕೊಂಡಿದ್ದನಂತೆ. ಇಂತಹ ಎತ್ತಪ್ಪನನ್ನು ಕಾಡಿಬೇಡಿದ ಗೌರಸಮುದ್ರದ ಮಾರಕ್ಕ ಭೂಲೋಕಕ್ಕೆ ತಂದ ಅಂಬೆಕಾರಾಯ ತುಂಬೆರಾಯರಿಗೆ ದನ ಕಾಯುವ ಕೀಲಾರಿಯಾಗಿ ಕೊಡುತ್ತಾಳೆ. ಹೀಗೆ ಬೆಳೆದುಕೊಂಡು ಹೋಗುವ ಪುರಾಣ ಕತೆಯ ಎತ್ತಪ್ಪ ಮುಂದೆ ಇಡೀ ಕಾಡುಗೊಲ್ಲ ಸಮುದಾಯದ ಸಾಂಸ್ಕೃತಿಕ ರಕ್ಷಣೆ ಹೊತ್ತ ಕಾಯಕನಾಗಿ ಅವರ ಸೀಮಾವಲಯ ಕ್ಷೇತ್ರಕ್ಕೆ ಹಾಡಿಗಳನ್ನು, ಕುಲಕ್ಕೆ ನೆಲೆಯನ್ನು, ಸಂಘಟನೆಯನ್ನು ನೀತಿ ನಿಯಮಾವಳಿ, ನ್ಯಾಯಕಟ್ಟೆ ಮಾಡಿ ಬದುಕಿಗೆ ದಾರಿಮಾರ್ಗ ತೋರಿಸಿದ ಸಾಂಸ್ಕೃತಿಕ ವೀರನಾಗಿ ದೈವತ್ವ ಪಡೆಯುತ್ತಾನೆ.

**ಮತ್ತೊಬ್ಬ ಸಾಂಸ್ಕೃತಿಕ ವೀರ ಜುಂಜಪ್ಪ**

ಜುಂಜ ಎಂದರೆ ಚಿಕ್ಕ, ಕಿರಿಯ ಎಂಬ ಶಬ್ದದ ಅರ್ಥ ಬರುತ್ತದೆ. ಜುಂಜರು ಎಂದರೆ ಗುಂಗುರು ಎಂಬ ಅರ್ಥವೂ ಇದೆ. 'ಶಿವನೂ ಗುಂಗುರು ಕೂದಲಿನವನಾದ್ದರಿಂದ ಶಿವನನ್ನೇ ಇವರು ಜುಂಜಪ್ಪನೆಂದು ಕರೆದಿರುವ ಸಾಧ್ಯತೆಯಿದೆ. ಎತ್ತಪ್ಪ ಕಾಡುಗೊಲ್ಲರ ಸಮುದಾಯಕ್ಕೆ ಒಂದು ಸಂಘಟನೆ, ಗಡಿ, ನಿಯಮಗಳನ್ನು ಧಾರ್ಮಿಕ ಸಂವಿಧಾನ ತಳಹದಿ ಹಾಕಿಕೊಟ್ಟಿದ್ದನ್ನು ಕಾರ್ಯ ರೂಪದಲ್ಲಿ ತನ್ನ ಜನಾಂಗದ ಸಂಸ್ಕೃತಿ ಮತ್ತು ಆದರ್ಶಗಳಿಗೆ ತನ್ನ ಇಡೀ ಜೀವನವನ್ನೇ ಮುಡುಪಾಗಿಟ್ಟು ಅತ್ಯಂತ ಸಣ್ಣ ವಯಸ್ಸಿನಲ್ಲೇ ತಮ್ಮ ವಿರುದ್ಧ ಬಂದವರ ವಿರುದ್ಧ ಬಂಡಾಯವೆದ್ದ ಒಬ್ಬ ಯುವ ಮುಂದಾಳಾಗಿದ್ದ ಜುಂಜಪ್ಪ. ಬಳ್ಳಾರಿ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಜರಿಮಲೆ ಮೂಲದವನಾಗಿದ್ದು ಕಲವರಳ್ಳಿ ಮತ್ತು ಸುತ್ತಮುತ್ತ ಕಾಡುಗೊಲ್ಲ ಸಮುದಾಯದ ಮೇಲೆ ನಿರಂತರವಾಗಿ ನಡೆಯುತ್ತಿದ್ದ ದೌರ್ಜನ್ಯ ಮತ್ತು ದನಕರು ಮತ್ತು ಗಡಿಯ ರಕ್ಷಣೆಯಿಲ್ಲದ ಪರಿಸ್ಥಿತಿಯಲ್ಲಿ ಸಮುದಾಯದ ರಕ್ಷಣೆ ದನಕರುಗಳ ರಕ್ಷಣೆಗಳಿಗಾಗಿ ವೈರಿಗಳ ವಿರುದ್ಧ ತನ್ನ ಜೀವ ಪಣಕ್ಕಿಟ್ಟು ಹೋರಾಡಿ ಮಡಿದ ವೀರನೀತ.

ಜುಂಜಪ್ಪ ಹುಟ್ಟಿದ್ದು, ಬೆಳೆದದ್ದು, ಬಾಳಿದ್ದು ಕಳುವೋರಹಳ್ಳಿಯಲ್ಲಿ. ಅದು ತುಮಕೂರು ಜಿಲ್ಲೆ ಶಿರಾ ತಾಲ್ಲೂಕು ಕೇಂದ್ರದಿಂದ 25 ಕಿ.ಮೀ. ದೂರದಲ್ಲಿದೆ. ತಂದೆ ಕೆಂಪಿಲಿ ಮಲಿಗೊಂಡ ಕೊಪ್ಪಳದ ಜರಿಮಲೆಯಿಂದ ವಲಸೆ ಬಂದು ಕಳೋರಳ್ಳಿಯ ಹಾಲೇಗೌಡರ ಮನೆಗೆ ಬಂದು

ಅಲ್ಲಿ ಹುಟ್ಟಿದ್ದೇ ಜುಂಜಪ್ಪ. ಕೊಂಕಿ ಜರಿಮಲೆಯ ಹಿರಿಯಟ್ಟಿಯಲ್ಲಿದ್ದು ಏಳಪ್ಪನ ಮಕ್ಕಳು ಕ್ಷಾಮಗಾಲ ಬಂದು ಏಳು ಪೆಟ್ಟಿಗೆ ದೇವರು ಪೂಜಾರಿ ಚಿತ್ತಯ್ಯ, ಪೂಜಾರಿ ಮುದ್ದಣ್ಣ, ಕರಿಮಲೆ ಪೂಜಾರಿ, ಬಿಳಿಮಲೆ ಪೂಜಾರಿ, ಮುದ್ದಿರಿಕೆ ಈರಣ್ಣ, ದೊಡ್ಡೋನುಕಲ್ಲಣ್ಣ, ಚಿಕ್ಕೋನೆ ದ್ಯಾವರ ದೈಮಾರ ತಗೊಂಡು ಊರುಬಿಟ್ಟ. ಪೋಲೇನಳ್ಳಿ, ಮಾಪಲ್ಲಿ, ಬೆಸ್ತರಳ್ಳಿ, ನೀಲಾವತಿ ನಿಡಗಲ್ಲು, ಆರೋಗೆರೆ, ಹೊಟ್ಟೆ ತಿಮ್ಮನಹಳ್ಳಿ ಬಳಿಯ ಕಾಲವೇಹಳ್ಳಿ, ಜೀರಿಗೆ ಹಳ್ಳಿ, ಇಟ್ಟಗೋಹಳ್ಳಿ, ತಾವರಗೆರೆ ತಳಮನೆ, ಶಾಗದಡು, ನಿಡ್ಡರಹಟ್ಟಿ. ಮೂಲಕ ಜುಂಜಪ್ಪನ ಅಪ್ಪ ಮಲಿಗೊಂಚ ಕಲವರಹಳ್ಳಿ ಹಾಲೆಗೌಡನ ಮನೆಗೆ ಸೇರಿಕೊಂಡ ಕಥೆಯನ್ನು ಗೊಲ್ಲರು ಕಾವ್ಯಗಳಲ್ಲಿ ಹಾಡುತ್ತಾರೆ.

ಜುಂಜಪ್ಪ ಹೋರಾಟ ಮತ್ತು ಸಾಹಸಗಳ ಕತೆಯೇ ಬಹಳ ದೊಡ್ಡದಾದದ್ದು

1. ಕಡುವಳ್ಳಿ ಕಾಮನಿಂದ ಮಾಟ ಮಾಡಿಸಿದ ಪ್ರಸಂಗ
2. ತಿರುಮಲ ತಾತಾಚಾರಿಯ ಕೈದಂಡ ತಕ್ಕೊಂಡ ಪ್ರಸಂಗ
3. ಹುಲಿಕುಂಟೆ ತಮ್ಮಣ್ಣನಿಂದ ಕೆರೆಗೆ ಮದ್ದಿಡಿಸುವ ಪ್ರಸಂಗ
4. ಸಾಣೆಕರೆ ಪುಟ್ಟಣ್ಣನಿಂದ ಪಂಪು ಹೊಡಿಸುವ ಪ್ರಸಂಗ
5. ಜಾನಕಲ್ ದೊಡ್ಡಕ್ಕನಿಗೆ ಬುದ್ಧಿ ಕಲಿಸಿದ್ದ ಪ್ರಸಂಗ
6. ಮುತ್ತಿನಶೆಟ್ಟಿ ಬಡವನೊಬ್ಬನ್ನು ಖರೀದಿಗೆ ಕೇಳಿದ ಪ್ರಸಂಗ
7. ಚೇಳೂರಲ್ಲಿ ಬಡಮ್ಯೆಲನ ಸಾಹಸ ಪ್ರಸಂಗ

ಜುಂಜುಪ್ಪನ ಸಮಾಧಿ ಕಳೋರಳ್ಳಿಯಲ್ಲಿದೆ. ಅಲ್ಲಿ ದೀಪಾವಳಿ ಅಮಾವಾಸ್ಯೆಯ ದಿನ ಗರುಡಗಂಬದಲ್ಲಿ ದೀಪ ಏರಿಸುತ್ತಾರೆ. ಉತ್ಸವ ನಡೆಯುತ್ತದೆ. ಅದೇ ದಿನ ಪುರ್ಲಳ್ಳಿ ಭೂತಪ್ಪ ನೆಲೆಗೂ ಜಾತ್ರೆ ನಡೆದು ಕುರಿಕೋಳಿ ಬಲಿ ನೀಡಲಾಗುತ್ತದೆ.

**ಜುಂಜಪ್ಪನ ಇತರ ನೆಲೆಗಳು**

1. ಬೇವನಹಳ್ಳಿ: ಜುಂಜಪ್ಪ ದೇವರ ಗುಡಿಗೆ ದೀಪ ಎತ್ತುವ ಉತ್ಸವ ಆಚರಿಸಲಾಗುತ್ತದೆ.
2. ಹಾಗಲವಾಡಿ ಜುಂಜುಪ್ಪನಟ್ಟಿ: ಗುಬ್ಬಿ ತಾಲ್ಲೂಕಿನ ಈ ಹಟ್ಟಿಯಲ್ಲಿ ಜುಂಜಪ್ಪನ ಗುಡ್ಡೆಯಿದೆ. ಇಲ್ಲಿ ಚಿತ್ರಲಿಂಗ, ಎತ್ತಪ್ಪ, ಮಾರಮುತ್ತಪ್ಪ, ಬೇವಿನಹಳ್ಳಿ ಕರಿಯಮ್ಮ, ಭೂತಪ್ಪನ ದೇವರಗಳಿವೆ.
3. ಹಳೆಬಿಜ್ಜಂಬೆಳ್ಳ: ಶಿರಾ ತಾಲ್ಲೂಕಿನ ಈ ಹಟ್ಟಿಯಲ್ಲಿ ಜುಂಜುಪ್ಪನ ಗುಡ್ಡೆಗೆ ದೀಪ ಎತ್ತುವ ಉತ್ಸವ ಮಾಡಲಾಗುತ್ತದೆ
4. ಪುಟ್ಲೋರಹಳ್ಳಿ: ಚಳ್ಳಕೆರೆ ತಾಲ್ಲೂಕು ಪರಶುರಾಮನ ಪುರದ ಹತ್ತಿರದಲ್ಲಿ ಈ ಹಳ್ಳಿಯಲ್ಲಿ ಜುಂಜುಪ್ಪನ ಗುಡ್ಡೆ ಇದೆ.

5. ಹಾಲೇನಹಳ್ಳಿ: ಶಿರಾ ಚಿಕ್ಕನಾಯಕನಹಳ್ಳಿ ಬಳಿ ಈ ಹಟ್ಟಿ ಇದೆ. ಇಲ್ಲಿ ಜುಂಜಪ್ಪನ ಹೆಸರಿನಲ್ಲಿ ಬಿಟ್ಟ ಮ್ಯಾಕೆ ಹೋತನ ಗುಡ್ಡೆ ಇದೆ. ಇದಕ್ಕೆ ಜನ ಬಸವನ ಗುಡ್ಡೆ ಎಂದು ಕರೆಯುತ್ತಾರೆ.

ಹೀಗೆ ಜುಂಜಪ್ಪ ಎತ್ತಪ್ಪರ ಜೊತೆ ಚಿತ್ತಯ್ಯ, ಕಾಟಯ್ಯ, ವೀರಣ್ಣ, ಅಜ್ಜಪ್ಪ, ಸಿರಿಯಪ್ಪ, ಯರ್ರಪ್ಪ ಈರಗಾರರುಗಳನ್ನು ದೇವರೆಂದು ಭಾವಿಸಿ ದೇವಸ್ಥಾನ ಕಟ್ಟಿ ಪೂಜಿಸುತ್ತಾರೆ.

## ಹಾಲಕ್ಕಿ ಒಕ್ಕಲಿಗರ ಸೀಮಾಪದ್ಧತಿ

ಹಾಲಕ್ಕಿ ಬುಡಕಟ್ಟುಗಳು ಉತ್ತರ ಕನ್ನಡ ಜಿಲ್ಲೆಯ ಕಾರವಾರ, ಆಂಕೋಲ, ಕುಮುಟಾ ಹಾಗೂ ಹೊನ್ನಾವರ ಕರಾವಳಿಯ ದಡದಲ್ಲಿ ವಾಸಿಸುತ್ತಿರುವ ಈ ಸಮುದಾಯ ಸುಮಾರು 3½ ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಹಾಲಕ್ಕಿ ಸಮುದಾಯದಲ್ಲಿ ಹಾಡಿಗಳನ್ನು 'ಕೊಪ್ಪ' ಎಂದೇ ಕರೆಯುತ್ತಾರೆ. ಭೌಗೋಳಿಕವಾಗಿ ಪಶ್ಚಿಮಘಟ್ಟದ ಸಹ್ಯಾದ್ರಿಯ ದಕ್ಷಿಣದ ಶರಾವತಿ ನದಿಯಿಂದ ಹಿಡಿದು ಪಶ್ವಿಮಕ್ಕೆ ಕಾಳಿನದಿಯವರೆಗೂ ಈ ಸಮುದಾಯವು ಪ್ರಸರಿಸಿದ್ದಾರೆ.

ಈ ಸಮುದಾಯದ ಬಗ್ಗೆ Gezetter of Bombay presidency ಸಂಪುಟ XIVರಲ್ಲಿ ಸ್ಥೂಲವಾಗಿ ಮಾಹಿತಿ ನೀಡಿದೆ. ಕಾರವಾರ ಜಿಲ್ಲಾದರ್ಶನದಲ್ಲಿ ಡಾ. ಸಿಲ್ವಾರವರು ಈ ಸಮುದಾಯದ ಕಿರುಪರಿಚಯ ಮಾಡಿಸಿದ್ದಾರೆ. 1945ರಲ್ಲಿ ದಿವಂಗತ ಡಾ.ದಿನಕರ ದೇಸಾಯಿರು ತಮ್ಮ ಪ್ರಕಟಣೆಯ Aboroginals of North Kanara District ಕಿರು ಹೊತ್ತಿಗೆಯಲ್ಲಿ ಹಾಲಕ್ಕಿಗಳು ಆದಿವಾಸಿಗಳೆಂದು ಅಂದಿನ ಮುಂಬೈ ಸರ್ಕಾರಕ್ಕೆ ಮನಗಾಣಿಸಿಕೊಟ್ಟಿದ್ದಾರೆ. 1938ರಲ್ಲೇ ಮ.ಗ.ಶೆಟ್ಟರು ಒಕ್ಲಿಗರ ಹಾಡುಗಳು ಕಿರುಹೊತ್ತಿಗೆಯಲ್ಲಿ ಹಾಲಕ್ಕಿಗಳನ್ನು ಪರಿಚಯಿಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಪ್ರಖ್ಯಾತ ಜಾನಪದ ವಿದ್ವಾಂಸ ಡಾ.ಎನ್.ಆರ್. ನಾಯಕರ ಪಿಎಚ್.ಡಿ ಮಹಾಪ್ರಬಂಧ, ಕಾರವಾರ ಜಿಲ್ಲೆಯ ಜಾನಪದ ಗೀತಗಳು ಅಧ್ಯಯನದಲ್ಲಿ ಹಾಲಕ್ಕಿಗಳ ಜಾನಪದ ಕಲೆ ಮತ್ತು ಹಾಡುಗಳ ವಿವರಣೆಗಳು ಸಾಕಷ್ಟಿವೆ. ಡಾ. ಎಲ್.ಜಿ. ಭಟ್ಟರೂ ಕೂಡ 'ಹಾಲಕ್ಕಿ ಜಾನಪದ ಜೀವನ ಮತ್ತು ಸಾಹಿತ್ಯ' ಎಂಬ ಮಹಾಪ್ರಬಂಧ ಬರೆದು ಪಿಎಚ್.ಡಿ. ಪದವಿ ಪಡೆದಿದ್ದಾರೆ. ಡಾ.ಕೆ.ಜಿ.ಶಾಸ್ತ್ರಿ, ಡಾ. ಶಾಲಿನಿ ರಘುನಾಥ್, ಶಾಂತಿನಾಯಕ್, ಕರೀಂಖಾನ್, ಡಾ.ನಾಗೇಗೌಡರು, ಡಾ.ಹಿ.ಚಿ. ಬೋರಲಿಂಗಯ್ಯ ಹೀಗೆ ಅನೇಕ ವಿದ್ವಾಂಸರು ಎಷ್ಟು ಮೊಗೆದರೂ ಮುಗಿಯದ ಆದಿವಾಸಿ ಸಾಂಸ್ಕೃತಿಕ ಭಂಡಾರ ಹಾಲಕ್ಕಿಗಳದು. ಸಾಲದೆಂಬಂತೆ ಮೇಲೆ ಹೆಸರಿಸಿದವರ ಶಿಷ್ಯರು ಮತ್ತು ಅವರ ಶಿಷ್ಯರು. ಇಂದಿಗೂ ಹಾಲಕ್ಕಿ ಬುಡಕಟ್ಟುಗಳ ಬಂಡಾರದಿಂದ ಬುಡಕಟ್ಟು ಜ್ಞಾನ ಮೊಗೆ ಮೊಗೆದು ಸಾರ್ವತ್ರಿಕ ಪ್ರಪಂಚಕ್ಕೆ ಉಣಬಡಿಸುತ್ತಿದ್ದಾರೆ. ಜಾನಪದ ಮೇರುಗಣಿ ನಾಡೋಜ ಸುಕ್ರಿಬೊಮ್ಮಗೌಡಳನ್ನು ಎಲ್ಲಾ ವಿಶ್ವವಿದ್ಯಾನಿಲಯದ ವಿದ್ವಾಂಸರೂ ಅವಳ ಜ್ಞಾನಕ್ಕಾಗಿ ಬಳಸಿಕೊಂಡಿದ್ದಾರೆ ಬಸಿದುಕೊಂಡಿದ್ದಾರೆ. ಆಕೆಗೆ ರಾಜ್ಯ ರಾಷ್ಟ್ರ ಪ್ರಶಸ್ತಿಗಳ

ಸರಮಾಲೆಯೇ ಸಮುದಾಯ ಜಾನಪದ ಜ್ಞಾನಕ್ಕಾಗಿ ಸಂದಿವೆ. ನಾಟಿ ಚಿಕಿತ್ಸೆಯಲ್ಲಿ ಗಾಂಧೀಜಿಗೆ ಔಷಧ ನೀಡಿ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ ಪಾರಂಪರಿಕ ಜ್ಞಾನ ಹೊಂದಿರುವ ಈ ಸಮುದಾಯವನ್ನು 'ಬುಡಕಟ್ಟುಗಳು' ಎಂದು ಅಧಿಕೃತವಾಗಿ ಒಪ್ಪಿಕೊಳ್ಳಲು ಯಾವ ಸರ್ಕಾರಗಳೂ ಇಲ್ಲಿಯವರೆವೆಗೂ ತೀರ್ಮಾನ ಕೈಗೊಳ್ಳದೆ ದಿವ್ಯನಿರ್ಲಕ್ಷತೆ ತೋರಿರುವ ಸಂಗತಿ ಮಾತ್ರ ಅತ್ಯಂತ ನಾಚಿಕೆಗೇಡಿನ ಸಂಗತಿಯಾಗಿದೆ.

## ಹಾಲಕ್ಕಿಯ ಮೂಲ ನೆಲೆಗಳು

ಉತ್ತರ ಕನ್ನಡ ಜಿಲ್ಲೆಯ ಇತರ ಬುಡಕಟ್ಟುಗಳನ್ನು ಅವಲೋಕಿಸಿದಾಗ ಎಲ್ಲೋ ಅವರ ಮೂಲ ನೆಲೆ ಮತ್ತು ಸಂಸ್ಕೃತಿಯಲ್ಲಿ ಏಕತೆ ಇತ್ತೇನೋ ಎಂಬ ಗುಮಾನಿಗಳು ಕಾಡುತ್ತವೆ. ಕರಾವಳಿಯ ಹಾಲಕ್ಕಿಗಳು ಘಟ್ಟದ ಮೇಲಿರುವ ಕುಣಬಿಗಳನ್ನು 'ಕೊಂಕಣಿ ಹಾಲಕ್ಕಿಗಳೆಂದೂ', ಹಾಗೇ ಘಟ್ಟದ ಮೇಲಿರುವ ಕುಣಬಿಗಳು ಕರಾವಳಿಯ ಹಾಲಕ್ಕಿಗಳನ್ನು 'ಸವಡೆ ಕುಣಬಿಗಳೆಂದೂ' ಈಗಲೂ ಕರೆಯುವ ವಾಡಿಕೆಯಿದೆ. ಉತ್ತರ ಕನ್ನಡ ಮುಂಬೈ ಪ್ರಾಂತಕ್ಕೆ ಒಳಪಟ್ಟಿದ್ದಾಗಿನ ಹಿಂದಿನ ಗೆಜೆಟಿಯರ್‌ನಲ್ಲಿ ಕನ್ನಡ ಮಾತನಾಡುವ ಹಾಲಕ್ಕಿಗಳನ್ನು 'ಕಾನಡೀ ಕುಣಬಿಸ್' ಎಂದು ನಮೂದಿಸಲ್ಪಟ್ಟಿದೆ. ಉತ್ತರ ಕನ್ನಡ ಜಿಲ್ಲೆಯ ಪಕ್ಕದಲ್ಲೇ ಇರುವ ಉಡುಪಿ, ಕುಂದಾಪುರ, ದಕ್ಷಿಣ ಕನ್ನಡದ ಕುಡಬಿ, ಕುಂಬರಿಮರಾಠಿ ಹಾಗೂ ಕರೆ ಒಕ್ಕಲು, ಕೊಟ್ಟೆ ಒಕ್ಕಲು, ಗ್ರಾಮೊಕ್ಕಲು, ಶೀಲಿಗರು ಹಾಗೂ ಗೊಂಡರೊಳಗೆ ಅನೇಕ ಸಾಮ್ಯತೆಗಳಿರುವುದನ್ನು ಕಾಣಬಹುದಾಗಿದೆ. ಅಷ್ಟೇ ಅಲ್ಲ, ಅಲ್ಲಿ ಪರಿಶಿಷ್ಟ ಜಾತಿಗಳಾಗಿರುವ ಮುಕ್ರಿಗಳೂ, ಅಗೇರರು ಮತ್ತು ಹಳ್ಳೇರರ ಸಾಂಸ್ಕೃತಿಕ ಆಚರಣೆಗಳಲ್ಲಿ ಎಲ್ಲಾ ಹಲವಾರು ಸಾಮ್ಯತೆಗಳಿರುವುದನ್ನು ನೋಡಬಹುದಾಗಿದೆ.

ಈ ಮೇಲೆ ಹೆಸರಿಸಿರುವ ಅಷ್ಟು ಸಮುದಾಯಗಳು ಮೂಲದಲ್ಲಿ ಬೇಟೆ ಮತ್ತು ಕುಮ್ರಿ ಬೇಸಾಯವನ್ನು ತಮ್ಮ ಮೂಲ ಕಸುಬನ್ನಾಗಿ ಮಾಡಿಕೊಂಡಿದ್ದನ್ನು ನಾವು ಗಮನಿಸಬಹುದಾಗಿದೆ. ಒಂದು ಕಾಲದಲ್ಲಿ ಎಲ್ಲಾ ಬುಡಕಟ್ಟುಗಳು ತಮ್ಮ ಬದುಕಿನ ಆಹಾರಕ್ಕಾಗಿ 'ವಲಸೆ' ಪ್ರವೃತ್ತಿಯನ್ನು ಇಟ್ಟುಕೊಂಡು ಅಲೆಮಾರಿಗಳಾಗಿದ್ದರು. ಇದನ್ನು ಗಮನದಲ್ಲಿಟ್ಟುಕೊಂಡು ಅವಲೋಕಿಸಿದಾಗ ಈ ಸಮುದಾಯಗಳು ಬೇಟೆಯ ನಂತರ ಆದಿಮ ಬೇಸಾಯ 'ಕುಮ್ರಿ' ಕೃಷಿಯನ್ನು ರೂಢಿಸಿಕೊಂಡಿರು ವುದು ತಿಳಿಯುತ್ತದೆ. ವಲಸೆಯ ಜೊತೆ ಜೊತೆಗೆ ಅಲ್ಲಲ್ಲಿ ಚಾಲಿತ ಕೃಷಿ(moving cultivation) ಅಥವಾ shifting cultivationಗೆ ಮೊರೆ ಹೋಗುವ ಸಂದರ್ಭದಲ್ಲಿ ಬೇರೆ ಬೇರೆ ಕಡೆ ವಲಸೆ ಹೋಗಿ ನಂತರ ನೆಲೆ ನಿಂತಾಗ ಪರಸ್ಪರ ಸಾಂಸ್ಕೃತಿಕವಾಗಿ ಭಿನ್ನತೆಗೊಳಗಾಗಲು ಭೌಗೋಳಿಕವಾಗಿ ಪರಸ್ಪರ ದೂರವಾದ ಸನ್ನಿವೇಶವಿರಬಹುದೇನೋ ಅನ್ನಿಸುತ್ತಿದೆ.

ಇದಕ್ಕೆ ಪೂರಕವಾಗಿ ಎಸ್. ಸಿಲ್ವಾ ಅವರು ಈಶಾನ್ಯದಿಂದ ಮತ್ತು ಆಗ್ನೇಯದಿಂದ ಬಂದ ಕರೆಒಕ್ಕಲಿಗರು ಸಹ್ಯಾದ್ರಿ ಶ್ರೇಣಿಗಳಲ್ಲಿ ನೆಲೆಯೂರಿದರು. ಅದರಲ್ಲಿ ಈಶಾನ್ಯದಿಂದ ಬಂದ ಇನ್ನೊಂದು ಗುಂಪು ಗೋವಾ ಮೂಲಕ ಕಾರವಾರ ಪ್ರವೇಶಿಸಿತು ಎಂದು ನಮೂದಿಸಿರುವುದನ್ನು ಡಾ.ಎನ್.ಆರ್. ನಾಯಕ ಅವರು ಪ್ರತಿಪಾದಿಸುತ್ತಾ ಕಾರವಾರ ಸೀಮೆಗೆ ಸೇರಿದ ಕಡವಾಡ ಖೈತಖೋಲ್ ಮತ್ತು ಬಿಣಗಾ ಘಟ್ಟಗಳ ಮೇಲಿರುವ ಗೋಟಲ್, ಬೋಟಳಿ ಗುಡ್ಡಗಳಲ್ಲಿರುವ 'ಕರಿದೇವರು' ಮೂಲ ದೇವರು ಮತ್ತು 'ಬುಡಹುಟ್ಟಿದ ಮನೆ' ಎಂದು ಕರೆಯುತ್ತಾರೆ. ಅಲ್ಲಿ ಈ ಸಮುದಾಯಗಳು ಕುಂಬರಿ ಬೇಸಾಯ ಮತ್ತು ಬೇಟೆಯಾಡಿಕೊಂಡು ಜೀವಿಸಿದ್ದಕ್ಕೆ ಪುರಾವೆಗಳಿವೆ. ಅಷ್ಟೇ ಅಲ್ಲ. ಹಾಲಕ್ಕಿಗಳನ್ನು ಬಳಸಿಕೊಂಡು ಕುಂಬರಿಗಾಗಿ ಪ್ರೋತ್ಸಾಹಿಸಿ ಘಟ್ಟದ ಮೇಲೆ ಕುಂಬರಿ ಬೇಸಾಯ ಮತ್ತು ಬೇಟೆಯಾಡಿಕೊಂಡಿದ್ದ ಹಾಲಕ್ಕಿಗಳನ್ನು 18ನೇ ಶತಮಾನದಲ್ಲೇ ಬ್ರಿಟಿಷರು ಕುಂಬರಿ ನಿಷಿದ್ದಗೊಳಿಸಿ ಕರಾವಳಿಯ ಅಂಚಿಗೆ ದೂಡಿದ ಕಾರಣ ಬಹುತೇಕ ಹಾಲಕ್ಕಿಗಳು ಉಳ್ಳವರ ತೋಟ, ಹೊಲ, ಗದ್ದೆಗಳಲ್ಲಿ ತುತ್ತಿನ ಆಳುಗಳಾಗೇ ದುಡಿಮೆ ಕಂಡುಕೊಂಡವರು. ಹೆಣ್ಣು ಗಂಡು ಮಕ್ಕಳೆನ್ನದೆ ಇಡೀ ಕುಟುಂಬವೇ ಜೀತದಾಳುಗಳ ಹಾಗೆ ದುಡಿದಿದ್ದಾರೆ. ಕೃಷಿಯ ಒಡೆಯನಾದ ಬಲೀಂದ್ರನು ಹಾಲಕ್ಕಿ ಗೌಡನಾಗಿದ್ದನೆಂದೇ ನಂಬಿ ಅವನನ್ನು ಆರಾಧಿಸುತ್ತಾರೆ. ಯಥಾಪ್ರಕಾರವಾಗಿ ಶೈವ, ವೈಷ್ಣವರ ದಾಸ ಪಂಕ್ತಿಗಳು ಅವರ ಸಾಂಸ್ಕೃತಿಕ ಮೂಲಸಂಸ್ಕೃತಿಯ ಮೇಲೆ ಆಕ್ರಮಣ ಮಾಡಿರುವ ಕಾರಣ ಅವರ ಧರ್ಮ ಸ್ಥಿತ್ಯಂತರಗೊಂಡಿರುವುದನ್ನು ಕಾಣಬಹುದಾಗಿದೆ. ತಿರುಪತಿಯ ತಿಮ್ಮಪ್ಪ ತಮ್ಮ ಆರಾಧ್ಯದೈವವೆಂದು 'ಅನಿವಾರ್ಯವಾಗಿ ಒಪ್ಪಿಕೊಂಡಿರುವ ಕಾರಣ ಒಮ್ಮೆಯಾದರೂ ತಿರುಪತಿಗೆ ಹೋಗಿ ಬರುವ ಕನಸು ಅವರದು. ಇದನ್ನೇ ಆಧಾರವಾಗಿಟ್ಟುಕೊಂಡ ಕೆಲವು ವಿದ್ವಾಂಸರು ತಿರುಪತಿಯನ ಆರಾಧಿಸುತ್ತಿರುವ ಕಾರಣ ಇವರು ಆಂಧ್ರ ಮೂಲದವರಾಗಿರಬೇಕೆಂಬ' ಅಭಿಪ್ರಾಯಪಟ್ಟಿದ್ದಾರೆ.

ಕಾಡು ಕಡಿದು ಮರಮುಟ್ಟುಗಳನ್ನು ತಮ್ಮ ದೇಶಕ್ಕೆ ಸಾಗಿಸಿಕೊಂಡು ದೋಚಿದ ವಸಾಹತು ಶಾಹಿ ಬ್ರಿಟಿಷರು 1885ರಲ್ಲಿ ಕುಂಬರಿ ಬೇಸಾಯವನ್ನು ನಿಷೇಧಿಸಿ ಕಾಡಿನಿಂದ ಹಾಲಕ್ಕಿಗಳನ್ನು ಹೊರದಬ್ಬಿದರು. ನಿರ್ವಾಹವಿಲ್ಲದ ಹಾಲಕ್ಕಿಗಳು ಘಟ್ಟದ ಮೇಲಿಂದ ದಬ್ಬಿಸಿಕೊಂಡು ಸಮುದ್ರ ತಟಕ್ಕೆ ದೂಡಲ್ಪಟ್ಟರೆಂಬ ಹೇಳಿಕೆಯನ್ನು ಅನೇಕ ಹಾಲಕ್ಕಿ ಹಿರಿಯರು ಹೇಳುತ್ತಾರೆ. ಇದಕ್ಕೆ ನಿದರ್ಶನವೆಂಬಂತೆ ಇತ್ತೀಚಿನವರೆವೆಗೂ ಹಾಲಕ್ಕಿಗಳು ಘಟ್ಟಕ್ಕೆ ಹೋಗಿ ಕುರುಚಲು ಕಾಡು ಸುಟ್ಟು ಕುಂಬರಿ ಬೆಳೆದು ಬರುತ್ತಿದ್ದನ್ನು ಕಾಣಬಹುದಾಗಿದೆ.

## ಹಾಲಕ್ಕಿಗಳ ಸೃಷ್ಟಿಪುರಾಣ

ಹಾಲಕ್ಕಿಗಳು ಹುಟ್ಟಿದ ಬಗ್ಗೆ ಅವರಲ್ಲೇ ಅನೇಕ ದಂತಕತೆಗಳಿವೆ. ಅವುಗಳಲ್ಲಿ, 1. ನಾರೇಣಸ್ವಾಮಿ ಲಕುಮಿದೇವಿಯ ಕತೆಯಲ್ಲಿ ಹಾಲು ಮತ್ತು ಅನ್ನದಿಂದ ಹುಟ್ಟಿದ್ದು, 2. ಶಿವ,

ಪಾರ್ವತಿಯ ಕಥೆಯಲ್ಲಿ ಹಾಲು ಮತ್ತು ಅನ್ನದಿಂದ ಹುಟ್ಟಿದ್ದು, 3. ನಾಗಕನ್ನೆ ನಾಗಪಟವನ್ನು ಹಾಲಕ್ಕಿ ಮಗಗೆ ಧಾರೆಯೆರೆದು ಕೊಟ್ಟ ಕಥೆ, 4. ಮಾದೇವರಾಯನು ತಾನುಣ್ಣುವ ಹಾಲು ಅನ್ನದ ತುತ್ತನ್ನು ಬದಿಗಿಟ್ಟು ಅದರಿಂದ ಹಾಲಕ್ಕಿ ಮಕ್ಕಳನ್ನು ಪಡೆದ ಕಥೆ. ಒಟ್ಟಾರೆ ಇವುಗಳೂ ಇತರ ಆದಿವಾಸಿಗಳು ಸೃಷ್ಟಿಪುರಾಣದ ಕತೆಗಳಂತೆ 'ಹಾಲು' ಮತ್ತು 'ಅಕ್ಕಿ'ಯಿಂದ ಜನಿಸಿದವರೆಂದು ನಂಬುತ್ತಾರೆ.[7]

ಇವರು ಭತ್ತದ ತೆನೆ ಮಾಗುವ ಪೂರ್ವದಲ್ಲಿಯೇ 'ಹಾಲ್ಬತ್ತ'ವನ್ನೇ ಕೊಯ್ದು ತಂದು ಅನ್ನ ಮಾಡಿ ಉಣ್ಣುವುದರಿಂದ ಹಾಲಕ್ಕಿಗಳಾದರೆಂದೂ ಇವರು ಹಾಲಿನಂತಹ ಬಿಳಿಯ ಉತ್ತಮ ದರ್ಜೆಯ ಅಕ್ಕಿ ಬೆಳೆಯುವುದರಿಂದ ಇವರಿಗೆ ಹಾಲಕ್ಕಿ ಎನ್ನುವ ಹೆಸರು ಬಂದಿತೆಂದೂ ಮುಂಬೈ ಗೆಜೆಟಿಯರ್‌ನಲ್ಲಿ ನಮೂದಿಸಲಾಗಿದೆ.

ಅವರ ವೃತ್ತಿಯ ಕಾರಣಕ್ಕಾಗಿಯೇನೋ ಅವರ ಉಡುಪು ಅತ್ಯಂತ ಸರಳವಾದದ್ದು. ಗಂಡಸರು ಉಡಿದಾರಕ್ಕೆ ತುಂಡು ಬಟ್ಟೆ ಹಾಕುವುದನ್ನು ಬಿಟ್ಟರೆ, ಸಂಪೂರ್ಣ ಬೆತ್ತಲಾಗೇ ಇರುತ್ತಾರೆ. ಹೆಣ್ಣುಮಕ್ಕಳು ಇತರ ಸಮುದಾಯದಿಂದ ಪ್ರತ್ಯೇಕಿಸುವಂತೆ ಕೊತ್ತಿಗೆ ತುಂಬಾ ಮಣಿಸರ ತುಂಬಿಕೊಂಡಿರುತ್ತಾರೆ. ಇದನ್ನವರು 'ಹಲ್ದೀಸಿ' ಎನ್ನುತ್ತಾರೆ. ಮಗ್ಗೆ ಸೀರೆಯನ್ನು ಸೊಂಟಕ್ಕೆ ಸುತ್ತಿ ಸೆರಗನ್ನು ಎದೆ ಮುಚ್ಚುವಂತೆ ಕಂಕುಳ ಬುಡದಿಂದ ಬಳಸಿ, ಕುತ್ತಿಗೆ ಎಡೆ ಕೊಂಡೊಯ್ದು ಗಂಟು ಹಾಕಿ ಸೀರೆಯುಡುತ್ತಾರೆ. ರವಿಕೆ ಧರಿಸುವುದಿಲ್ಲ. ಮುಂಗೈಯಿಂದ ಮೊಳಕೈವರೆವಿಗೂ ಮಣ್ಣಿನ ಗಾಜಿನ, ಹಿತ್ತಾಳೆ ಹಾಗೂ ಬೆಳ್ಳಿಯ ಬಳೆಗಳನ್ನು ಧರಿಸುತ್ತಾರೆ. ಮದುವೆಯಾದ ಹೆಂಗಸರೆಂದು ಗುರ್ತಿಸಲು ಹೆಂಗಸರು ಬಲತೋಳಿಗೆ ಐದು ಇಲ್ಲವೇ ಏಳು ಹಿತ್ತಾಳೆ ಅಥವಾ ಕಂಚಿನ ಕಡಗಗಳನ್ನು ಧರಿಸುತ್ತಾರೆ. ಇವುಗಳಿಗೆ ತೋಳ್ಬಳೆಗಳೆನ್ನುತ್ತಾರೆ. ಕಿವಿಗೆ ಕಡುಕು, ವಾಲೆ, ಕರೆಪುಗುಡಿ ಮುಂತಾದ ಆಭರಣಗಳನ್ನು ಧರಿಸುತ್ತಾರೆ.

ಇವರ ಮದುವೆ ಬ್ರಾಹ್ಮಣರ ಪೌರೋಹಿತ್ಯದಲ್ಲಿ ನಡೆಯುವುದಿಲ್ಲ. ಒಂದೇ ಕುಲ ಅಥವಾ ಬಳ್ಳಿಯವರನ್ನು ಬಿಟ್ಟು ಬೇರೆ ಬಳ್ಳಿ ಕುಲದವರಿಗೆ ಸಂಬಂಧ ಬೆಳೆಸಿ ಮದುವೆ ಮಾಡಿಕೊಳ್ಳಲಾಗುತ್ತದೆ.

## ಹಾಲಕ್ಕಿ ಸಮುದಾಯದ ಸೀಮಾಪದ್ಧತಿ

ಕರ್ನಾಟಕದ ಇತರ ಬುಡಕಟ್ಟು ಸಮುದಾಯಗಳಿಗೆ ಹಾಲಕ್ಕಿಗಳಲ್ಲಿರುವ ಸೀಮಾಪದ್ಧತಿಯು ಆದಿಮ ಸ್ಥಿತಿಯಲ್ಲಿರದ ಅತ್ಯಂತ ವಿಕಸಿತವೂ ಹಾಗೂ ಸುಧಾರಿತ ನಾಗರಿಕತೆಯ ಮುಖ್ಯವಾಹಿನಿಗೆ ತೆರೆದುಕೊಂಡಂತೆ ತೋರುವ ಸೀಮಾಪದ್ಧತಿಯಾಗಿದೆ. ಮ್ಯಾಸಬೇಡರಲ್ಲಿರುವ ಸೀಮಾಪದ್ಧತಿಯ ಮಾದರಿಯಲ್ಲೇ ಹಾಲಕ್ಕಿಗಳ ಸೀಮಾವಲಯ ಮತ್ತು ಸೀಮಾಪದ್ಧತಿಯ ರೀತಿ ಇರುವುದನ್ನು

ಗಮನಿಸಬಹುದಾಗಿದೆ. ಮ್ಯಾಸಬೇಡರನ್ನು ವಿಜಯನಗರದ ಸಾಮ್ರಾಜ್ಯದ ಅರಸರು ಯುದ್ಧಕ್ಕೆ ಬಳಸಿ, ಪಾಳೇಗಾರ ಮತ್ತು ಸಾಮಂತರನ್ನಾಗಿಸಿ ಅದರ ಪ್ರಕಾರ ಚಿತ್ರದುರ್ಗ, ಬಳ್ಳಾರಿ, ಹಿರಿಯೂರು, ತುಮಕೂರು ಜಿಲ್ಲೆಯಲ್ಲಿನ ಮ್ಯಾಸಬೇಡರ ನೆಲೆಗಳನ್ನು 12 ವಿಭಾಗಗಳನ್ನಾಗಿ ಮಾಡಿ ಅದಕ್ಕೆ 12 ಕಟ್ಟೆಮನೆಗಳನ್ನು ಗುರ್ತಿಸಿ ಅದಕ್ಕೆ ದೊರೆಗಳನ್ನು ನೇಮಕ ಮಾಡಿ, ದೊರೆಗಳಿಂದ ತೆರಿಗೆ, ಕಪ್ಪ ಕಾಣಿಕೆಯನ್ನು ಹೇಗೆ ವಿಜಯನಗರದರಸರು ಕ್ರೋಢೀಕರಣ ಮಾಡಿದ್ದರೋ ಅದೇ ರೀತಿಯಲ್ಲಿ ಈ ಭಾಗಗಳಲ್ಲಿ ಆಳಿ ಹೋದ ಅರಸರಲ್ಲಿ ಕ್ರಿ.ಶ. 910ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಕರಾವಳಿಗೆ ಆಗಮಿಸಿದ ಭೋಜರು, ನಂತರ ಬಂದ ಚೋಳರು, 12ನೇ ಶತಮಾನದಲ್ಲಿ ಆಗಮಿಸಿದ ಹೊಯ್ಸಳರು ಅದರಿಂದ ಸಂಪರ್ಕ ಪಡೆದ ವಿಜಯನಗರದರಸರಿಂದ ಹಿಡಿದು ಹೈದರಾಲಿಯವರೆಗೂ ಬಹಳಷ್ಟು ರಾಜಮನೆತನಗಳು ತಮ್ಮ ಸಾಮ್ರಾಜ್ಯವನ್ನು ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಪ್ರದೇಶವನ್ನು ಆಳಿ ಹೋಗಿದ್ದಾರೆ. ಈ ಮೊದಲು ಕುಣಬಿ ಮತ್ತು ಇತರ ಸಮುದಾಯಗಳಲ್ಲಿನ ಆದಿಮ ರೀತಿಯ ಸೀಮಾಪದ್ಧತಿಯು ರೂಪಾಂತರಗೊಂಡು ಸ್ಥಿತ್ಯಂತರವಾಗಿ ರಾಜರು ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ವಾಸ ನೆಲೆಯ ಸುಮಾರು 200ಕ್ಕೂ ಹೆಚ್ಚಿನ ಹಳ್ಳಿಗಳನ್ನು(ಕೊಪ್ಪ) 7 ಸೀಮಾವಲಯಗಳನ್ನಾಗಿ ವಿಭಾಗಿಸಿ ಅವುಗಳಿಗೆ ವಿಶೇಷವಾದ ಆಡಳಿತ ವ್ಯವಸ್ಥೆ, ಅದನ್ನು ನೋಡಿಕೊಳ್ಳಲು ಅರಸು, ಗುರು, ಪ್ರಧಾನಿ, ಬುಧವಂತ, ಕೋಲ್ಕಾರ, ಕಟ್ಟೆಮನೆ ಇತ್ಯಾದಿಗಳನ್ನು ಮಾಡಲಾಗಿದೆ. ಅಲ್ಲಿಗೆ ಆದಿಮ ಸ್ಥಿತಿಯಲ್ಲಿದ್ದ ಹಾಲಕ್ಕಿ ಸೀಮಾಪದ್ಧತಿಯ ಮೂಲ ಉದ್ದೇಶ ಆಹಾರ, ಸಂಸ್ಕೃತಿ, ಸಂತತಿ, ದೈವಗಳ ರಕ್ಷಣೆಯ ಕಾರಣಕ್ಕೆ ಭೌಗೋಳಿಕ ಗಡಿಗಳನ್ನು ಹಾಕಿಕೊಂಡಿದ್ದ ಈ ಸಮುದಾಯ ಸಾಮ್ರಾಜ್ಯಶಾಹಿಗಳ ದಾಳಿಗೆ ಒಳಗಾಗಿ ಒಂದು ವಿಕಸಿತ ಮಾದರಿಯ ಸೀಮಾ ಪದ್ಧತಿಯು, ಊಳಿಗಮಾನ್ಯ, ಯಜಮಾನಿ ಸಂಸ್ಕೃತಿಯನ್ನು ಬಿಂಬಿಸುವ ಮಾದರಿಯ ಆಡಳಿತ ಹೊಂದಿರುವ ಸೀಮಾಪದ್ಧತಿಯಾಗಿ ಪರಿವರ್ತಿತವಾಗಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಉತ್ತರ ಕನ್ನಡ ಜಿಲ್ಲೆಯ ಒಟ್ಟು ಹಾಲಕ್ಕಿಗಳ 200ಕ್ಕೂ ಹೆಚ್ಚಿನ ಕೊಪ್ಪಗಳನ್ನು 7 ಸೀಮೆಗಳನ್ನಾಗಿ ವಿಂಗಡಿಸಲಾಗಿದೆ, 1. ಕಡವಾಡ ಸೀಮೆ, 2. ಅಂಕೋಲ ಸೀಮೆ, 3. ಕುಂಬಾರಗದ್ದೆ, 4. ಗೋಕರ್ಣ, 5. ನುಸಿಕೋಟೆ, 6. ಹರಿಟ, 7. ಚಂದಾವರ ಸೀಮೆಗಳನ್ನಾಗಿ ಮಾಡಿ ಪ್ರತಿ ಸೀಮೆಯಲ್ಲಿ ಇಂತಿಷ್ಟು ಹಳ್ಳಿಗಳು ಅವುಗಳ ವ್ಯಾಪ್ತಿಗೆ ಬರುತ್ತದೆ ಎಂದು ವಿಂಗಡಿಸಲಾಗಿದೆ. ಅದರಂತೆ

1. **ಕಡವಾಡ ಸೀಮೆಯ ಊರುಗಳು(41 ಹಳ್ಳಿಗಳು)**: ಬೆಳ್ಳೂರು, ಶರ್ವೆ, ನಗ್ಗೆ, ಕೋವೆ, ಕಿಕೋಣ, ಕುಚ್ಚೇಕಾರ, ಕುಚ್ಚೇಕಾರ ಕೋಡಾರ, ಮಲ್ಲಾಣಿ, ಸಿದ್ದರ್(ಸಿದ್ದೂರು), ಕಡವಾಡ, ಶಿರವಾಡ, ಹಟ್ಟೂರು, ಅಲಿಗದ್ದೆ, ಬೈತಖೋಲ್ ಬಿಣಗಾ, ಮೂಡ್ಲಮಕ್ಕಿ, ಗುಡ್ಡೇಹಳ್ಳಿ, ಅರಗಾ

ತೋಡೂರು, ಚೆಂಡಿಯಾ, ಅಮದಳ್ಳಿ, ಕೋಡಾರ, ಹಾರವಾಡ, ಮುದಗಾ, ಮುಚ್ಚೋಳ್ಳಿ, ಸಣ್ಣಮಕ್ಕಿ ಕಿಕೋಣ, ಮೈನ್‌ಬೇಣ, ಅವಾರ, ಕೆಳಗಿನ ಬೇಣ, ಗುಶೆ, ಕೂನಸೆ, ಬಿಕಾಗೆ, ನೀವಲ್ ಮಲಗದ್ದೆ, ಸೋರಗದ್ದೆ, ಹರ್ಸಗದ್ದೆ, ಕಂಚಿಗದ್ದೆ, ಹಳೆಕೋಟೆ.

**2. ಅಂಕೋಲ ಸೀಮೆ(32 ಹಳ್ಳಿಗಳು):** ಬೇಲೇಕೇರಿ, ಹುಟ್ಟೆಕೇರಿ, ಬಾಮಿಕೇರಿ, ಅಂಕೋಲ, ಬೆಳಂಬಾರ, ಹೊನ್ನೇಬೈಲ್, ಮಂಜಗುಣಿ, ಗಂಗಾವಳಿ, ಹಡವ, ಸಿರ್ಕುಳ, ಅಂಬಾರಕೊಡ್ಲು ಕಂತ್ರಿ, ಅಲಗೇರಿ, ಬೊಗ್ರಿಬೈಲ್, ಅಡ್ಲೂರ್, ಆಗ್ಸೂರ್, ಹೊನ್ನಳ್ಳಿ, ಮಾಸ್ತಿಕಟ್ಟಾ, ಹಿಲ್ಲೂರ್ ಶಿರೂರ್, ಬೆಳಸೆ, ಶೇಡಗೇರಿ, ಸಸಗಣಮಕ್ಕಿ, ಹೊಸಗದ್ದೆ, ತಳಗದ್ದೆ, ಹೆಗ್ಗಾರ, ಬಡಗೇರಿ, ಬೆರಡಿ, ಕುದ್ರಿಗೆ, ಶಿರಗುಜ, ಮೂರಗದ್ದೆ, ಮಕ್ಕಿಗದ್ದೆ.

**3. ಕುಂಬಾರಗದ್ದೆ ಸೀಮೆ(16 ಹಳ್ಳಿಗಳು):** ಕಡಮೆ ಹೊಸ್ಕೇರಿ, ಬಾವಿಕೊಡ್ಲು, ಬಂಕಿಕೊಡ್ಲು, ಮಾಸ್ಗೇರಿ, ಹೆಗ್ಗರೆ, ಜುಗ, ಕಾಮಗಿ, ಬೆಳಸ್ರೆ, ಬೈಲ್ ಕೇರಿ, ಬೀದರ್ ಗೇರಿ, ಗೊನೆಹಳ್ಳಿ, ತಿಪ್ರಸ್ಕಿ, ಹನೇಹಳ್ಳಿ, ಈಶಗುಡಿ, ಕೆಸುಗದ್ದೆ.

1. **ಗೋಕರ್ಣಸೀಮೆ: (17 ಹಳ್ಳಿಗಳು)**

2. ತಲಗೇರಿ, ದೈವಣ, ಆಸಕ್ತಿ, ಬಂಡಿಕೇರಿ, ಅಜ್ಜಿಹಕ್ಕು, ಕುಡ್ಲೆ, ಹುಣಸೆ ಕೇರಿ, ಬಿಜ್ಜೂರು, ದೈವನಂಗಿ, ಮೈನನರ್ ಕೇರಿ, ತೋಟಗೇರಿ, ಗೋಕರ್ಣ, ತದಡಿ, ಸಾಣಿಕಟ್ಟೆ, ಅಶೋಕೆ, ಬಿದರಕೆರೆ.

**5. ನುಸಿಕೋಟೆ ಸೀಮೆ: (16 ಹಳ್ಳಿಗಳು):** ನುಸಿಕೋಟೆ, ಬಳಲೆ, ಮೂಲಕೇರಿ, ಉರುವರೆ, ಮಾದನಗೇರಿ, ದೇವಿಗದ್ದೆ, ಹೊಸೂರು, ಆಂದ್ಲಿ, ಶಿವಪುರ, ಗುಂಡುಬಾಳೆ, ನೈವಳಸೆ, ಕಂಚಿನ ಕರೆ, ಮೊರಳ್ಳಿ, ಮರ್ಕಾಲ, ಕಂಡಕಾರ, ಕೋಳಿ ಮಂಜು ಗುಣಿ.

**6. ಹರಿಟೆ ಸೀಮೆ(14 ಹಳ್ಳಿಗಳು):** ಸಿರಗುಂಜಿ, ಕುಡ್ಲೆ, ಚಿಳ್ಳಿ, ಮಲವಳ್ಳಿ, ಪಟ್ನ ದುಂಡುಕುಳಿ, ಕಬಸೆ, ಮಣಗೋಣ, ಮಿರ್ಜಾನು, ತಿಂತ್ರಳ್ಳಿ, ಶಿಳ್ಳೆ, ಕ್ಯಾಗೋಡು, ಉಪಿನಪಟ್ಟಣ, ಕಬ್ರಗಿ.

**7. ಚಂದಾವರ ಸೀಮೆ(63 ಹಳ್ಳಿಗಳು):** ಅಘನಾಶಿನಿ, ಅಂಬ್ಲೇಕೇರಿ, ಅಗ್ರಹಾರ, ಕಲ್ಬಾಗ, ಕಾಗಾಲು, ಕುಮುಟಾ, ಒಗ್ಗೇರಿ, ಸಾಲಿಕೇರಿ, ಕರ್ಕಿ, ಕರ್ಕಿಮಕ್ಕಿ, ಕುಂಬ್ರುಕೋಣು, ಕಲವೆ, ತಣ್ಣೀರ್, ಕುಳಿ, ಹೆಗೆಡೆ, ನುಕ್ಕೆರೆ, ಕೈಲೋಡಿ, ದೀವಳ್ಳಿ, ಮುಸುಗುಪ್ಪೆ ಬುಗ್ರಿಬೈಲು, ಹರ್ಕಜೆ, ಹೊಸಳ್ಳಿ ಸಾತ್ಗಲ್ಲು, ಹೊಳಸಾಲು ಹೊನ್ನವರ, ಸಾಲ್ಕೋಡು, ಇಡಗುಂಜಿ, ಅಪ್ಸೆಕರೆ, ಅಸಳ್ಳಿ, ಉಂಡ್ಲೆ. ಉಂಚಗೇರಿ ಕಲ್ಕೊಡ, ಕಬ್ಬಮಕ್ಕಿ, ಕಡ್ಡೆ ಕೂಜಳ್ಳಿ ಕೆಕ್ಕಾರು, ಗುಡಳ್ಳಿ, ಗೋಟೇಕೇರಿ, ತಲಗೋಡ, ತಲಗೆರೆ, ದಗ್ಗೂರ್, ಬಗ್ಗೋಣ, ಬಾಳೇಗದ್ದೆ ವಂಥೂರ, ವಡಗೆರೆ, ವಕ್ಲಳ್ಳಿ,

ವಾಲ್ಗಳ್ಳಿ, ಹುಟ್ಟಕೇರಿ, ಹಾರೋಡಿ, ಹೆಗ್ಗಿ, ಹಬ್ಬನಕೆರೆ, ಸಾಣೆಮಕ್ಕಿ, ವಾಲಗಳ್ಳಿ, ಉಂಟಗಿ, ಬಡಗಣಿ, ಹಳದಿಪುರ, ಆರೋಳಿ, ಮಾದಿಕೊಟ್ಟಿಗೆ, ಬಾದೊಳ್ಳಿ, ಕವಲಳ್ಳಿ, ಸಾಂತಗಲ್ಲ್, ಬಡಗಣಿ, ಅರಕಡೆ, ತಣ್ಣಿರ್ ಕುಳಿ.[8]

**ಆಡಳಿತ ವ್ಯವಸ್ಥೆ**

ಊರು ಹಾಗೂ ಸೀಮೆಗಳಿಗೆ ಪ್ರತ್ಯೇಕ ಆಡಳಿತ ವ್ಯವಸ್ಥೆಯಿರುತ್ತದೆ. ಊರು ಹಾಗೂ ಸೀಮಾ ಮಟ್ಟದ ಅಧಿಕಾರಿಗಳ ಹೆಸರುಗಳು ಸೀಮೆಯಿಂದ ಸೀಮೆಗೆ ಸ್ವಲ್ಪಮಟ್ಟಿಗೆ ಭಿನ್ನವಾಗಿರುತ್ತಿವುದು ಇತ್ತೀಚಿನ ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

**ಊರ ಆಡಳಿತ:** ಪ್ರತಿ ಹಾಲಕ್ಕಿ ಕೊಪ್ಪಕ್ಕೆ ಊರಗೌಡನಿರುತ್ತಾನೆ. ಅವನಿಗೆ ಸಹಾಯಕರಾಗಿ ಬುಧುವಂತೆ ಕೋಲ್ಕಾರರಿರುತ್ತಾರೆ. ಕೆಲವೆಡೆ ಮಾತೋಬಾರಿಯೆನ್ನುವ ಊರ ಅಧಿಕಾರಿಯಿರುತ್ತಾನೆ. ಕಡವಾಡ ಸೀಮೆಯಲ್ಲಿ ಊರಿಗೆ ಕೋಲ್ಕಾರನಿರುವುದಿಲ್ಲ. ಸೀಮಾ ಮಟ್ಟದಲ್ಲಿ ಮಾತ್ರ ಕೋಲ್ಕಾರನಿರುತ್ತಾನೆ. ಅಲ್ಲಿ ಊರಿನ ಅಧಿಕಾರಿಗಳೆಂದರೆ ಗೌಡ ಮತ್ತು ಮಿರಾಶಿ ಇಬ್ಬರೇ ಗೌಡ ಹಾಗೂ ಬುಧವಂತನ ಕೆಲಸವನ್ನು ಒಬ್ಬನೇ ನಿರ್ವಹಿಸುತ್ತಾನೆ. ಅವನನ್ನು 'ಬುಧವಂತಗೌಡ' ಎಂದು ಕರೆಯುತ್ತಾರೆ. ಬೇಟೆ-ಸುಗ್ಗಿ ದೇವರ ಪೂಜೆ ಈ ಮುಂತಾದ ಧಾರ್ಮಿಕ ಕಾರ್ಯದಲ್ಲಿ ಮಿರಾಶಿಯಿರುತ್ತಾನೆ. ಬೇಟೆಯಾಡಿದ ಪ್ರಾಣಿಗೆ ಮೊದಲು ಚೂರಿ ಹಾಕುವ ಅಧಿಕಾರ ಮಿರಾಶಿಯದು. ಹುಟ್ಟು ಸಾವು ಮದುವೆ ಮುಂತಾದ ಸಂಸ್ಕಾರಗಳಲ್ಲಿ 'ಬುಧುವಂತನಗೌಡ'ನಿಗೆ ಪ್ರಾಶಸ್ತ್ಯ. ಕಡುವಾಡ ಹಾಗೂ ಕೊಂಕಣ ಮರಾಠರ ಪ್ರಭಾವದಿಂದ ಈ ಹೆಸರು ಹಾಲಕ್ಕಿಗಳಲ್ಲಿ ಹಾಲಕ್ಕಿಗಳಲ್ಲಿ ಸೇರಿರಬಹುದು. ಅವರಲ್ಲಿ ಊರ ಮುಖಂಡನಿಗೆ ಗಾಂವ್ಕಾರ ಎಂದು ಕರೆಯುವ ಸಂಪ್ರದಾಯವಿರು ತ್ತದೆ. ಅರಸನಿಗೆ ಮಂತ್ರಿಯಿದ್ದಂತೆ ಗೌಡನಿಗೆ ಬುಧವಂತ. ಗೌಡನ ಆದೇಶಗಳನ್ನು ಮನೆಮನೆಗೆ ಮುಟ್ಟಿಸುವ ದೂತನ ಕೆಲಸವನ್ನು ಕೋಲ್ಕಾರ ಮಾಡುತ್ತಾನೆ. ಈ ಎಲ್ಲಾ ಅಧಿಕಾರಿಗಳ ಹುದ್ದೆ ವಂಶಪರಂಪರೆಯಿಂದ ಬರುತ್ತವೆಯಾದ್ದರಿಂದ ಈ ಅಧಿಕಾರಕ್ಕಾಗಿ ಪೈಪೋಟಿ ನಡೆಯುವುದಿಲ್ಲ.

ಊರಲ್ಲಿ ತಂಟೆ ತಕರಾರುಗಳು ನಡೆದಲ್ಲಿ ಅದನ್ನು ತೀರಿಸುವ, ಮದುವೆ ಮುಂತಾದ ಮಂಗಳ ಕಾರ್ಯಗಳ ವಿಧಿ ಸಂಸ್ಕಾರಗಳ, ಬೇಟೆ, ಕೂಟ ಮುಂತಾದ ಸಾಮಾಜಿಕ ಸಂಘಟನೆಗಳ ನೇತೃತ್ವ ವಹಿಸುವ ಉನ್ನತ ಅಧಿಕಾರಿಯಾಗಿರುತ್ತಾನೆ ಗೌಡ. ಊರವರು ಸಾಮೂಹಿಕವಾಗಿ ಮಾಡಬೇಕಾದ ಯಾವುದೇ ಸಾಮಾಜಿಕ, ಧಾರ್ಮಿಕ ಕಾರ್ಯ ಕಟ್ಟೆಗಳನ್ನು ನೆರವೇರಿಸುವಾಗ ತಂಟೆ, ತಕರಾರುಗಳನ್ನು ಪರಿಹರಿಸುವಾಗ 'ಗೌಡ' ಬುಧವಂತನ ಸಲಹೆಯ ಮೇರೆಗೆ ಕೋಲ್ಕಾರನ ಮೂಲಕ ಊರ ಕೂಟವನ್ನು ಕರೆಯುತ್ತಾನೆ. ಹಾಲಕ್ಕಿಗಳು ನೆಲೆಸಿರುವ ಪ್ರತಿಯೊಂದು ಊರಿನಲ್ಲಿಯೂ ಕೂಟವನ್ನು ಕರೆಯುವ ಪರಿಪಾಟವಿದೆ.

**ಕೂಟ:** ಊರಿನ ಪ್ರೌಢ ಗಂಡಸರೆಲ್ಲರೂ ಕೂಟದ ಸಾಮಾನ್ಯ ಸದಸ್ಯರಾಗಿ ಪಾಲ್ಗೊಳ್ಳುತ್ತಾರೆ. ಹೆಂಗಸರಿಗೆ ಕೂಟದ ಸದಸ್ಯರಾಗುವ ಅವಕಾಶವಿಲ್ಲ. ಕೂಟ ನಡೆಯುವುದು ಗೌಡನ ಹಿರಿತನದಲ್ಲಿ. ಗೌಡ, ಬುಧವಂತ, ಕೋಲ್ಕಾರಾದಿಯಾಗಿ ಕೂಟದಲ್ಲಿ ಪಾಲ್ಗೊಂಡ, ಸಕಲ ಸದಸ್ಯರೂ ಸರಿಸಮಾನರಿರುತ್ತಾರೆ. ಗೌಡ ಕೂಟದ ಹಿರಿತನವನ್ನು ನಿರ್ವಹಿಸಿದರೂ ಆತ ನಿರಂಕುಶ ಅಧಿಕಾರಿಯಲ್ಲ. ಕೂಟದ ಸದಸ್ಯರ ಬಹುಮತದ ತೀರ್ಮಾನಕ್ಕೆ ಆತನೂ ಬದ್ದನೇ. ಕೂಟದಲ್ಲಿ ಜಾತಿಯ ಜನರಲ್ಲಿ ನಡೆದ ತಂಟೆ ತಕರಾರುಗಳಿಗೆ ಧಾರ್ಮಿಕ ವಿಧಿನಿಷೇಧಗಳಿಗೆ, ನೀತಿನಿಯಮಗಳಿಗೆ ಸಂಬಂಧಿಸಿದ ವಿಷಯಗಳ ಚರ್ಚೆಯಾಗುತ್ತದೆ. ಚರ್ಚೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಪ್ರತಿ ಸದಸ್ಯರಿಗೂ ಸ್ವಾತಂತ್ರ್ಯವಿದೆ. ಕೂಟದಲ್ಲಿ ಚರ್ಚಿಸಿದ್ದ ವಿಷಯಗಳ ಕೂಲಂಕಷ ಚರ್ಚೆಯಾದ ಮೇಲೆ, ಗೌಡನು ಬುಧವಂತನೊಡನೆ ಸಮಾಲೋಚಿಸಿ, ಬಹುಮತದ ನಿರ್ಧಾರವನ್ನು ಅಂತಿಮ ತೀರ್ಮಾನವಾಗಿ ಸಭೆಗೆ ಘೋಷಿಸುತ್ತಾನೆ. ಆ ನಿರ್ಣಯಕ್ಕೆ ಬದ್ಧರಾಗಲೇಬೇಕು.

ಕೂಟಕ್ಕೆ ಬರದ ಸದಸ್ಯರಿಗೆ ದಂಡ ಕಟ್ಟುವ, ಅಪರಾಧಿಗೆ ಬಹಿಷ್ಕಾರಾದಿ ಶಿಕ್ಷೆಯನ್ನು ನೀಡುವ ಅಧಿಕಾರವನ್ನು ಗೌಡ ಪಡೆದಿರುತ್ತಾನೆ. ಕೂಟದಲ್ಲಿ ಗೌಡನೇ ಅಪರಾಧಿಯೆಂದು ನಿರ್ಣಯವಾದಲ್ಲಿ, ಗೌಡನೂ ತನ್ನ ಅಪರಾಧಕ್ಕಾಗಿ ತಾನೇ ದಂಡವನ್ನು ತರಬೇಕಾಗುತ್ತದೆ. ಇಂಥ ಪ್ರಸಂಗಗಳು ವಿರಳವಾಗಿ ಘಟಿಸಿದ್ದೂ ಇದೆಯಂತೆ. ಊರಕೂಟದಲ್ಲಿ ಜಗಳ ಪರಿಹಾರವಾಗದಿದ್ದಲ್ಲಿ ಅದನ್ನು ಸೀಮೆಕೂಟಕ್ಕೊಯ್ದು ನಿಕಾಲೆ ಮಾಡಿಕೊಳ್ಳುತ್ತಾರೆ.

ಬುಧವಂತನು ಜಾತಿಗೆ ಸಂಬಂಧಿಸಿದ ರೂಢಿ, ನಂಬಿಕೆ, ಸಂಪ್ರದಾಯಗಳನ್ನು ವಿಧಿ ನಿಷೇಧಗಳನ್ನು ಬಲ್ಲವನಾಗಿರುತ್ತಾನೆ. ಗೌಡನ ಸಲಹೆಯ ಮೇರೆಗೆ ಕೂಟವನ್ನು ಕರೆಯುವ ಕೂಟದಲ್ಲಿ ಗೌಡನಿಗೆ ಉಚಿತ ಸಲಹೆ ಸೂಚನೆಗಳನ್ನು ನೀಡುವ, ಕೂಟದಲ್ಲಿ ಚರ್ಚಿಸಿದ ಎಲ್ಲ ವಿಷಯಗಳ ಕ್ರೋಡೀಕರಣವನ್ನು ಮಾಡಿ ಗೌಡನ ಮುಂದಿಡುವ, ಜಾತಿ ಪರಂಪರೆ, ಸಂಪ್ರದಾಯದ ಹಿನ್ನೆಲೆಯಲ್ಲಿ ಪರಿಹಾರವನ್ನು ಸೂಚಿಸಿ, ಗೌಡನಿಗೆ ನೆರವಾಗುವ ಹಿರಿಯ ಜವಾಬ್ದಾರಿ ಈತನದು. ಆದರೂ ಕೂಟದ ಹತ್ತು ಮಂದಿಯ ನಿರ್ಣಯವನ್ನು ಈತನೂ ಮೀರಲಾರ. ಕೂಟದ ಯಶಸ್ಸು, ಅಪಯಶಸ್ಸು ಬುಧವಂತನ ಕಾರ್ಯವೈಖರಿಯನ್ನೇ ಹೆಚ್ಚಾಗಿ ಅವಲಂಬಿಸಿರುತ್ತದೆ. ಸೀಮೆಕೂಟದಲ್ಲಿಯೂ ಈತ ಗೌಡನ ಸಹಾಯಕನಾಗಿ ಆತನ ಜೊತೆಯಾಗಿರುತ್ತಾನೆ.

ಎರಡು ಹಳ್ಳಿಗಳ ತಂಟೆಗಳಿದ್ದಲ್ಲಿ ಎರಡು ಊರುಗಳ ಅಧಿಕಾರಿಗಳು ಪರಸ್ಪರ ಚರ್ಚಿಸಿ, ತಂಟೆಯನ್ನು ಬಗೆಹರಿಸಿಕೊಳ್ಳುತ್ತಾರೆ. ಅವರಿಂದ ತಂಟೆ ಬಗೆಹರಿಸಿಕೊಳ್ಳಲಾಗದಿದ್ದ ಅದನ್ನು ಸೀಮೆಕೂಟದಲ್ಲಿ ಚರ್ಚಿಸಿ ಪರಿಹಾರವನ್ನು ಕಂಡುಕೊಳ್ಳುತ್ತಾರೆ.

**ಸೀಮೆಯ ಆಡಳಿತ:** ಹಲವು ಊರುಗಳು ಸೇರಿ ಸೀಮೆಯಾಗುತ್ತವೆ. ಪ್ರತಿ ಸೀಮೆಗೆ ಸೀಮಾಧಿಕಾರಿಗಳಿರುತ್ತಾರೆ. ಸೀಮಾಧಿಕಾರಿಗಳ ಹೆಸರಿನಲ್ಲಿ ಸೀಮೆಯಿಂದ ಸೀಮೆಗೆ ಸ್ವಲ್ಪ ವ್ಯತ್ಯಾಸವಿದೆ.

ಎಲ್ಲಾ ಸೀಮೆಗಳಲ್ಲಿ ಅತಿದೊಡ್ಡ ಸೀಮೆಯಾದ ಚಂದವರ ಸೀಮೆಯಲ್ಲಿ 1. ಅರಸುಗೌಡ, 2. ಗುರುಗೌಡ, 3. ಪ್ರಧಾನಿಗೌಡ, 4. ಬುಧವಂತಗೌಡ (ಸೀಮೆ ಬುಧವಂತ) 5. ಜನಮನಗೌಡ, 6. ಕಟ್ಟೆ ಮನೆಗೌಡ, 7. ಸೀಮೆಕೋಲ್ಕಾರ ಹೀಗೆ ಏಳುಮಂದಿ ಸೀಮಾಧಿಕಾರಿಗಳಿದ್ದಾರೆ. ಅಂಕೋಲಾ ಸೀಮೆಯಲ್ಲಿಯೂ ಏಳು ಮಂದಿ ಸೀಮಾಧಿಕಾರಿಗಳಿದ್ದರೂ ಹೆಸರುಗಳು ಭಿನ್ನವಾಗಿವೆ. ಅವರು ಗೌಡರ ಹೆಸರಿನ ಜೊತೆಗೆ ನೆಲೆಸಿದ ಊರನ್ನು ಹೇಳುತ್ತಾರೆ. 1. ಶೇಡಗೇರಿ ಗುರು ಮನೆಗೌಡ, 2. ಬೆಳಸೆ ಗುರುಮನೆಗೌಡ, 3. ಹೊನ್ನಬೈಲ್ ಗುರುಮನೆಗೌಡ, 4. ಬೆಳಂಬಾರ್ ಮಾಲ್ ಗೌಡ, 5. ಶಿರೂರು ಪರ್ದಾನಿ, 6. ಬೆಳಂಬಾರಸೀಮೆ ಬುಧವಂತ, 7. ಸಿಂಗಣಮಕ್ಕಿ ಕೋಲ್ಕಾರ. ಅಂಕೋಲೆಯಲ್ಲಿ ಮೂರು ಮಂದಿ ಗುರುಮನೆಗೌಡರಿದ್ದರೆ, ಕಡವಾಡಲದಲ್ಲಿ ಮೂವರು ಕೋಲ್ಕಾರರಿರುತ್ತಾರೆ. ಕಡುವಾಡಸೀಮೆಯಲ್ಲಿ 1. ಹಳೇಕೋಟೆ ಅರಸುಗೌಡ, 2. ಮೈನ್ಬೇಣದ ಮಾನಾಡಗೌಡ, 3. ನಗ್ಗೆಯ ಗುರುಮನೆಗೌಡ, 4. ಬೆಳ್ಳೂರ ಪರ್ದಾನಿ, 5. ಗುಡ್ಡೆಹಳ್ಳಿಸೀಮೆ ಕೋಲ್ಕಾರ, 6. ನಿವ್ಳಿ ಕೋಲ್ಕಾರ, 7. ನಾರ್ ಗೇರಿ ಕೋಲ್ಕಾರ ಹೀಗೆ ಏಳು ಮಂದಿ ಸೀಮಾಧಿಕಾರಿಗಳು, ಗೋಕರ್ಣ ಸೀಮೆಯಲ್ಲಿ ಅರಸುಗೌಡನೇ ಗುರುಮನೆಗೌಡನೂ ಆಗಿರುತ್ತಾನೆ. ಅಲ್ಲಿ ಪ್ರತ್ಯೇಕ ಗುರುಗೌಡನಿಲ್ಲ. ಉಳಿದೆಲ್ಲ ವ್ಯವಸ್ಥೆ ಚಂದಾವರ ಸೀಮೆಯಂತೆಯೇ ಇದೆ.

ಸೀಮೆಯ ಕಟ್ಟುಕಟ್ಟಳೆಗಳು ಈಗ ಶಿಥಿಲವಾದ್ದರಿಂದ ಸೀಮಾಧಿಕಾರಿಗಳ ಹೆಸರು, ಅವರ ಸ್ಥಾನಮಾನಗಳು ಒಂದೊಂದು ಕಡೆ ಒಂದೊಂದು ರೀತಿಯಲ್ಲಿವೆ. ಒಟ್ಟಿನಲ್ಲಿ ಚಂದಾವರ ಸೀಮೆಯಲ್ಲಿ ಸೀಮೆಯ ವ್ಯವಸ್ಥೆ ಇದ್ದುದರಲ್ಲಿ ಸ್ವಲ್ಪಮಟ್ಟಿಗೆ ಗಟ್ಟಿಯಾಗಿದೆ. ಬಹುಶಃ ಹಾಲಕ್ಕಿ ಸೀಮೆಯ ವ್ಯವಸ್ಥೆಯು ಚಂದಾವರ ಸೀಮೆಯ ವ್ಯವಸ್ಥೆಯಂತಿರಬೇಕೆಂದು ನನಗನಿಸುತ್ತದೆ. ಆರಂಭದಲ್ಲಿ ಸೀಮೆಯ ಮಟ್ಟದಲ್ಲಿ ಅರಸು, ಗುರು, ಪ್ರಧಾನಿ, ಬುಧವಂತ, ಕೋಲ್ಕಾರ ಹೀಗೆ ಪಂಚಾಧಿಕಾರಿಗಳು ಇದ್ದಂತಿದೆ. ಅನಂತರ ಆಯಾ ಸೀಮೆಯ ಅಗತ್ಯಕ್ಕೆ ತಕ್ಕಂತೆ ಸೀಮಾಧಿಕಾರಿಗಳ ಸಂಖ್ಯೆ ಹೆಚ್ಚು ಕಡಿಮೆಯಾದಂತಿದೆ.

1. **ಅರಸುಗೌಡ:** ಸೀಮೆಯ ಉನ್ನತ ಅಧಿಕಾರಿಯೆಂದರೆ ಅರಸುಗೌಡ. ಹಿಂದೆ ತುಂಬಾ ಪ್ರಭಾವ ಶಾಲಿಯಾಗಿದ್ದ ಇವನ ಅಧಿಕಾರ ಆಧುನಿಕ ಯುಗದಲ್ಲಿ ಕ್ಷೀಣಿಸಿದೆ. ಹಿಂದೆ ಈತ ಪಲ್ಲಕ್ಕೇರಿ ಸೀಮಾ ಸಂಚಾರವನ್ನು ಮಾಡಿ, ಊರು ಆಡಳಿತದ ಮೇಲ್ವಿಚಾರಣೆಯನ್ನು ನಡೆಸುತ್ತಿದ್ದನಂತೆ. ಆ ಸಂದರ್ಭದಲ್ಲಿ ಪ್ರತಿ ಊರ ಗೌಡರೂ ಈತನನ್ನು ಆದರದಿಂದ ಸ್ವಾಗತಿಸಿ ಸತ್ಕರಿಸುತ್ತಿದ್ದರಂತೆ. ಈಗ ಅರಸುಗೌಡನ ಬಗೆಯ ಸಂಚಾರ ಕಾರ್ಯ ನಿಂತು ಹೋಗಿದೆ. ಅರಸುಗೌಡನು ತನ್ನ ಊರಿನ ಗೌಡನೂ ಆಗಿರುವುದರಿಂದ ಸೀಮೆಯ ಆಡಳಿತದ ಜೊತೆಗೆ ಊರಗೌಡನ ಕಾರ್ಯವನ್ನೂ ನಿರ್ವಹಿಸುತ್ತಾರೆ. ಸೀಮಾಕೂಟವು ಅರಸುಗೌಡನ ಹಿರಿತನದಲ್ಲಿಯೇ ನಡೆಯುತ್ತದೆ.

**2. ಗುರುಗೌಡ:** ಈತನು ಇಡೀ ಸೀಮೆಗೆ ಗೌರವಾನ್ವಿತ ಗುರು. ಕೆಲವರ ಅಭಿಪ್ರಾಯದಂತೆ ಅರಸುಗೌಡನನ್ನೂ ನಿಯಂತ್ರಿಸಬಲ್ಲ. ಇವನ ಸ್ಥಾನ ಅರಸುಗೌಡನಕ್ಕಿಂತ ಮೇಲಿನದು. ಅಂಕೋಲೆ ಸೀಮೆಯಲ್ಲಿ ಅರಸುಗೌಡನೇ ಇಲ್ಲ. ಅವರ ಸೀಮಾಕೂಟದ ಹಿರಿತನವನ್ನು ಪಡೆಯುವವನು ಶೇಡಗೇರಿಯ ಒಂದನೆಯ ಗುರು ಮನೆಯಗೌಡ. ಗುರುಗೌಡರು ಸೀಮೆಯ ಕೂಟದಲ್ಲಿ ಅರಸನಿಗೆ ಧಾರ್ಮಿಕ ಹಾಗೂ ಸಾಮಾಜಿಕ, ನೀತಿ ತೀರ್ಮಾನವನ್ನು ನೀಡುವಂತೆ ಸಹಾಯ ಸಲ್ಲಿಸುತ್ತಾನೆ. ಕೂಟದ ಹತ್ತು ಮಂದಿಯ ನಿರ್ಧಾರವನ್ನು ಕಾನೂನು ಸ್ವರೂಪವನ್ನು ಪಡೆಯುವುದು ಈತನಿಂದ. ಕೂಟದಲ್ಲಿ ಸಮಾಜವು ಕ್ಷಮಿಸಿದ ಅಪವಿತ್ರರನ್ನು ಶುಚಿಗೊಳಿಸುವ, ಪುನರ್‌ವಿವಾಹಕ್ಕೆ ಅನುಮತಿಯನ್ನು ನೀಡುವ, ಸುಗ್ಗಿಯ ಕಾಲಕ್ಕೆ ಊರಗೌಡರಿಗೆ ಕುಂಚವನ್ನು ವಿತರಿಸುವ ಅಧಿಕಾರ ಈತನದು. ಹಿಂದೆ ಈತ ಹಾಲಕ್ಕಿ ಕೊಪ್ಪಳಿಗೆ ಭೇಟಿಯಿತ್ತಾಗ ತೆಂಗಿನ ಕಾಯಿತ್ತು ಗೌರವಿಸುವ ಪರಿಪಾಟವಿತ್ತು. ಈತನು ತಾನು ವಾಸಿಸುವ ಊರಿನ ಗೌಡನೂ ಆಗಿ ಕಾರ್ಯ ನಿರ್ವಹಿಸುತ್ತಾನೆ. ಸೀಮಾಕೂಟದಲ್ಲಿ ಈತನಿಗೆ ಗೌರವಯುತ ಸ್ಥಾನವಿದೆ.

**2. ಪ್ರಧಾನಿಗೌಡ:** ಸೀಮೆಯ ಕೂಟದಲ್ಲಿ ಅರಸನಿಗೆ ಪರಂಪರೆಯ ಹಿನ್ನೆಲೆಯಲ್ಲಿ ಅಪರಾಧಿಗಳಿಗೆ ಅವರ ಅಪರಾಧದ ಸ್ವರೂಪಕ್ಕನುಗುಣವಾಗಿ ಯಾವ ರೂಪದ ಶಿಕ್ಷೆಯನ್ನು ನೀಡಬಹುದೆನ್ನುವ ಸಲಹೆ ಸೂಚನೆಯನ್ನು ನೀಡುತ್ತಾನೆ. ಇವನ ಸೂಚನೆಯ ಆಧಾರದ ಮೇಲೆಯೆ ಅರಸು ಕೊನೆಯ ತೀರ್ಮಾನಕ್ಕೆ ಬರುತ್ತಾನೆ. ಈತನು ತನ್ನ ಊರಿನ ಗೌಡನಾಗಿ ಕಾರ್ಯಭಾರವನ್ನು ನಿರ್ವಹಿಸುತ್ತಾನೆ.

**4. ಸೀಮೆಯ ಬುದವಂತ:** ಈತನೂ ತನ್ನ ಕೊಪ್ಪಕ್ಕೆ ಗೌಡನಾಗಿರುತ್ತಾನೆ. ಸೀಮೆಗೆ ಬುಧವಂತ ನಾಗಿರುತ್ತಾನೆ. ನಿಗದಿತ ನಿಯಮಾನುಸಾರವಾಗಿ ಸೀಮೆಯ ಕೂಟವನ್ನು ಕರೆಯುವ ಅಧಿಕಾರವನ್ನು ಈತ ಹೊಂದಿರುತ್ತಾನೆ. ಸೀಮೆಯ ಕೂಟದಲ್ಲಿ ಚರ್ಚಿಸಬೇಕಾದ ವಿಷಯವನ್ನು ಸಂಬಂಧಪಟ್ಟವರು ಈತನಿಗೆ ಮೊದಲೇ ತಿಳಿಸಬೇಕಾಗುತ್ತದೆ. ಸೀಮಾಕೂಟದಲ್ಲಿ ಮಂಡಿಸಬೇಕಾದ ವಿಷಯ ಮಂಡನೆಗೆ ಅರ್ಹವೋ ಅನರ್ಹವೋ ಎನ್ನುವುದನ್ನು ನಿರ್ಧರಿಸಿ ಅದನ್ನು ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸುತ್ತಾನೆ. ಸಂಬಂಧಪಟ್ಟ ವಿಷಯಕ್ಕೆ ಹಲವಾರು ಸಾಕ್ಷ್ಯಾಧಾರಗಳನ್ನು ಪಡೆದು ಸಭೆಯ ಮುಂದೆ ವಿಷಯ ಮಂಡನೆಯನ್ನು ಮಾಡುತ್ತಾನೆ. ಸಭೆಗೆ ಅಗತ್ಯವಾಗಿ ಬೇಕಾಗುವ ವ್ಯಕ್ತಿಗಳನ್ನು ಕರೆಸುತ್ತಾನೆ. ಸಭೆಯಲ್ಲಿ ಚರ್ಚಿಸತಕ್ಕ ವಿಷಯಗಳಿಗೆ ಹಾಗೂ ಅಪರಾಧಿಗಳಿಗೆ ಸಂಬಂಧಿಸಿದ ಪಾಟೀ ಸವಾಲು ಹಾಕಿ, ಸಮಸ್ಯೆಯ ಇತ್ಯರ್ಥದ ಮಾರ್ಗವನ್ನು ಸುಗಮಗೊಳಿಸುತ್ತಾನೆ.

**5. ಮಾನಾಡಗೌಡ:** ಈ ಸೀಮಾಧಿಕಾರಿ ಕಡವಾಡ ಸೀಮೆಯಲ್ಲಿ ಮಾತ್ರ ಇದ್ದಾನೆ. ಸೀಮಾಕೂಟದಲ್ಲಿ ಅರಸುಗೌಡನ ಅನುಪಸ್ಥಿತಿಯಲ್ಲಿ ಅರಸುಗೌಡನ ಕಾರ್ಯವನ್ನು ಮನಾಡಗೌಡ ನಿರ್ವಹಿಸುತ್ತಾನೆ. ಬಹುಶಃ ಅರಸನ ಸ್ಥಾನವು ಅತ್ಯಂತ ಮಹತ್ವದ್ದಾದುದರಿಂದ ಯಾವುದೇ ಕಾರಣಕ್ಕೂ ಆ ಸ್ಥಳ

ತೆರವಾಗಬಾರದೆಂದು ಈ ವ್ಯವಸ್ಥೆಯನ್ನು ಕಡವಾಡ ಸೀಮೆಯವರು ಮಾಡಿಕೊಂಡಿರಬೇಕು. ಈ ಸೀಮಾಧಿಕಾರಿ ಇನ್ನಿತರ ಸೀಮೆಗಳಲ್ಲಿ ಇಲ್ಲ.

6. **ಮಾಲ್ ಗೌಡ:** ಅಂಕೋಲಾ ಸೀಮೆಯಲ್ಲಿ ಮಾತ್ರ ಈ ಸೀಮಾಧಿಕಾರಿಯಿದ್ದಾನೆ. ಬಹುಶಃ ಮಾನಾಡಗೌಡನೇ(ಮಾನಾಡ್–ಮಾಲ್)ಮಾಲ್ ಗೌಡನೆಂದು ಪರಿವರ್ತನೆಗೊಂಡಿರಬೇಕು. ಇತ್ತೀಚಿನ ದಿನಗಳಲ್ಲಿ ಅನೇಕ ಸೀಮೆಗಳಲ್ಲಿ ಸೀಮೆಕೂಟಗಳು ನಡೆಯದ ಪ್ರಯುಕ್ತ ಕೆಲವು ಸೀಮಾಧಿಕಾರಿಗಳ ಕಾರ್ಯಭಾರದ ಸ್ಪಷ್ಟ ತಿಳುವಳಿಕೆಯಾಗುವುದಿಲ್ಲ.

7. **ಜನಮನೆಗೌಡ:** ತನ್ನೂರಿನಲ್ಲಿ ಗೌಡಿಕೆಯನ್ನು ನಡೆಸುವ ಈತ, ಸೀಮೆಯ ಬುಧವಂತನಿಗೆ ಸೀಮೆ ಕೂಟದಲ್ಲಿ ಬರುವ ವಿಷಯಗಳ ಪಟ್ಟಿ ತಯಾರಿಕೆಯಲ್ಲಿ ನೆರವು ನೀಡುತ್ತಾನೆ. ಚರ್ಚೆಯ ವಿಷಯದ ಸಮಂಜಸತೆಯನ್ನು ಕುರಿತು ಸೀಮಾ ಬುಧವಂತನೊಡನೆ ಸಮಾಲೋಚಿಸಿ ವಿಷಯಪಟ್ಟಿಯಲ್ಲಿ ಸೇರಿಸಲು ಸಹಾಯ ಸಲ್ಲಿಸುತ್ತಾನೆ. ಸೀಮೆಯಲ್ಲಿರುವ ಜನ ಹಾಗೂ ಮನೆಗಳ ಲೆಕ್ಕವನ್ನು ಇಡುವುದರಿಂದ ಈತನಿಗೆ ಈ ಹೆಸರು ಬಂದಿರಬೇಕೆಂಬ ಊಹೆಯೊಂದಿದೆ. ಈ ಅಧಿಕಾರಿ ಇತರ ಸೀಮೆಗಳಲ್ಲಿಲ್ಲ. ಕೇವಲ ಚಂದಾವರ ಸೀಮೆಯಲ್ಲಿ ಮಾತ್ರ ಇದ್ದಾನೆ.

8. **ಕಟ್ಟೆಮನೆಗೌಡ:** ಈ ಸೀಮಾಧಿಕಾರಿ ಚಂದಾವರ ಸೀಮೆಯಲ್ಲಿ ಮಾತ್ರ ಸಿಗುತ್ತಾನೆ. ಈತ ಸೀಮೆಯ ಕೂಟದಲ್ಲಿ ಇತರ ಸೀಮಾಧಿಕಾರಿಗಳಿಗೆ ಅಗತ್ಯಬಿದ್ದ ನೆರವನ್ನು ನೀಡುತ್ತಾನೆ. ಸೀಮೆಕೂಟದಲ್ಲಿ ಗುರುವಿಗೆ ಹಸೆ ಹಾಕುವ ಕೆಲಸ ಈತನದು. ಕೆಲವೆಡೆ 'ಹಸ್ಮಣೆಗಾರರು' ಎಂಬ ಹೆಸರಿನಲ್ಲಿ ಸೀಮಾ ಕೂಟಗಳಲ್ಲಿ ಸೀಮೆಯ ಅಧಿಕಾರಿಗಳಿಗೆ ಹಸೆ ಮಣೆ(ಆಸನ)ಮುಂತಾದವನ್ನು ಒದಗಿಸುವ ಅಧಿಕಾರಿಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದು.

9. **ಸೀಮೆಯ ಕೋಲ್ಕಾರ:** ಪ್ರತಿ ಸೀಮೆಗೂ ಒಬ್ಬ ಕೋಲ್ಕಾರನಿರುತ್ತಾನೆ. ಈ ನಿಯಮಕ್ಕೆ ಅಪವಾದವಾಗಿ ಕಡವಾಡ ಸೀಮೆಗೆ ಮೂರು ಜನ ಕೋಲ್ಕಾರರಿದ್ದಾರೆ. ಸೀಮಾಧಿಕಾರಿಗಳ ಸಾಮಾಜಿಕ ಧಾರ್ಮಿಕ ಆದೇಶಗಳನ್ನು ಸೀಮಾಕೂಟದ ಸಮಾಚಾರವನ್ನು ಸೀಮೆಯ ಮನೆ ಮನೆಗೆ ಮುಟ್ಟಿಸುವುದು, ಸೀಮಾ ಕೂಟಕ್ಕೆ ಅಗತ್ಯವಿರುವ ವ್ಯಕ್ತಿಗಳನ್ನು ಕರೆಯುವುದು ಈತನ ಕೆಲಸವಾಗಿರುತ್ತದೆ. ಸೀಮಾಧಿಕಾರಿಗಳ ಆದೇಶವನ್ನು ಹೊತ್ತು ಹೋಗುವಾಗ ಕೈಯಲ್ಲಿ ಕೋಲನ್ನು ಹಿಡಿದು ಹೋಗುವುದರಿಂದ ಈತನಿಗೆ ಕೋಲ್ಕಾರನೆನ್ನುವ ಹೆಸರು ಬಂದಂತಿದೆ.

ಮೇಲಿನ ಎಲ್ಲ ಸೀಮಾಧಿಕಾರಿಗಳ ಅಧಿಕಾರವು ವಂಶಪರಂಪರೆಯಿಂದಲೇ ಬಂದಿರುತ್ತದೆ. ವಂಶಪರಂಪರೆಯಿಂದ ಅಧಿಕಾರ ಪಡೆದವರೆಲ್ಲ ಬುದ್ಧಿವಂತರೆ ಇರುತ್ತಾರೆಂದು ಹೇಳಲಿಕ್ಕಾಗದು. ಅವರು ದುರ್ಬಲರೂ ತಿಳಿಗೇಡಿಗಳೂ ಆಗಿರಬಹುದು. ಆದರೆ ಸೀಮಾಕೂಟದಲ್ಲಿ ಪ್ರತಿಯೊಬ್ಬ ಸದಸ್ಯನಿಗೂ ಸಮಾನ ಅಧಿಕಾರವಿರುವುದರಿಂದ, ಸೀಮೆಯ ಅಧಿಕಾರಿಗಳು ಮಾಡಿದ ತಪ್ಪನ್ನು ತಿದ್ದಲಿಕ್ಕೆ ಸಾಮಾನ್ಯ ಸದಸ್ಯನಿಗೂ ಅವಕಾಶವಿರುವುದರಿಂದ, ನೆರೆದ ಹತ್ತು ಮಂದಿ ಚರ್ಚಿಸಿ,

ನಿರ್ಣಯ ತೆಗೆದುಕೊಳ್ಳುವುದರಿಂದ ನಿರ್ಣಯ ಸರ್ವಮಾನ್ಯವಾಗುವುದು ಸಹಜವೇ ಆಗಿದೆ. ಸಮೂಹದಲ್ಲಿ ದುರ್ಬಲ ಸೀಮಾಧಿಕಾರಿಯಿದ್ದಲ್ಲಿ ಅವನ ನ್ಯೂನತೆ ಮುಚ್ಚಿಹೋಗುತ್ತದೆ.

**ಸೀಮಾಕೂಟ**

ಸೀಮೆಯ ಕೂಟವನ್ನು ಸೀಮೆಯ ಜನರ ಬೇಡಿಕೆಗನುಗುಣವಾಗಿ ಸಾಮಾನ್ಯವಾಗಿ ಎರಡು ವರ್ಷಗಳಿಗೊಮ್ಮೆ ಕರೆಯುವ ಪದ್ಧತಿ ಹಿಂದೆಯಿತ್ತು. ಊರಿನ ಆಡಳಿತಾಧಿಕಾರಿಗಳಿಂದ ಬಗೆಹರಿಯದ ತಂಟೆ–ತಕರಾರುಗಳನ್ನು ಸೀಮೆಕೂಟದಲ್ಲಿ ಚರ್ಚಿಸಿ, ಸರ್ವಮಾನ್ಯವಾದ ನಿರ್ಣಯ ತೆಗೆದುಕೊಳ್ಳುತ್ತಿದ್ದರು. ಸೀಮೆಯ ಕೂಟದ ಸದಸ್ಯರಿಗೆ ಹಾಗೂ ಸೀಮೆಯ ಕೂಟದ ನಿರ್ಣಯಗಳನ್ನು ಆಲಿಸಲು ಪ್ರೇಕ್ಷಕರಾಗಿ ಬಂದ ನೂರಾರು ಜನರಿಗೆ ಅರಸುಗೌಡನ ಮನೆಯ ಅಂಗಳದಲ್ಲಿ ಇಲ್ಲವೇ ಊರ ಬೈಲಿನಲ್ಲಿ ದೊಡ್ಡ ಚಪ್ಪರ ಹಾಕುತ್ತಿದ್ದರು. ಆದ್ದರಿಂದ ಈ ಸೀಮಾಕೂಟವನ್ನು ಹಾಲಕ್ಕಿ ಒಕ್ಕಲಿಗರು 'ಚಪ್ಪರಕೂಟ'ವೆಂದು ಕರೆಯುತ್ತಾರೆ. ಸೀಮೆಯ ಜನರ ಬೇಡಿಕೆಗನುಸಾರವಾಗಿ ಸೀಮೆಯ ಬುದವಂತಸೀಮಾಕೂಟದ ವಿಷಯ ಪಟ್ಟಿಕೆಯನ್ನು ತಯಾರಿಸಿ ಸೀಮಾಕೂಟವನ್ನು ಕರೆಯಲು ಅರಸುಗೌಡನಿಗೆ ಸೂಚಿಸುತ್ತಾನೆ.

ಒಂದು ಸೀಮೆಯ ಅಧೀನದಲ್ಲಿರುವ ಪ್ರತಿಯೊಂದು ಊರಿನ ಗೌಡ, ಬುಧವಂತರಾದಿ ಊರಿನ ಎಲ್ಲ ಅಧಿಕಾರಿಗಳು ಸೀಮಾಕೂಟದ ಸದಸ್ಯರಾಗಿರುತ್ತಾರೆ. ಸೀಮಾಕೂಟದ ಎಲ್ಲ ಸದಸ್ಯರನ್ನೂ ಸಮಾನರೆಂದು ಪರಿಗಣಿಸಲಾಗುತ್ತದೆ. ಸಾಮಾನ್ಯ ಊರ ಅಧಿಕಾರಿಯೂ ಸಹ ಅರಸು, ಗುರು ಪ್ರಧಾನಿಯೇ ಮುಂತಾದ ಸೀಮೆಯ ಹಿರಿಯ ಅಧಿಕಾರಿಗಳು ಮಾಡಿದ ತಪ್ಪನ್ನು ಸಭೆಯಲ್ಲಿ ಎತ್ತಿ ಹೇಳಬಹುದು. ಸಭೆಯಲ್ಲಿ ಅವರ ತಪ್ಪು ಸಾಬೀತಾದರೆ, ಅವರೂ ದಂಡನಾರ್ಹರಾಗುತ್ತಾರೆ.

ಸೀಮಾಕೂಟದ ಖರ್ಚನ್ನು ಸೀಮೆಯ ಎಲ್ಲ ಮನೆಗಳೂ ಭರಿಸಬೇಕಾಗುತ್ತದೆ. ಊರಿನ ಗೌಡ ಬುಧವಂತರು ಕೋಲ್ಕಾರನ ಸಹಾಯದಿಂದ ತಮ್ಮ ತಮ್ಮ ಊರಿನ ಎಲ್ಲ ಮನೆಗಳಿಂದ 'ವರಾಡು'(ತೆರಿಗೆ) (ವರಗಣಿಕೆ>ವರ್ಗಣಿ) ವಸೂಲ್ ಮಾಡಿ ಸೀಮೆಗೆ ತಲುಪಿಸುತ್ತಾರೆ. ಈ ವಂತಿಗೆ ಹಣ ಇಲ್ಲವೆ ವಸ್ತುವಿನ ರೂಪದಲ್ಲಿಯೂ ಇರಬಹುದು. ಈ ಸೀಮೆಕೂಟ ಒಂದು ವಾರದಿಂದ ಒಂದು ವರ್ಷದವರೆಗೆ ನಡೆದ ಉದಾಹರಣೆಗಳಿವೆ.

ಸೀಮಾಕೂಟದಲ್ಲಿ ಸಮಾಜ ಸಂಘಟನೆ, ಸುಧಾರಣೆಗಳ ಕುರಿತಾಗಿ ಮಾಡಬೇಕಾದ ಕಾರ್ಯ, ಜಾತಿಯ ಕಟ್ಟನ್ನು ಉಲ್ಲಂಘಿಸಿದವರ ಮೇಲೆ ಕೈಗೊಳ್ಳಬೇಕಾದ ಕ್ರಮ, ಊರ ಅಧಿಕಾರಿಗಳ ಮಟ್ಟದಲ್ಲಿ ನಿರ್ಣಯವಾಗದ ತಂಟೆ ತಕರಾರು, ಜಾತಿಯ ಅಧಿಕಾರಿಗಳ ಮೇಲಿನ ಆರೋಪಗಳು ಮುಂತಾದ ವಿಷಯಗಳೆಲ್ಲ ಮಂಥನಕ್ಕೊಳಗಾಗಿ ಒಂದು ನಿರ್ಣಯ ಘಟ್ಟಕ್ಕೆ ಮುಟ್ಟುತ್ತದೆ.

### ಸೀಮಾಕೂಟದ ಕಂಬದ ದೇವರು

ಕಡವಾದ ಸೀಮೆಯ ಸೀಮಾಕೂಟ ನಡೆಯುವುದು ಈ ಸೀಮೆಯ 22 ಹಳ್ಳಿಗಳು ನಡೆದುಕೊಳ್ಳುವ ನಾರ್ ಗೇರಿಯ ಕಂಬದ ದೇವರ ಸನ್ನಿಧಿಯಲ್ಲಿ ಪ್ರಶಾಂತವಾದ ಬಯಲು ಸ್ಥಳದ ಒಂದು ಮರದಡಿಯಲ್ಲಿ ಇದ್ದ ಒಂದೂವರೆ ಅಡಿ ಎತ್ತರದ ನಿರಾಕಾರ ಶಿಲೆ ಹಾಗೂ ಈ ಶಿಲೆಯ ಹಿಂದಿರುವ ನಕ್ಷೆ ಬಿಡಿಸಿದ ಕಂಬವನ್ನೇ "ಕಂಬದ ದೇವರು" ಎಂದು ಕರೆಯುತ್ತಾರೆ. ಈ ದೇವರಿಗೆ ಪೂಜೆಯನ್ನು ಸಲ್ಲಿಸುವಾಗ ದೇವರ ತಲೆಯ ಮೇಲೆ "ಪಿನ್ನದ ಕೊಡ" ಎಂದು ಮಂಡಲಿನ ಕೊಡೆಯೊಂದನ್ನಿಟ್ಟು ಪೂಜಿಸುವ ಪರಿಪಾಟವಿತ್ತಂತೆ. ಈ ದೇವರ ಸುತ್ತಲೂ ಎಂಟು ಅಡಿ ವ್ಯಾಸದ ವೃತ್ತಾಕಾರದ ಪ್ರಾಕಾರವಿದೆ. ಇದರೊಳಗೆ ಪ್ರವೇಶಿಸಲು ನಿಷೇಧವಿದೆ. ಆದರೆ ಗೌಡ ಮಾತ್ರ ಸೀಮಾಕೂಟದಲ್ಲಿ ಅಂತಿಮ ನಿರ್ಣಯವನ್ನು ಈ ಪ್ರಾಕಾರದೊಳಗೆ ನಿಂತೇ ನೀಡುತ್ತಾನೆ.

### ಸಮಾನತೆ

ಸೀಮಾಕೂಟದಲ್ಲಿ ಎಲ್ಲರೂ ಸಮಾನರು, ಅರಸುಗೌಡರಾದಿಯಾಗಿ ಯಾರೂ ಸರ್ವಾಧಿಕಾರಿಗಳಲ್ಲ. ಸೀಮೆಯ ಕೂಟದಲ್ಲಿ ಚರ್ಚೆಯ ವಿಷಯದಲ್ಲಿ. ಯಾರೂ ಸರ್ವಾಧಿಕಾರಿಗಳಲ್ಲ ಸೀಮೆಯ ಕೂಟದಲ್ಲಿ ಚರ್ಚೆಯ ವಿಷಯ ಪ್ರಸ್ತಾಪ ಮಾಡುವವ ಸೀಮೆಯ ಬುಧವಂತನಾದರೆ ಶಿಕ್ಷೆಯ ಸ್ವರೂಪವನ್ನು ನಿರ್ದೇಶಿಸುವವನು ಪ್ರಧಾನಿ. ದಂಡ ಹಾಗೂ ಶಿಕ್ಷೆಯನ್ನು ವಿಧಿಸುವಾತನು ಗುರುವಾದರೆ, ಶಿಕ್ಷೆಯನ್ನು ಕಾರ್ಯಾಚಾರಣೆಯಲ್ಲಿ ತಂದು ದಂಡ ವಸೂಲಿ ಮಾಡುವವನು ಅರಸು. ಸಾರ್ವಜನಿಕವಾಗಿ ನಡೆಯುವ ಈ ಕೂಟದಲ್ಲಿ ವಿಷಯ ತನ್ನ ನಿರ್ಣಾಯಕ ಘಟ್ಟವನ್ನು ತಲುಪುವ ಪೂರ್ವದಲ್ಲಿ ಸದಸ್ಯರೂ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ತಮ್ಮ ಅಭಿಪ್ರಾಯವನ್ನು ಮಂಡಿಸುವ ಸ್ವಾತಂತ್ರ್ಯ ಪಡೆದಿರುವುದರಿಂದ ಕೂಟದ ನಿರ್ಣಯವು ವ್ಯಷ್ಟಿ ನಿರ್ಣಯವಾಗಿರದೆ ಸಮಷ್ಟಿಯದ್ದಾಗಿರುತ್ತದೆ. ಅದಕ್ಕೆ ಎಲ್ಲರೂ ಬದ್ಧರಾಗಬೇಕಾಗುತ್ತದೆ.

ಕುಣಬಿ, ಜೇನುಕುರುಬ, ಬೆಟ್ಟಕುರುಬ ಮತ್ತು ಸೋಲಿಗರ ರೀತಿ ಹಾಲಕ್ಕಿ ಬುಡಕಟ್ಟುಗಳಲ್ಲಿ ಅದರ ಆಚರಣೆ, ಕಾಡಿನ ಉತ್ಪನ್ನಗಳ ಹಂಚುವಿಕೆ, ಗಡಿ ದೈವಗಳ ವಿಚಾರದಲ್ಲಿ ಇರುವಂತಹ ಆದಿಮ ಸ್ಥಿತಿ ಹಾಲಕ್ಕಿಗಳಲ್ಲಿ ಕಂಡುಬರುವುದಿಲ್ಲ. ಬದಲಾಗಿ ಈ ಪದ್ಧತಿಯು ಹಾಲಕ್ಕಿಗಳಲ್ಲಿ ಕಾಡಿನಿಂದ ನಾಗರಿಕ ಬದುಕಿಗೆ ಪಾದಾರ್ಪಣೆ ಮಾಡುತ್ತಿರುವಂತಹ ಸಂದರ್ಭದ ಭಾಗವಾಗಿ ಸೀಮಾಪದ್ಧತಿಯು ವಿಕಸಿತಗೊಂಡ ಪದ್ಧತಿಯ ರೀತಿಯಲ್ಲಿ ಗೋಚರವಾಗುತ್ತಿದೆ. ಕಾರಣ, ಇತರ ಬುಡಕಟ್ಟುಗಳಲ್ಲಿ ಪ್ರತಿ ಹಾಡಿಗೆ ಪ್ರತ್ಯೇಕ ಸೀಮೆಗಳಿವೆಯೇ ಹೊರತು ಹಾಲಕ್ಕಿಗಳಲ್ಲಿರುವ ಹಾಗೆ 160 ಹಳ್ಳಿಗಳನ್ನು 7 ಸೀಮೆಗಳನ್ನಾಗಿ ವಿಭಾಗಿಸಿದೆ. ಸೀಮೆಯ ವ್ಯಾಜ್ಯ, ಹಬ್ಬ-

ಆಚರಣೆಗಳು, ದೈವ, ಸಂಸ್ಕೃತಿ ಇವುಗಳ ತೀರ್ಮಾನ ಮಾಡಲು ಮಾಡಿಕೊಂಡ 'ಕೂಟ', ಗದ್ದಿಗೆಯ ವ್ಯವಸ್ಥೆ, ಸೀಮೆಯ ನಾಯಕತ್ವ ಮತ್ತು ಇಡೀ ಹಳ್ಳಿಗಳ ಸೀಮೆಯ ಸಾಮಾಜಿಕ ಆಡಳಿತಗಳನ್ನು ನಿಯಂತ್ರಿಸಲು ಹಾಲಕ್ಕಿ ಸೀಮಾವ್ಯವಸ್ಥೆಯ ಆದಿಮ ಸ್ಥಿತಿಯಿಂದ ವಿಕಸಿತಗೊಂಡು ಕೊಂಚಮಟ್ಟಿಗೆ ನಾಗರಿಕತೆಯ ರೂಪವನ್ನು ತಾಳಿದೆ. ಆದ್ದರಿಂದ ಆಡಳಿತ ವ್ಯವಸ್ಥೆ ಭಾಗವಾದ ಅರಸುಗೌಡ, ಗುರುಗೌಡ, ಪ್ರಧಾನಿಗೌಡ, ಬುದವಂತಗೌಡ, ಜನಮನೆ ಗೌಡ, ಕಟ್ಟೆಮನೆಗೌಡ, ಸೀಮಾ ಕೋಲ್ಕಾರ. ಹೀಗೆ 7 ಸೀಮಾಧಿಕಾರಿಗಳಿರುವಂತಹ ಅತ್ಯಂತ ವ್ಯವಸ್ಥಿತವಾದ ಸಾಮಾಜಿಕ ಆಡಳಿತದ ಈ ರೀತಿಯ ವಿಕಸಿತ ಮಾದರಿ ಬುಡಕಟ್ಟುಗಳಲ್ಲಿ ಇರುವಂತೆ ಕಾಣುವುದಿಲ್ಲ. ಹಾಗಾಗಿ ಬುಡಕಟ್ಟುಗಳು ಸಾಮಾಜಿಕವಾಗಿ ಸುಧಾರಿಸಿಕೊಂಡು ಕಾಡಿನ ಜೀವನದಿಂದ ನಾಡಿನ ನಾಗರಿಕ ಬದುಕಿಗೆ ಪಾದಾರ್ಪಣೆಯ ಹಾದಿಯಲ್ಲಿರುವ ಸೇತುವೆಯ ಕೊಂಡಿಯ ಮಾದರಿಯಲ್ಲಿ ಹಾಲಕ್ಕಿ ಒಕ್ಕಲಿಗ ಸಮುದಾಯದ ಸೀಮಾಪದ್ಧತಿ ಇದ್ದಂತೆ ಭಾಸವಾಗುತ್ತಿದೆ. ಈಗಾಗಲೇ ಪ್ರಸ್ತಾಪಿಸಿಸಿರುವ ಹಾಗೆ, ಹಾಲಕ್ಕಿಗಳ ಸೀಮಾಪದ್ಧತಿಯು ಸಾಮ್ರಾಜ್ಯಶಾಹಿಗಳ ಕಾರಣ ಆದಿವಾಸಿ ಮೂಲ ಸೀಮಾಪದ್ಧತಿ ಸ್ಥಿತ್ಯಂತರಗೊಂಡು ಫ್ಯೂಡಲ್ ಸೀಮಾಪದ್ಧತಿಯಾಗಿ ರೂಪಾಂತರಗೊಂಡು 7 ಸೀಮೆಗಳಾದದ್ದನ್ನು ಕಾಣಬಹುದಾಗಿದೆ. ಹಾಲಕ್ಕಿಗಳಲ್ಲಿ ಆಚರಿಸಲಾಗುವ ಬಂಡಿಹಬ್ಬ ಅದರ ದ್ಯೋತಕವಾಗಿದೆ. ಬಂಡಿಹಬ್ಬವನ್ನು 12 ದಿನ ಆಚರಿಸಲಾಗುತ್ತದೆ. ಆ ದಿನ ಬಂಡಿಯನ್ನು ಓಡಿಸುವ ಪದ್ಧತಿಯೂ ಇದೆ. ಈ ಬಂಡಿಯನ್ನು ಯುದ್ಧದಲ್ಲಿ ಬಳಸಲಾಗುತ್ತಿದ್ದು, ಬಂಡಿಯ ಪ್ರತಿರೂಪವಾಗಿರುತ್ತದೆ. ನಾಲ್ಕು ದೊಡ್ಡ ಮರದ ರಥದ ಗಾಲಿಗಳಲ್ಲಿರುವಂತೆ ಗಾಲಿಗಳು ಮತ್ತು ಸಿಡಿಯಲ್ಲಿನ ದೊಡ್ಡ ಕಂಬವನ್ನು ಏರಿಸಲೂ ಇಳಿಸಲೂ ಆಗುವಂತೆ ಬಂಡಿಗೆ ಜೋಡಿಸಿರುತ್ತಾರೆ. ಕಂಬದ ತುದಿಯಲ್ಲಿ ಎತ್ತಿನ ನೊಗವಿರುವಂತೆ ಎರಡೂ ಬದಿಗೆ ಯೋಧರನ್ನು ಕಟ್ಟಿರುತ್ತಾರೆ. ಯೋಧರ ಕೈಗಳಿಗೆ ಬಹಳ ಉದ್ದದ ತಲವಾರಿನಂತಹ ಕತ್ತಿ ನೀಡಿರುತ್ತಾರೆ. ಯುದ್ಧದಲ್ಲಿ ಬಂಡಿಯನ್ನು ಎಳೆದುಕೊಂಡು ಹೋಗುವಾಗ ಎದುರಿಗೆ ವೈರಿಗಳು ಬರುವ ಸಂದರ್ಭದಲ್ಲಿ ಎತ್ತರಿಸಲಾಗಿರುವ ಸಿಡಿಯನ್ನು ಕೆಳಗೆ ತರುತ್ತಾರೆ. ಆಗ ನೊಗಕ್ಕೆ ಕಟ್ಟಲಾಗಿರುವ ಎರಡೂ ಯೋಧರು ಮುಂದೆ ಬರುತ್ತಿರುವ ವೈರಿಗಳನ್ನು ಉದ್ದ ಕತ್ತಿಯಿಂದ ಕತ್ತರಿಸುತ್ತಾರೆ. ನಂತರ ನೊಗದ ಸಿಡಿಯನ್ನು ಮೇಲಕ್ಕೆತ್ತಲಾಗುತ್ತದೆ. ಈ ಬಂಡಿಯನ್ನು ಯುದ್ಧದಲ್ಲಿ ಬಳಸಲಾಗುತ್ತಿತ್ತು. ಅದರ ದ್ಯೋತಕವಾಗಿ ಈಗಲೂ ಸೀಮಾಹಬ್ಬದ ಭಾಗವಾಗಿ ಹಾಲಕ್ಕಿಗಳು ಬಂಡಿಹಬ್ಬವನ್ನು ಆಚರಿಸುತ್ತಾರೆ.

ಬಂಡಿಹಬ್ಬದಲ್ಲಿ ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಮುಖವಾಡಗಳನ್ನು ಧರಿಸಿದ ಒಂದಷ್ಟು ಹಾಲಕ್ಕಿಗಳು ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಾರೆ. ಅವರ ಮೈ ಮೇಲೆ ವೀರ ಯೋಧರ ಆತ್ಮಗಳು ಆವಾಹನೆಗೊಂಡಿರುತ್ತವೆ. ಅವರ ಜೊತೆ ಹರಕೆ ಹೊತ್ತು ಕಟ್ಟಿಗೆ ಹಿಡಿದವರು ಮತ್ತು ಮಾಲೆ ಹಾಕಿದವರೂ ಇರುತ್ತಾರೆ. ಇವರು ದೇವಸ್ಥಾನದ ಮುಂದೆ

ಹಾಕಲಾಗಿರುವ ಕೆಂಡದ ಕುಂಡವನ್ನು 'ಕೆಂಡದ ಬೀರ'ನೆಂದು ಕರೆಯುತ್ತಾರೆ. ಉತ್ಸವದ ಮೂರ್ತಿಯೊಂದಿಗೆ, ವೀರ ಮುಖವಾಡ ಧರಿಸಿದವರು ಕಟ್ಟಿಗೆ ಹಿಡಿದವರು ಮತ್ತು ಮಾಲೆ ಹಾಕಿದವರು ಆವೇಶಭರಿತರಾಗಿ ಕೆಂಡ ಹಾಯುತ್ತಾರೆ. ಉತ್ಸವ ದುರ್ಗಾ ದೇವಿ ಗುಡಿಗೆ ತಲುಪುತ್ತದೆ. ಒಟ್ಟಿನಲ್ಲಿ ಬಂಡಿಹಬ್ಬ ಸಂಪೂರ್ಣ ಸೀಮಾಪದ್ಧತಿಯನ್ನು ಪ್ರತಿಬಿಂಬಿಸುವ ಯುದ್ಧದಲ್ಲಿ ಮಡಿದ ಯೋಧರಿಗೆ ಗೌರವ ಅರ್ಪಿಸುವ ದ್ಯೋತಕದ ಅಂಗವಾಗಿ ಬಂಡಿ ಹಬ್ಬವನ್ನು ಹಾಲಕ್ಕಿಗಳು ಆಚರಿಸುವುದರಲ್ಲಿ ಕಾಣಬಹುದಾಗಿದೆ.

**ಸಾಮ್ರಾಜ್ಯಶಾಹಿಗಳೇ ಆದಿವಾಸಿಗಳ ಸೀಮಾದೈವಗಳಾದ ಬಗೆ**

**ಬೊಬ್ರು ದೇವರು:** ಒಂದನೇ ಶತಮಾನದಲ್ಲಿ ಭೋಜರು ಇಲ್ಲಿ ಆಳಿದ್ದರು. ಆ ಕಾರಣ ಕುಮುಟಾ ತಾಲ್ಲೂಕಿನ ಹಿರೇಗುತ್ತಿ ಹತ್ತಿರ ಬೊಬ್ರು ದೇವಸ್ಥಾನವಿದೆ. ಬೋಜರು–ಬೋಬರಾಗಿ, ಬೊಬ್ರು ದೇವರಾಗಿ ಮಾರ್ಪಟ್ಟಿದೆ. ಇದನ್ನು ಸೀಮಾದೈವವನ್ನಾಗಿ ಹಾಲಕ್ಕಿ ಹಾಗೂ ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಭಾಗದ ಇತರೆ ಸಮುದಾಯಗಳು ಪೂಜಿಸುತ್ತಾರೆ. ಬೊಬ್ರು ಜಾತ್ರೆ ಕೂಡ ಏರ್ಪಡಿಸಲಾಗುತ್ತದೆ.

**ಹೊಲೆಟ್ರು ದೇವ್ರು:** ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಭಾಗದಲ್ಲಿ ಅಲ್ಲಲ್ಲಿ ಹೊಲೆಟ್ರು ದೇವರ ದೇವಸ್ಥಾನಗಳಿವೆ. ಹಾಲಕ್ಕಿ, ಮುಕ್ರಿ, ಹಳ್ಳೇರ್‌ರು, ಅಗೇರರು ಈ ದೈವಕ್ಕೆ ಪೂಜೆ ಸಲ್ಲಿಸುತ್ತಾರೆ. ಹಬ್ಬ, ಉತ್ಸವ, ಜಾತ್ರೆಯನ್ನು ಕೂಡ ಆಚರಿಸಲಾಗುತ್ತದೆ.

ಶಾಸನ ಅಧ್ಯಯನ ಮತ್ತು ಮಾಹಿತಿ ಸಂಗ್ರಹಿಸಿದ ಪ್ರಕಾರ ಹೊಲೆಟ್ರು ಮೂಲ ಪದ ನಿಷ್ಪಕ್ತಿ ಹುಲಿವಿಥ್ಥರಾಯ ಎಂಬುದಾಗಿದೆ. ನಂತರದಲ್ಲಿ ಅದು ಹೊಲೆವೀಥ್ಥಕಾಯ, ಹೊಲೆಟ್ರು ಆಗಿ ಮಾರ್ಪಾಟಾಗಿಬಹುದು. ಹುಲಿವೀರಕಾಯ ಹೊಯ್ಸಳ ಸಾಮ್ರಾಜ್ಯದ ಸೋಂದೆ ಅರಸರ ಸೇನಾಧಿಪತಿಯಾಗಿದ್ದ ಈತನ ತಂಗಿಯನ್ನು ಹಿರೇಗುತ್ತಿ ಅರಸ ವೆಂಕಟಪತಿರಾಜ ಮದುವೆಯಾಗಿದ್ದನು. ಈತನಿಗೂ ವಿಜಯನಗರದ ಅರಸ ವಾದಿರಾಜನಿಗೂ ವೈವಾಹಿಕ ಸಂಬಂಧ ಇದ್ದುದನ್ನು ಐತಿಹಾಸಿಕ ದಾಖಲೆಗಳು ನಿರೂಪಿಸುತ್ತವೆ. ಕುಮುಟಾ ಕಗ್ಗಾಲ ಗ್ರಾಮದಲ್ಲಿನ ಹಾಗೂ ಇತರ ಕಡೆಗಳಲ್ಲಿನ ಹುಲ್ಲೆಟ್ರು ದೈವ ಕತ್ತಿ ಹಿಡಿದು ನಿಂತಿರುವುದನ್ನು ಕಾಣಬಹುದಾಗಿದೆ. ಹೀಗೆ ಸೇನಾಧಿಪತಿಯೊಬ್ಬ ಆದಿವಾಸಿಗಳ ಸೀಮಾದೈವವಾಗಿ ರೂಪಾಂತರ ಹೊಂದಿ ಪೂಜಿಸಿಕೊಳ್ಳುತ್ತಿರು ವುದನ್ನು ಇಲ್ಲಿ ಕಾಣಬಹುದಾಗಿದೆ.

**ಹಿರೇ ಹೊಸಬ, ಸಣ್ಣ ಹೊಸಬ, ಉದ್ದಂಡ ಹೊಸಬ ದೈವಗಳು:** ಹಾಲಕ್ಕಿಗಳಿರುವ ಹಳ್ಳಿಗಳಲ್ಲಿ ಹಿರೇ ಹೊಬ, ಸಣ್ಣ ಹೊಸಬ ಮತ್ತು ಉದ್ದಂಡ ಹೊಸಬ ದೈವಗಳನ್ನು ಕೂಡ ಗುಡಿ ಕಟ್ಟಿ ಪೂಜಿಸಲಾಗುತ್ತದೆ. ಈ ಹೊಸಬಗಳು, ವಿಜಯನಗರ ಸಾಮ್ರಾಜ್ಯ ಮತ್ತು ಹೊಯ್ಸಳರ

ಸಾಮ್ರಾಜ್ಯದ ಸೇನಾಧಿಪತಿಗಳಾಗಿದ್ದರೆಂದು ಹೇಳಲ್ಪಟ್ಟಿದೆ. ಕಾಲಕ್ರಮೇಣ ಇವರು ಗಡಿದೈವಗಳಾಗಿ ರೂಪಾಂತರ ಗೊಂಡಿರುವುದನ್ನು ಕಾಣಬಹುದಾಗಿದೆ.

**ಹಾಲಕ್ಕಿಗಳಲ್ಲಿ ಸೀಮಾಪದ್ಧತಿಯ ಹಬ್ಬಗಳು**

ಜಾನಪದರ ನಡೆ, ನುಡಿ, ಆಚಾರ, ವಿಚಾರ, ಆಚರಣೆ, ಸಂಪ್ರದಾಯ ಕಲೆ ಕಸುಬುಗಳೆಲ್ಲ ದೈವಿಕ ಉಪಾಸನೆಯ ಚೌಕಟ್ಟಿಗೆ ಒಳಪಟ್ಟಿವೆ. ಪ್ರಕೃತಿಯ ಮಡಿಲಲ್ಲಿ ಬೆಳೆದ ಮುಗ್ಧ ಹಾಲಕ್ಕಿಗಳ ಮನಸ್ಸಿನ ಮೇಳೆ ಪ್ರಕೃತಿ ಬೀರಿದ ಪ್ರಭಾವ ಬಹು ಮುಖ್ಯವಾಗಿದೆ. ಹುಲುಸಾದ ಬೆಳೆಯನ್ನು ನೀಡುವ ಭೂಮಿತಾಯಿ, ಬೆಳಕನ್ನು ದಯಪಾಲಿಸುವ ಸೂರ್ಯ ಚಂದ್ರರು, ಜಲಧಾರೆಯನ್ನುಣಿಸುವ ಮೇಘ, ಬದುಕಿಗೆ ಸಹಾಯಕಾರಿಗಳಾದ ದನಕರುಗಳು, ಕುಟುಂಬ, ಊರು ಹಾಗೂ ನಾಡ ಕಲ್ಯಾಣಕ್ಕಾಗಿ ಜೀವತೆತ್ತ ಮಹನೀಯರು, ಗುರು ಹಿರಿಯರನ್ನು ಅವರು ಕೃತಜ್ಞತಾ ಮನೋಭಾವನೆಯಿಂದ, ಅವರ ಜೀವನಕ್ಕೆ ಹಿಂಸೆಯನ್ನು ನೀಡಬಹುದಾದ ಹಾವು, ಹುಲಿ, ಭೂತ ಪಿಶಾಚಿಗಳನ್ನು ಕೇಡಿನ ಭಯದಿಂದ ಆರಾಧಿಸಿದರು. ಈ ದೇವತೆಗಳನ್ನು ಹಲವು ಬಗೆಯಲ್ಲಿ ಕಲ್ಪಿಸಿ, ರೂಪಿಸಿ, ಪೂಜಿಸುವಲ್ಲಿ ತಮ್ಮ ಭಕ್ತಿಯ ಸಾರ್ಥಕತೆಯನ್ನು ಕಂಡುಕೊಂಡರು. ಹೀಗೆ ಅವರು ಪೂಜಿಸುವ ದೇವತೆಗಳ ಸಂಖ್ಯೆ ಮೂವತ್ತುಮೂರೆಂದು ಗುಮಟೆಯ ಪದವೊಂದು ಹೇಳುತ್ತದೆ. ಆದರೆ ಇಂದು ಇವರು ಆರಾಧಿಸುವ ದೇವತೆಗಳ ಲೆಕ್ಕವನ್ನು ಮಾಡಿದರೆ ಈ ಸಂಖ್ಯೆ ತಲೆಕೆಳಗಾಗುತ್ತದೆ. ಈ ದೇವತೆಗಳ ಸಂಪ್ರೀತಿಗಾಗಿ ಇವರು ಮಾಡುವ ಅರ್ಚನೆಯ ವಿಧಿ ವಿಧಾನಗಳು. ಆಗಮಾದಿಗಳಿಂದ ಪ್ರೇರಿತವಾದುವಲ್ಲ; ಜಾನಪದೀಯವಾದವು. ಇವರು ದೇವತೆಗಳ ಪ್ರೀತ್ಯರ್ಥವಾಗಿ ತೇರು, ಜಾತ್ರೆ, ಬಂಡಿಹಬ್ಬಗಳನ್ನು ವರ್ಷಕ್ಕೊಮ್ಮೆ ಆಚರಿಸಿ, ಆ ಹಬ್ಬಗಳ ಒಂದಂಗವಾಗಿ ವಿವಿಧ ಬಗೆಯ ಕಲೆ, ಕ್ರೀಡೆಗಳನ್ನು ದೇವತೆಗಳ ಅನುಗ್ರಹಕ್ಕಾಗಿ ಆಚರಿಸಿಕೊಂಡು ಬಂದಿದ್ದಾರೆ. ಇವರು ಪೂಜಿಸುವ ದೇವತೆಗಳನ್ನು ಸ್ಥೂಲವಾಗಿ ಆರು ಬಗೆಯಲ್ಲಿ ವಿಂಗಡಿಸಬಹುದು: 1. ಕುಲಚಿಹ್ನೆ ದೇವತೆ, 2. ಸಸ್ಯದೇವತೆ, 3. ಪ್ರಾಣಿದೇವತೆ, 4. ಭೂತ(ಪಿತೃ), 5. ಸ್ತ್ರೀ ದೇವತೆ, 6. ಪುರುಷ ದೇವತೆ.

**1. ಕುಲಚಿಹ್ನೆ ದೇವತೆ:** ಹಾಲಕ್ಕಿ ಒಕ್ಕಲಿಗರು ಕುಲಚಿಹ್ನೆ(Totem) ಉಪಾಸಕರು. ಇವರು ತಮ್ಮ ಕುಲದ ಮೂಲವನ್ನು ಬ್ರಾಹ್ಮಣರಂತೆ ಋಷಿಮೂಲದಿಂದ ಕಂಡುಕೊಳ್ಳದೆ. ವನಸ್ಪತಿ ಹಾಗೂ ಪ್ರಾಣಿಗಳಲ್ಲಿ ಕೊಂಡುಕೊಳ್ಳುತ್ತಾರೆ. ಕುಲಗಳಿಗೆ ಇವರು ಬ್ರಾಹ್ಮಣರಂತೆ ಗೋತ್ರಗಳೆಂದು ಕರೆಯದೆ, ಬಳಿ, ಬಳ್ಳಿ, ಕಟ್ಟು ಎಂದು ಮುಂತಾಗಿ ಕರೆದುಕೊಂಡು, ಬ್ರಾಹ್ಮಣ ಸಂಸ್ಕೃತಿಯಿಂದ ತಮ್ಮನ್ನು ಬೇರ್ಪಡಿಸಿಕೊಳ್ಳುತ್ತಾರೆ. ತಮ್ಮ ಬಳ್ಳಿಯ ವನಸ್ಪತಿ ಇಲ್ಲವೆ ಪ್ರಾಣಿಯನ್ನು ಪಿತೃ ಸ್ಥಾನದಲ್ಲಿಟ್ಟು ದೇವರೆಂದು ಪರಿಗಣಿಸುತ್ತಾರೆ. ಅವನ್ನು ನಾಶಪಡಿಸುವುದಿಲ, ತಿನ್ನುವುದೂ ಇಲ್ಲ. ಈ ಬಗೆಯ ಬಳಿ ವ್ಯವಸ್ಥೆಯಿಂದ ಒಂದು ಹಂತದಲ್ಲಿ ವನಸ್ಪತಿ ಹಾಗೂ ಪ್ರಾಣಿಗಳ ಸಂರಕ್ಷಣೆಯೂ

ಆಗುತ್ತದೆ. ಪ್ರಪಂಚದ ಅನೇಕ ಆದಿವಾಸಿ ಸಂಸ್ಕೃತಿಯಲ್ಲಿ ಈ ಬಗೆಯ ಉಪಾಸನೆಯಿದೆ. ಆಸ್ಟ್ರೇಲಿಯಾದ ಆದಿವಾಸಿಗಳು ನೃತ್ಯದಲ್ಲಿ ತಮ್ಮ ಕುಲದೇವತೆಗಳಾದ ಪ್ರಾಣಿಗಳ ಚಲನವಲನಗಳನ್ನು ಅನುಕರಿಸುತ್ತಾರೆ. ಹಾಲಕ್ಕಿಗಳ ಸುಗ್ಗಿ ಕುಣಿತದಲ್ಲಿ ಈ ಬಗೆಯ ಅನುಕರಣೆಯ ಹೊಳಹನ್ನು ಗುರುತಿಸಬಹುದು.

ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗರು, ಗೊಂಡರು, ಗಾಮೊಕ್ಕಲು, ಕರೆ ಒಕ್ಕಲು, ನಾಡವರು, ನಾಮಧಾರಿ ಮುಂತಾದ ಒಕ್ಕಲಿಗ ಜಾತಿಗಳಲ್ಲಿ ಆಗೇರು ಎನ್ನುವ ಹರಿನರಲ್ಲಿ ಬಳಿ ವ್ಯವಸ್ಥೆಯಿದೆ; ಕೆಲವು ಬಳಿಗಳು ಕೆಲವು ಜಾತಿಗಳಲ್ಲಿ ಸಾಮಾನ್ಯವೂ ಆಗಿವೆ. ಬಹುಶಃ ಬಳಿ ವ್ಯವಸ್ಥೆಯುಳ್ಳ 'ಟೋಟೆಮ್' ಹಾಗೂ ಮಾತೃಪ್ರಧಾನ ಸಂಸ್ಕೃತಿಯ ಜನಾಂಗಗಳೆಲ್ಲ ಮೂಲತಃ ಒಂದೇ ಆಗಿದ್ದು, ಕ್ರಮೇಣ ಕಾರಣಾಂತರಗಳಿಂದ ಬೇರೆ ಬೇರೆ ಪಂಗಡಗಳಾಗಿ ಹರಿದು ಹಂಚಿಹೋಗಿರಬಹುದಾದ ಸಾಧ್ಯತೆಯಿದೆ.

ಮುಂಬಯಿ ಗೆಜೆಟಿಯರಿನಲ್ಲಿ ಹಾಲಕ್ಕಿ ಬಳಿ ಒಕ್ಕಲಿಗರ ಸಂಖ್ಯೆ ಎಂಟೆಂದು ನಮೂದಾಗಿದೆ: 1. ಮಂಜಾಲ, 2. ಕಡಿನ, 3. ಮಾನಾಳ, 4. ದೇವನ(ದೇವರು), 5. ಬಾಳೆ, 6. ಗುರುವಿನ (ಗುರಿನ–ಗುರ್ನ), 7. ಕಿಡಕಲ(ಕೊಡಸಗ, ಕೊಡಕ್ಲ–ಕೊಡ್ಕ), 8. ಮುಸ್ಕನ (ಮುಸಗೆ) ಈ ಎಂಟು ಬಳಿಗಳಲ್ಲಿ ಒಂದಾದ ಮಾನಾಲ ಬಳಿಯಲ್ಲಿ ಮತ್ತೆ ಏಳು ಉಪವಿಭಾಗಗಳು ಈ ಉಪವಿಭಾಗಗಳನ್ನು ಈಗ ಪ್ರತ್ಯೇಕ ಬಳ್ಳಿಯೆಂದೇ ಪರಿಗಣಿಸುತ್ತಾರೆ. ಈ ಏಳು ಬಳಿಗಳನ್ನು ಪ್ರತ್ಯೇಕವಾಗಿ ತೆಗೆದುಕೊಂಡರೆ 9. ಅಳ್ಳಿ, 10. ಬರಗಲ, 11. ದೇವಿ, 12. ಕುಂತಿ, 13. ಶಳ(ಶಲೆ), 14. ಅರಗಲ(ಅರ್ಗಲ), 15. ಮಿಗ್ಗಿ ಹೀಗೆ ಬಳ್ಳಿಗಳ ಸಂಖ್ಯೆ ಹದಿನೈದಾಗುತ್ತದೆ.

ಎಸ್. ಸಿಲ್ವಾ ಅವರು ಮತ್ತೆ ಏಳು ಬಳ್ಳಿಗಳನ್ನು ಹೊಸದಾಗಿ ಗುರುತಿಸಿದರು. 16. ಮಂಗಳ, 17. ಕುಂಟಿ(ಕುಂಟ), 18. ಬಳಿ, 19. ಬರಕನ(ಬರ್ಕನ), 20. ನೇಗಿ (ನೆಗ್ಗಿನ), 21. ಶಿರಿನ, 22. ಕೆಂದಗೆ(ಕೇದಗೆ)

ಡಾ.ಎನ್.ಆರ್.ನಾಯಕರು ಇನ್ನೂ ಎಂಟು ಹೊಸ ಬಳಿಗಳನ್ನು ಹಾಲಕ್ಕಿ ಒಕ್ಕಲಿಗರ ಜನಪದ ಗೀತಗಳು ಎಂಬ ಕಿರುಹೊತ್ತಗೆಯಲ್ಲಿ ಗುರುತಿಸಿದರು. 23. ಗುರಾಣಿ, 24. ಶಿರ್ಾಳು, 25. ಬೆದ, 26. ಆಲಿ, 27. ದೇವಿ, 28. ಗೊಡಕ(ಗೊಟಕ), 29. ಬೈರ(ಬೆರ್ನ) 30. ದ್ಯಾವಳ.

ಡಾ. ಎಲ್.ಜಿ.ಭಟ್ಟರ, 31. ಕೈರ್ನ, 32. ಕಟಕನ(ಕಟಕ್ಷ), 33. ಚಿರಕಲ(ಚಿರಕ್ಲ), 34. ಹುಲಿ, 35. ಬೆಳಿಕೊಡಸಗನ ಹೀಗೆ ಮತ್ತೆ ಆಯ್ದು ಬಳ್ಳಿಗಳನ್ನು ಗುರುತಿಸಿದ್ದಾರೆ.

ಡಾ.ವಿಜಯಲಕ್ಷ್ಮಿಯವರ ಪ್ರಬಂಧ ರಚನೆಗಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗ, 36. ನುಚ್ಚ್ಯನ, 37. ಮಡ್ಡೆನ, 38. ನುಸಿ, 39. ದ್ಯಾವಣ, 40. ಮಡ್ಜ, 41. ಬಲಿ ಹೀಗೆ ಮತ್ತೆ

ಆರು ಬಳಿಗಳು ದೊರೆತಿವೆ. ಹಾಲಕ್ಕಿ ಒಕ್ಕಲಿಗರಲ್ಲಿ ಮೂವತ್ತು ಮೂರು ದೇವತೆಗಳಿರುವಂತೆ 33 ಬಳ್ಳಿಗಳಿವೆಯೆಂದು ಒಬ್ಬ ಮಾಹಿತಿಕಾರರು ತಿಳಿಸಿದ್ದುಂಟು. ಈವರೆಗೆ ಗುರುತಿಸಿದ ಬಳಿಗಳಲ್ಲಿ, ಕೆಲವು ಬಳಿಗಳ ಹೆಸರು ರೂಪಾಂತರಗೊಂಡು, ಅವನ್ನು ನಾವು ಬೇರೆಯೇ ಬಳಿಯೆಂದು ಪರಿಗಣಿಸಿರುವ ಸಾಧ್ಯತೆಯಿದೆ. ಸದ್ಯದ ಮಟ್ಟಿಗೆ ಹಾಲಕ್ಕಿಗಳ ಬಳಿಗಳ ಸಂಖ್ಯೆ ಅವರ ತಿಳುವಳಿಕೆಯನ್ನು ಮೀರಿ ಬೆಳೆದಿರುವುದು ಗಮನಾರ್ಹ.[9]

ಇತರ ಒಕ್ಕಲಿಗ ಪಂಡಗಳಾದ ಗೊಂಡರಲ್ಲಿ ಹೊನ್‌ಬಳಿ, ತೋಳಾರ ಬಳಿ, ದ್ಯಾವ್ಕರ ಬಳಿ, ಅನ್ಯಳಿ, ಆಜ್ರಬಲಿ, ಸಿರಿನ ಬಳಿ, ಕಾಯ್ ಬಳಿ, ಹಾಲ್ ಬಳಿ, ಮಲ್ಲಿಗೆ ಬಳಿ, ದೇವನ ಬಳಿ, ಹೊಲಿಬಳಿಗಳಿವೆ. ಶಿರಿನ ಹಾಗೂ ದೇವನ ಬಳಿಗಳು ಹಾಲಕ್ಕಿಗಳಲ್ಲಿಯೂ ಇದೆ. ಕರೆ ಒಕ್ಕಲಲ್ಲಿ ಆನ್ಕಳಿ, ಹೊಲಿಬಳಿ, ಕಾಯ್‌ಬಳಿ, ಶೆಟ್ಟಿ ಬಳಿಗಳಿವೆ. ಆನ್ಕಳಿ, ಕಾಯ್‌ಬಳಿ, ಹೊಲಿಬಳಿಗಳು ಗೊಂಡರು ಮತ್ತು ಕೆರೆ ಒಕ್ಕಲಲ್ಲಿ ಸಾಮಾನ್ಯವಾಗಿದೆ. ಗಾಮೊಕ್ಕಲಲ್ಲಿ 14 ಬಳಿಗಳಿವೆಯೆಂದು ಕೇಳಿದ್ದೇನೆ. ಅದರಲ್ಲಿ ಪ್ರಚಲಿತವಿರುವ ಕಡಿನ ಬಳಿ ಹಾಲಕ್ಕಿ ಒಕ್ಕಲಿಗರಲ್ಲಿಯೂ ಇದೆ. ಹಾಲಕ್ಕಿ ಒಕ್ಕಲಿಗರು ಬಲಿಚಕ್ರವರ್ತಿಯನ್ನು ಹಾಲಕ್ಕಿ ಒಕ್ಕಲಿಗನೆಂದು ನಂಬುತ್ತಾರೆ. ಅದನ್ನು ಸಮರ್ಥಿಸುವ 'ಬಲಿಬಳ್ಳಿ' ಹಾಲಕ್ಕೆ ಒಕ್ಕಲಿಗರಲ್ಲಿದೆ.

ಕುಲಸಂಕೇತಿಸುವ ಬೇರೆ ಬೇರೆ ವನಸ್ಪತಿ ಹಾಗೂ ಪ್ರಾಣಿಸಂಬಂಧಿ ಬಳಿಗಳು ವನಸ್ಪತಿ, ಪ್ರಾಣಿ ಹಾಗೂ ಮಾನವ ಸಂಬಂಧದ ಮಹತ್ವವನ್ನು ಸಾರುತ್ತವೆ. ಜೊತೆಗೆ ಇಂದು ಪ್ರಚಲಿತವಿರುವ ಕೆಲವು ವನಸ್ಪತಿ ಹಾಗೂ ಪ್ರಾಣಿ ದೇವತೆಗಳ ವಿಕಸನಕ್ಕೆ ಅವಕಾಶವನ್ನೂ ಕಲ್ಪಿಸಿವೆ. 'ಕುಲಸಂಕೇತಗಳ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢವಾಗಿದ್ದುದರಿಂದ ಪುರಾಣ ದೇವತೆಗಳಲ್ಲಿ ಕೆಲವಾದರೂ 'ಟೋಟೆಮ್'ಗಳಿಂದ ವಿಕಾಸ ಹೊಂದಿರಬಹುದು. ಇಂದು ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ಹುಲಿದೇವರ ಪೂಜೆ, ನಾಗಪೂಜೆ, ಇಲಿ, ಗಂವೆ, ಈರಡಿ ಹಬ್ಬಗಳು, ಸುಗ್ಗಿಯ ಹಬ್ಬ ಇವರು ಟೋಟೆಮಿಸ್ಟ್‌ರಿಂದಲೇ ಜಿಲ್ಲೆಯಲ್ಲಿ ಪ್ರಸಾರ ಪಡೆದಿರಬೇಕು. ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ವೃಕ್ಷ ಹಾಗೂ ಪ್ರಾಣಿ ಪೂಜೆಗೆ ಹಾಲಕ್ಕಿ ಒಕ್ಕಲಿಗರೇ ಅಸ್ತಿವಾರ ಹಾಕಿದಂತಿದೆ.

**ಹೊಸ್ತಿನ ಹಬ್ಬ:** ಆಶ್ವಯುಜ ಶುದ್ಧ ಪ್ರತಿಪದೆಯ ದಿನ ಸಾಮಾನ್ಯವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಕೆಲವೆಡೆ ನವರಾತ್ರಿಯ ಸಂದರ್ಭದಲ್ಲಿಯೂ ಆಚರಿಸುವುದಿದೆ. ಅಂದು ಮನೆಯ ಹಾಗೂ ತುಳಸಿಯ ಹೊರ-ಒಳಗನ್ನೆಲ್ಲ ಗುಡಿಸಿ, ಸಾರಿಸಿ ಹಲಿ ಹೊಯ್ಯುತ್ತಾರೆ. ವ್ಯವಸಾಯ ಉಪಕರಣಗಳನ್ನು ತೊಳೆದು ಸೇಡಿಯ ಪಟ್ಟೆ ತೆಗೆಯುತ್ತಾರೆ. ತುಳಸಿಯ ಮುಂದೆ ಆಯ್ದು ಸೆಗಣಿಯ ಮುದ್ದೆಗಳನ್ನಿಟ್ಟು ಅವುಗಳ ತಲೆಯ ಮೇಲೆ ಸೋರೆಯ ಇಲ್ಲವೆ ಕುಂಬಳ ಹೂವನ್ನು ಪೇರಿಸುತ್ತಾರೆ. ಅವು ಪಾಂಡವರ ಸಂಕೇತವೆಂಬ ನಂಬಿಕೆ ಕೆಲವೆಡೆಯಿದೆ. ಮಧ್ಯಾಹ್ನದ ವೇಳೆಗೆ

ಮನೆಯ ಯಜಮಾನ ಮಿಂದು ಮಡಿಯುಟ್ಟು ಪೂಜಾ ಸಾಮಗ್ರಿಗಳೊಡನೆ ಮನೆಯ ಪಕ್ಕದ ಗದ್ದೆಗೆ ಹೋಗುತ್ತಾನೆ. ಮಕ್ಕಳು ತಮಟೆಯನ್ನು ಬಡಿಯುತ್ತ ಯಜಮಾನನ್ನು ಹಿಂಬಾಲಿಸುತ್ತಾರೆ. ಗದ್ದೆಗೆ ಹೋದ ಯಜಮಾನ ತೆನೆಗೂಡಿ ತೊನೆಯುತ್ತ ನಿಂತ ಕಾಯ್ಸಸಿಗಳನ್ನು ಕೂಡಿಸಿ, ಪ್ರತ್ಯೇಕವಾಗಿ ಎರಡು ತೊತ್ತೆಗಳನ್ನು ಕಟ್ಟುತ್ತಾನೆ. ಅವುಗಳಿಗೆ ಹೂಗಂಧ ಹಾಕಿ ಪೂಜಿಸುತ್ತಾನೆ; ಧಾನ್ಯ ಸಮೃದ್ಧಿಯಾಗಲೆಂದು ಹಾರೈಸುತ್ತಾನೆ. ಅನಂತರ ಆ ಎರಡು ತೊತ್ತೆಗಳನ್ನು ಬಿಟ್ಟು, ಅವರ ಸುತ್ತಲಿನ ಸ್ವಲ್ಪ ಕದಿರನ್ನು ಕೊಯ್ದು ಪಿಂಡಿಕಟ್ಟಿ ಹೆಗಲ ಮೇಲೆ ಹೊತ್ತುಕೊಂಡು ಮನೆಗೆ ಬರುತ್ತಾನೆ. ಅನಂತರ ಗದ್ದೆಯಿಂದ ತಂದ ಕದಿರು, ಮಾವಿನೆಲೆ ಪಾಂಡವರ ಹರಿಗೆಯ ಹೂವು ಎಲ್ಲವನ್ನು ಕೂಡಿಸಿ, ಕವರಿಗೆ ನಾರಿನಲ್ಲಿ ಕಟ್ಟಿ ಗಂಧದ ಬೊಟ್ಟಿಟ್ಟು ಮಾಲೆ ತಯಾರಿಸಿ ತುಳಸಿಗೆ, ಮನೆಯ ಬಾಗಿಲಿಗೆ, ಕೋಳುಗಂಬಕ್ಕೆ, ಕೊಟ್ಟಿಗೆಗೆ ಅಂತೆಯೇ ವ್ಯವಸಾಯ ಉಪಕರಣಗಳಿಗೆ ಪಾತ್ರೆಗಳಿಗೆ, ತೆಂಗಿನಮರಕ್ಕೆ ಕಟ್ಟಿ, ತುಳಸಿಗೆ ಹಾಗೂ ಮನೆದೇವರ ಪೂಜೆಯನ್ನು ಮಾಡಿ ಹಬ್ಬದೂಟವನ್ನು ಮಾಡುತ್ತಾರೆ. ಅಂದು ದೇವರಿಗೆ ಸಮರ್ಪಿಸುವ ನೈವೇದ್ಯ ಪಾಯಸಕ್ಕೆ ಬೆಲ್ಲ ಹಾಕದೆ ಕಾಯಿಹಾಲಿನಿಂದ ತಯಾರಿಸುತ್ತಾರೆ. ಹೀಗೆ ಬೆಳೆಯ ಪೂಜೆಯನ್ನು ಮಾಡಿದರೆ ಧಾನ್ಯ ದೇವತೆ ಹೊಲದಲ್ಲಿ ನೆಲೆಸಿ ಧಾನ್ಯ ಸಮೃದ್ಧಿಯಾಗುವುದೆಂಬ ನಂಬಿಕೆ ಇವರದು. ಹೊಲದಲ್ಲಿ ಬೆಳೆ ಬೆಳೆಯಲು ಧಾನ್ಯ ಮಾತೃವಿನ ಆತ್ಮ ಹೊಲದಲ್ಲಿರುವುದೇ ಕಾರಣ.

**ಕಣಪೂಜೆ:** ಕುತ್ತರಿಯನ್ನು ಬಡಿಯುವ ಪೂರ್ವದಲ್ಲಿ ಕುತ್ತರಿಯಿಂದ ಒಂದು ಹಿಡಿಕೆಯನ್ನು ತೆಗೆದು ಮರದ ಮೇಲೆ ಇಲ್ಲವೇ ಪಾಗಾರದ ಮೇಲಿಡುತ್ತಾರೆ. ಎಲ್ಲ ಕುತ್ತರಿ ಬಡಿದಾದ ಮೇಲೆ ಒಂದು ಒಳ್ಳೆಯ ದಿನ(ಹೆಚ್ಚಾಗಿ ಮಂಗಳವಾರ ಇಲ್ಲವೆ ಶುಕ್ರವಾರ) ಆಕೆಯನ್ನು ಪೂಜಿಸಲು ತುಳಸಿಗೆ ತರುತ್ತಾರೆ. ಆಗ ಬತ್ತದ ಕಾಳುಗಳನ್ನು ಹಕ್ಕಿಗಳು ತಿಂದು ಕೇವಲ ಕಾಯಿದಂಟು ಮಾತ್ರ ಉಳಿದಿರುತ್ತದೆ. ಆ ದಂಟನ್ನೇ ಪೂಜಿಸುತ್ತಾರೆ. ಬಹುಶಃ ತಾವು ಬೆಳೆದ ಬೆಳೆಯನ್ನು ಹಕ್ಕಿ ಪಕ್ಷಿಗಳೂ ತಿಂದು ಸಂತೃಪ್ತಿ ಪಡೆದು, 'ಬತ್ತದ ಕಣಜ ತುಂಬಲೆಂದು ಹಾರೈಸಲಿ' ಎಂಬ ಆಶಯದಿಂದ ಈ ಆಚರಣೆಯನ್ನು ರೂಢಿಗತಗೊಳಿಸಿದಂತಿದೆ. ಕಣದ ಪೂಜೆಗೆ ಬೇಕಾಗುವ ಎಲ್ಲ ಪೂಜಾಪರಿಕರಗಳನ್ನು ಕುತ್ತರಿಯನ್ನು ಬಡಿದು ಪಡೆದ, ಹೊಸಬತ್ತದಿಂದಲೇ ಕೊಂಡು ಕೊಳ್ಳುವ ಸಂಪ್ರದಾಯ.

**ಹೊಲಿ ದೇವತೆ:** ಕುತ್ತರಿಯ ಕಡಿದು ಬತ್ತದ ರಾಶಿಯನ್ನು ಮಾಡಿ, ಅದರ ಮೇಲೆ ಸುಲಿಯದ ತೆಂಗಿನಕಾಯೊಂದನ್ನಿಟ್ಟು 'ಹೊಲಿ'ಯೆಂದು ಕರೆಯುತ್ತಾರೆ. ಹೀಗೆ 'ಹೊಲಿ' ದೇವತೆಯನ್ನು ಸೃಷ್ಟಿಸಿ, 'ಹೊಲಿ' ಬತ್ತವನ್ನು ಅಳೆದಲ್ಲಿ ಬತ್ತ ಹೆಚ್ಚುವುದೆಂಬ ನಂಬಿಕೆ. ಹೊಲಿಯನ್ನು ಅಳೆಯುವಾಗ, ಬೋಳುತಲೆಯಲ್ಲಿ ಅಳೆಯದೆ ಮುಂಡಾಸ ಕಟ್ಟಿಕೊಂಡು 'ಹೊಲಿ'ಯಾಗಲಿ ಎಂದು ಹೇಳಿ ಅಳೆಯಲು ಆರಂಭಿಸಬೇಕು. ಬೋಳುತಲೆಯಲ್ಲಿ 'ಹೊಲಿ'ಯನ್ನು ಅಳೆದರೆ, ಹೊಲಿ ಹೆಚ್ಚದೆಂಬ ನಂಬಿಕೆಯಿದೆ. ಅಳೆಯುವಾಗ ಏಳು ಮತ್ತು ಹನ್ನೊಂದು ಅಂಕಿಗಳನ್ನು ಹೇಳದೆ ಅವನ್ನು

'ಯೋಗು', 'ಮತ್ತೊಂದು' ಎಂದು ಕರೆಯಬೇಕು. ಏಳು, ಹನ್ನೊಂದು ಅಂಕಿಗಳು ಕೆಟ್ಟ ಅಂಕಿಗಳು, ನಾಶದ ಸಂಖ್ಯೆಗಳು. ಬಹುಶಃ ಇವರ ಕುಲದ ಪಾಂಡವರು ಹಾಗೂ ಕೌರವರು ಏಳು, ಹನ್ನೊಂದು ಅಕ್ಷೋಹಿಣಿಯಾಗಿ ಕಾದಾಡಿ ನಾಶ ಹೊಂದಿದ ದುರಂತ ಘಟನೆಯ ನೆನಪು ಆ ಸಂಖ್ಯೆಗಳ ನಿಷೇಧಕ್ಕೆ ಕಾರಣವಾಗಿರಬೇಕು.

**ಬೈಲ್ ಅವಾರಿ:** ಕಾರು ಬೆಳೆಯನ್ನು ಕೊಯ್ದು ವಾರಾಂತ್ಯದೊಳಗೆ ರಾತ್ರಿಯ ವೇಳೆ ಊರಿನ ಜನರೆಲ್ಲ ಬೈಲಲಿ ಸೇರಿ, ಕೈಯಲ್ಲಿ ಸೂಡಿ ಹಿಡಿದು, ತಮ್ಮ ತಮ್ಮ ಗದ್ದೆಗಳಲ್ಲಿ ಕುಂಕುಮ ಬೆರೆಸಿದ ಅನ್ನವನ್ನು ಬೀರುತ್ತ, ಕೂಗುತ್ತ ಸೂಡಿ ಕುಣಿಸುತ್ತ ಹೋಗುತ್ತಾರೆ. ಕುಂಕುಮ ಬೆರೆಸಿದ ಅನ್ನ ಭೂತದೇವತೆಗಳಿಗೆ ನೀಡಿದ ಬಲಿಗೂಳು. ಈ ಬಲಿಗೂಳಿನಿಂದ ಸಂತೃಪ್ತವಾದ ಭೂತ ಪಿಶಾಚಿಗಳು ಒಕ್ಕಲಿಗರ ಬೆಳೆಯನ್ನು ನಾಶಪಡಿಸದೆ ಸಂರಕ್ಷಿಸುವವು ಎಂಬ ನಂಬಿಕೆಯ ಹಿನ್ನೆಲೆ ಈ ಆಚರಣೆಗಿದೆ. ಬೆಳೆಗಳ ಸತ್ವ ಹೆಚ್ಚಾಗಲೆಂಬ ಉದ್ದೇಶದಿಂದ ನರಬಲಿ ಕೊಡುವ ಸಂಪ್ರದಾಯವಿದ್ದು ದನ್ನು ಫ್ರೇಜರ್ ಉಲ್ಲೇಖಿಸುತ್ತಾನೆ.

**1. ಗೋವಿನ ಹಬ್ಬ**

ಹಾಲಕ್ಕಿಗಳ ಬದುಕಿಗೆ ದನಕರುಗಳೇ ಆಧಾರ. ವರ್ಷವಿಡೀ ಒಕ್ಕಲಿಗನಿಗಾಗಿ ದುಡಿಯುವ ಎತ್ತು ಅವನ ಪಾಲಿಗೆ ಎತ್ತಲ್ಲ ಸಾಕ್ಷಾತ್ ಬಸವಣ್ಣ. ಹಾಲು ಹೈನನನ್ನು ಪುಷ್ಕಳವಾಗಿ ಕೊಡುವ ಆಕಳು ಆಕಳಲ್ಲದ ಗೋಮಾತೆ. ಮೋಜಾತಿಯಾದ ದನಗಳನ್ನು ಬಡಿಯುವುದು, ಒಡೆಯುವುದು ಪಾಪಕಾರ್ಯ. ಅವನ್ನು ಕೊಂದ ಪಾಪವು "ಹುಟ್ಟೇಲು ಜಲುಮಕ್ಕೂ ತಪ್ಪದು" ಎಂಬ ನಂಬಿಕೆ ಹಾಲಕ್ಕಿಗಳದ್ದು. ಬಲಿಪಾಡ್ಯದಂದು ದನಗಳಿಗೆ ಸಂಬಂಧಿಸಿದ ಗೋವಿನ (ಹಟ್ಟಿಯ) ಹಬ್ಬವನ್ನು ಆಚರಿಸುತ್ತಾರೆ. ಅಂದು ಕೊಟ್ಟಿಗೆಯನ್ನು ಸ್ವಚ್ಛಗೊಳಿಸಿ ದನದ ಕೊಳಚು ಮುಂತಾದ ವಿವಿಧ ಬಗೆಯ ಹಲಿಯನ್ನು ಹೊಯ್ಯುತ್ತಾರೆ. ಬಲೀಂದ್ರನ ತೀರ್ಥದೊಂದಿಗೆ ಕೊಟ್ಟಿಗೆಗೆ ಹೋಗಿ, ತೀರ್ಥವನ್ನು ದನಗಳ ಮೇಲೆ ಚಿಮುಕಿಸಿ, ದನಗಳ ಕೊರಳಿಗೆ ಹೊಸ ಡಾಬನ್ನು ಹಾಕಿ, ಅವುಗಳ ಕೊರಳಿಗೆ ಹೂಮಾಲೆ ರೊಟ್ಟಿ ಪೊಟ್ಟಣಗಳನ್ನು ಕಟ್ಟಿ, ಕೊಂಬು ಬಂದ ದನಗಳ ಕೊಂಬಿಗೆ ಬಣ್ಣ ಬಳಿದು, ಮದಿಸಿದ ಎತ್ತುಗಳ ಕೊರಳಿಗೆ ಗಂಟೆ, ಕೋಡುಗಳಿಗೆ ಚಮಲಗಳನ್ನು ಕಟ್ಟಿ, ಒಂದು ಆಕಳ ಕೊರಳಿಗೆ ಕಾಯಿ ಕಡಿಯನ್ನು ಕಟ್ಟಿ, ಬಲೀಂದ್ರನ ತೀರ್ಥದಿಂದ ತಯಾರಿಸಿದ ಬಿಳಿ ಹಾಗೂ ಕೆಂಪು ಮಂಗಲ ನೀರನ್ನು ಹರಿವಾಣದಲ್ಲಿಟ್ಟು ಕೊಂಡು ಸಿದ್ದೆಯ ಬಾಯನ್ನು ಮಂಗಳ ನೀರಿನಲ್ಲಿ ಅದ್ದಿ ಅದ್ದಿ ದನಗಳ ಮೈಮೇಲೆ ಮುದ್ರೆಗಳನ್ನು ಒತ್ತುತ್ತಾರೆ. ದನಗಳನ್ನು ಪೂಜಿಸಿ ಅವುಗಳಿಗೆ ಗೋಗ್ರಾಸವನ್ನು ಕೊಟ್ಟು. ಅವುಗಳ ಕಣ್ಣಿ ಕಳಚಿ ದನಗಳೆಲ್ಲ ಹೊರಬಂದ ಮೇಲೆ, ಗಂಟೆ, ದೆಮ್ಟಗಳನ್ನು ಬಡಿದು ದನಗಳನ್ನು ಬೆಚ್ಚಿಸಿ ಓಡಿಸುತ್ತಾರೆ. ಹಾಲಕ್ಕಿ ಯುವಕರು ಮದಿಸಿದ ಎತ್ತುಗಳ ಕೋಡಿಗೆ ಕಟ್ಟಿದ ಚವಲ

ರೊಟ್ಟಿ ಪೊಟ್ಟಣ, ಕಾಯಿಕಡಿ, ಹರಿಯಲು ಮೇಲಾಟ ನಡೆಸುತ್ತಾರೆ. ಈ ಹಬ್ಬವನ್ನು ಹೊನ್ನಾವರದೆಡೆ ಕಾರ್ತಿಕ ಹುಣ್ಣಿಮೆಗೆ ಆಚರಿಸಿ 'ಗಂಟೆಯ ಹಬ್ಬ'ವೆಂದು ಕರೆಯುತ್ತಾರೆ. ಈ ಹಬ್ಬಕ್ಕೆ ದನ ಬೆಚ್ಚುವ ಹಬ್ಬ, ಹಟ್ಟಿ ಹಬ್ಬ, ಗೋಪೂಜೆ ಎಂಬ ಬೇರೆ ಬೇರೆ ಹೆಸರುಗಳಿವೆ.

**2. ಹಾವಿನ ಹಬ್ಬ**

ನಾಗರ ಮೂರ್ತಿಯನ್ನು ಕಲ್ಲಿನಲ್ಲಿ ಕೆತ್ತಿ ಗಿಡಗಳ ಕೆಳಗಿಟ್ಟು, ಇಲ್ಲವೆ ಗಿಡಗಳ ಕೆಳಗೆ ಬೆಳೆದ ಹುತ್ತವನ್ನು ನಾಗರಗುತ್ತದೆಂದು ಪೂಜಿಸುವ ರಿವಾಜಿದೆ. ನಾಗ ಬೆಳೆಗಳಿಗೆ ಮಾರಕಗಳಾದ ಇಲಿಗಳ ಬೇಟೆಯಾಡಿ ತಿಂದು ಒಕ್ಕಲಿಗನಿಗೆ. ಹಿತವನ್ನೇ ಮಾಡುತ್ತದೆ. ಸತ್ತವರ ಆತ್ಮ ನಾಗನಲ್ಲಿ ಅಡಗಿದೆಯೆಂದು ತಿಳಿದ ಹಾಲಕ್ಕಿ ಒಕ್ಕಲಿಗರು ನಾಗನಿಗೆ 'ಹೆರಿಯವ್ರು', 'ಹೆಳ್ಯೋರು' ಎಂದು ಗೌರವಿಸುತ್ತಾರೆ. ಭೂಮಿತಾಯಿ ಆದಿಶೇಷನ ಹೆಡೆಯ ಮೇಲಿದೆಯೆಂದು ಭಾವಿಸುತ್ತಾರೆ. ನಾಗ ಸತ್ಯ ಶೀಲರನ್ನು ಕಾಪಾಡುವ, ಸಂಪತ್ತನ್ನು ರಕ್ಷಿಸುವ, ಸಂತಾನವನ್ನು ದಯಪಾಲಿಸುವ, ಬೆಳೆಯನ್ನು ಕಾಪಾಡುವ ದೇವತೆಯೆಂದು ನಂಬಿದ ಹಾಲಕ್ಕಿ ಒಕ್ಕಲಿಗರು, ಹಾವು ಅದರ ಮುಂದೆ ಬಂದರೆ ಹೊಡೆಯರು, ತುಳಸಿಯ ನೀರನ್ನು ಚಿಮುಕಿಸಿ 'ನಾಗಪ್ಪನಾದರೆ ಹುತ್ತಿಗೆ ಹೋಗಪ್ಪ' ಎಂದು ಪ್ರಾರ್ಥಿಸುತ್ತಾರೆ. ಅದನ್ನು ಕೊಲ್ಲುವುದಿಲ್ಲ. ಅಪ್ಪಿ ತಪ್ಪಿ ಕೊಂದರೆ, ಅದನ್ನು ಕಂಡಲ್ಲಿ ಎಸೆಯದೆ ಅಗ್ನಿಸಂಸ್ಕಾರ ಮಾಡಿ, ಸ್ನಾನ ಮಾಡುತ್ತರೆ. ತಮ್ಮ ಮಕ್ಕಳಿಗೆ ನಾಗನ ಹೆಸರು ಹಾಕಿ, ತಮ್ಮ ಭಕ್ತಿ ನಿಷ್ಠೆ ವ್ಯಕ್ತಪಡಿಸುತ್ತಾರೆ. ನಾಗನಿಗೆ ನಿಷ್ಠೆಯನ್ನು ತೋರಲು ನಾಗರಪಂಚಮಿಯಂದು ನಾಗರ ಗುತ್ತಿಗೆ ಬಂದು ತೆಂಗಿನ ಮಡಲಿನಿಂದ ತಯಾರಿಸಿದ ಹಾವುಗಳನ್ನು ಪೇರಿಸಿ ಹಾಲೆರೆದು ಪೂಜೆ ಮಾಡುತ್ತಾರೆ. ಹಾವುಗಳ ಸಂತೃಪ್ತಿಗಾಗಿ ಮಾಡುವ ಸಮಾನ ಪ್ರವರ್ತಕ ತಂತ್ರದ ಹಿನ್ನೆಲೆ ಈ ಆಚರಣೆಯಲ್ಲಿದೆ.

**3. ಹುಲಿಯ ಹಬ್ಬ**

ಕಾಡಿನಲ್ಲಿ ದೊಡ್ಡ ಮರವನ್ನು ಬೆಳೆಸಿ, ಹುಲಿಯ ಮೂರ್ತಿಯನ್ನು ಶಿಲೆಯಲ್ಲಿ ಕಡೆದು ಪ್ರತಿಷ್ಠಾಪಿಸಿ, ಹುಲಿದೇವರ ಗುತ್ತೆಂದು ಕರೆದು, ಬಂಡಿಯ ಹಬ್ಬದ ಕಾಲಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ. ಬಂಡಿ ಹಬ್ಬದ ಚಡಂಗವೊಂದಲ್ಲಿ ಹುಲಿಯ ಮುಖವಾಡ ಧರಿಸಿದವನೊಬ್ಬ ಆಕಳನ್ನು ಹಿಡಿಯುವ ಅನುಕರಣೆಯನ್ನು ಮಾಡುತ್ತಾನೆ. ಕ್ರೂರ ಹುಲಿ ಒಕ್ಕಲಿಗನ ಗೋಸಂಪತ್ತನ್ನು ನಾಶಗೊಳಿಸದಿರಲಿ ಎಂಬ ಆಶಯ ಈ ಆಚರಣೆಯ ಹಿನ್ನೆಲೆಯಲ್ಲಿ ಅಡಗಿದಂತಿದೆ. ಕೆಲವೆಡೆ ಹುಲಿದೇವರಿಗಾಗಿ ಪ್ರತ್ಯೇಕ ಮನೆ ಕಟ್ಟಿ ಈ ದೇವರಿಗಾಗಿಯೇ ಪ್ರತ್ಯೇಕ ಹಬ್ಬವನ್ನು ಆಚರಿಸುವುದೂ ಇದೆ. ಆಗ ಹುಲಿ ದೇವರಿಗೆ ಕೋಳಿ ಕುರಿಗಳ ರಕ್ತ ಬಲಿಯನ್ನು ನೀಡಿ, ಅದನ್ನು ಸಂತೃಪ್ತಿಪಡಿಸುತ್ತಾರೆ. ಹೀಗೆ ಸಂತೃಪ್ತಿಪಡಿಸಿದಲ್ಲಿ ಮಾತ್ರ ಈ ದೇವತೆ ದನಕರುಗಳು ಹಾಗೂ ಮಕ್ಕಳನ್ನು ಕಾಪಾಡುತ್ತದೆಯೆಂಬ ನಂಬಿಕೆ ಹಾಲಕ್ಕಿಗಳದ್ದು ಮಕ್ಕಳನ್ನು, ದನಕರುಗಳನ್ನು ಪೀಡಿಸುವ

ಸಾಂಕ್ರಾಮಿಕ ರೋಗಗಳನ್ನು ಈ ದೇವತೆ ಹೊಡೆದೋಡಿಸುತ್ತದೆ ; ಕಾಡುಪ್ರಾಣಿಗಳಿಂದ ಒಕ್ಕಲಿಗನ ಬೆಳೆಯನ್ನು ಹಾಗೂ ಊರ ಜನರ ರಕ್ಷಣೆಯನ್ನು ಈ ದೇವತೆ ಮಾಡುತ್ತದೆ. ಬೇಟೆಯ ಸಂದರ್ಭದಲ್ಲಿ ಈ ದೇವತೆಗೆ ಹರಕೆಯನ್ನು ಹೇಳಿಕೊಂಡಲ್ಲಿ ಬೇಟೆ ಫಲಪ್ರದವಾಗುತ್ತದೆಯೆಂದು ಹಾಲಕ್ಕಿಗಳ ನಂಬಿಕೆ. ಬೇಟೆಯಲ್ಲಿ ಹುಲಿಯನ್ನು ಕೊಂದರೆ ಅದನ್ನು ಪೂಜಿಸಿ, ಊರು ಸುತ್ತಲೂ ಮೆರವಣಿಗೆಯನ್ನು ಮಾಡುವ ಪದ್ಧತಿಯೂ ಹಿಂದಕ್ಕಿತ್ತು. ಹುಲಿಯು ಕ್ರೂರಕರ್ಮದ ಬಿಸಿತಟ್ಟಿ ತನ್ನ ಬದುಕು ನಲುಗಿ ನುಗ್ಗಾಗಿ ಹೋಗದಿರಲಿ, ಎಂಬ ಭಯಮಿಶ್ರಿತ ಭಕ್ತಿ, ಹಾಲಕ್ಕಿಗಳ ಹುಲಿ ಆರಾಧನೆಗೆ ಪ್ರಚೋದನೆ ನೀಡಿದೆ. ತಮ್ಮ ಮಕ್ಕಳಿಗೆ ಹುಲಿಯಮ್ಮ, ಹುಲಿಯಪ್ಪ ಎಂದು ಮುಂತಾಗಿ ಹೆಸರನ್ನಿಟ್ಟು ಹುಲಿದೇವತೆಯನ್ನು ಸಂಪ್ರೀತಿಗೊಳಿಸಲು ಹಾಲಕ್ಕಿಗಳು ಹವಣಿಸಿದ್ದಾರೆ.

**4. ಭೂತ ದೇವತೆ**

ಮೃತ ಹಿರಿಯರನ್ನು ಹಾಗೂ ನಾಡ ಗಡಿರಕ್ಷಣೆಗಾಗಿ, ಮಹಿಳೆಯರ ಮಾನವನ್ನು ಉಳಿಸಲಿಕ್ಕಾಗಿ, ಗೋಗ್ರಹಣ ತಪ್ಪಿಸಲಿಕ್ಕಾಗಿ, ಜಟ್ಟಿ ಕಾಳಗವನ್ನಾಡಿ ಮಡಿದ ವೀರರಾಜರನ್ನು, ದಂಡನಾಯಕರನ್ನು, ತುಳಿಲಾಳುಗಳನ್ನು, ಜಟ್ಟಿಗಳನ್ನು ಅಂತೆಯೇ ಕಟ್ಟಿಸಿದ ಕೆರೆ ಬಾವಿಗಳಿಗೆ ನೀರು ತರಿಸಲಿಕ್ಕಾಗಿ, ವೈರಿಗಳ ಆಕ್ರಮಣ, ಅತ್ಯಾಚಾರಗಳನ್ನು ತಪ್ಪಿಸಿಕೊಳ್ಳಲಿಕ್ಕಾಗಿ, ಮೃತ ಪತಿಯ ಸ್ವರ್ಗಯಾತ್ರೆಯ ಸಹಚರೆಯಾಗಲಿಕ್ಕಾಗಿ ಬಲಿದಾನ ಮಾಡಿಕೊಂಡ ಸಾಧ್ವಿಯರನ್ನು ಸ್ಮರಿಸಿ, ಅವರ ಹೆಸರಿನಲ್ಲಿ ಕಲ್ಲನ್ನು ಇಲ್ಲವೆ ಮೂರ್ತಿಯನ್ನು ಪ್ರತಿಷ್ಠಾಪಿಸಿ ಪೂಜಿಸುವ ಸಂಪ್ರದಾಯ ಹಾಲಕ್ಕಿಗಳಲ್ಲಿದೆ. ಇಂಥ ಹಲವಾರು ಬೀರ, ಜಟ್ಟಿಗ ಹಾಗೂ ಮಾಸ್ತಿ ಅಮ್ಮನ ಗತ್ತು ಹಾಗೂ ದೇವಾಲಯಗಳು ಹಾಲಕ್ಕಿಗಳ ಕೊಪ್ಪ ಕೊಪ್ಪಗಳಲ್ಲಿವೆ. ಈ ದೇವತೆಗಳ ಪೂಜಾರಿಗಳು ಹಾಲಕ್ಕಿ ಇಲ್ಲವೆ ಕುಂಬಾರ ಗುನಗರು. ಈ ದೇವತೆಗಳಿಗೆ ನಿತ್ಯ ಪೂಜೆಯಿಲ್ಲ; ವಾರ್ಷಿಕ ಹಬ್ಬಗಳಲ್ಲಿ ಇಲ್ಲವೆ ವಿಶೇಷ ಹರಕೆಯ ಸಂದರ್ಭಗಳಲ್ಲಿ ಮಾತ್ರ ಪೂಜೆ ನಡೆಯುತ್ತದೆ.

**1. ಕುಟುಂಬ ಭೂತಗಳ ಆರಾಧನೆ :** ಕುಟುಂಬದಲ್ಲಿ ಸತ್ತ ಗಂಡಸರು ಗಂಡುಗೊಲೆಯಾದರೆ, ಮುತ್ತೈದೆ ಹೆಂಗಸರು ಹೆಣ್ಣುಗೊಲೆಯಾಗುತ್ತಾರೆ. ವಿಧವೆ ಸತ್ತು ದೇವತೆಯಾದರೆ, ಬಾಳಂತಿ, ಅಡ್ಡ ಬಾಳಂತಿ ದೈವವಾಗುತ್ತಾಳೆ. ಮದುವೆಯ ಮೊದಲು ತೀರಿಕೊಂಡವರು ಕನ್ಯೆಕೊಲೆಯಾಗುತ್ತಾರೆ; ಎಂಬಿತ್ಯಾದಿ ನಂಬಿಕೆಗಳಿಗೆ ಪಕ್ಕಾದ ಹಾಲಕ್ಕಿಗಳು, ಮೃತರ ಈ ಆತ್ಮದೇವತೆಗಳನ್ನು ಸಂಪ್ರೀತ ಗೊಳಿಸಿದರೆ ಕುಟುಂಬದಲ್ಲಿ ನೆನೆಸಿದ ಕಾರ್ಯಗಳು ಜರುಗುತ್ತವೆ; ಮನೆಯಲ್ಲಿ ದವಸಧಾನ್ಯಗಳ ಸಮೃದ್ಧಿಯಾಗುತ್ತದೆ, ಗೃಹಶಾಂತಿ ನೆಲೆಸುತ್ತದೆ, ಇಲ್ಲದಿದ್ದರೆ, ಕುಟುಂಬದ ಸತ್ಕಾರ್ಯಗಳೆಲ್ಲ ಕೆಟ್ಟು, ಕುಟುಂಬ ಕ್ಷಯಿಸಿ, ಗೃಹಶಾಂತಿ ಕದಡುತ್ತದೆ ಎಂದು ಭಾವಿಸುತ್ತಾರೆ. ಅದಕ್ಕಾಗಿ ಈ ದೈವಗಳನ್ನು ನೋಟುಗಾರರಿದಂದ ನಿಯಂತ್ರಿಸಿ, ತಮಗೆ ಅನುಕೂಲವಾಗಿ ವರ್ತಿಸುವಂತೆ ಏರ್ಪಾಡು ಮಾಡಿಕೊಳ್ಳುತ್ತಾರೆ. ಈ ಭೂತದೇವತೆಗಳಿಗೆ ಯಾವುದೇ ಸ್ಮಾರಕ ಕುರುಹುಗಳಿರುವುದಿಲ್ಲ.

ಇವೆಲ್ಲ ನಿರಾಕಾರ ಕಾಲ್ಪನಿಕ ಭೂತಗಳು. ತಮ್ಮ ಮಕ್ಕಳಿಗೆ ಮೃತರ ಹೆಸರನ್ನಿಟ್ಟು, ಹಬ್ಬ ಹರಿದಿನಗಳಲ್ಲಿ ಅವರ ಹೆಸರಿನಲ್ಲಿ ಎಡೆಯಿಟ್ಟು, ಮಾಘ ಮಾಸದಲ್ಲಿ 'ಅಜ್ಜಿ ಹಬ್ಬ' ಆಚರಿಸಿ, ಅವರಿಗೆ ತಮ್ಮ ಭಕ್ತಿ ಗೌರವಗಳನ್ನು ಸಮರ್ಪಿಸುತ್ತಾರೆ.

2. **ಹಣ್ಣು ಹಬ್ಬ** : ವೈಶಾಖಮಾಸದ ಒಂದು ಒಳ್ಳೆಯ ದಿನ ಸ್ವರ್ಗಸ್ಥರಾದವರ ಹೆಸರಿನಲ್ಲಿ ಹಣ್ಣು ಹಬ್ಬವೆನ್ನುವ ವಾರ್ಷಿಕ ದಿನಾಚರಣೆಯನ್ನು ಮಾಡುವುದು ಹಾಲಕ್ಕಿಗಳಲ್ಲಿ ಸಾಮಾನ್ಯವಾಗಿದೆ. ಮಾಘಮಾಸದಲ್ಲಿ 'ಅಜ್ಜಿ ಹಬ್ಬ'ವನ್ನು ಆಚರಿಸಿದವರು ಮಾತ್ರ ಪ್ರತ್ಯೇಕವಾಗಿ ಹಣ್ಣು ಹಬ್ಬವನ್ನು ಆಚರಿಸುವುದಿಲ್ಲ. ಕುಟುಂಬದ ಯಜಮಾನನ ಕಾಲಾವಧಿಯಲ್ಲಿ ತೀರಿಕೊಂಡವರ ಸಂಖ್ಯೆ ಹಾಗೂ ಲಿಂಗ ವಯೋಮಾನಕ್ಕೆ ಸರಿಯಾಗುವಂತೆ ಕೆಲವರಿಗೆ ಹಣ್ಣು ಹಬ್ಬದ ದಿನ ಹಸಿದು ಬರಲು ಹೇಳಿ, ಅವರನ್ನು ಮೃತರ ದೈವವೆಂದು ಪರಿಭಾವಿಸಿ ಸತ್ಕರಿಸಿ ಭೋಜನವಿಕ್ಕುತ್ತಾರೆ. ಹಲಸಿನ ಹಣ್ಣಿನ ಕಜ್ಜಾಯ ಅಂದಿನ ವಿಶೇಷ ತಿಂಡಿಯಾಗಿರುತ್ತದೆ.

3. **ವೀರ ಭೂತಾರಾಧನೆ** : ವೀರರ ಸ್ಮಾರಕಗಳಾದ ಜಟಗ, ಬೀರ, ಮಾಸ್ತಿ ದೇವತೆಗಳ ಹಬ್ಬದ ಆಚರಣೆ ಕೇವಲ ಒಂದು ಕುಟುಂಬಕ್ಕೆ ಮಾತ್ರ ಸೀಮಿತವಾಗಿದೆ. ಇಡಿಯ ಕೊಪ್ಪಕ್ಕೆ ಸಂಬಂಧಪಟ್ಟಿರುತ್ತದೆ. ಈ ದೇವತೆಗಳಿಗೆ ಸಂಬಂಧಿಸಿ ಜಟಗನ ಹಬ್ಬ ಹಾಗೂ ಬಂಡಿ ಹಬ್ಬಗಳನ್ನಾಚರಿಸುತ್ತಾರೆ.

ಒಕ್ಕಲಿಗನ ಬೆಳೆಯನ್ನು ರಕ್ಷಣೆ ಮಾಡುವ, ಅವರ ರೋಗ ರುಜಿನಗಳನ್ನು ತಡೆಗಟ್ಟುವ ಜಟಗನ ಹಬ್ಬವನ್ನು ಕುತ್ತರಿಯನ್ನು ಬಡಿಯುವ ಕಾಲಕ್ಕೆ ಕೆಲವೆಡೆ ಆಚರಿಸಿದರೆ ಮತ್ತೆ ಕೆಲವೆಡೆ ವೈಶಾಖಮಾಸದಲ್ಲಿ ಆಚರಿಸುತ್ತಾರೆ. ವೀರ ದೇವತೆಗಳಿಗೆ ಬಂಡಿಯ ಹಬ್ಬದಲ್ಲಿ ಪೂಜೆ ಸಲ್ಲುತ್ತದೆ. ಮಾಸ್ತಿ ದೇವತೆಗೆ ಕೆಲವೆಡೆ ಸಂಕ್ರಾಂತಿಯ ಸಂದರ್ಭದಲ್ಲಿ, ಇನ್ನು ಕೆಲವೆಡೆ ನವರಾತ್ರಿಯ ಸಂದರ್ಭದಲ್ಲಿ ಪೂಜೆ ಸಲ್ಲುತ್ತದೆ. ಕೆಲವೆಡೆ ಮಾಸ್ತಿಯೇ ಅಮ್ಮನಾಗಿ, ಗ್ರಾಮದೇವತೆಯಾಗಿ ಪರಿವರ್ತನೆಗೊಂಡು, ಬಂಡಿಯ ಹಬ್ಬದಲ್ಲಿ ವಿಶೇಷ ಪೂಜೆಗೆ ಭಾಜನಳಾಗುತ್ತಾಳೆ. ಉತ್ತರ ಕನ್ನಡ ಜಿಲ್ಲೆಯ ಜಾನಪದರೆಲ್ಲರೂ ದೊಡ್ಡಮ್ಮನೆಂದು ಕರೆಯುವ ಶಿರಸಿಯ ಮಾರಿಕಾಂಬೆಯೂ ಸಹ ಮೂಲತಃ ಮಾಸ್ತಿಯಾಗಿದ್ದು, ಅನಂತರದ ದಿನಗಳಲ್ಲಿ ಮಾರಿ–ಅಮ್ಮನಾಗಿ ಈಗ ಮಾರಿಕಾಂಬೆಯಾಗಿ ಪರಿವರ್ತಿತಳಾಗಿ ಹಲವು ಸೀಮೆಗಳಲ್ಲಿ ತನ್ನ ಪ್ರಭಾವವನ್ನು ಬೀರಿದ್ದಾಳೆ. ಈ ಎಲ್ಲ ವೀರ ದೇವತೆಗಳಿಗೆ ಸಾಮಾನ್ಯವಾಗಿ ಕೋಳಿ ಕುರಿಗಳ ಬಲಿ ವಿಶೇಷ ಹಬ್ಬಗಳ ಸಂದರ್ಭಗಳಲ್ಲಿ ನಡೆಯುತ್ತದೆ. ಹಿಂದಕ್ಕೆ ಈ ದೇವತೆಗಳಿಗೆ ನರಬಲಿಯನ್ನು ಅರ್ಪಿಸುತ್ತಿದ್ದುದರ ಸುಳಿವನ್ನು ಬಂಡಿ ಹಬ್ಬದ ಬಲಿಮಕ್ಕಳು ಹಾಗೂ ಸಾಮಿಮಕ್ಕಳು ನೀಡುತ್ತಾರೆ. ಜೈನರು ಮತ್ತು ಬ್ರಾಹ್ಮಣರ ಆಡಳಿತ ಕಕ್ಷೆಗೊಳಪಟ್ಟ ಕೆಲವು ವೀರ ದೇವತೆಗಳಿಗೆ ಹಣ್ಣು ಕಾಯಿ ಹಾಗೂ ನೈವೇದ್ಯಗಳ ಸಾತ್ವಿಕ ಪೂಜೆಯೇ ಸಲ್ಲುತ್ತದೆ. ಮಾಸ್ತಿ ದೇವತೆಯು ಹೆಂಗಸರು ಹಾಗೂ ಮಕ್ಕಳಿಗೆ ಒಳಿತನ್ನು ಮಾಡುವ ದೇವತೆಯೆಂದು ನಂಬಿದ ಮುತ್ತೈದೆಯರು ಮಾಸ್ತಿಗೆ ಕುಂಕುಮ,

ಬಳೆ, ಬಾಚಣಿಗೆಗಳ ಕಾಣಿಕೆಯ ಸಾತ್ವಿಕ ಪೂಜೆ ಸಲ್ಲಿಸುವುದೇ ಹೆಚ್ಚಾಗಿದೆ; ಆದರೂ ಕೆಲವೆಡೆ ಮಾಸ್ತಿಗೂ ಕೋಳಿ ಕುರಿಗಳ ಬಲಿ ಕೊಡುವ ಸಂಪ್ರದಾಯ ಇದೆ.

ಭೂತಾರಾಧನೆಯಲ್ಲಿ ಸಸ್ಯ ಸಮೃದ್ಧಿ ವಿಧಿಯೂ ಅಡಕವಾಗಿದೆ. ಧಾನ್ಯ ದೇವತೆ ಕೋಳಿ, ಕುರಿ, ಹಂದಿ ಮುಂತಾದ ಪ್ರಾಣಿಗಳ ರೂಪವನ್ನು ಪಡೆದು ಹೊಲದಿಂದ ಹೊರಗೆ ಹೋಗುವುದು ನಂಬಿ, ಪ್ರಾಣಿಗಳನ್ನು ಕೊಲ್ಲುವ ಮೂಲಕ ಧಾನ್ಯ ದೇವತೆಯನ್ನೇ ಕೊಂದೆವೆಂದು ಆದಿವಾಸಿಗಳು ಸಮಾಧಾನಪಡುವ ವಿಚಾರವನ್ನು ಫ್ರೇಜರ್ ತನ್ನ 'ಗೋಲ್ಡನ್‌ಬೋ'ದಲ್ಲಿ ವಿವರಿಸಿದ್ದಾನೆ. ಹೀಗೆ ವೀರದೇವತೆಗೆ ಬಲಿ ಕೊಡುವುದರಿಂದ, ಧಾನ್ಯದೇವತೆ ಅಲ್ಲೇ ಬಿದ್ದು ಕೊಂಡಿರುತ್ತಾಳೆಂಬ ಆದಿವಾಸಿ ನಂಬಿಕೆಯನ್ನು ಈ ಆಚರಣೆ ದೃಢಪಡಿಸುತ್ತದೆ. ಕೃಷಿ ಸಮೃದ್ಧಿ ವಿಧಿಯೂ ಬಂಡಿಹಬ್ಬದ ಆಚರಣೆಗಳಲ್ಲಿ ಕುಳಿತಾಗ 'ಹಗಣ' ಮಾಡುವ ಪೂರ್ವದಲ್ಲಿ ಗದ್ದೆ ಉಳುವುದು, ಬಿತ್ತುವುದು, ಹಕ್ಕಿ ಕಾಯುವುದು, ಹುಲಿ ಆಕಳನ್ನು ಹಿಡಿಯುವುದು ಮುಂತಾದ ಕೃಷಿಗೆ ಸಂಬಂಧಿಸಿದ ಆಚರಣೆಗಳನ್ನು ಅಭಿನಯಿಸಿ ತೋರಿಸುತ್ತಾರೆ. ಈ ಅಭಿನಯ ಕೃಷಿ ಸಮೃದ್ಧಿಯನ್ನು ಹಾರೈಸುವ ಸಮಾನ ಪ್ರವರ್ತಕ ಮಾಟಕ್ಕೆ ಸಂಬಂಧಿಸಿದ್ದಂತೆ ತೋರುತ್ತದೆ.

**4. ಬಂಡಿಯ ಹಬ್ಬ** : ವೀರ ದೇವತೆಗಳ ಸಂತೃಪ್ತಿಗಾಗಿ ವೈಶಾಖ ಮಾಸದಲ್ಲಿ ಬಂಡಿಯ ಹಬ್ಬವನ್ನು ಆಚರಿಸುವ ಸಂಪ್ರದಾಯ ಕರಾವಳಿಯಲ್ಲಿದೆ. ಅಂಕೋಲಾ ಸೀಮೆಯ ಹೊನ್ನೆಬೈಲಿನ ಬಂಡಿ ಹಬ್ಬದ ಉಸ್ತುವಾರಿ, ಸಂಪೂರ್ಣ ಹಾಲಕ್ಕಿ ಒಕ್ಕಲಿಗರದು. ಉಳಿದೆಡೆಯ ಬಂಡಿಯ ಹಬ್ಬಗಳಲ್ಲಿಯೂ ಹಾಲಕ್ಕಿ ಒಕ್ಕಲಿಗರು ಕಟ್ಟಿಗೆದಾರರಾಗಿಯೇ, ಕಲಶ ಹೊರುವ ಹಾಗೂ ದೇವತೆಯ ಪೂಜೆ ಮಾಡುವ 'ಗುನಗಿ'ರಾಗಿಯೇ ಭಾಗಶಃ ಪಾಲ್ಗೊಳ್ಳುವುದಿದೆ. ಬಂಡಿಹಬ್ಬದ ಚಡಂಗಗಳನ್ನು ಗಮನಿಸಿದರೆ ಈ ಹಬ್ಬದ ಆಚರಣೆ ಸತ್ತ ಪಿತೃಗಳ ಸಂತೃಪ್ತಿಗಾಗಿ ಮಾಡುವ ಉತ್ಸವದಂತೆ ಕಂಡುಬರುತ್ತದೆ.

ಎರಡು ದಿನದಂದ ಹನ್ನೆರಡು ದಿನಗಳವರೆಗೆ ಆಚರಿಸುವ ಬಂಡಿಯ ಹಬ್ಬವನ್ನು ಜಾನಪದರು ಹಬ್ಬವೆಂದು ಕರೆದರೂ, ವಾಸ್ತವವಾಗಿ ಇದೊಂದು ಜಾತ್ರೆಯೇ ಆಗಿರುತ್ತದೆ. ಬಂಡಿಹಬ್ಬದ ಕಲಶದೇವತೆಗಳನ್ನು ಹೊತ್ತ ಗುನಗರ ಸೊಂಟಕ್ಕೆ ತೂಗಾಡುವ ಖಡ್ಗ, ಅವರ ಮುಂದೆ ಹೋಗುವ ಕಟ್ಟಿಗೆದಾರರು, ಮರದ ಕುದುರೆಗಳು ಗತಿಸಿದ ವೀರ ಪರಂಪರೆಗೆ ಸಮರ್ಥ ಸಾಕ್ಷಿಗಳು. ಕೆಲವೆಡೆ ಬಂಡಿಹಬ್ಬದಲ್ಲಿ ವೀರ ಸತಿಯೊಬ್ಬಳು ಮದುವೆಯಾಗುವ, ಅವಳ ಗಂಡ ದಂಡಿನಲಿ ಹತವಾಗುವ, ವೀರ ಸತಿ ಕೊಂಡಕ್ಕೆ ಬಿದ್ದು ಸಾಯುವ ಕಥಾನಕವನ್ನು ಆಡುಕಟ್ಟೆಯಲ್ಲಿ ಅಭಿನಯಿಸಲಾಗುತ್ತದೆ. ಅಂತೆಯೇ ವಿವಿಧ ವೀರರ ಹೆಸರಿನಲ್ಲಿ ಮುಖವಾಡಗಳನ್ನು ವಾದ್ಯದ ಗುತ್ತಿಗೆ ಸರಿ ಹೊಂದುವಂತೆ ಕುಣಿಸುವ ಪರಿಪಾಟವಿದೆ. ಇವೆಲ್ಲವನ್ನು ಗಮನಿಸಿದರೆ, ಅಮ್ಮನವರ ಹಾಗೂ ಬೀರದೇವರ ಕಲಶಗಳು ಹಾಗೂ ಮುಖವಾಡಗಳು ರಣವೀರರಾಗಿಯೋ, ದಾನವೀರ, ದಯಾವೀರರಾಗಿಯೋ ಮಡಿದ ವೀರರ ಪ್ರತೀಕವೆಂಬ ಅನುಮಾನ ಗಟ್ಟಿಯಾಗುತ್ತದೆ.

ಬಂಡಿಹಬ್ಬದ ಕೊನೆಯಲ್ಲಿ ಬರುವ ಚಪ್ಪರ ಹತ್ತುವ ಚಡಂಗ, ಮೃತ ವೀರರು ಸ್ವರ್ಗಯಾನ ಮಾಡಿದ ಅಂಶವನ್ನು ಸಾಂಕೇತಿಕವಾಗಿ ಚಿತ್ರಿಸುತ್ತದೆ. ಬಲಿಮಕ್ಕಳ ಹಾಗೂ ಹೂವಿನ(ಸಾಮಿ) ಮಕ್ಕಳ ಮೆರವಣಿಗೆ, ಕೋಳಿ ಕುರಿಗಳ ಬಲಿ, ವೀರರ ಸಂತೃಪ್ತಿಗಾಗಿ ಕೊಡುವ ಬಲಿಗೊಳುಗಳು, ಹೀಗೆ ಬಲಿ ಕೊಟ್ಟಲ್ಲಿ ಮಾತ್ರ ಈ ದೇವತೆಗಳು ಸಂತೃಪ್ತಿ ಹೊಂದಿ, ಊರ ಮೇಲಿನ ಸಾಂಕ್ರಾಮಿಕ ರೋಗ ರುಜಿನಗಳನ್ನು ತಡೆಗಟ್ಟಿ ಒಕ್ಕಲಿಗನ ಸಮೃದ್ಧಿಯ ಕರ್ಣಧಾರತ್ವವನ್ನು ವಹಿಸಿಕೊಳ್ಳುವವು ಎಂಬ ನಂಬಿಕೆ ಹಾಲಕ್ಕಿಗಳದ್ದು.

ಬಂಡಿಹಬ್ಬದ ಕಲಶಗಳು ಮೃತ ವೀರರನ್ನು ಪ್ರತಿನಿಧಿಸುತ್ತವೆ. ಕಲಶ ಹೊತ್ತ ಗುನಗರ ಮೈಮೇಲೆ ದೇವರ ಆವಾಹನೆಯಾಗುವುದುಂಟು. ಇದಕ್ಕೆ ಮೈ ಮೇಲೆ ಭಾರ ಬರುವುದೆಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಭಕ್ತರು ತಮ್ಮ ಸಮಸ್ಯೆಗಳಿಗೆ ಕಲಶ ದೇವತೆಯಿಂದ ಪರಿಹಾರ ಕೇಳುತ್ತಾರೆ. ಸಾರ್ವಜನಿಕವಾಗಿ ದೇವವಾಣಿಯನ್ನು ಕೇಳುವ ಪದ್ಧತಿ ಗ್ರೀಕ್ ದೇಗುಲಗಳಲ್ಲಿಯೂ ಇತ್ತು. ದಕ್ಷಿಣ ಕನ್ನಡದಲ್ಲಿಯೂ ಭೂತದ ಕೋಲ, ಬಂಡಿ ಎಂಬ ಹೆಸರುಗಳಿಂದ ಈ ಹಬ್ಬದ ಆಚರಣೆಯಿದೆ. ಆದರೆ ಭೂತಾರಾಧನೆಯಲ್ಲಿ ಹಾಡಲಾಗುವ ಪಾಡ್ದನಗಳ ಬಳಕೆ ಇಲ್ಲಿಲ್ಲ. ಹಿಂದೆ ಕಲಶಗಳ ಮೈಮೇಲೆ ಭಾರ ಬಂದಾಗ, ಆಯಾ ದೇವತೆಗಳ ಕುರಿತು ಹಾಡುತ್ತಿದ್ದರೆಂದು ಹಳೆಯ ತಲೆಮಾರಿನವರು ಕ್ವಚಿತ್ತಾಗಿ ಹೇಳುತ್ತಾರೆ. ಇದನ್ನು ಸಮರ್ಥಿಸಲು ಬೇರೆ ಬೇರೆ ವೀರ ದೇವತೆಗಳನ್ನು ಕುರಿತಾಗಿ, ಅನೇಕ ಹಾಡುಗಳು ಉಪಲಬ್ಧವಿವೆ. ಆದರೆ ಈ ಹಾಡುಗಳನ್ನು ಬಂಡಿಯ ಹಬ್ಬದ ಕಾಲಕ್ಕೆ ಹಾಡದೆ ಬೇರೆ ಪ್ರಸಂಗಗಳಲ್ಲಿ ಹಾಡುತ್ತಾರೆ.

ಯಾರಿಗಿಂತ ಯಾರೋ ಹಿರಿಯವಳೋ
ಅಂಕೋಲಿಯ ಭೂಮಾತಾಯೆಲೋ
ತನ್ನ ಕಾವಿಲಗೆ ಯಾರಾ ಕರವಳಲೋ
ಹೆರಿಯಾಲೇ ಹೊನ್ನಪ್ಪನ ಕರವಳಲೋ
ಹೆರಿಯಾಲೇ ಹೊನ್ನಪ್ಪನ ಕರೆದೇಲೋ
ಕೋಳಿಯ ಕುರಿಯೇ ಕೊಡುವಳಲೋ
ಊರಮ್ಮೆನೇ ಮಾರಿ ಬಂದರೆ
ಹೆರಿಯಾಲೇ ಹೊನ್ನಪ್ಪಗೆ ಹೇಳುವಳಲೋ

ಹಿರಿಯ ಹೊನ್ನಪ್ಪ ಒಂದು ವೀರ ದೇವತೆ. ಊರಿನ ಮೇಲೆ ಸಾಂಕ್ರಾಮಿಕ ರೋಗ ಬಂದಾಗ ಅದನ್ನು ನಿಯಂತ್ರಿಸಲು ಭೂಮಿದೇವತೆ ಹಿರಿಯ ಹೊನ್ನಪ್ಪನಿಗೆ ಆದೇಶ ನೀಡುತ್ತಾಳೆ. ಅವಳ ಆಜ್ಞೆಯಂತೆ ಹಿರಿಯ ಹೊನ್ನಪ್ಪ 'ಜುಮ್ಮನ ಗುದಿಗೆ' ಯಿಂದ ಹೊಡೆದು ಮಾರಿಬೇನೆ

ಓಡಿಸುತ್ತಾನೆಂಬ ನಂಬಿಕೆ ಜಾನಪದರದು. ಈ ಹೋರಾಟದಲ್ಲಿ ಹ್ರಾಸವಾದ ಶಕ್ತಿ ತುಂಬಿಕೊಳ್ಳಲು ಹಿರಿಯ ಹೊನ್ನಪ್ಪನಿಗೆ ಬಂಡಿಯ ಹಬ್ಬದಲ್ಲಿ ಕೋಳಿ ಕುರಿಗಳ ಬಲಿ ನೀಡುತ್ತಾರೆ.

ಬಂಡಿಯ ಹಬ್ಬದಲಿ ಜನಪದ ಗೀತೆ, ಹಗಣ, ಹಾಗೂ ಹಲವು ಬಗೆಯ ಕುಣಿತ ಮೆರೆತಗಳು ಸೇರಿಕೊಂಡು, ಹಲವು ಬಗೆಯ ಜಾನಪದ ಕಲೆಗಳ ಉಳಿವು ಹಾಗೂ ಬೆಳವಣಿಗೆಗೆ, ಪ್ರತ್ಯಕ್ಷ ಹಾಗೂ ಪರೋಕ್ಷ ನೆರವು ಸಿಗುತ್ತದೆ.

## ಸಿದ್ದಿಗಳ ಸೀಮಾಪದ್ಧತಿ

### ಸಿದ್ದಿಯರ ಚಾರಿತ್ರಿಕ ಹಿನ್ನೆಲೆ

ಇಡೀ ಕರ್ನಾಟಕದಲ್ಲೇ ವಿಭಿನ್ನವೂ, ವಿಶಿಷ್ಟವೂ ಮತ್ತು ಅಪರೂಪದ ಬುಡಕಟ್ಟು ಸಿದ್ದಿ ಸಮುದಾಯವಾಗಿದೆ. ಆಫ್ರಿಕಾ ಖಂಡದಿಂದ ಗುಲಾಮರಾಗಿ ಪೋರ್ಚುಗೀಸರ ಮೂಲಕ ಭಾರತದ ಗೋವಾಕ್ಕೆ ಬಂದು, ಅಲ್ಲಿಂದ ಅವರ ಗುಲಾಮರಾಗಿ ದುಡಿದು, ತದನಂತರ ಉತ್ತರ ಕನ್ನಡ ಜಿಲ್ಲೆಯ ಕಾಡಿಗೆ 500 ವರ್ಷಗಳ ಹಿಂದೆಯೇ ಪಾದಾರ್ಪಣೆ ಮಾಡಿದವರು ಸಿದ್ದಿಗಳು.

ಆಫ್ರಿಕಾ ಖಂಡದ ಜಾಂಬೇಸಿನದಿಯ ತಟದಲ್ಲಿರುವ ಜಿಂಜಿಬಾರ್ ದ್ವೀಪದಿಂದ ಈ ನೀಗ್ರೋಗಳನ್ನು ಹಡಗಿನ ಮೂಲಕ ಭಾರತಕ್ಕೆ ಪೋರ್ಚುಗೀಸರು ಕರೆತಂದರು. ಸಾವಿರಾರು ವರ್ಷಗಳ ಹಿಂದೆಯೇ ಅರಬರು ಮತ್ತು ಯುರೋಪಿಯನ್ನರು, ಜೊತೆಗೆ ಭಾರತದ ಗುಜರಾತಿನ ಬನಿಯಾಗಳೂ ಕೂಡ ಆಫ್ರಿಕಾ ಕಗ್ಗತ್ತಲ ಕಾಡಿನಲ್ಲಿ ನಾಗರಿಕತೆಯ ಸೋಂಕಿಲ್ಲದೆ ಪ್ರಾಣಿಗಳಂತೆ ಅಮಾಯಕರಾಗಿ ಬದುಕುತ್ತಿದ್ದ ನೀಗ್ರೋಗಳನ್ನು ಬೇಟೆಯಾಡಿ ಹಿಡಿದು ತಂದು ಜಿಂಜಿಬಾರ್ ದ್ವೀಪದಲ್ಲಿ ಕಟ್ಟಿ ಹಾಕಿ ಮಾರಾಟ ಮಾಡುತ್ತಿದ್ದರು. ಆಗ ಜಿಂಜಿಬಾರ್ ಕಾಡಿನ ನೀಗ್ರೋಗಳನ್ನು ಮಾರಾಟ ಮಾಡುವ ಒಂದು ಮುಖ್ಯ ವ್ಯಾಪಾರ ಕೇಂದ್ರವಾಗಿತ್ತು. ಅಲ್ಲಿಂದ ಪೋರ್ಚುಗೀಸರು ಸಿದ್ದಿಗಳನ್ನು ಖರೀದಿಸಿ ಗುಲಾಮರನ್ನಾಗಿ ಹಡಗಲ್ಲಿ ಗೋವಾಕ್ಕೆ ತಂದು ತೊತ್ತಿನ ಆಳುಗಳನ್ನಾಗಿ ದುಡಿಸಿಕೊಂಡದ್ದು ಈಗ ಇತಿಹಾಸ.

ಬಹುಶಃ ಇಲ್ಲಿರುವ ಸಿದ್ದಿಗಳನ್ನು ಆಫ್ರಿಕಾದ ಅಬಿಸೀನಿಯಾ ಮತ್ತು ಟೇಟೆ ಭಾಗದಿಂದ ಜಿಂಜಿಬಾರ್‌ಗೆ ಬೇಟೆಯಾಡಿ ತಂದಿರಬಹುದು. ಕಾರಣ ಉತ್ತರ ಕನ್ನಡ ಜಿಲ್ಲೆಗೆ ಈ ಸಮುದಾಯ ಬಂದ ಮೇಲೂ ಇವರನ್ನು 'ಅಬ್ಸಿ'ಗಳೆಂದು ಕರೆಯಲಾಗುತ್ತಿತ್ತು. ಜಾಂಬೇಸಿ ನದಿಯ ತಟ ಹಾಗೂ ನ್ಯಾಸ ಸರೋವರ ಬಳಿಯಿರುವ ಟೆಟೆ ಭಾಗದಲ್ಲಿ ಈಗಲೂ 'ಶಿದಿಮೊ' ಎಂಬ ಆದಿವಾಸಿ ಪಂಗಡವಿದೆ ಎಂದು ತಿಳಿದುಬಂದಿರುವ ಕಾರಣ ಶಿದಿಮೊಗಳನ್ನು ಇಲ್ಲಿ ಸಿದ್ದಿಗಳೆಂದು ಕರೆದಿರಬಹುದೆಂದು ವಿಶ್ಲೇಷಿಸಲಾಗಿದೆ.

ಭಾರತಕ್ಕೆ ಬರುವ ಪೂರ್ವದಲ್ಲೇ 'ಶಿದಿಮೊ'ಗಳನ್ನು ಅಲ್ಲಿನ ಟ್ರೇಡರ್ಸ್‌ಗಳು ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮಗಳಿಗೆ ಮತಾಂತರ ಮಾಡಿ, ಕಾದ ಕಬ್ಬಿಣ ಮುದ್ರೆಯಿಂದ ಟಸ್ಸೆ ಹೊಡೆದು ಬಿಟ್ಟಿದ್ದರು. ಅದರ ಪರಿಣಾಮವಾಗಿ ಭಾರತಕ್ಕೆ ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮದ ಗುಲಾಮರಾಗಿ ಕಾಲಿಟ್ಟರೆನ್ನಲಾಗಿದೆ. ತದ ನಂತರ ಪೋರ್ಚುಗೀಸರಿಂದ ಇಲ್ಲಿಯ ತೋಟ ದೊಡೆಯರುಗಳು(ಭೂಮಾಲೀಕರು) ಖರೀದಿಸಿದ ನಂತರವಷ್ಟೇ ಒಂದಷ್ಟು ಸಮುದಾಯ ಅನಿವಾರ್ಯವಾಗಿ ಹಿಂದೂಧರ್ಮಕ್ಕೆ ಮತಾಂತರಗೊಂಡಿರುವುದನ್ನು ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾಣಬಹುದಾಗಿದೆ. ಸಿದ್ದಿಗಳಲ್ಲಿ ಧರ್ಮ ಒಪ್ಪಿತವಾದುದಲ್ಲ. ಒಡೆಯರುಗಳ ದರ್ದಿಗೆ ಅನಿವಾರ್ಯವಾಗಿಯೇ ಬಲವಂತವಾಗಿಯೇ ಹೇರಲ್ಪಟ್ಟಿದ್ದು. ಹಾಗಾಗಿ ಈ ಮೂರೂ ಸಮುದಾಯಗಳಲ್ಲಿನ ಧರ್ಮ ಸ್ಥಿರವಾದದಲ್ಲ. ಅಗತ್ಯ ಮತ್ತು ಅನುಕೂಲಗಳಿಗೆ ತಕ್ಕಂತೆ ಆಗಾಗ ಧರ್ಮಗಳನ್ನು ಬದಲಿಸಿಕೊಂಡಿರುವುದನ್ನು ಈ ಸಮುದಾಯದಲ್ಲಿ ಕಾಣಬಹುದು. ಹಾಗಾಗಿ ಪರಸ್ಪರ ಒಳವೈವಾಹಿಕ ಸಂಬಂಧಗಳೂ ಈಗ ಜರುಗುತ್ತಿರುವುದು ಸಿದ್ದಿಗಳಲ್ಲಿ ಸಾಮಾನ್ಯವಾದ ಸಂಗತಿಯಾಗಿದೆ. ಈ ಕಾರಣದಿಂದ ಒಂದೇ ಕುಟುಂಬದಲ್ಲಿ ಹಿಂದೂ ಮುಸ್ಲಿಂ, ಕ್ರೈಸ್ತರು ಮೂರು ಧರ್ಮಗಳಿರುವ ಬಹಳಷ್ಟು ಪ್ರಕರಣಗಳು ಈ ಸಮುದಾಯದಲ್ಲಿ ಗಮನಿಸಬಹುದಾಗಿದೆ. ಆದ್ದರಿಂದ ವೈವಿಧ್ಯತೆಯಲ್ಲಿ ಏಕತೆ ಸಾರಿ, ನಿಜವಾದ ಜಾತ್ಯತೀತ ಬದುಕನ್ನು ಭಾರತದಲ್ಲಿ ಅನುಸರಿಸುತ್ತಿರುವವರು 'ಸಿದ್ದಿ'ಗಳೊಬ್ಬರೇ ಎಂದು ಹೇಳಬಹುದಾಗಿದೆ.

ಸಿದ್ದಿಗಳದ್ದೇ ಆದ ಮೂಲ ಸಾಮಾಜಿಕ ವ್ಯವಸ್ಥೆ, ಸಾಂಸ್ಕೃತಿಕ ವಿಶಿಷ್ಟತೆ, ಧಾರ್ಮಿಕ ಉಪಾಸನೆ ಮತ್ತು ಆಚರಣೆಗಳಿರುವುದು ಕಂಡುಬಂದಿಲ್ಲ. ಕಾರಣ ಆಫ್ರಿಕಾದಲ್ಲಿರುವಾಗಲೇ ಬೇಟೆಯಾಡಿ ಕರೆತರುವಾಗ ಆಫ್ರಿಕಾದ ಬೇರೆ ಬೇರೆ ಭಾಗ, ಭಾಷೆಗಳುಳ್ಳವರನ್ನು ತಂದು ಬೇರ್ಪಡಿಸಿದ ಕಾರಣ ಅವರ ಭಾಷೆ, ಧರ್ಮ, ದೇವರು, ಹಾಡು, ನೃತ್ಯ, ಉಡಿಗೆತೊಡುಗೆ ಮತ್ತು ನೆಮ್ಮದಿಗಳನ್ನು ಜಂಜಿಬಾರ್ ದ್ವೀಪದಲ್ಲೇ ಸರ್ವಸ್ವವನ್ನು ಬಿಟ್ಟು ಬೆತ್ತಲೆ ಭಾರತಕ್ಕೆ ಬಂದವರು ಸಿದ್ದಿಗಳು, ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಇವರ ನೆಲೆಗಳಾದ ಹಳಿಯಾಳ, ಯಲ್ಲಾಪುರ, ಅಂಕೋಲ(ಘಟ್ಟದ ಮೇಲ್ಭಾಗ ಮುಂಡಗೋಡ, ಶಿರಸಿ, ಜೋಯಿಡಾ ತಾಲ್ಲೂಕು ಹಾಗೂ ಈ ಜಿಲ್ಲೆಯ ಗಡಿಭಾಗಕ್ಕೆ ಅಂಟಿಕೊಂಡಿರುವಂತೆ ಇರುವ ಬೆಳಗಾವಿಯ ಖಾನಾಪುರ ಮತ್ತು ಧಾರವಾಡದ ಕಲಘಟಗಿಗಳಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ. 2011ರ ಜನಗಣತಿಯ ಪ್ರಕಾರ ಪರಿಶಿಷ್ಟ ಪಂಗಡದವರ ಜನಸಂಖ್ಯೆ ಅಂದಾಜಿನ ಪ್ರಕಾರ 34,239 ಆಗಿದೆ. ಇದರಲ್ಲಿ ಸದ್ಯಕ್ಕೆ 25-26 ಸಾವಿರದಷ್ಟು ಸಂಖ್ಯೆ ಸಿದ್ದಿಗಳದ್ದಾಗಿರಬಹುದಾಗಿದೆ. ಉತ್ತರ ಕನ್ನಡ ಜಿಲ್ಲೆಗೆ ಸೀಮಿತವಾಗಿ ಸ್ಥಳೀಯ ಸಂಘ ಸಂಸ್ಥೆಗಳ ಹೋರಾಟದ ಫಲವಾಗಿ 2003ರಲ್ಲಿ ಈ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಲಾಗಿದೆ. ಖಾನಾಪುರ ಮತ್ತು ಕಲಘಟಗಿಯ ಪಕ್ಕದ ಜಿಲ್ಲೆಗಳಲ್ಲಿರುವ ಒಂದಷ್ಟು ಸಿದ್ದಿಗಳು ಈ ಸೌಲತ್ತಿನಿಂದ

ವಂಚನೆಗೊಳಗಾಗಿದ್ದು, ಪುನಃ ಸತತ ಹೋರಾಟಗಳ ಪರಿಣಾಮವಾಗಿ ಇಷ್ಟರಲ್ಲೇ ಅವರೂ ಬುಡಕಟ್ಟುಗಳಾಗಿ ಘೋಷಣೆಗೆ ಒಳಗಾಗುವ ಆದೇಶದ ನಿರೀಕ್ಷಣೆಯಲ್ಲಿದ್ದಾರೆ.

ದೇಶದಿಂದ ದೇಶಕ್ಕೆ ಸರ್ವಸ್ವವನ್ನು ಕಳೆದುಕೊಂಡು ಅನಾಥರಾಗಿ ಬಂದ ಸಿದ್ದಿ ಸಮುದಾಯಕ್ಕೆ ಸಾಂಸ್ಕೃತಿಕವಾದದ್ದೊಂದು ಕಳೆದುಕೊಂಡು ಅನಾಥ ನೀಗ್ರೋ ಗುಣಲಕ್ಷಣಗಳುಳ್ಳ ಅವರ ಕಡು ಕಪ್ಪುವರ್ಣ, ಗುಂಗುರು ಕೂದಲು, ದಪ್ಪ ತುಟಿ, ಚಪ್ಪಟೆ ಮೂಗುಗಳ ವಿಭಿನ್ನ ಚಹರೆ ಅವರಿಗೆ ಪರಕೀಯ ಮತ್ತು ಕೀಳರಿಮೆ ಭಾವನೆಯನ್ನು ಉಂಟುಮಾಡಿದೆ. ಅದರ ಮೂಲಕ ಅವರ ಸಾಂಸ್ಕೃತಿಕ ಆಸ್ಮಿತೆಯನ್ನು ನಾಶಗೊಳಿಸಿತ್ತು. ಕಾಲಕ್ರಮೇಣ ತಮ್ಮ ನೆಲೆಯ ಅಕ್ಕಪಕ್ಕದ ಸಮುದಾಯಗಳಿಗಿಂತ ಭಿನ್ನವಾದ ವಿಶೇಷ ಜಾನಪದ ಸಂಸ್ಕೃತಿಯನ್ನು ತಮ್ಮೊಳಗೇ ಹುಟ್ಟುಹಾಕಿಕೊಂಡಿದ್ದು ಮಾತ್ರ ಫಿಯೋನಿಕ್ಸ್ ತರಹ ವಿಸ್ಮಯವಾದದ್ದು.

**ಆಫ್ರಿಕಾದಿಂದ ತಂದು ಉಳಿಸಿಕೊಂಡ ಆಸ್ತಿ ಧಮಾಮಿ**

ಸರ್ವಸ್ವವನ್ನು ಕಳೆದುಕೊಂಡು ಬೆತ್ತಲಾಗಿ ಬಂದ ಈ ಸಮುದಾಯದ ಒಳಗೇ ಸುಪ್ತಾವಸ್ಥೆಯಲ್ಲಿ ಉಳಿದುಕೊಂಡದ್ದು ಅವರ 'ಧಮಾಮಿ' ವಾದ್ಯ ಮತ್ತು ಅದರ 'ಬೀಟ್.' ಇದೊಂದು ತಮ್ಮ ಮೂಲ ಸೆಲೆಯನ್ನು ಮರೆತಿದ್ದೆ ಆಗಿದ್ದರೆ, ಈಗ ಪಡೆದುಕೊಂಡ 'ಆದಿವಾಸಿ' ಎಂಬ ಸರ್ಕಾರದ ಪಟ್ಟ ಅವರ ಭಾಗಕ್ಕಿರುತ್ತಿರಲಿಲ್ಲ. ಬುಡಕಟ್ಟುಗಳ ಆಸ್ಮಿತೆ ಗುಪ್ತಗಾಮಿನಿಯಾಗಿದ್ದು ಎಂದಾದರೂ ಅದು ಪ್ರಕಟಗೊಳ್ಳದೇ ಇರುವುದಿಲ್ಲ. ಧಮಾಮಿಯು ಆಫ್ರಿಕಾ ಮೂಲದ ವಾದ್ಯ. ಆಫ್ರಿಕಾ ಕಾಡಿನಲ್ಲಿ ತಮ್ಮ ನೋವು ನಲಿವು ಬಾವನೆಗಳನ್ನು ಇಂತಹ ವಾದ್ಯದ ಮೂಲಕವೇ ಪರಸ್ಪರ ಹಂಚಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಎಷ್ಟೋ ವರ್ಷಗಳ ನಂತರ ಭಗ್ನಗೊಂಡ ಅವರ ಬದುಕಿನಲ್ಲಿ ಧಮಾಮಿಯನ್ನು ಚಿಗುರಿಸಿಕೊಂಡ ಈ ಸಮುದಾಯವು ಧಮಾಮಿ ಮೂಲಕ ತಮ್ಮ ಚಹರೆಯನ್ನು ಕಟ್ಟಿಕೊಂಡಿದ್ದು ಮಾತ್ರ ಒಂದು ಅದ್ಭುತವಾದ ಚಿರಸ್ಮರಣೀಯ ಅನುಭವ.

ತಮ್ಮೊಳಗೆ ಕದ್ದು ಹಾಡಿಕೊಳ್ಳುತ್ತಿದ್ದ 'ಧಮಾಮಿ ವಾದ್ಯ' ಅವರೇ ಕಟ್ಟಿಕೊಂಡ ಹೊಸ ಜಾನಪದಗೀತೆ ಮತ್ತು ನೃತ್ಯವನ್ನು ಗುರ್ತಿಸಿದ ಸ್ಥಳೀಯ ಸಂಸ್ಥೆಗಳು ಅದರ ಪುನಃಶ್ಚೇತನಕ್ಕೆ ನೀರೆರೆದು ಪೋಷಿಸಿ ಅದನ್ನೊಂದು ವಿಶೇಷ ಕಲೆಯ ಪ್ರಕಾರವಾಗಿ ಬೆಳೆಸಿದ್ದು ಸಿದ್ದಿ ಸಮುದಾಯದ ಒಂದು ಮೈಲಿಗಲ್ಲು. ಈ ಕಾರಣಕ್ಕೆ 2 ದಶಕಗಳಿಂದ ಸಿದ್ದಿ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಲು ತೊಡಕಾಗಿದ್ದ ಅವರದೇ ಆದ ಸಾಂಸ್ಕೃತಿಕ ಗುಣಲಕ್ಷಣಗಳ ಕೊರತೆಯನ್ನು ನೀಗಿಸಿ ಬುಡಕಟ್ಟು ಲಕ್ಷಣಗಳಿಗಾಗಿ ಆಧಾರ ಒದಗಿಸಿದ ಏಕೈಕ ಅಸ್ತ್ರ ಈ ಧಮಾಮಿ. ಧಮಾಮಿಯ ಒಂದು ತಂತು ಹಿಡಿದೇ ಸಿದ್ದಿಗಳನ್ನು ಪರಿಶಿಷ್ಟರು ಎಂದು ಕೇಂದ್ರ

ಸರ್ಕಾರ ಆದೇಶ ನೀಡಲು ಈ ಧಮಾಮಿ ವಾದ್ಯ ಕಾರಣ ಧಮಾಮಿ ಅವರ ಪ್ರತಿಷ್ಠೆಯ ಮತ್ತು ಸಮುದಾಯದ ಸಾಂಸ್ಕೃತಿಕ ಆಸ್ಮಿತೆಯ ಪ್ರತೀಕವಾಗಿದೆ.

ಗಟ್ಟಿ ಮರದ ದೊಡ್ಡ ಕಾಂಡವನ್ನು ಕಡಿದು, ಒಳಭಾಗವನ್ನು ತೆಗೆದು, ಬಲಬದಿಗೆ ಉಡದ ಚರ್ಮವನ್ನು, ಎಡಬದಿಗೆ ಸಾರಂಗದ ಚರ್ಮವನ್ನು ಹಚ್ಚಿ ಹದ ಮಾಡಿದ ವಾದ್ಯವೇ 'ಧಮಾಮಿ'. ಈ ಧಮಾಮಿಯನ್ನು ಬಾರಿಸಿದಾಗ ಆಫ್ರಿಕಾ ಖಂಡದ ವಾದ್ಯ 'ಟ್ರಂ ಬೀಟ್' ನಂತೆಯೇ ಶಬ್ದ ಹೊರಡಿಸುವ ಕಾರಣ, ಭಾರತದ ಯಾವುದೇ ವಾದ್ಯಗಳನ್ನು ಹೋಲದೆ ತನ್ನದೇ ಆದ ಪ್ರತ್ಯೇಕತೆಯನ್ನು ಕಾಯ್ದು ಕೊಂಡಿದೆ. ಧಮಾಮಿ ಎಂದರೆ ವಾದ್ಯವಷ್ಟೇ ಅಲ್ಲ. ಆ ವಾದ್ಯದ ಶಬ್ದದ ತಾಳಕ್ಕೆ ಸರಿಯಾದ ಹೆಜ್ಜೆಯನ್ನಿಕ್ಕುತ್ತಾ ಕುಣಿಯುವ ನೃತ್ಯ. ಇದೂ ಕೂಡ ಆಫ್ರಿಕಾ ನೃತ್ಯದ ಶೈಲಿಯಲ್ಲಿಯೇ ಇದೆ. ಅಲ್ಲದೆ ಆ ನೃತ್ಯಕ್ಕೆ ಸಿದ್ದಿಗಳು ತಮ್ಮ ಸುತ್ತಲ ಕಾಡಿನ ಪರಿಸರದ ಒಡನಾಡಿಗಳ ಚಿತ್ರಣ ಹಾಗೂ ತಮ್ಮ ಬದುಕಿನ ನೋವು ನಲಿವು ಹಾಸ್ಯಗಳನ್ನು ತಾವೇ ಕಟ್ಟಿ ಸೃಷ್ಟಿಸಿದ ಜಾನಪದ ಹಾಡುಗಳನ್ನು ವಿಶೇಷ ರೀತಿಯಲ್ಲಿ ಧಮಾಮಿ ವಾದ್ಯ ಮತ್ತು ನೃತ್ಯಕ್ಕೆ ಅಳವಡಿಸಿ ಆಡುವ ಒಂದು ಶಬ್ದ ತಾಳ, ನೃತ್ಯ ಮತ್ತು ಜಾನಪದಗಳ ಮಿಶ್ರಣಗಳ ಮೊತ್ತಕ್ಕೆ 'ಧಮಾಮಿ' ಎಂದು ಕರೆಯಲಾಗುತ್ತದೆ. ಆಫ್ರಿಕಾ ನೃತ್ಯದಂತೆ ಗಟ್ಟಿತನದ ನೃತ್ಯವಾದ್ದರಿಂದ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಈ ಧಮಾಮಿ ನೃತ್ಯ ಕಲೆ ಹೆಚ್ಚು ಹೆಚ್ಚು ಆಕರ್ಷಣೆ ಮತ್ತು ಪ್ರಖ್ಯಾತಿಯನ್ನು ಹಾಗೂ ಜನಮನ್ನಣೆಯನ್ನು ಗಳಿಸುತ್ತಿದೆ.

ಧಮಾಮಿಯ ಜೊತೆ ಸಿದ್ದಿಗಳಲ್ಲಿ ಇನ್ನೂ ಪಳೆಯುಳಿಕೆಯಂತೆ ಆಫ್ರಿಕಾದ ಮೂಲ ಅಂಶವಾಗಿ ಉಳಿದುಕೊಂಡು ಬಂದಿರುವುದು ಅವರ ಆಫ್ರಿಕಾ ಮೂಲದ ಬಳಿಗಳು ಕುವಾ, ಮಾಕುವಾ, ಮಾಕುಂಜ... ಹೀಗೆ ಕೆಲವು ಬಳಿಗಳನ್ನು ಈಗಲೂ ಜ್ಞಾಪದಲ್ಲಿಟ್ಟುಕೊಂಡಿರುವ ಸಿದ್ದಿ ಹಿರಿಯರು ಅವುಗಳನ್ನು ಆಗಾಗ ಸ್ಮರಿಸುತ್ತಿರುತ್ತಾರೆ. ಆದರೆ ದೇಶಾಂತರ, ಖಂಡಾಂತರ, ಮತಾಂತರಗಳ ಹೊಡೆತಗಳಿಂದ ಸಾಂಸ್ಕೃತಿಕವಾಗಿ ಸಂಪೂರ್ಣ ಸ್ಥಿತ್ಯಂತರಗೊಂಡ ಈ ಸಮುದಾಯ, ಬಳಿಗಳನ್ನು ಒಡಲಲ್ಲಿಟ್ಟು ಕಾಪಾಡಿಕೊಳ್ಳಲಾಗದೇ ಕೆಲವು ಸ್ಮೃತಿ ಪಟಲದಲ್ಲಿ ಮಾತ್ರ ಕಾಪಿಟ್ಟುಕೊಂಡು ಆಚರಣೆಯಲ್ಲಿ ತನ್ನ ಮೂಲವು ಕಳೆದುಕೊಂಡಿರುವುದು ಆ ಸಮುದಾಯದ ಸಾಂಸ್ಕೃತಿಕ ದುರಂತವಾಗಿದೆ.

ನೀಗ್ರೋ ಜನಾಂಗವಾದ ಕಾರಣ, ಸಹಜವಾಗಿ ಸಿದ್ದಿಗಳು ದೈಹಿಕವಾಗಿ ಬಲಿಷ್ಠರು. ಕರ್ನಾಟಕದ ಮೂರು ಆಳುಗಳು ಮಾಡುವ ಕೆಲಸವನ್ನು ಒಟ್ಟಿಗೆ ಒಂದಾಳೇ ಮಾಡಿಮುಗಿಸಬಲ್ಲರಾದ್ದರಿಂದ ಸಿದ್ದಿಗಳಿಗೆ ಕೂಲಿ ಕೆಲಸದಲ್ಲಿ ಮೊದಲನೇ ಆದ್ಯತೆ. ಪೋರ್ಚುಗೀಸರು ಗೋವಾಕ್ಕೆ ತಂದು ಗುಲಾಮರನ್ನಾಗಿಸಿದರೂ ಮೂಲ ಕಾಡಿನ ಆದಿವಾಸಿಗಳಾಗಿದ್ದ ಸಿದ್ದಿಗಳು ಗೋವಾ ಘಟ್ಟದ ಮೇಲೇರಿ ಬಂದು ಉತ್ತರ ಕನ್ನಡ ಜಿಲ್ಲೆಯ ಕಾಡಿನೊಳಗೆ ತೂರಿಕೊಂಡದ್ದು ಬುಡಕಟ್ಟುಗಳ ಕಾಡಿನ ತುಡಿತವನ್ನು ಸಹಜವಾಗಿ

ಗಮನಿಸಬಹುದಾಗಿದೆ. ಹಾಗಾಗಿ ಇವರು ಉತ್ತಮ ಬೇಟೆಗಾರರು ಕಾಡುಹಂದಿ, ಉಡ, ಮುಳ್ಳಂದಿ, ಮೀನು, ಏಡಿ ಮುಂತಾದ ಪ್ರಾಣಿಗಳನ್ನು ತಮ್ಮದೇ ಆದಿ ವಿಶಿಷ್ಟ ರೀತಿಯಲ್ಲಿ ಬೇಟೆಯಾಡುವುದರಲ್ಲಿ ನಿಪುಣರಿವರು. ಕಠಿಣವಾದ ಹೆಮ್ಮರ ಬೆಟ್ಟದ ಬಂಡೆಗಳ ಏರಿ ಜೇನುಕೀಳುವ ಇವರ ಚಾಕಚಕ್ಯತೆಯನ್ನು ಯಾರೂ ಮೀರಿಸಲಾಗುವುದಿಲ್ಲ. ಆಫ್ರಿಕಾದಿಂದ ರೂಡಿಸಿಕೊಂಡು ಬಂದಿದ್ದ ಕೆಂಪಿರುವೆ ಚಿಗಳಿ ಚಟ್ನಿ ಮಾಡುವುದರಲ್ಲಿ ಹಾಗೂ ಇದಕ್ಕೆ ಸಂಬಂಧಪಟ್ಟ ಜಾನಪದ ಹಾಡು ಕಟ್ಟಿ ಹಾಡಿ ಕುಣಿಯುವುದರಲ್ಲಿ ನಿಷ್ಠಾವಂತರಿವರು ಬಲಿಷ್ಠರಾದ ಕಾರಣ ಕರ್ನಾಟಕದ ಕ್ರೀಡೆಗಳಲ್ಲಿ ಹೆಚ್ಚಿನ ಹೆಸರು ಗಳಿಸಿರುವುದನ್ನು ಕಾಣಬಹುದಾಗಿದೆ. ಆದರೂ ವಿದೇಶಗಳಲ್ಲಿ ನೀಗ್ರೋಗಳನ್ನು ಬಳಸಿಕೊಂಡು ತಮ್ಮ ದೇಶಗಳಿಗೆ ಗೆಲ್ಲುವ ಹಿರಿಮೆಯನ್ನು ತಂದುಕೊಂಡಂತೆ, ಭಾರತವು ಮಾತ್ರ ಸಿದ್ದಿಗಳ ಕ್ರೀಡಾ ಸಾಮರ್ಥ್ಯವನ್ನು ಸರಿಯಾಗಿ ಬಳಸಿಕೊಂಡಿಲ್ಲವೆಂಬ ಕೊರಗು ಈ ಸಮುದಾಯದ್ದು.

**ಸಿದ್ದಿಯರ ಸೃಷ್ಟಿಪುರಾಣ**

ಸಿದ್ದಿಯರ ಸೃಷ್ಟಿ ಕುರಿತು ಅನೇಕ ದಂತಕಥೆಗಳಿವೆ. ಅವುಗಳಲ್ಲಿ ತಾವು ಮಾಡುವ ತಪ್ಪಿಗೆ ತಮಗೇ ತಾವೇ ಶಿಕ್ಷೆ ವಿಧಿಸಿಕೊಂಡಂತೆ ರೂಡಿಸಿಕೊಂಡು ಕೀಳರಿಮೆಯಲ್ಲಿ ತೊಳಲಾಡಿದ ಕತೆಗಳೂ ಇವೆ. ಅವರು ಭಾರತಕ್ಕೆ ಬಂದು ಎಷ್ಟೋ ಪೀಳಿಗೆಗಳನ್ನು ಕಳೆದರೂ ತಮ್ಮ ಇತಿಹಾಸ ಮರೆತ ಈ ಸಮುದಾಯವು ಯಾಕೆ ನಾವು ಕರ್ನಾಟಕದ ಇತರರಂತೆ ಇಲ್ಲ. ಯಾಕೆ ನಮ್ಮ ಕೂಲದು ಸುಟ್ಟು ಕರಟಿದಂತಿದೆ? ಯಾಕೆ ಕಪ್ಪಗೆ ವಿಕಾರವಾಗಿದ್ದೇವೆಂದುಕೊಂಡು ಅದಕ್ಕೆ ತಾವೇನೋ ತಪ್ಪು ಮಾಡಿರುವುದರಿಂದ ದೇವರು ಶಾಪ ನೀಡಿದ್ದಾನೆಂದು ಭಾವಿಸಿದ್ದಾರೆ. ಒಮ್ಮೆ ತಿಳಿಯದೇ ತಪ್ಪು ಮಾಡಿದ ದಂಪತಿಗಳಿಗೆ ದೇವರು ಶಿಕ್ಷೆ ಕೊಟ್ಟು ಬೆಂಕಿಗೆ ದೂಡಿದ. ಆದ್ದರಿಂದ ದೇಹಗಳು ಸುಟ್ಟು ಕರಕಲಾಯಿತು. ಕೂದಲು ಬೆಂಕಿಗೆ ಕರಟಿ ಗುಂಗುರಾಯಿತು. ಅವರಿಂದ ಹುಟ್ಟಿದ ಸಿದ್ದಿ ಮಕ್ಕಳೆಲ್ಲ ಹೀಗೆ ಕುರೂಪವಾಗೇ ಹುಟ್ಟಿದರೆಂಬ ಸೃಷ್ಟಿ ಪುರಾಣವನ್ನು ಈ ಸಮುದಾಯ ಸೃಷ್ಟಿಸಿಕೊಂಡು ತಾವು ಮಾಡುವ ಪಾಪಕ್ಕೆ ವ್ಯಥೆ ಪಡುತ್ತಿದ್ದಾರೆ. ಈ ಸಮುದಾಯಕ್ಕೆ ಗುಲಾಮಗಿರಿಗಾಗಿ ಆಫ್ರಿಕಾ ಖಂಡದಿಂದ ಬಂದ ಅಮಾಯಕರು ನಾವೆಂಬ ಚಾರಿತ್ರಿಕ ಪ್ರಜ್ಞೆ ಇಲ್ಲದೆ ಹೆಣೆದ ಸೃಷ್ಟಿ ಪುರಾಣ ಅತ್ಯಂತ ಮನಕರಗಿಸುವ ವಿಲಕ್ಷಣ ಕತೆಯಾಗಿದೆ.

ಮತ್ತೊಂದು ಕತೆಯ ಪ್ರಕಾರ "ದೇವರು ಭೂಮಿಯನ್ನು ಸೃಷ್ಟಿಸಿ ನಂತರ ಗಂಡು ಹೆಣ್ಣಿನ ಮೂರ್ತಿಗಳನ್ನು ಮಾಡಿ ಅವುಗಳಿಗೆ ಜೀವ ತುಂಬಿ ಜೀವನ ನಡೆಸಿಕೊಂಡು ಹೋಗಿ ಎಂದು ತಿಳಿಸಿದ. ಆದರೆ ಮರುದಿನ ಗಂಡು ಹೆಣ್ಣು ಜೀವಗಳನ್ನು ಒಬ್ಬ ರಾಕ್ಷಸ ತಿಂದು ಹಾಕಿದ್ದ. ಇದನ್ನು ಗಮನಿಸಿದ ದೇವರು ಮತ್ತೊಂದು ದೊಡ್ಡ ಮೂರ್ತಿ ಮಾಡಿ ಜೀವ ತುಂಬಿ, ಜೊತೆಗೆ ಮತ್ತೊಮ್ಮೆ ಗಂಡು ಹೆಣ್ಣು ಮೂರ್ತಿ ಮಾಡಿ ಜೀವ ತುಂಬಿ ಈ ಹೆಣ್ಣು ಗಂಡು ಜೀವಗಳನ್ನು ಕಾಯ್ದುಕೊಂಡು ಹೋಗಬೇಕೆಂದು ಅಪ್ಪಣೆ ನೀಡಿದ. ಹೀಗೆ ಕಾಯ್ದುಕೊಂಡು

ಹೋಗಲು ನಿನಗೇನು ಬೇಕೆಂದು ದೊಡ್ಡ ಮೂರ್ತಿಯಿಂದ ಜೀವ ಪಡೆದ ವ್ಯಕ್ತಿಗೆ ದೇವರು ಕೇಳಲಾಗಿ, ಆತ ತನಗೆ ಒಂದು ಕತ್ತಿ ಒಂದು ನಾಯಿ ಬೇಕೆಂದು ಕೇಳಿದ. ಈತನೇ 'ಸಿದ್ದಿಯ ಮೂಲ ಪುರುಷ'. ರಾತ್ರಿ ಕತ್ತಲಿನಲ್ಲಿ ರಾಕ್ಷಸ ಬಂದಾಗ ನಾಯಿ ಜೋರಾಗಿ ಬೊಗಳಿ ಸಿದ್ದಿಯನ್ನು ಎಬ್ಬಿಸಿತು. ಸಿದ್ದಿ ರಾಕ್ಷಸನನ್ನು ಕತ್ತಿಯಿಂದ ಕೊಂದು ಜೀವ ಪಡೆದ ಗಂಡು ಹೆಣ್ಣುಗಳನ್ನು ರಕ್ಷಿಸುವ ಮೂಲಕ ಮನು ಕುಲವನ್ನು ರಾಕ್ಷಸರಿಂದ ರಕ್ಷಿಸಿದ ಎಂಬ ಕತೆಯನ್ನು ಬಿಚ್ಚಿಡುತ್ತಾನೆ. ಇಲ್ಲಿ ಪುನಃ ಡಿಯಾಗೋ ಸಿದ್ದಿ ಕತೆಯನ್ನು ಬಿಚ್ಚಿಡುತ್ತಾರೆ. ಇಲ್ಲಿ ಪುನಃ ಶತಶತಮಾನಗಳಿಂದ ಗುಲಾಮರಾಗೇ ಜೀವನ ಸವೆಸಿದ್ದ ಸಿದ್ದಿ ಹಿರಿಯರಿಗೂ ತಮ್ಮ ಪುರಾಣಗಳನ್ನು ಕಲ್ಪಿಸಿಕೊಳ್ಳುವಾಗಲೂ, ತಮ್ಮನ್ನು ಗುಲಾಮರು, ಕಾವಲು ಕಾಯುವ ರಕ್ಷಕರೆಂದೇ ಪ್ರತಿಬಿಂಬಿಸಿಕೊಳ್ಳುವುದೂ ಕೂಡ ಮತ್ತೆ ತಾವು ಮಾಡದ ತಪ್ಪುಗಳಿಗೆ ಕೀಳರಿಮೆಗೊಳ್ಳುತ್ತಿರುವುದನ್ನು ಮತ್ತೆ ಮತ್ತೆ ಕಾಣಬಹುದಾಗಿದೆ.

ಗ್ರೀನ್ ಇಂಡಿಯಾ ಗಿರಿಜನ ಅಭಿವೃದ್ಧಿ ಸಂಸ್ಥೆಯು ಎರಡು ದಶಕಗಳಿಂದ ಈ ಸಮುದಾಯದ ಹಕ್ಕುಗಳು ಮತ್ತು ಸಾಂಸ್ಕೃತಿಕ ಅಸ್ಮಿತೆಯನ್ನು ಕಟ್ಟಿಕೊಡಲು ಹಲವಾರು ಹೋರಾಟಗಳನ್ನು ಹಮ್ಮಿಕೊಂಡು ಸಿದ್ದಿ ಸಮುದಾಯಕ್ಕೆ ಬೆಂಬಲವಾಗಿ ನಿಂತಿದೆ. ಸಿದ್ದಿಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸುವಲ್ಲಿ, ಸಿದ್ದಿಗಳ ಮೇಲೆ ನಡೆಯುತ್ತಿರುವ ದೌರ್ಜನ್ಯಗಳ ವಿರುದ್ಧ, ಅರಣ್ಯ ಮತ್ತು ಭೂಮಿಗಳ ಹಕ್ಕುಗಳಿಗೆ ಅವರಲ್ಲೇ ನಾಯಕತ್ವ ತುಂಬಿ ಅವರಿಂದಲೇ ಹೋರಾಟಗಳನ್ನು ರೂಪಿಸಿ ಅವರ ಅಸ್ತಿತ್ವಕ್ಕಾಗಿ ಲ್ಯಾಂಪ್ ಸೊಸೈಟಿಯನ್ನು ನಿರ್ಮಿಸಲು ಪ್ರೇರಣೆಯಾಗಿ, ಸಿದ್ದಿಗಳು ತಮ್ಮ ಅರಣ್ಯ ಕಿರು ಉತ್ಪನ್ನಗಳಿಂದ ತಮ್ಮ ಸ್ವಾವಲಂಬಿ ಬದುಕನ್ನು ನಿರ್ಮಿಸಿಕೊಳ್ಳಲು ಸಹಾಯಕವಾಗಿದೆ. ಹಳಿಯಾಳ ರುಡ್‌ಸೆಟ್‌ನಿಂದ ಬಹಳಷ್ಟು ಕೌಶಲ್ಯ ತರಬೇತಿಗಳ ಪಡೆದು ಸಿದ್ದಿಗಳಿಗೆ ಬಹಳಷ್ಟು ಸುಧಾರಿಸುತ್ತಿದ್ದಾರೆ. ಪ್ರಸ್ತುತದಲ್ಲಿ ಬಹಳಷ್ಟು ಕೀಳರಿಮೆಯಿಂದ ಹೊರಬಂದು ಸ್ವಾವಲಂಬಿ ಜೀವನವನ್ನು ಕಂಡುಕೊಳ್ಳುವಲ್ಲಿ ಈಗ ಸಫಲರಾಗುತ್ತಿದ್ದಾರೆ. ಸಾಂಸ್ಕೃತಿಕ ಅಸ್ಮಿತೆಯನ್ನು ಸ್ಥಾಪಿಸಲು 'ಸಿದ್ದಿನಾಸ'ದಂತಹ ಪೂಜೆಯ ಆಚರಣೆಯನ್ನು ದೊಡ್ಡ ಉತ್ಸವವನ್ನಾಗಿ ಮಾರ್ಪಡಿಸಿ ಹಿಂದೂ ಮುಸ್ಲಿಂ ಮತ್ತು ಕ್ರಿಶ್ಚಿಯನ್ನು ಸಮುದಾಯಗಳು ಒಟ್ಟಿಗೆ ಕೂಡಿ ಆಚರಿಸುವ ಸಿದ್ದಿಗಳದೇ ಆದ ಜಾತ್ರೆಯನ್ನಾಗಿ ರೂಪಿಸಲೂ ಗ್ರೀನ್ ಇಂಡಿಯಾ ಸಂಸ್ಥೆ ಮುಖ್ಯ ಪಾತ್ರ ವಹಿಸಿರುವುದನ್ನು ಗಮನಿಸಬಹುದಾಗಿದೆ.

**ಸಿದ್ದಿಗಳಲ್ಲಿನ ಸೀಮಾಪದ್ಧತಿ**

ಸಿದ್ದಿಗಳಲ್ಲಿನ ಸೀಮಾಪದ್ಧತಿ ಕರ್ನಾಟಕದ ಇತರೆ ಬುಡಕಟ್ಟುಗಳಲ್ಲಿರಬಹುದಾದಂತಹ ಚಾರಿತ್ರಿಕ ನೆಲೆಗಟ್ಟನ್ನು ದೇಶಾಂತರ ವಲಸಿಗರಾದ ಕಾರಣ ವಿಭಿನ್ನ ಮಾದರಿಯ ಸೀಮಾವನ್ನು ತಾವೇ ಖುದ್ದು ರೂಪಿಸಿಕೊಂಡಿದ್ದಾರೆ. ಭಾರತದ ಕರ್ನಾಟಕದಲ್ಲಿನ ಸಿದ್ದಿಗಳ ಇತಿಹಾಸ

ಕೇವಲ 500 ವರ್ಷಗಳಿಗೆ ಸೀಮಿತವಾದದ್ದು. ತಮ್ಮ ದೇಶ ನೆಲೆ, ಭಾಷೆ, ದೈವ, ಸಂಪೂರ್ಣ ಸಾಂಸ್ಕೃತಿಕ ಆಚರಣೆಗಳನ್ನು ಕಳೆದುಕೊಂಡು ಬೆತ್ತದಲೆ ಬಂದವರು ಸಿದ್ದಿಗಳು. ಗೋವಾ ಪೋರ್ಚುಗೀಸರಲ್ಲಿ ಜೀವಿಸಿದ್ದು ಗುಲಾಮರಾಗಿ. ನಂತರ ಉತ್ತರ ಕನ್ನಡ ಜಿಲ್ಲೆಯ ಭೂಮಾಲೀಕರ ಗದ್ದೆ, ಹೊಲ ಮತ್ತು ತೋಟಗಳಲ್ಲಿ ತೊತ್ತಿನ ಆಳುಗಳಾಗಿ, ಜೀತದಾಳುಗಳಾಗಿ ದುಡಿಯುವ ಸಂದರ್ಭದಲ್ಲಿ ತಮ್ಮ ಸಮುದಾಯಕ್ಕೊಂದು ನೆಲೆಯೇ ಇಲ್ಲದಾಗ ಅದಕ್ಕೊಂದು ಗಡಿ ಎಲ್ಲಿಂದ ಬರಬೇಕು? ಕಾಲಕ್ರಮೇಣ ಭೂಮಾಲೀಕರ ಸಂಕೋಲೆಗಳಿಂದ ಕಳಚಿ ಯಾವಾಗ ಕಾಡಿನೊಳಗೆ ಆದಿವಾಸಿಗಳಾಗಿ ಪಾದಾರ್ಪಣೆ ಮಾಡಿ, ಕಾಡಿನಲ್ಲಿ ಒಂದಷ್ಟು ಭೂಮಿ ಅತಿಕ್ರಮಣ ಮಾಡಿ ಅಲ್ಲಲ್ಲಿ ಗುಡಿಸಲು ಕಟ್ಟಿಕೊಂಡು ವಾಸಿಸಲು ಶುರುವಿಟ್ಟುಕೊಂಡರೋ, ಆಗ ತಮ್ಮೊಳಗೆ ಗುಪ್ತಗಾಮಿನಿಯಾಗಿ ಬೂದಿ ಮುಚ್ಚಿದಂತಿದ್ದ ಅವರ ಬುಡಕಟ್ಟು ನಡವಳಿಕೆಗಳು(Tribal instinct) ಒಂದೊಂದಾಗಿ ಹೊರಬರಲು ಶುರುವಾಯಿತು.

ಹಿಂದೂ ಮುಸ್ಲಿಂ ಮತ್ತು ಕ್ರೈಸ್ತ ಸಿದ್ದಿಗಳು ತಮ್ಮ ತಮ್ಮ ಧರ್ಮಗಳನ್ನು ಮೀರಿ ದೈವಗಳನ್ನು ಸೃಷ್ಟಿಸಿ ಪೂಜಿಸಲೂ ಶುರುಮಾಡಿದ್ದೇ ತಮ್ಮ ಪೂರ್ವಜರ ಹಿರಿಯರ ಆತ್ಮಗಳನ್ನು. ಈಗಲೂ ಮೂರು ಧರ್ಮದ ಜನಗಳಲ್ಲಿರುವ ಸಿದ್ದಿಗಳು ಬಹಳ ಪ್ರಮುಖವಾದ ಸಾಮ್ಯತೆ ಎಂದರೆ ಸಾವಿನ ನಂತರ ಅವರು ಆಚರಿಸುವ ಆಚರಣೆಗಳಲ್ಲಿ ಈಗಲೂ ಸಿದ್ದಿಗಳು ಆಫ್ರಿಕಾದ ದೈವಗಳು ಮತ್ತು ಹಿರಿಯರ ಆತ್ಮಗಳು ಗಾಳಿಯ ರೂಪದಲ್ಲಿ ಈ ಕಾಡಿನೊಳಗೆ ಆಗಮಿಸಿ ನಮ್ಮನ್ನು ಗಮನಿಸುತ್ತಿವೆ ಮತ್ತು ಹರಸುತ್ತಿವೆ ಎಂದು ನಂಬುತ್ತಿದ್ದಾರೆ. ಹಾಗಾಗಿ ಕಾಡಿನೊಳಗೆ ಸ್ವಂತ ಬದುಕು ಕಟ್ಟಿಕೊಳ್ಳುವಾಗ ತಮ್ಮಲ್ಲಿ ಮಡಿದವರನ್ನು ದೈವಗಳಾಗಿ ಕಾಡಿನ ಮರಗಳ ಕೆಳಗೆ ಇಟ್ಟು ಪೂಜಿಸಲೂ ಶುರುಮಾಡಿಕೊಂಡರು. ಕ್ರಮೇಣ ಬೇಟೆ, ಕಾಡಿನ ಕಿರು ಉತ್ಪನ್ನಗಳ ಸಂಗ್ರಹಣೆಗಳಿಗೆ ಆದಿವಾಸಿ ಸಹಜ ಕಸುಬು ಕ್ರಿಯೆಗಳಾಗಿ ಬದುಕಲು ಶುರುಮಾಡಿದ ಸಿದ್ದಿಗಳು ತಾವು ಬೇಟೆಯಾಡುವ, ಕಿರು ಅರಣ್ಯ ಉತ್ಪಾದನೆ ಸಂಗ್ರಹಿಸುವ ಕಾಡಿನಲ್ಲಿ ಗಡಿಗಳನ್ನು ಗುರ್ತಿಸಿ ದೈವಗಳನ್ನು ಸ್ಥಾಪಿಸಲು ಶುರುವಿಟ್ಟುಕೊಂಡರು. ಈ ಆದಿವಾಸಿಯಾಗಿ ಮರುಜನ್ಮ ಪಡೆಯುವ ಪ್ರಕ್ರಿಯೆಯ ದ್ಯೋತಕವಾಗಿ ಸಿದ್ದಿಗಳು ಬಲವಂತವಾಗಿ ಎರವಲು ಪಡೆದ ದೈವಗಳನ್ನು ಹೊರತುಪಡಿಸಿ ತಮ್ಮದೇ ಆದ ದೈವವೆಂಬ ಅವರ ಅಸ್ಮಿತೆಯ ಪ್ರತ್ಯೇಕವಾದ ಸೀಮಾದೈವವನ್ನು ಮೊದಲು ಸೃಷ್ಟಿಸಿಕೊಂಡಿದ್ದೇ "ಸಿದ್ದಿನಾಸ". ಅಲ್ಲಿಯವರೆವಿಗೂ ಇವರು ಆಗಮಿಸುವ ಪೂರ್ವದಲ್ಲಿ ಇದ್ದ ಅಕ್ಕಪಕ್ಕದ ಸಮುದಾಯಗಳ ದೈವಗಳನ್ನು ತಮ್ಮದೇ ದೈವಗಳಂತೆ ಆಚರಣೆಯಲ್ಲಿ ನಂಬಿ ಪೂಜಿಸುತ್ತಿದ್ದ ಸಿದ್ದಿಗಳು, ಹೊಸದಾಗಿ ತಮ್ಮೊಳಗೆ ತಮ್ಮ ದೈವವನ್ನು ಸೃಷ್ಟಿಸಿಕೊಂಡಿದ್ದು ಮಾತ್ರ ಅತ್ಯಂತ ಶೋಚನೀಯ ಮತ್ತು ಕ್ರಾಂತಿಕಾರರ ಅಂಶ. ಊಳಿಗಮಾನ್ಯ ಪದ್ಧತಿಯ ಒಡೆಯರುಗಳ ನೆರಳಲ್ಲಿದ್ದು ಅವರ ದೇವರುಗಳ ಮಧ್ಯೆ ತಮ್ಮದೊಂದು ದೈವವನ್ನು ನೆಟ್ಟಿದ್ದು ಮಾತ್ರ ಆ

ಸಮುದಾಯ ತಮಗೊಂದು ಅಸ್ಮಿತೆಯನ್ನು ಸ್ವಾಭಿಮಾನದ ಅಭಿವ್ಯಕ್ತಿಗೊಂದು ಚಹರೆಯನ್ನು ಉತ್ಪಾದಿಸಿಕೊಂಡು ವಿಜೃಂಭಿಸಿಕೊಂಡಂತೆ.

ಸಿದ್ದಿನ್ಯಾಸ ದೈವವನ್ನು ಬಳಸಿಕೊಂಡು ಒಂದು ಜಾತ್ರೆ ಮತ್ತು ಉತ್ಸವ ರೂಪದಲ್ಲಿ ತರಲು ಗ್ರೀನ್ ಇಂಡಿಯಾ ಸಂಸ್ಥೆ ಬಹಳಷ್ಟು ಬೆಂಬಲವನ್ನು ಮತ್ತು ಪ್ರೇರಣೆಯನ್ನು ಸಿದ್ದಿಗಳಿಗೆ ನೀಡಿ, ತಮ್ಮದೇ ಸಂಸ್ಕೃತಿಯನ್ನು ಸ್ಥಾಪಿಸಿಕೊಳ್ಳಲು ಪ್ರೋತ್ಸಾಹ ನೀಡಿರುವುದು ಕಂಡುಬಂದಿದೆ.

ಸಿದ್ದಿಗಳ ಕುರಿತು ಹಲವಾರು ವಿದ್ವಾಂಸರು ಅಧ್ಯಯನ ನಡೆಸಿದ್ದಾರೆ. ಟಿ.ಸಿ. ಪಾಲಾಕ್ಷಪ ಅವರು The Siddis of North Kanara ಡಾ.ಎಲ್.ಆರ್. ಹೆಗಡೆಯವರ 'ಸಿದ್ದಿಜನರು', ಡಾ.ಎನ್.ಆರ್.ನಾಯಕರ 'ಸಿದ್ದಿ ಜನಾಂಗ', ಡಾ.ಹಿ.ಚಿ. ಬೋರಲಿಂಗಯ್ಯ ನವರ 'ಗಿರಿಜನ ನಾಡಿಗೆ ಪಯಣ' ಮತ್ತು 'ಸಿದ್ದಿಯರ ಸಂಸ್ಕೃತಿ' ಕೃತಿಗಳಲ್ಲಿ ಸಾಕಷ್ಟು ಸಿದ್ದಿಗಳ ಬಗ್ಗೆ ಈಗಾಗಲೇ ವಿಶ್ಲೇಷಿಸಿದ್ದಾರೆ. ಆದರೆ ಎಡ್ಗರ್ ಥರ್‍ಸ್ಟನ್ ಅವರ caste and tribes of southern India ಮತ್ತು Bombay Gazetter ಗಳನ್ನು ಒಳಗೊಂಡಂತೆ ಎಲ್ಲೂ ಸಿದ್ದಿಗಳಲ್ಲಿನ ಸೀಮಾಪದ್ಧತಿಯನ್ನಾಗಲೀ ಅಥವಾ ಸಿದ್ದಿನ್ಯಾಸಗಳ ಬಗ್ಗೆ ಎಲ್ಲಿಯೂ ಪ್ರಸ್ತಾವನೆಯಾಗದಿರುವುದು ಸೋಜಿಗದ ವಿಷಯವಾಗಿದೆ.

**ಸಿದ್ದಿನಾಸ:** ಸಿದ್ದಿಗಳಲ್ಲಿ ಸೀಮಾದೈವವನ್ನಾಗಿ ಆ ಸಮುದಾಯ ಸೃಷ್ಟಿಸಿಕೊಂಡ ಕತೆಯನ್ನು ಈಗಾಗಲೇ ಪ್ರಸ್ತಾಪಿಸಿಸಲಾಗಿದೆ. ಆಂಕೋಲ ತಾಲ್ಲೂಕಿನ ಗುಳ್ಳಾಪುರದಿಂದ ಒಳಗಿರುವ ದಟ್ಟಕಾಡಿನ ನದಿಯ ಪಕ್ಕದಲ್ಲಿರುವ ಹಲವಾರು ಸಿದ್ದಿ ಹಳ್ಳಿಗಳ ಮಧ್ಯೆ ಇರುವ 'ಸಾತನಬೈಲ್' ಕಾಡಿನಲ್ಲಿ 'ಸಿದ್ದಿನಾಸ' ಸೀಮಾದೈವವಿದೆ. ಅದರ ಪಕ್ಕದಲ್ಲಿ 'ಕೀಳುನಾಸ'ವೆಂಬ ಪುಟ್ಟ ಪುಟ್ಟ ಗುಂಡುಕಲ್ಲಿನ ದೈವಗಳನ್ನು ನದಿದಡದಲ್ಲಿ ಸ್ಥಾಪಿಸಲಾಗಿದೆ. ಇದರ ಪೂಜೆ ಪುನಸ್ಕಾರಗಳನ್ನು 'ಸಾಣುಶಿವಾಸಿದ್ದಿ'ಯ ಮನೆತನದವರು ಪೂಜಾರಿಗಳಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಇಲ್ಲಿ ಪ್ರತಿ ವರ್ಷ ಕುರಿ, ಕೋಳಿ ಬಲಿ ನೀಡಿ, ಪೂಜೆ ನಡೆಸಲಾಗುತ್ತಿತ್ತು. ಬೆಳಗಿನಿಂದ ಸಂಜೆಯವರೆವಿಗೂ ಪೂಜೆ ನಡೆಯುತ್ತಿದ್ದು, ಸಿದ್ದಿಗಳ ದೈವ ಪೂಜಾರಿಯ ಮೈಮೇಲೆ ಆವಾಹನೆಗೊಂಡು ಸಿದ್ದಿಗಳ ಹೇಳಿಕೆಗಳನ್ನು ಪಡೆದು ಅವುಗಳಿಗೆ ಪರಿಹಾರಗಳನ್ನು ಸಿದ್ದಿನಾಸ ದೈವ ಸೂಚಿಸುವ ಮತ್ತು ಹರಕೆ ಹೊತ್ತ ಭಕ್ತರುಗಳ ಹರಕೆ ತರಲಾಗಿರುವ ಕುರಿ, ಕೋಳಿಗಳನ್ನು ತಂದು ಬಲಿ ನೀಡಿ, ಹಾಗೆ ಬಲಿ ನೀಡಿದ ಕುರಿ, ಕೋಳಿ ಬೇಯಿಸಿ ಅಡುಗೆ ಮಾಡುತ್ತಾರೆ. ಪ್ರಸಾದವನ್ನು ಸಂಜೆ ಆಗಮಿಸಿದ ಭಕ್ತರೆಲ್ಲರಿಗೂ ನೀಡಿ ಸಿದ್ದಿನಾಸ ಪೂಜೆಯ ಆಚರಣೆಯನ್ನು ನೂರಾರು ವರ್ಷಗಳಿಂದ ಸಿದ್ದಿಗಳೂ ಆಚರಿಸಿಕೊಂಡು ಬರುತ್ತಿದ್ದಾರೆ.

ಸಿದ್ದಿನಾಸವು ಸಿದ್ದಿಗಳ ನೆಲೆಗಳ ಮತ್ತು ಅವರ ಮಧ್ಯೆ ಇರುವ ಕಾಡಿನ ಗಡಿಯ ದೈವವಾಗಿರುತ್ತದೆ. ಕುಣಬಿಗಳಲ್ಲಿನ ಗಡಿ ದೈವಗಳ ಹಾಗೆ, ಸಿದ್ದಿಗಳೂ ತಮ್ಮ ಯಾವುದೇ

ಕಾರ್ಯ, ಹಬ್ಬ, ನೋವು, ನಲಿವು, ಕಷ್ಟ ಕಾರ್ಪಣ್ಯಗಳಿಗೆ ಸಿದ್ದಿನಾಸ ದೈವದ ಮೊರೆ ಹೋಗುತ್ತಾರೆ. ಸ್ಥಳೀಯ ಹಿರಿಯ 'ಜುಮ್ಮಾ ಸಿದ್ದಿ'ಯ ಪ್ರಕಾರ, ಈ ಸಿದ್ದಿನಾಸದ ಗುಂಡುಕಲ್ಲುಗಳನ್ನು ಆಫ್ರಿಕಾ ದೇಶದಿಂದ ಇಲ್ಲಿಗೆ ಬರುವಾಗ ಜತನದಿಂದ ಕಾಪಾಡಿಕೊಂಡು ತಂದು ಇಲ್ಲಿ ನಟ್ಟಿ ದೇವರನ್ನು ಸೃಷ್ಟಿಸಿದ ಕತೆಯನ್ನು ಹೇಳುತ್ತಾರೆ. ಇವರನ್ನು ಆಫ್ರಿಕಾದ ಜಿಂಜಿಬಾರ್ ದ್ವೀಪದಿಂದ ಗುಲಾಮರನ್ನಾಗಿ ಪೋರ್ಚುಗೀಸರು ಖರೀದಿಸಿ ತಂದದ್ದಾದ್ದರಿಂದ ಇದೇ ದ್ವೀಪದ ಪಕ್ಕದ ಜಾಂಬೇಸಿ ನದಿಯ ಪಕ್ಕ 'ನ್ಯಾಸ' ಸರೋವರವಿದೆ. ಕಾರಣ 'ಸಿದ್ದಿ ನಾಸ' ವೆಂಬುಧು ನ್ಯಾಸ ಸರೋವರದ ದಡದಿಂದ ತರಲಾಗಿರುವ ಕಲ್ಲು ಎಂಬುಧು ಸಮುದಾಯದೊಟ್ಟಿಗೆ ಚರ್ಚಿಸಿ ಕಂಡುಕೊಂಡ ಊಹಾತ್ಮಕ ತರ್ಕವಾಗಿದೆ. ಎರಡು ದಶಕಗಳ ಹಿಂದೆ ಈ ಬಗ್ಗೆ ನಾನು ಪತ್ರಿಕೆಯಲ್ಲಿ ಲೇಖನ ಮಾಡಿದ ವಿಚಾರವೇ ಎಲ್ಲೆಡೆ ಸುಳಿದಾಡಿ 'ಸಿದ್ದಿನಾಸ'ದ ಕಲ್ಲು 'ನಾಸ' ಸರೋವರದಿಂದ ತಂದದೆಂಬುದು ಸತ್ಯವೆಂಬಂತೆ ಪ್ರತಿಬಿಂಬಿತವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಸೀಮಾದೈವಗಳಲ್ಲಿ 'ನಾಸ' ದೈವವೂ ಒಂದು ಕುಣಬಿ, ಹಾಲಕ್ಕಿಗಳಲ್ಲಿ ಹಲವಾರು ನಾಸ ದೈವಗಳಿವೆ. ಸವಡಿನಾಸ, ಭಯಡೋನಾಸ, ಚುಡುಗೋನಾಸ, ಮಡೆನಾಸ, ಬಾಗಚೋನಾಸ, ಸೀಮಾನಾಸ. ಈ ನಾಸಗಳು ಸೀಮಾದೈವಗಳ ಸೈನಿಕರುಗಳಂತೆ ರಕ್ಷಣೆಗೆ ಇರುವ ಉಪದೈವಗಳಾಗಿವೆ. ಅಕ್ಕಪಕ್ಕದ ದೈವಾಚಾರಣೆ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ಅನಿವಾರ್ಯವಾಗಿ ಅನುಕರಣೆ ಮಾಡಿಕೊಂಡ ಸಿದ್ದಿಗಳು ತಮ್ಮದೇ ಆದ 'ಸಿದ್ದಿನಾಸ'ವನ್ನು ಸೃಷ್ಟಿಸಿಕೊಂಡಿರಲೂ ಬಹುದು. ಆದರೆ ಎರಡು ದಶಕಗಳ ಹಿಂದೆ ಸಿದ್ದಿಗಳದ್ದೇ ಆದ ದೈವಸಂಸ್ಕೃತಿಯನ್ನು ಬೆಳೆಸಬೇಕೆಂಬ ಉದ್ದೇಶದಿಂದ ಹುಟ್ಟುಹಾಕಿದ 'ಸಿದ್ದಿನ್ಯಾಸ ಉತ್ಸವ' ಎಂಬುಧು ದೊಡ್ಡಮಟ್ಟದ ಜಾತ್ರೆಯಾಗಿ ಆ ಸಮುದಾಯಕ್ಕೊಂದು ಅಸ್ಮಿತೆಯನ್ನು ತಂದುಕೊಟ್ಟದ್ದು ಮಾತ್ರ ಸುಳ್ಳಲ್ಲ.

ಇದೇ ರೀತಿಯ ಸಿದ್ದಿನಾಸ ದೈವಗಳನ್ನು ಸಿದ್ದಿಗಳು ಪ್ರತಿ ಹಳ್ಳಿಗಳಲ್ಲಿ ಸ್ಥಾಪಿಸಿ ತಮ್ಮದೇ ಆದ ಸೀಮಾದೈವಗಳನ್ನು ಪೂಜಿಸುತ್ತಾ ಬಂದಿರುವುದನ್ನು ನಾವು ಗಮನಿಸಬಹುದಾಗಿದೆ. ಭಾಗವತಿ, ಜತಗಾಹೊಸೂರು, ಇಡಗುಂಜಿ, ಗೋಟಗೋಳಿ, ಹುಲಿಪಾಲ್, ಖೈರ್ಗಾಳಿ, ಕಲ್ಲೇಶ್ವರ, ವೈದ್ಯಹೆಗ್ಗಾರ, ತೊಟ್ಲಗುಂಡಿ, ಕೋನಾಳ, ಗರಡೋಳಿ, ವಾಡ... ಮುಂತಾದ ಹಳ್ಳಿಗಳಲ್ಲಿಯೂ ಸಿದ್ದಿನಾಸ ದೈವಗಳನ್ನು ಸೀಮಾದೈವವನ್ನಾಗಿ ಸಿದ್ದಿಗಳು ಪೂಜಿಸುವುದನ್ನು ದಾಖಲಿಸಲಾಗಿದೆ.

ಸಾತನಬೈಲ್ ಸಿದ್ದಿನಾಸ ಜಾತ್ರೆಯ ಸಂದರ್ಭದಲ್ಲಿ ಸಾಣುಶಿವಾಸಿದ್ದಿಯ ಮೈಮೇಲೆ ಸಿದ್ದಿನಾಸ ಆವಾಹನೆಯಾಗಿ ಆತ ಕಿರುಚಾಡುತ್ತಾನೆ. ಕಾಡಿಗೆ ಬಂದಿರುವ ವಿಪತ್ತು, ಅನ್ಯ ಮೇಲ್ವರ್ಗದವರಿಂದ ಕಾಡಿಗೆ ಒದಗಿರುವ ಆಪತ್ತು ಮತ್ತು ಸಿದ್ದಿಗಳ ರಕ್ಷಣೆಯ ಬಗ್ಗೆ ದೈವ ಪೂಜಾರಿಯ ಮೂಲಕ ಎಚ್ಚರಿಕೆ ಮತ್ತು ರಕ್ಷಣೆಯ ಬಗ್ಗೆ ಕೂಗಿ ಹೇಳುತ್ತದೆ. ನಂತರ ದುಡುದುಡ ಉರುಳುತ್ತಾ ಪಕ್ಕದಲ್ಲಿರುವ ನದಿಯೊಳಗೆ ಬಿದ್ದು, ಅಲ್ಲಿಂದ ನದಿ ದಾಟಿ ಪಕ್ಕದ ಘಟ್ಟದ ಮೇಲಿನ ಮರದ ಕೆಳಗೆಗಿರುವ ಗುಂಡುಕಲ್ಲುಗಳಂತಹ ದೇವರಿಗೆ ಪೂಜಾರಿಯು

ಊದಿನ ಕಡ್ಡಿಹಾಕಿ, ಮೇಣದಬತ್ತಿ ಇಟ್ಟು ಕೆಲ ನಿಮಿಷ ನ್ಯಾಸ ದೇವನನ್ನು ಪೂಜಿಸುತ್ತಾನೆ. ಈ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿ, ನದಿಯ ಆ ಕಡೆಯ ದಡದಲ್ಲಿ ಮರದ ಕೆಳಗಿರುವ ಕಲ್ಲುಗಳು ಮುಸ್ಲಿಂ, ಕ್ರಿಶ್ಚಿಯನ್, ಸಿದ್ದಿಗಳ ಪೂರ್ವಿಕರ ಮಡಿದ ದೈವಗಳಾಗಿದ್ದು, ಹಿಂದೂ ಸಿದ್ದಿಯರ ನ್ಯಾಸ ದೈವ ನದಿಯ ಆ ದಡಕ್ಕೆ ಹೋಗಿ ಅವುಗಳ ಜೊತೆ ಮಾತಾಡಿ ಆ ದೈವಗಳಿಗೂ ನಮಿಸುತ್ತದೆ. ವಿಶೇಷವಾದ ಧಾರ್ಮಿಕ ಸಾಮರಸ್ಯ ಬಿಂಬಿಸುವ ವಿಶಿಷ್ಟವಾದ ಆಚರಣೆಯನ್ನು ಸಿದ್ದಿಸಮುದಾಯ ಹಮ್ಮಿಕೊಳ್ಳುವ ಮೂಲಕ ತಮ್ಮನ್ನು ನಿಮ್ಮ ತೀಟೆಗಳಿಗೆ ಹಿಂದು, ಮುಸ್ಲಿಂ, ಕ್ರೈಸ್ತರನ್ನಾಗಿ ಮತಾಂತರಗೊಳಿಸಿರಬಹುದು. ಆದರೆ ನಾವೆಲ್ಲ ಒಂದೇ, ನಮ್ಮ ರಕ್ತ ಒಂದೇ ಎಂಬ ಸಂದೇಶವನ್ನು ಈ ಮೂಲಕ ಪ್ರತಿಬಿಂಬಿಸುತ್ತಿರುವಂತೆ ಈ ಆಚರಣೆಗಳು ಸಂದೇಶವನ್ನು ನೀಡುತ್ತಿರುವಂತೆ ಆಚರಣೆಗಳನ್ನು ನಡೆಸುತ್ತಾ ಬಂದಿದ್ದಾರೆ.

ಸಿದ್ದಿಯರ ಬಗ್ಗೆ ಸಾಕಷ್ಟು ಅಧ್ಯಯನ ಕೈಗೊಂಡಿರುವ ಡಾ.ಹಿ.ಚಿ.ಬೋರಲಿಂಗಯ್ಯನವರು, ತಮ್ಮ 'ಸಿದ್ದಿಯರ ಸಂಸ್ಕೃತಿ' ಕೃತಿಯಲ್ಲಿ ತಿಳಿಸಿರುವಂತೆ ಜೈನರು ಸಿದ್ದಿ ಬಾಲಕನೊಬ್ಬನನ್ನು ಆಪ್ತನನ್ನಾಗಿಸಿಕೊಂಡು ಬೆಳೆಸಿದರಂತೆ. ಆದರೆ ಅವನು ಕದ್ದು ಮುಚ್ಚಿ ಮಾಂಸ ತಿನ್ನಲು ಆರಂಭಿಸಿದನಂತೆ. ಇದನ್ನು ಸಹಿಸದ ಜೈನರು ಅವನನ್ನು ಜೀವಂತ ಸಮಾಧಿ ಮಾಡಿದರಂತೆ. ಆ ಸಮಾಧಿ ಸ್ಥಳದಲ್ಲಿ ಕಲ್ಲು ನೆಟ್ಟು 'ಸಿದ್ದಿನ್ಯಾಸ' ನೆಂದು ಪೂಜಿಸುತ್ತಿದ್ದಾರೆಂಬ ವಿವರಣೆಯಿದೆ. ನನ್ನ ಪ್ರಕಾರ ಇದು ತಪ್ಪಾಗಿ ಯಾರೋ ಸೃಷ್ಟಿಸಿರುವ ಸುಳ್ಳು ಮಾಹಿತಿಯನ್ನು ಪ್ರೊ.ಹಿ.ಚಿ. ಬೋರಲಿಂಗಯ್ಯನವರಿಗೆ ನೀಡಿರಬಹುದು. ಕಾರಣ 2 ದಶಕಗಳ ಸಿದ್ದಿಗಳ ಒಡನಾಟದಲ್ಲಿ ಚಾರಿತ್ರಿಕವಾಗಿ ಎಲ್ಲೂ ಜೈನರು ಸಿದ್ದಿಗಳೊಟ್ಟಿಗೆ ಬದುಕಿದ ಸಂಧಿಸಿದ ದಾಖಲೆಗಳಿಲ್ಲ. ಅಲ್ಲದೆ ಜೈನರು ಅಹಿಂಸೆಯ ಪ್ರತಿಪಾದಕರು, ತಮ್ಮ ಮಾತು ಮೀರಿದ ಮಾಂಸ ಸೇವಿಸಿದನೆಂದು ಜೀವಂತ ಸಮಾಧಿ ಮಾಡುವ ಕ್ರೌರ್ಯಕ್ಕೆ ಜೈನರು ಹೋದರೆಂಬುಧು ಮಾತ್ರ, ಜೈನ ಇತಿಹಾಸದಲ್ಲೇ ನಂಬದಿರುವ ಮಾತು. ಜೊತೆಗೆ, ಬಹುಶಃ ಸಲ್ಲೇಖನಕ್ಕೀಡು ಮಾಡಿರಲೂಬಹುದು ಎಂಬ ಊಹೆಗೂ ಆಧಾರಗಳಿಲ್ಲ. ಕಾರಣ ಜೈನರಲ್ಲಿ ಸಲ್ಲೇಖನಕ್ಕೊಳಗಾಗುವವರು ಆಧ್ಯಾತ್ಮಿಕವಾಗಿ ಕಠಿಣವಾದ ನೂರಾರು ವ್ರತಗಳನ್ನು ದಾಟಿದ ಮೇಲೆ ನೀಡುವ ಅತ್ಯುನ್ನತ ಮೇರು ದೀಕ್ಷೆ ಸಲ್ಲೇಖನ ವ್ರತವಾಗಿರುತ್ತದೆ. ಹಾಗಾಗಿ ಸಿದ್ದಿನಾಸಗೆ ಸಂಬಂಧಪಟ್ಟಂತೆ ಡಾ.ಬೋರಲಿಂಗಯ್ಯನವರಿಗೆ ಯಾರೋ ತಪ್ಪು ಮಾಹಿತಿ ನೀಡಿರಬಹುದು ಎಂಬುಧು ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಸತ್ಯ.

ವಾದ ವಿವಾದ, ಮೂಲಗಳ ಹೊರತಾಗಿ, ಎಲ್ಲವನ್ನು ಕಳೆದುಕೊಂಡ ಒಂದು ಸಿದ್ದಿ ಸಮುದಾಯವು ಸಾಂಸ್ಕೃತಿಕ ಮತ್ತು ತನ್ನೊಳಗೆ ತಾನೇ ಹೊಸ ಧಾರ್ಮಿಕತೆ ಮತ್ತು ಸಂಸ್ಕೃತಿಯನ್ನು ಹೇಗೆ ಸೃಷ್ಟಿಸಿಕೊಂಡರು ಎಂಬುಧನ್ನು ಇಲ್ಲಿ ನೋಡಬಹುದಾಗಿದೆ. ಬಹಳ ಸರಳವಾಗಿ, ಎಲ್ಲಾ

ಧರ್ಮದ ಸಿದ್ದಿಯರೂ ಒಟ್ಟಾಗಿ, ಹಿಂದೂ ಮುಸ್ಲಿಂ, ಕ್ರಿಶ್ಚಿಯನ್ ಧಾರ್ಮಿಕ ಗುರುಗಳನ್ನು ದೂರವಿಟ್ಟು, ಹೆಣ್ಣು ಗಂಡು ಭೇದವಿಲ್ಲದೆ, ಸ್ವಚ್ಛಂದವಾಗಿ ಬೆರೆತು ಇಡೀ ರಾತ್ರಿ ಡಮಾಮಿ, ಪುಗಡಿ, ನಾಟಕಗಳು, ಧಮಾಮಿಗಳ ಹಾಡುತ್ತಾ ಕುಣಿಯುತ್ತಾರೆ. ತಾವೇ ಪೂಜಿಸುವ ತಾವೇ ಅಂಗಡಿ ಮಟ್ಟುಗಳನ್ನಿಟ್ಟು ಮಾರುವ, ಸಿದ್ದಿಗಳದೇ ಆದ ಜಾತ್ರೆ ಸಿದ್ದಿನ್ಯಾಸ ಜಾತ್ರೆಯಾಗಿದೆ. ಇದು ಸೀಮಾಗಡಿ ದೈವವಾಗಿರುವುದು ವಿಶೇಷ.

ತಮ್ಮ ಮೂಲ ಆಚರಣೆಗಳಿಂದ ವಂಚಿತರಾದ ಸಿದ್ದಿಗಳು ತಮ್ಮ ಆಜುಬಾಜಿನ ಸಮುದಾಯಗಳ ಸಾಂಸ್ಕೃತಿಕ ಆಚರಣೆಗಳನ್ನು ಅನುಸರಿಸಿ ಅನುಕರಿಸುತ್ತಿರುವ ವಿಚಾರ, ಅವರಲ್ಲಿ ಅನಿವಾರ್ಯವಾದದ್ದು. ಆದರೆ 'ಕೂಳು' ಎನ್ನುವ ಆಚರಣೆಯ ಬೇರೆ ಸಮುದಾಯಗಳಲ್ಲಿಲ್ಲದ ವಿಶೇಷ ಆಚರಣೆಯಾಗಿದೆ. ಮದುವೆಯ ಗಂಡಿನ ದಿಬ್ಬಣ ಹೊರಡುವ ಮೊದಲು ಹಿರಿಯರ ಗದ್ದುಗೆಯ ಪಕ್ಕದಲ್ಲಿ ಬಾಳೆಲೆಯ ಮೇಲೆ ಅಕ್ಕಿ ಬೆಲ್ಲ 5 ತೆಂಗಿನಕಾಯಿ, 5 ವೀಳ್ಯದೆಲೆ ಇಟ್ಟು ಹೊಸ ವಸ್ತ್ರ ಹೊದಿಸಿ ಅದರ ಮೇಲೆ ಬಾಸಿಂಗವನ್ನಿಟ್ಟು ಪೂಜಿಸಲಾಗುತ್ತದೆ. ಬಹುಶಃ ಗತಿಸಿ ಹೋದ ಹಿರಿಯರ ಆಶೀರ್ವಾದ ಹಾರೈಕೆ ಪಡೆಯಲು ಈ ಆಚರಣೆಯನ್ನು ಮಾಡುತ್ತಿರಬಹುದೆಂದು ಊಹಿಸಬಹುದಾಗಿದೆ.

ಸಿದ್ದಿಗಳ ಇನ್ನೊಂದು ವಿಶಿಷ್ಟ ಆಚರಣೆ 'ಶುದ್ಧಕರಣ' ಅಥವಾ ಸಿದ್ದಿ ದೀಕ್ಷೆ ನೀಡುವುದು. ಆಗಾಗ ಸಿದ್ದಿಗಳು ಅನ್ಯ ಸಮುದಾಯದ ಹೆಣ್ಣುಗಳನ್ನು ಮದುವೆಯಾಗುವುದಿದೆ. ಆಗ ಅವರನ್ನು ಒಳಗೆ ಕರೆದುಕೊಳ್ಳುವ ಪೂರ್ವದಲ್ಲಿ ತಾತ್ಕಾಲಿಕ ಗುಡಿಸಲು ಕಟ್ಟಿ ಆಕೆಯನ್ನು ಕುಳ್ಳರಿಸಿ ಗುಡಿಸಿಲಿಗೆ ಬೆಂಕಿ ಹಚ್ಚಿ ಅದರಿಂದ ಆಕೆ ತಪ್ಪಿಸಿಕೊಂಡು ಬಂದ ಮೇಲೆ ಆಕೆಗೆ ಸುಟ್ಟ ಬೂದಿ ತಿನ್ನಿಸಿದ ಮೇಲೆ ಸಿದ್ದಿಯಾಗಿ ಪರಿವರ್ತಿತಗಳಾಗುತ್ತಾಳೆ.

**ಕೀಳರಿಮೆಗೊಳಗಾದ ಸಿದ್ದಿಗಳ 'ತಳಜಾತ್ರೆ':** ನಿಜವಾದ ಸೀಮಾದೈವಗಳ ಸಿದ್ದಿಗಳು ಆಚರಿಸುವ ಜಾತ್ರೆ ತಳಜಾತ್ರೆಯಾಗಿದೆ. ತಳಜಾತ್ರೆ ಎಂಬುಧೊಂದಿದೆ, ಅದನ್ನು ಸಿದ್ದಿ ಸಮುದಾಯಗಳು ಆಚರಿಸಿಕೊಳ್ಳುತ್ತಿವೆ ಎಂಬ ಸಂಗತಿ ಹೊರ ಪ್ರಪಂಚಕ್ಕೆ ತಿಳಿದಿಲ್ಲ. ಬಹಳ ಗುಪ್ತವಾಗಿ ಯಾರಿಗೂ ತಿಳಿಯದಂತೆ ಒಳಗೊಳಗೆ ಆಚರಿಸಿಕೊಳ್ಳುತ್ತಿರುವ ಸೀಮಾಜಾತ್ರೆ 'ತಳಜಾತ್ರೆ'ಯಾಗಿದೆ.

ಅತ್ಯಂತ ಅಪರೂಪದ ವಿಲಕ್ಷಣವಾದ ಜಾತ್ರೆ ಇದಾಗಿದ್ದು, ಸಿದ್ದಿಗಳು ತಮ್ಮದಲ್ಲದ ದೈವಗಳನ್ನು ಪೂಜಿಸಿ ಆರಾಧಿಸುವ ವಿಶಿಷ್ಟ ಜಾತ್ರೆ ಇದು. ಸಿದ್ದಿಗಳು ನೂರಾರು ವರ್ಷಗಳ ಹಿಂದೆ ಹಳಿಯಾಳ, ಯಲ್ಲಾಪುರ, ಮುಂಡಗೋಡ, ಅಂಕೋಲ ತಾಲ್ಲೂಕುಗಳ ಕಾಡುಗಳಲ್ಲಿ ತಾವು ಪಾದಾರ್ಪಣೆ ಮಾಡಿದಾಗ, ಆ ಕಾಡಿನಲ್ಲಿ ತಮ್ಮ ಪ್ರದೇಶದ ಪೂರ್ವದಲ್ಲೆ ಅಸ್ತಿತ್ವದಲ್ಲಿದ್ದ ಭಾರತ ಮೂಲದ ಆದಿವಾಸಿ ಸೀಮಾದೈವಗಳನ್ನು ತಮ್ಮದೇ ದೈವಗಳೆಂದು ತಬ್ಬಿ, ಹಿಂದೆ ಇದ್ದಂತಹ ಆಚರಣೆಗಳನ್ನು ನೂರಾರು ವರ್ಷಗಳಿಂದ ತಾವೇ ಆಚರಿಸಿಕೊಂಡು ಬರುತ್ತಿದ್ದಾರೆ.

ಬಹಳಷ್ಟು ಸಿದ್ದಿ ಹಳ್ಳಿಗಳಲ್ಲಿ ಭಾರತೀಯ ಆದಿವಾಸಿ, ಹಿಂದೂ ಕೆಳಸ್ತರದ ಸಮುದಾಯಗಳು ಬಹಳ ಹಿಂದೆ ನೆಲೆಸಿದ್ದು, ಈಗ ಅಲ್ಲಿಂದ ಪೂರ್ಣವಾಗಿ ನಿರ್ಗಮಿಸಿದ್ದಾರೆ. ಆದರೆ ಅವರ ನಿರ್ಗಮನದ ನಂತರವೂ ಅಲ್ಲಿ ನೆಲೆಸಿರುವ ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಿದ್ದಿ ಸಮುದಾಯಗಳು ಹಿಂದೂಧರ್ಮದ ಮೂಲದ ದೈವಗಳನ್ನು ಅಲ್ಲಿನ ಮೂಲಿಗರಷ್ಟೆ ಶ್ರದ್ಧೆ ಭಕ್ತಿಗಳಿಂದ ಪೂಜಿಸುತ್ತಾ, ಹಬ್ಬ ಹರಿದಿನ ಜಾತ್ರೆಗಳನ್ನು ಗುಪ್ತವಾಗೇ ನಡೆಸಿಕೊಂಡು ಬಂದಿದ್ದಾರೆ. ಕೆಳವರ್ಗದವರು ಕದ್ದು ಆಚರಿಸುವ ಜಾತ್ರೆಯಾದ್ದರಿಂದ 'ತಳಜಾತ್ರೆ' ಎಂದು ಕರೆಯುತ್ತಿರಬಹುದು. ಮಸೀದಿಯ ಮುಲ್ಲಾಗಳು, ಕ್ರೈಸ್ತ ಫಾದರ್‌ಗಳು ವಿರೋಧಿಸಿ ತಮಗೆ ತೊಂದರೆ ನೀಡಬಹುದೆಂಬ ಭಯದಿಂದ ಕದ್ದು ತಳಜಾತ್ರೆಯನ್ನು ಏಪ್ರಿಲ್ ತಿಂಗಳಲ್ಲಿ ಆಚರಿಸಿಕೊಳ್ಳುತ್ತಾರೆ. ಜಾತ್ರೆ ಮತ್ತು ಸೀಮಾದೈವಗಳ ಪೂಜೆಯ ಆಚರಣೆಗಳ ಬಗ್ಗೆ ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಿದ್ದಿಗಳು ನೆಲೆಸಿರುವ ಎರಡು ಹಳ್ಳಿಗಳನ್ನು ಉದಾಹರಣೆಯಾಗಿಟ್ಟುಕೊಂಡು ಇಲ್ಲಿ ವಿಶ್ಲೇಷಿಸುವುದರ ಮೂಲಕ ತಳಜಾತ್ರೆಯ ಸ್ವರೂಪವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

**ಕ್ರಿಶ್ಚಿಯನ್‌ರಿರುವ ಜತಗಾ ಹೊಸೂರಿನ 'ತಳಜಾತ್ರೆ':** ಹಳಿಯಾಳ ತಾಲ್ಲೂಕಿನ ಜತಗಾ ಹೊಸೂರಿನಲ್ಲಿ ಒಟ್ಟು 42 ಕ್ರಿಶ್ಚಿಯನ್ ಸಿದ್ದಿಗಳ ಮನೆಗಳಿವೆ. ಅಲ್ಲಿ ಬೇರೆ ಯಾವ ಸಮುದಾಯಗಳೂ ಇಲ್ಲ. ಆದರೆ ನೂರಾರು ವರ್ಷಗಳಿಂದ ಜಾಕಿ ಮರಿಯಾಂಬಿ ಸಿದ್ದಿ(52) ಮತ್ತು ಆತನ ಮನೆತನದವರು ಆ ಹಳ್ಳಿಯಲ್ಲಿರುವ ಒಟ್ಟು ಹಿಂದೂ ದೈವಗಳ ಪೂಜಾರಿಯಾಗಿದ್ದಾನೆ. ಈತನ ಸ್ವಂತ ಹೊಲದಲ್ಲೇ ಚೌಂಡೇಶ್ವರ ದೈವವಿದೆ. ಒಂದು ದಿಕ್ಕಿನಲ್ಲಿ ಸಿದ್ದಿನಾಸ, ಮತ್ತೊಂದು ಕಡೆ ದ್ಯಾವಮ್ಮ ಬೀರವ್ವ, ಮಗದೊಂದು ಕಡೆ ಆನೆ ದೇವರು, ಇನ್ನೊಂದು ಕಡೆ ಹುಲಿದೇವರು, ಮತ್ತೊಂದೆಡೆ ಒಡ್ಡರನಾಗವ್ವನಕಲ್ಲು, ಬಸವಣ್ಣನ ದೇವಸ್ಥಾನ ಮತ್ತು ತಮ್ಮ ಚರ್ಚುಗಳಿವೆ. ಒಟ್ಟಾರೆಯಾಗಿ ಈತ ಪಟ್ಟದ ಪೂಜಾರಿ. ಇವಿಷ್ಟು ದೈವಗಳಲ್ಲಿ ಬಸವಣ್ಣ, ಚರ್ಚುಗಳನ್ನು ಹೊರತುಪಡಿಸಿ ಅಷ್ಟೂ ದೈವಗಳು ಸೀಮಾದೈವಗಳಾಗಿವೆ. ಜತಗಾ ಹೊಸೂರು ಕಾಡಿನ ನಾಲ್ಕು ದಿಕ್ಕುಗಳಲ್ಲಿ 2-6 ಕಿ.ಮೀ ವ್ಯಾಪ್ತಿಯ ಗಡಿ/ಸೀಮೆಯನ್ನು ಹೊಂದಿದ್ದು, ಆ ನಾಲ್ಕು ಗಡಿಗಳಲ್ಲಿ ಅಲ್ಲಲ್ಲಿ ಹೇಳಲಾಗಿರುವ ದೈವಗಳು ಸ್ಥಾಪಿತಗೊಂಡಿವೆ. ಸಿದ್ದಿನಾಸ, ಚೌಂಡೇಶ್ವರಿ, ದ್ಯಾಮವ್ವ ಬೀರವ್ವ, ಆನೆದೇವರ ಮತ್ತು ಹುಲಿ ದೇವರುಗಳಿಗೆ ಬೇರೆಬೇರೆ ಸಂದರ್ಭಗಳಲ್ಲಿ ಅಂದರೆ ಬೆಳೆ ಬೆಳೆಯುವಾಗ, ಪೈರು ಪಸಲಿಗೆ ಬಂದಾಗ, ಊರಲ್ಲಿ ಮತ್ತು ಕಾಡಲ್ಲಿ ಕಳ್ಳತನವಾದರೆ, ರೋಗ ರುಜಿನಗಳ ಆಪತ್ತು ಬಂದೊದಗಿದರೆ ತಮ್ಮ ರಕ್ಷಣೆಗೆ ಈ ದೈವಗಳ ಮೊರೆ ಹೋಗಿ ಕುರಿ ಕೋಳಿ ಬಲಿ ನೀಡಿ ಪೂಜೆ ಮಾಡಿ ಬರುತ್ತಾರೆ. ಆಗೆಲ್ಲಾ ಜಾಕಿ ಮರಿಯಾಂಬಿ ಸಿದ್ದಿ ಮೈಮೇಲೆ ಆಯಾ ದೈವಗಳು ಆವಾಹನೆಯಾಗಿ ಅವುಗಳಿಗೆ ಪರಿಹಾರವನ್ನು ಸೂಚಿಸುತ್ತಾನೆ. ಭಕ್ತರು ಹರಕೆ ಕಟ್ಟಿಕೊಂಡು, ಹೇಳಿಕೆ ಮಾಡಿಕೊಂಡು ಕೋಳಿ, ಕುರಿಗಳ ಬಲಿ ನೀಡುತ್ತಾರೆ. ಯುಗಾದಿಯ ನಂತರ ಹಳ್ಳಿಯ ಹಿರಿಯರೆಲ್ಲಾ ಕೂಡಿಕೊಂಡು ಚರ್ಚಿಸಿ 'ತಳಜಾತ್ರೆ'ಯ

ದಿನಾಂಕವನ್ನು ನಿರ್ಧರಿಸುತ್ತಾರೆ. ತಳಜಾತ್ರೆಗಾಗಿ ಪಟ್ಟಿ ತೆಗೆಯಲಾಗುತ್ತದೆ. ಅಂದರೆ ಪ್ರತಿಮನೆಯಿಂದ ಜಾತ್ರೆಗೆ ಇಂತಿಷ್ಟು ಎಂದು ದೇಣಿಗೆ ಸಂಗ್ರಹಿಸಲಾಗುತ್ತದೆ. ಅದರಿಂದ ಉತ್ಸವ ಮತ್ತು ಪೂಜೆಗೆ ಬೇಕಾದ ಸಾಮಗ್ರಿಗಳನ್ನು ಮತ್ತು ಮುಖ್ಯವಾಗಿ ಕೋಳಿ, ಕುರಿಗಳನ್ನು ಖರೀದಿಸುತ್ತಾರೆ. ಜಾತ್ರೆಯ ವಿಶೇಷವೆಂದರೆ ಹಳ್ಳಿಯಲ್ಲಿರುವ ಅಷ್ಟೂ ದೈವಗಳಿಗೆ ಪೂಜೆ ಸಲ್ಲಿಸಿ, ಸೀಮಾದೈವಗಳಿಗೆ ಹರಕೆ ಹೊತ್ತವರುಗಳಿಂದ ಕುರಿ, ಕೋಳಿಗಳ ಬಲಿ ನೀಡಿ, ತಮ್ಮನ್ನು, ತಮ್ಮ ಕಾಡನ್ನು ರಕ್ಷಿಸಬೇಕೆಂದು ಎಲ್ಲರೂ ಬೇಡಿಕೊಳ್ಳುತ್ತಾರೆ. ಇಡೀ ಹಳ್ಳಿಗೆ ಮತ್ತು ಜಾತ್ರೆಗೆ ಆಗಮಿಸಿರುವ ನೆಂಟರಿಷ್ಟರಿಗೆ ಸಾಮೂಹಿಕವಾಗಿ ಬಲಿ ಕೊಟ್ಟ ಕೋಳಿ, ಕುರಿಗಳಿಂದ ಅಡುಗೆ ಮಾಡಿ ಪ್ರಸಾದವೆಂದು ಎಲ್ಲರಿಗೂ ಉಣಬಡಿಸುತ್ತಾರೆ. ಅಲ್ಲಿಗೆ ತಳಜಾತ್ರೆ ಪೂರ್ಣಗೊಳ್ಳುತ್ತದೆ. ಈ ಜಾತ್ರೆಯ ಬಗ್ಗೆ ಹೊರಪ್ರಪಂಚಕ್ಕೆ ಮಾಹಿತಿ ಇರುವುದಿಲ್ಲ. ಕಾರಣ ಕ್ರಿಶ್ಚಿಯನ್ ಸಿದ್ದಿಗಳನ್ನು ಧಾರ್ಮಿಕವಾಗಿ ನಿಯಂತ್ರಿಸುತ್ತಿರುವವರು ಚರ್ಚ್‌ಗಳ ಮಿಷನರಿ ಪಾದ್ರಿಗಳು. ಅವರ ಧಾರ್ಮಿಕ ಆಡಳಿತಕ್ಕೊಳಪಟ್ಟ ಸಿದ್ದಿಗಳ ಈ ಹಿಂದೂ ದೈವಗಳ ಪೂಜೆ ಸೀಮಾದೈವಗಳ ಆಚರಣೆಯನ್ನು ಮಿಥ್ಯವೆಂದು ವಿರೋಧಿಸುವ ಕಾರಣ, ತಳಜಾತ್ರೆಯನ್ನು ಗುಪ್ತವಾಗಿ ಆಚರಿಸಲಾಗುತ್ತದೆ. ಅಲ್ಲದೆ ಪ್ರತಿ ಹಬ್ಬಗಳಿಗೆ ಈ ಎಲ್ಲಾ ದೈವಗಳಿಗೆ ದೀಪ ಹಚ್ಚಿ ಪೂಜೆ ಸಲ್ಲಿಸಲಾಗುತ್ತದೆ. ಇದನ್ನು ಪ್ರಶ್ನಿಸುವ ಫಾದರ್‌ಗಳ ದಿಕ್ಕು ತಪ್ಪಿಸಲು ಪಕ್ಕದ ಹಳ್ಳಿಯ ಮರಾಠ ಸಮುದಾಯದ ಒಬ್ಬನನ್ನು ತಿಂಗಳಿಗಿಷ್ಟು ಎಂದು ಸಂಬಳ ನೀಡಿ ಡೆಮ್ಮಿ ಪೂಜಾರಿಯನ್ನು ನೇಮಿಸಿಕೊಳ್ಳಲಾಗಿದೆ. ನಿಜವಾದ ಪೂಜಾರಿ ಸಿದ್ದಿ ಜಾಕಿ ಮರಿಯಾಂಬಿಯಾದರೂ. ಪಾದ್ರಿಗಳ ಬಾಯಿ ಮುಚ್ಚಿಸಲು ಈತನಿರುತ್ತಾನೆ.

ಇನ್ನೊಂದು ವಿಶೇಷವಾದ ಸಂಗತಿ ಎಂದರೆ ಹಳ್ಳಿಯ ಅಷ್ಟೂ ಕ್ರಿಶ್ಚಿಯನ್ ಸಿದ್ದಿಗಳು ದೇಣಿಗೆ ಸಂಗ್ರಹಿಸಿ, ಬಸವಣ್ಣನ ದೇವಸ್ಥಾನವನ್ನು, ದ್ಯಾಮವ್ವ ಬೀರವ್ವನ ಗುಡಿಯನ್ನು ಕಟ್ಟಿದ್ದಾರೆ. ಇಷ್ಟರಲ್ಲೇ ಜಾಕಿ ಮರಿಯಾಂಬಿ ಹೊಲದಲ್ಲಿರುವ ಚೌಂಡೇಶ್ವರಿ ದೇವಿಗೆ ನಾನೇ ನಿಂತು ಪುಟ್ಟ ಗುಡಿ ಕಟ್ಟುತ್ತೇನೆಂದು ಜಾಕಿ ನುಡಿಯುತ್ತಾನೆ.

**ಮುಸ್ಲಿಂ ಸಿದ್ದಿಗಳಿಂದ ಭಾಗವತಿಯಲ್ಲಿ ತಳಜಾತ್ರೆ:** ಇದೇ ಹಳಿಯಾಳ ತಾಲ್ಲೂಕಿನಲ್ಲಿ ಭಾಗವತಿ ಎಂಬ ಹಳ್ಳಿಯಿದೆ. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮುಸ್ಲಿಂ ಸಿದ್ದಿಗಳು, ಕಡಿಮೆ ಸಂಖ್ಯೆಯಲ್ಲಿ ಕ್ರಿಶ್ಚಿಯನ್ ಸಿದ್ದಿಗಳು ಹಾಗೂ ಇತರೇ ಸಮುದಾಯದ ಮನೆಗಳೂ ಸೇರಿಕೊಂಡ ಒಂದು ದೊಡ್ಡಗ್ರಾಮವಾಗಿ ಭಾಗವತಿ ಬೆಳೆದಿದೆ. ಮೂಲದಲ್ಲಿ ಸಿದ್ದಿಗಳಿದ್ದರೂ ಪಕ್ಕದ ತಟ್ಟೀಹಳ ಮತ್ತು ಬೊಮ್ಮನಳ್ಳಿ ಡ್ಯಾಂಗಳಿಂದ ಮೀನು ಹಿಡಿಯುವ ಸಲುವಾಗಿ ಭಾಗವತಿ ಗ್ರಾಮದಲ್ಲಿ ವಿವಿಧ ಸಮುದಾಯಗಳ ಜನ ಅಲ್ಲಿ ಕ್ರೋಡೀಕರಿಸಿದ್ದಾರೆ. ಸಿದ್ದಿಗಳೂ ಕೂಡ ಮೀನು ಹಿಡಿದು ಬದುಕುತ್ತಿದ್ದಾರೆ. ಕಾರಣ ಅಲ್ಲಿರುವ ಅಷ್ಟೂ ಸಿದ್ದಿಗಳು, ಭೂವಂಚಿತರಾಗಿದ್ದು, ಕೂಲಿ ಮತ್ತು ಮೀನು ಹಿಡಿಯುವ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಜತಗಾ ಹೊಸೂರಿನಂತೆ ಈ ಭಾಗವತಿಯಲ್ಲೂ ಹಲವಾರು ಸೀಮಾದೈವಗಳಿವೆ. ಅವುಗಳಲ್ಲಿ ದ್ಯಾಮವ್ವ ಬೀರವ್ವ

ಚೌಂಡೇಶ್ವರಿ, ಸಿದ್ದಿನಾಸ, ಸಿದ್ದಪ್ಪಾಜಿ ಹಾಗೂ ಮಸೀದಿ ಮತ್ತು ಚರ್ಚ್‌ಗಳಿವೆ. ಗ್ರಾಮದ ಹೊರಗಿನ ಕಾಡಿನಲ್ಲಿ ಸುತ್ತಲೂ ಕಲ್ಲುಗುಂಡುಗಳನ್ನು ನೆಡಲಾಗಿದ್ದು ಅವುಗಳಿಗೆ ಪೂಜೆ ಸಲ್ಲಿಸಲಾಗುತ್ತದೆ. ಆದರೆ ಅವುಗಳ ಹೆಸರು ಮಾತ್ರ ಈ ಸಮುದಾಯಕ್ಕೆ ತಿಳಿದಿಲ್ಲ. ಬಹುಶಃ ಸಿದ್ದಿಗಳ ಪ್ರವೇಶದ ಪೂರ್ವದಲ್ಲಿ ಇತರೆ ಸಮುದಾಯಗಳು ತಮ್ಮದೇ ರೀತಿಯಲ್ಲಿ ಸಮಾಜ ಕಟ್ಟಿಕೊಂಡು ಕಾಡಿನೊಳಗಿನ ತಮ್ಮ ರಕ್ಷಣೆಗಳಿಗಾಗಿ ಗಡಿ ಮತ್ತು ದೈವಗಳನ್ನು ಸೃಷ್ಟಿಸಿಕೊಂಡಿದ್ದುದರ ಪಳೆಯುಳಿಕೆಗಳಾಗಿರ ಬಹುದೇನೋ. ಆದರೆ ಆ ದೈವಗಳನ್ನು ಮುಸ್ಲಿಂ ಮತ್ತು ಕ್ರೈಸ್ತ ಸಮುದಾಯದ ಸಿದ್ದಿಗಳು ಮುಸ್ಲಿಂ ಪೂಜಾರಿ ದಾವಲಸಾಬ್ ಇಮಾಮ್ ಸಾಬ್‌ಸಿದ್ದಿಯ ಮೂಲಕ ಪೂಜಿಸಿ ಆಚರಣೆಗಳನ್ನು ಜೀವಂತಗೊಳಿಸಿಕೊಂಡಿರುವುದು ಸೋಜಿಗದ ಸಂಗತಿಯಾಗಿದೆ.

ಭಾಗವತಿ ಗ್ರಾಮದಲ್ಲಿ ಮುಸ್ಲಿಂ ಮತ್ತು ಕ್ರೈಸ್ತ ಸಿದ್ದಿ ಮನೆಗಳು ಕೂಡಿಕೊಂಡು ಮೇಲಿನ ದೈವಗಳ ಪೂಜೆ ವಿಧಿನಿಷೇಧ ಮತ್ತು ಸಾಂಸ್ಕೃತಿಕ ಆಚರಣೆಗಳ ಸಲುವಾಗಿ 15 ಮುಖಂಡರನ್ನೊಳಗೊಂಡ ಒಂದು ಸಮಿತಿ ರಚಿಸಿಕೊಳ್ಳಲಾಗಿದೆ. ಈ ಸಮಿತಿಯು ಮೇಲಿನ ಸೀಮಾದೈವಗಳನ್ನಷ್ಟೇ ಅಲ್ಲ ಮಸೀದಿ ಮತ್ತು ಚರ್ಚುಗಳ ಧರ್ಮದ ಆಡಳಿತದ ಬಗ್ಗೆಯೂ ಉಸ್ತುವಾರಿ ವಹಿಸುತ್ತದೆ. ಭಾಗವತಿಯ ಧಾರ್ಮಿಕ ಮುಖಂಡ ಬುದವಂತಕ್ರೈಸ್ತ ಸಮುದಾಯದ 'ಅಂತೋನ್ ಮರಿಯಾನಿ ಸಿದ್ದಿ'ಯಾಗಿದ್ದಾನೆ. ಇವರೆಲ್ಲಾ ಕೂಡಿಕೊಂಡು ಜತಗಾ ಹೊಸೂರಿನಲ್ಲಿ ಹೇಗೆ ತಳಜಾತ್ರೆಯನ್ನು ಆಚರಿಸುತ್ತಾರೋ ಅದೇ ರೀತಿಯಲ್ಲಿ ಭಾಗವತಿಯಲ್ಲಿ ತಳಜಾತ್ರೆಯನ್ನು ಆಚರಿಸಲಾಗುತ್ತದೆ. ಅಲ್ಲಿ ಆದಿವಾಸಿ ಸೀಮಾದೈವಗಳನ್ನು ಕ್ರೈಸ್ಥ ಸಿದ್ದಿಗಳು ಮಾತ್ರ ಕೂಡಿಕೊಂಡು ಜಾತ್ರೆಯನ್ನು ಆಚರಿಸುತ್ತಿದ್ದರೆ, ಭಾಗವತಿಯಲ್ಲಿ ಮುಸ್ಲಿಂ, ಕ್ರೈಸ್ತ ಸಿದ್ದಿಗಳ ಹಾಗೂ ಸಿದ್ದಿಗಳಲ್ಲದ ಇತರ ಹಿಂದೂ ಸಮುದಾಯಗಳ ಕೂಡಿಕೊಂಡು ತಳ ಜಾತ್ರೆಯನ್ನು ಆಚರಿಸಲಾಗುತ್ತದೆ. ಇದಕ್ಕಿಂತ ಜಾತಿ ಸಾಮರಸ್ಯವನ್ನು ಪ್ರತಿಬಿಂಬಿಸುವ ಐಕ್ಯತೆಯ ನಿದರ್ಶನಗಳು ಬೇಕಾ?

ಇದೇ ರೀತಿಯ ಸೀಮಾದೈವಗಳ ಆರಾಧನೆ ಮತ್ತು ತಳಜಾತ್ರೆಗಳನ್ನು ಇತರ ಸಿದ್ದಿಹಳ್ಳಿಗಳಲ್ಲಿ ನಾವು ಕಾಣಬಹುದಾಗಿದೆ. ಮೇಲಿನ ದೈವಗಳ ಜೊತೆ ರಾಮಲಿಂಗ, ನಾಗಚೌಡೇಶ್ವರಿ, ಚಕ್ಕರನಾಸ, ಸಾತೇರಿ, ರಣದೇವತೆ, ಜಟಕ, ಚಕ್ರನಾಸಗಳನ್ನು ಸೀಮಾದೈವಗಳನ್ನಾಗಿ ವಿವಿಧ ಹಳ್ಳಿಗಳಲ್ಲಿ ಪೂಜಿಸುವುದನ್ನು ಕಾಣಬಹುದಾಗಿದೆ. ಯಲ್ಲಾಪುರ ತಾಲ್ಲೂಕಿನ ತೊಟ್ಲಗುಂಡಿಯಲ್ಲಿ ಕ್ರಿಶ್ಚಿಯನ್ ಸಿದ್ದಿಗಳು ಮುಸ್ಲಿಂ ದರ್ಗಾವನ್ನು ನಡೆಸುವ ಮತ್ತು ಸಿದ್ದಿನಾಸ ತಳಜಾತ್ರೆಗಳನ್ನು ಆಚರಿಸುತ್ತಾರೆ.

ಯಲ್ಲಾಪುರ ತಾಲ್ಲೂಕಿನ ಹುಂಜೆ ಕುಂಬ್ರಿಯಲ್ಲಿ ಮುಂಚಿನಿಂದಲೂ ಸಿದ್ದಿನಾಸ ಸೀಮಾದೈವಕ್ಕೆ ಸಿದ್ದಿಗಳು ಪೂಜಿಸಿಕೊಂಡು ಬರುತ್ತಿದ್ದರು. ಹುಂಜೆ ಕುಮ್ರಿ ಕಾಡಿನಲ್ಲಿ ಒಂದು ಕಲ್ಲು ನೆಟ್ಟು ಸಿದ್ದಿನ್ಯಾಸವೆಂದು ಪೂಜಿಸುತ್ತಾ ಬರುತ್ತಿದ್ದಾರೆ. ಇದರ ಕೆಳಗೆ 'ಕೀಲುನಾಸ'ವಿದೆ. ವಿಶೇಷವೆಂದರೆ ಇದರ ಮತ್ತೊಂದು ಬದಿಯಲ್ಲಿ 'ಭೂಮಿತಾಯಿ' ದೈವವಿದೆ. ಇದಕ್ಕೆ ಸೀರೆಯುಡಿಸಿ, ಉಡಿಕಟ್ಟಿ,

ಅರಿಶಿನ, ಕುಂಕುಮ, ಬಳೆಗಳನ್ನು ಹರಕೆ ಹೊತ್ತವರು ತೊಡಿಸುತ್ತಾರೆ. ಈ ಮೂರು ದೈವಗಳಲ್ಲಿ ಬೆಳೆ, ರೋಗ ರುಜಿನ, ಭೂತ ಪಿಶಾಚಿ, ಜಗಳ ವ್ಯಾಜ್ಯಗಳ ಸಲುವಾಗಿ ಇಲ್ಲಿ ಹರಕೆ ಹೊರಲಾಗುತ್ತದೆ. ಇದರ ಪಕ್ಕದಲ್ಲೆ ಜಮೀನಿರುವ ರಾಮಗಿಡ್ಡ ಸಿದ್ದಿಯು ಸಿದ್ದಿಗಳಲ್ಲಿ ಪ್ರಥಮ ಬಾರಿಗೆ ಈ ಮೂರು ಕಲ್ಲುಗಳ ಪಕ್ಕ ಕಲ್ಲಿನಿಂದ ಮೂರ್ತಿಗಳನ್ನು ಕೆತ್ತಿಸಿ ಮೂರ್ತಿ ಸ್ಥಾಪನೆ ಮಾಡಿದ್ದಾನೆ. ಕಳೆದ ಮೇ 23, 24ಕ್ಕೆ ಸಿದ್ದಿನಾಸ ಜಾತ್ರೆಯನ್ನು ವಿಜೃಂಭಣೆಯಿಂದ ಮಾಡಿದ್ದಾರೆ. 3–4 ಸಾವಿರ ಸಿದ್ದಿ ಜನರು ಸೇರಿ 160 ಕೋಳಿ, 8 ಕುರಿಗಳ ಬಲಿ ನೀಡಿ, ಅಡುಗೆ ಮಾಡಿ ಪ್ರಸಾದ ಹಂಚಿ ಜಾತ್ರೆ ನಡೆಸಿದ್ದಾರೆ. ಇಡೀ ರಾತ್ರಿ ಧಮಾಮಿ, ಯಕ್ಷಗಾನ, ಸಂಗ್ಯಾಬಾಳ್ಯ ನಾಟಕ ನೃತ್ಯ, ಜಾನಪದ ಹಾಡುಗಳನ್ನು ಬೆಳಗಿನವರೆವಿಗೂ ಹಾಡಿ ಕುಣಿದು ಸಂಭ್ರಮಿಸಿದ್ದಾರೆ. ಎರಡು ದಶಕಗಳ ಸಾತನಬೈಲ್ ಪ್ರದೇಶದಲ್ಲಿ ಎಲೆಮರೆಯಲ್ಲಿ ಸಾಮಾನ್ಯ ಆಚರಣೆಯಂತೆ ಜರುಗಿಸಲಾಗುತ್ತಿದ್ದ ಉತ್ಸವವನ್ನು ಪ್ರಾಯೋಗಿಕವಾಗಿ ಅಭಿವೃದ್ಧಿಗೊಳಿಸಿ ಬೆಳೆಸಿದ ಒಂದು ಪ್ರಯತ್ನದ ಫಲವಾಗಿ ಇಂದು ಸಿದ್ದಿಗಳ ಪ್ರತಿ ಹಳ್ಳಿಗಳಲ್ಲಿ ಸಿದ್ದಿನ್ಯಾಸ ಸಣ್ಣ ಆಚರಣೆ ಉತ್ಸವ, ಜಾತ್ರೆಗಳಾಗಿ ಮಾರ್ಪಟ್ಟು ನಮಗೂ ಒಂದು ಸ್ವಂತ ದೇವರಿದೆ, ನಾವು ಜಾತ್ರೆ ಮಾಡುತ್ತೇವೆ. ನಾವು ಎಲ್ಲರಂತೆ ಧಾರ್ಮಿಕ ಉಪಾಸನೆ ಆಚರಣೆಗಳಿಂದ ಸಮಾಜದಲ್ಲಿ ಗೌರವಯುತವಾಗಿ ಬದುಕಬಲ್ಲೆವು ಎಂಬ ಆತ್ಮಸ್ಥೈರ್ಯ ಮತ್ತು ಗೌರವವನ್ನು ಈ ಜಾತ್ರೆ ಸಿದ್ದಿಗಳಿಗೆ ತಂದುಕೊಟ್ಟಿದೆ. ಒಟ್ಟಿನಲ್ಲಿ ಯಾವುದೋ ದೇಶದಿಂದ ಎಲ್ಲಾ ಕಳೆದುಕೊಂಡು ದೌರ್ಭಾಗ್ಯರಾಗಿ ಬಂದ ಸಿದ್ದಿಗಳಿಗೀಗ ತಮ್ಮದೇ ಸಿದ್ದಿ 'ಸೀಮಾ ಅಧ್ಯಾತ್ಮ'ವನ್ನು ಸೃಷ್ಟಿಸಿಕೊಂಡ ರೀತಿ ಮಾತ್ರ ಸಿದ್ದಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಬಹುದೊಡ್ಡ ಚಾರಿತ್ರಿಕ ದಾಖಲೆಯ ಬೆಳವಣಿಗೆಯಾಗಿದೆ ಎನ್ನಬಹುದು.

### ಸೋಲಿಗರಲ್ಲಿ ಸೀಮಾಪದ್ಧತಿ

ಮೈಸೂರು, ಚಾಮರಾಜನಗರ ಜಿಲ್ಲೆಗಳಲ್ಲಿ ಹೆಚ್ಚಾಗಿ ಹಾಗೂ ಚಿಕ್ಕಮಗಳೂರು, ತುಮಕೂರು, ಮಂಡ್ಯ, ಹಾಸನ, ಶಿವಮೊಗ್ಗ, ಕೋಲಾರ, ಚಿತ್ರದುರ್ಗಗಳಲ್ಲಿ ಕಂಡುಬರುವ ಈ ಬುಡಕಟ್ಟು ಸಮುದಾಯದಲ್ಲಿ ಸೀಮಾಪದ್ಧತಿಯ ಆಚರಣೆಯನ್ನು ಪ್ರಮುಖವಾಗಿ ಆಚರಿಸಿಕೊಂಡು ಬರಲಾಗುತ್ತಿದೆ. ಸೀಮಾವಲಯವನ್ನು ಇವರು ಜಮ್ಮವೆಂದು ಕರೆಯುತ್ತಾರೆ. ಕುಂಬರಿ ಬೇಸಾಯ ಇವರ ಮುಖ್ಯ ಆದಿಮ ಕೃಷಿಯಾಗಿದೆ.

ಭೌಗೋಳಿಕವಾಗಿ 5 ಭಾಗಗಳಾಗಿ ವಿಂಗಡಿತವಾಗಿ 1. ಉರಾಳಿ ಸೋಲಿಗಾ, 2. ಕಾಡು ಸೋಲಿಗ, 3. ಮಲೆಸೋಲಿಗ, 4. ಊರಬತ್ತಿಸೋಲಿಗ, 5. ಬುರುಡೆ ಸೋಲಿಗರುಗಳಾಗಿ ವಿಭಾಗಿಸಿಕೊಂಡಿದ್ದಾರೆ. ಹೆಚ್.ಡಿ.ಕೋಟೆ ಕಡೆಯ ಸೋಲಿಗರನ್ನು ದೇವರ ಸೋಲಿಗರೆಂದು ಕರೆಯಲಾಗುತ್ತದೆ.

ಜವಮ್ಮಾಪದ್ಧತಿ ಪ್ರಮುಖವಾಗಿದ್ದರೂ ಧಾರ್ಮಿಕ ಸ್ಥಿತ್ಯಂತರಕ್ಕೊಳಕ್ಕಾಗಿ ಸೀಮೊಲ್ಲಂಘನೆಗೊಳಗಾಗಿ ಮಂಟೆಸ್ವಾಮಿ ಮತ್ತು ಮಲೆಮಹದೇಶ್ವರ ಕಾವ್ಯಗಳಾಗಿ ಸಂಕಮ್ಮ, ನೀಲಮ್ಮ ಬಿಳಿಗಿರಿರಂಗನ ಕಥೆಗಳಾದ ಈ ಸಮುದಾಯವು ವಿಭಿನ್ನವಾದ ಸಂಸ್ಕೃತಿ ಹೊಂದಿದೆ.

ಇವರು ಆಚರಿಸುವ ಭೂಮಿತಾಯಿ ಪಂಡುಗ, ವಿಲ್ಸ, ಹೊಸರಾಗಿ ಹಬ್ಬ, ರೊಟ್ಟಿ ಹಬ್ಬ ಮುನಿಮಾಡುವುದು, ಸಂಕಮ್ಮನ ಹಬ್ಬ, ಕಂಬದ ಹಬ್ಬ, ಮಲೆಮಹದೇಶ್ವರನ ಜಾತ್ರೆ, ಬಿಳಿಗಿರಿ ರಂಗಸ್ವಾಮಿ ಜಾತ್ರೆ, ಕೀಲುನಾಟಿದನಗಳ ಜಾತ್ರೆಗಳನ್ನು ಆಚರಿಸುತ್ತಾರೆ. ಒಮ್ಮ ಪಂಗಡಗಳಲ್ಲಿ ಜನರ ಕುಲಗಳ ಪಾತ್ರ ಮಹತ್ವದ್ದು. 1. ಹೊಂಗೆಲರ ಕುಲ, 2. ಆಲೂರು ಕುಲ, 3. ಬೆಲ್ಲರ ಕುಲ, 4. ಸೂರ್ಯ ಕುಲ, 5. ತಿನೇರು ಕುಲ, 6. ಜೇನು ಕುಲ, 7. ಕುಂಬಳು ಕುಲಗಳಾಗಿ ಸೋಲಿಗರನ್ನು ವಿಂಗಡಿಸಲಾಗಿದೆ.

**ಸೋಲಿಗರ ಸೃಷ್ಟಿಪುರಾಣ**

ಸೋಲಿಗರ ಭಾಷೆಯಲ್ಲಿ 'ಸೋಲೆ' ಎಂದರೆ ಬಿದಿರು. ಹಿಂದೆ ಈ ಸಮುದಾಯವು ಆಹಾರ ಸಂಗ್ರಹಣೆಯ ಬುಡಕಟ್ಟುಗಳಾಗಿಯೇ ಕೃಷಿಗೆ ಪಾದಾರ್ಪಣೆ ಮಾಡಿದವರು. ಆಗಲೂ ಈಗಲೂ ನೂರಾರು ಗೆಣಸುಗಳನ್ನು ಕಾಡಲ್ಲಿ ಅಗೆದು ಆಹಾರಕ್ಕಾಗಿ ಬಳಸುವ ತಮ್ಮ ಮೂಲ ಪರಿಪಾಟವನ್ನಿನ್ನೂ ಬಿಟ್ಟಿಲ್ಲ. ಅವರಲ್ಲಿ 'ಸೋಲನ ಗೆಣಸು' ಎಂಬುಧೊಂದಿದೆ. ಅದಕ್ಕೆ ಪೂರಕವಾದ ಜಾನಪದ ಹಾಡೂ ಇದೆ.

"ಆರನೆಯ ಕೋಲು ನೂರೆಯ ಗೆಣಸು
ಕಾಯಂಬು ಗೆಣಸು ಕಲಂಬುತ್ತಾರೆ
ಸೋತು ಹೋಗಾದು ಸೋಲನ ಗೆಣಸು"

ಈ ಪದ್ಯದಲ್ಲಿ ಸೂಚಿಸಿರುವಂತೆ ಸೋಲಿಗ ಸೋಲ ಗೆಣಸು ಉಪಯೋಗಿಸುತ್ತಿದ್ದುದಕ್ಕೆ ಸೋಲಿಗನಾದನೋ ಅಥವಾ ಈತನಿಂದಲೇ ಗೆಣಸಿಗೆ 'ಸೊಲನ' ಹೆಸರು ಬಂತೋ ಗೊತ್ತಿಲ್ಲ. ಈ ಸಮುದಾಯ ದಟ್ಟ ಕಾಡಿನಲ್ಲೇ ತಮ್ಮ ನೆಲೆ ಕಂಡುಕೊಂಡಿದ್ದರಿಂದ ಬಿದಿರು ಅವರ ಬದುಕಿನ ಮೂಲಾಧಾರವಾಗಿತ್ತು. ಅದನ್ನೂ ಸೋಲಿಗರ ಭಾಷೆಯಲ್ಲಿ 'ಸೂಲೆ' ಎನ್ನುತ್ತಾರೆ. ಬಹುಶಃ ಇಷ್ಟು ಸಂಗತಿಯೊಳಗೆ ಈ ಸಮುದಾಯಕ್ಕೆ ಸೋಲಿಗ ಎಂಬ ಹೆಸರು ಇರುವುದಕ್ಕೆ ಕಾರಣಭೂತವಾದ ಅಂಶಗಳು ಇವೆ ಎಂಬುದು ನನ್ನ ಗ್ರಹಿಕೆ. ಉಳಿದಂತೆ ಉದ್ಭವಗೊಂಡಿರುವ ಇತರೆ ಸೃಷ್ಟಿ ಪುರಾಣದ ಕತೆಗಳು ಸೋಲಿಗ ಆದಿವಾಸಿಗಳು ಶೈವ ತದನಂತರ ವೈಷ್ಣವ ಧರ್ಮಗಳ ವಿಸ್ತರಣೆಯ ಮತಾಂತರದಂತಹ ಸ್ಥಿತ್ಯಂತರಗಳಿಗೆ ಒಳಗಾಗಿ ಹುಟ್ಟಿಕೊಂಡ ಪುರಾಣ ಗಳಾಗಿರಬಹುದೆಂಬುಧು ನನ್ನ ಊಹೆ.

ಒಮ್ಮೆ ಶಿವ ಪಾರ್ವತಿಯರು ತಮ್ಮ ಬೆವರಿನಿಂದ ಎರಡು ಬೊಂಬೆಗಳನ್ನು ಮಾಡಿ ಅವಕ್ಕೆ ಜೀವ ತುಂಬಿದರಂತೆ. ಒಂದಕ್ಕೆ 'ನೀಲಯ್ಯ' ಮತ್ತೊಂದಕ್ಕೆ 'ಸಂಕಮ್ಮ'ನೆಂದು ನಾಮಕರಣ ಮಾಡಿದರಂತೆ. ಇವರನ್ನು ದೇವ ಸೋಲಿಗರೆನ್ನುತ್ತಾರೆ. ಇವರು ಕಾಡಿನಲ್ಲಿ ಸೋಲನ ಹಂಬಿ ಗೆಣಸು ತಿಂದು ಬದುಕುತ್ತಿದ್ದರು. ಮುಂದೆ ಇವರಿಂದ ಸಂತತಿಗಳಾಗಿ ವಂಶ ಬೆಳೆಯಿತು. ಸೊಲನಗೆಡ್ಡೆ ಬಗೆ ಬಗೆದು ತಿನ್ನುತ್ತಲ್ಲೇ ಮುಪ್ಪಾದರು. ಒಮ್ಮೆ ಮುದುಕ ಸೊಲನ ಗೆಣಸು ಕೀಳಲು ಹೋದಾಗ ಆ ಸೋಲನ ಹಂಬು "ನಿನ್ನ ಕೈಯಿಂದ ನನ್ನ ಗಡ್ಡೆಯನ್ನು ನೀನು ಸಾಯೋವರೆಗೂ ಕಿತ್ತರೂ ನಾನು ಮತ್ತೆ ಮತ್ತೆ ಚಿಗುರಿಬರುತ್ತೀನಿ. ನೀನು ನನ್ನ ಸೋಲಿಸಲಿಕ್ಕೆ ಆಗೋಲ್ಲ. ಆದ್ದರಿಂದ ನೀನು ನನ್ನ ಗೆಡ್ಡೆ ಕಿತ್ತು ಸೋತವನು ನೀನು 'ಸೋಲಿಗ' ಎಂದು ಹೇಳಿತು.[10]

ಮತ್ತೊಂದು ಕಥೆಯ ಪ್ರಕಾರ ಪಾರ್ವತಿ ಪರಮೇಶ್ವರರ ಕೃಪಾಕಟಾಕ್ಷದಿಂದ ಜನಿಸಿದ ನೀಲಯ್ಯ ಸಂಕಮ್ಮನ ಮಕ್ಕಳಾದ ಕಾರಯ್ಯ ಮತ್ತು ಬಿಲ್ಲಯ್ಯರು ಬೆಳೆದು, ಹಸುಗಳ ಸಾಕಿ ದಿನಾ ಹಾಲು ಕರೆದು ಜೀವಿಸಿರುತ್ತಾರೆ. ಅದರಲ್ಲೊಂದು ಹಸು ಪ್ರತಿ ದಿನ ಕೊಡುವಷ್ಟು ಹಾಲನ್ನು ಈ ನಡುವೆ ಸೊರ ಕೊಡದೆ ಬಹಳ ಕಡಿಮೆ ಹಾಲು ನೀಡುತ್ತದೆ. ಕಾರಣ ಏನೆಂದು ಹಿಂಬಾಲಿಸಲಾಗಿ ಅದು ಒಂದು ಹುತ್ತಕ್ಕೆ ಹೋಗಿ ಸೊರ ಬಿಡುತ್ತಿತ್ತು. ಇದರಿಂದ ಸಿಟ್ಟಿಗೆದ್ದ ಕಾರಯ್ಯ ಸೀದಾ ಹೋಗಿ ಕತ್ತಿಯಿಂದ ಹುತ್ತ ಕಡಿದು ಹಾಕಿದ. ಆದರೆ ಹುತ್ತದೊಳಗೆ ಮಹದೇಶ್ವರ ಸ್ವಾಮಿಗಳು ತಪಸ್ಸಿಗೆ ಕುಳಿತಿದ್ದರು. ಕಾರಯ್ಯ ಬೀಸಿದ ಕತ್ತಿ ಅವರ ಹಣೆಗೆ ಬಡಿದು ರಕ್ತ ಚಿಮ್ಮಿತು. ಸಿಟ್ಟುಗೊಂಡು ಹುತ್ತದಿಂದ ಹೊರಬಂದಾಗ ಹೆದರಿ ಓಡಿ ಹೋಗಿ ಬಿದಿರಿನ ಮೆಳೆಯಲ್ಲಿ ಬಚ್ಚಿಟ್ಟುಕೊಂಡು, ಬ್ಯಾಂಬುವಿನ ಕೊಳವೆಯೊಳಗೆ ಹುದುಗಿಕೊಂಡದ್ದು, ನಂತರ ತುದಿಯಿಂದ ಆಚೆಗೆ ಬಂದು ತಪ್ಪಿಸಿಕೊಂಡು ಕಾಡಿನಲ್ಲಿ ಸೇರಿಕೊಂಡ. ಹಾಗಾಗಿ ಕಾರಯ್ಯ ಬಿದಿರಿನಿಂದ ಮರುಹುಟ್ಟು ಪಡೆದು ಹೊರಬಂದಿದ್ದರಿಂದ ಆತ ಸೋಲಿಗನಾದ(ಸೋಲಿಗರು ಬಿದಿರನ್ನು 'ಸೊಲೆ' ಎಂದು ಕರೆಯುತ್ತಾರೆ). ಮಹದೇಶ್ವರರಿಂದ ದೀಕ್ಷೆ ಪಡೆದ ಬಿಲ್ಲಯ್ಯ ಮಾಂಸ ವರ್ಜಿಸಿ ಲಿಂಗಸ್ಥ ತಂಬ್ಡಿಯಾದ.

ಹೀಗೆ ಬೇರೆ ಬೇರೆಯದೇ ಪುರಾಣ ಕತೆಗಳನ್ನು ತಮ್ಮ ಸೃಷ್ಟಿಯ ಬಗ್ಗೆ ಸೋಲಿಗರೇ ಹೆಣೆದುಕೊಂಡರೋ ಅಥವಾ ಅವರ ಮೇಲೆ ಅನ್ಯಧರ್ಮದ ಮತ ಪ್ರಚಾರಕ್ಕಾಗಿ ಆಗಮಿಸಿದ ಶೈವ ಮತ್ತು ವೈಷ್ಣವರು ತಮಗೆ ಬೇಕಾದಂತೆ ಕತೆ ತಿರುಚಿಕೊಂಡರೋ ಗೊತ್ತಿಲ್ಲ. ಒಟ್ಟಿನಲ್ಲಿ ಅಣ್ಣ ತಮ್ಮಂದಿರಾದ ಕಾರಯ್ಯ ಬಿಲ್ಲಯ್ಯಗಳು ಸಮುದಾಯವನ್ನು ಇಲ್ಲಿ ಪ್ರತಿನಿಧಿಸುತ್ತಾರೆ. ಅದರಲ್ಲಿ ಒಂದು ಗುಂಪು ಮತ ಪ್ರಚಾರಕ್ಕೊಳಗಾಗಿ ಶೈವ, ವೈಷ್ಣವ, ಧರ್ಮಗಳ ಪ್ರಭಾವದಿಂದ ತಮ್ಮ ಮೂಲಸಂಸ್ಕೃತಿಯಿಂದ ಸ್ಥಿತ್ಯಂತರಕ್ಕೊಳಗಾಗಿ ಆ ಗುಂಪು ಲಿಂಗದೀಕ್ಷೆ ಪಡೆದು

ಬೇರೆಯಾಗುತ್ತಾರೆ. ಮತಾಂತರವನ್ನು ವಿರೋಧಿಸಿದ ಕಾರಯ್ಯನ ಗುಂಪು ತಮ್ಮ ಮೂಲ ಸಂಸ್ಕೃತಿಯನ್ನು ಪ್ರತಿಪಾದಿಸುತ್ತ ಕಾಡಿನ ಬಿದಿರೊಳಗೆ ಸೇರುತ್ತಾರೆ. ಆದ್ದರಿಂದ ಅವರು ಸೋಲಿಗರಾಗುತ್ತಾರೆ (ಸೊಲ–ಬಿದಿರು) ಅಲ್ಲಿಗೆ ನೂರಾರು ವರ್ಷಗಳ ಹಿಂದೆಯೇ ಸೋಲಿಗರ 'ಸೀಮೆ' ಕವಲೊಡೆದು ಎರಡಾಗಿರುತ್ತದೆ ಎಂಬ ತಿರುಳನ್ನು ಮೇಲಿನ ಕತೆಗಳಿಂದ ಅರಿಯಬಹುದಾಗಿದೆ. ಇದಕ್ಕೆ ಪೂರಕವಾಗಿ Thurston(1909)ರ Sholiga ಕೃತಿಯಲ್ಲಿ ಸೋಲಿಗರು Bamboo Stickನಿಂದ ಬಂದವರೆಂದು ಉಲ್ಲೇಖಿಸಿದ್ದಾನೆ.[11] ಮಲೆಮಹದೇಶ್ವರ ಮತ್ತು ಬಿಳಿಗಿರಿರಂಗಗಳು ಸೋಲಿಗರ ಸಂಸ್ಕೃತಿಯನ್ನು ಸ್ಥಿತ್ಯಂತರಗೊಳಿಸಿದ ಸಾಕ್ಷಿಯ ಪ್ರತೀಕವಾಗೇ ಅವರೊಳಗೆ ಉಳಿದುಕೊಂಡಿದ್ದಾರೆ. ಇದೇ ಪ್ರತಿಪಾದನೆಯನ್ನು ಇವರ ಮೇಲೆ ಅಧ್ಯಯನ ಕೈಗೊಂಡ ಸೋಮಸುಂದರಂ ಮತ್ತು ಕಿಬೆ(1990) ಲೂಯಿಸ್ (Tribes of Mysore)[12] ಮತ್ತು ಮೊರೆಬ್ ಕೂಡ ಹೇಳಿದ್ದಾರೆ.

**ಸೋಲಿಗರಲ್ಲಿ ಸೀಮಾಪದ್ಧತಿ**

ಬೆಟ್ಟಕುರುಬರಲ್ಲಿ 'ಮಗೆ' ಇದ್ದಂತೆ ಸೋಲಿಗರಲ್ಲಿ 'ಕುಲ'ವಿದೆ. ಅಲ್ಲಿ ಮಗೆಯೇ ಜಮ್ಮಾ (ಸೀಮೆ)ವಾದರೆ ಇಲ್ಲಿ 'ಕುಲ'ವೇ ಸೀಮೆಯಾಗಿದೆ. ಬೆಟ್ಟಕುರುಬರ ಮಾದರಿಯಲ್ಲಿ ಸೋಲಿಗರೂ ತಮ್ಮ ಆಹಾರ ಸಂಗ್ರಹಣೆ, ಕಾಡಿನ ಕಿರು ಉತ್ಪನ್ನಗಳ ಸಂಗ್ರಹಣೆ, ಬೇಟೆ ಮತ್ತು ದೈವೋಪಾಸನೆಗಳನ್ನು ಹಂಚಿಕೊಳ್ಳುವ ಕಾರಣಕ್ಕೋಸ್ಕರ ಪರಸ್ಪರ ಸಹಕಾರದಿಂದ ಜಮ್ಮಾ ಗಡಿಗಳು ಬೇರೆ ಬೇರೆಯಾಗಿ ಮಾಡಿಕೊಂಡು ತಮ್ಮ ಪೀಳೀಗೆಯ ವಂಶಸ್ಥರು ಮಾಡಿಕೊಂಡ ಗಡಿ ಹಂಚಿಕೆಯ ಕರಾರೇ 'ಕುಲ'ಗಳಾಗಿವೆ. ಬೇರೆ ಬೇರೆ ಕುಲಗಳು ಬೇರೆ ಬೇರೆ 'ಜಮ್ಮಾ'ಗಳನ್ನಾಗಿ ವಿಂಗಡಿಸಿಕೊಂಡು ಕಾಡಿನ ಬೇರೆ ಬೇರೆ ಸೀಮೆಗಳಲ್ಲಿ ತಮ್ಮ ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ಕಂಡುಕೊಂಡಿರು ವುದನ್ನು ಸೋಲಿಗರಲ್ಲಿ ಕಾಣಬಹುದಾಗಿದೆ.

ಕುಲಗಳಿಗೂ, ಜಮ್ಮಾಗಳಿಗೂ, ಮಗೆಗಳಿಗೂ, ಎಲ್ಲೆಗಳಿಗೂ, ಗಡಿಗಳಿಗೂ, ಸೀಮಾಗಳಿಗೂ ಯಾವುದೇ ವ್ಯತ್ಯಾಸಗಳಿರುವುದಿಲ್ಲ. ಅದು ಕೇವಲ ಆಯಾ ಸಮುದಾಯಗಳು ಸ್ಥಳೀಯ ಭಾಷೆಗಳಲ್ಲಿ ಇಟ್ಟುಕೊಂಡ ಒಂದೇ ಅರ್ಥವಿರುವ ಬೇರೆ ಬೇರೆ ಭಾಷೆಗಳಾಗಿವೆಯಷ್ಟೆ ಕುಲಗಳಿಗೂ, ಎಲ್ಲೆಗಳಿಗೂ, ಅವರ ಪಾರಂಪರಿಕ ಜ್ಞಾನಕ್ಕೂ ಭೌಗೋಳಿಕ ಪ್ರದೇಶದೊಳಗಿನ ಕಾಡು, ಕಾಡಿನೊಳಗಿನ ಮರಗಿಡ ಪ್ರಾಣಿ, ಪಕ್ಷಿಗಳಿಗೂ ಪರಸ್ಪರ ಅವಿನಾಭಾವ ಸಂಬಂಧಗಳಿವೆ. ಪ್ರತಿಯೊಂದು ಕುಲಗಳಿಗೂ ಪ್ರತ್ಯೇಕವಾದ ಕುಲ ಚಿನ್ನೆಗಳಿವೆ. ಉದಾಹರಣೆಗೆ: ಸಂಪಿಗೆ, ತಾರೆ, ನೆಲ್ಲಿ, ಕರಡಿ, ಆನೆ, ಹುಲಿ ಇತ್ಯಾದಿಗಳು. ಪ್ರತಿ ಕುಲಗಳಿಗೆ ಪ್ರತ್ಯೇಕವಾದ ಗಡಿ ಮತ್ತು ಪೂಜಾ ಸ್ಥಳಗಳಿವೆ. ಒಂದು ಕುಲದ ಗಡಿ(ಎಲ್ಲೆ)ಯನ್ನು ಮತ್ತೊಂದು ಕುಲದವರು ಪ್ರವೇಶಿಸುವಂತಿಲ್ಲ. ಹಾಗೊಮ್ಮೆ ಸೀಮೋಲ್ಲಂಘನೆ ಮಾಡಿದಲ್ಲಿ ಪರಸ್ಪರ ಕುಲದವರು ಕೂಡಿಕೊಂಡ ನ್ಯಾಯಕಟ್ಟೆಯ ಮೊರೆ

ಹೋಗಿ, ನ್ಯಾಯಮಂಡಳಿ ವಿಧಿಸಿದ ದಂಡದ ಮೊತ್ತವನ್ನು ವೀಳೆದೆಲೆ, ಅಡಿಕೆಯಲ್ಲಿಟ್ಟು ದೇವರಿಗೆ ದಂಡ ಕಟ್ಟಬೇಕಾಗುತ್ತದೆ. ಈ ತರಹದ ಪರಸ್ಪರ ಸೀಮಾ ವಿಧಿ ನಿಷೇಧ, ನಿಯಮಗಳು ಪ್ರತಿ ಆದಿವಾಸಿ ಸಮುದಾಯಗಳಲ್ಲಿ ಇರುವುದನ್ನು ಕಾಣಬಹುದಾಗಿದೆ.

**ಸೋಲಿಗರ ಗಡಿದೈವಗಳು**

ಎಲ್ಲಾ ಆದಿವಾಸಿಗಳಿಗೂ ಕಾಡು ಮತ್ತು ಕಾಡಿನ ಪರಿಸರ ನಿಸರ್ಗವೇ ದೈವಗಳಾಗಿರುತ್ತವೆ. ಅದರ ಪ್ರತೀಕವಾಗಿ ಸೋಲಿಗರಲ್ಲಿ ನಿಸರ್ಗದ 'ಪಂಚಭೂತ'ಗಳೇ ಅವರ ಸೀಮಾದೈವಗಳಾಗಿರು ವುದನ್ನು ಗಮನಿಸಬಹುದಾಗಿದೆ.

1. ದೇವರು(ಸೂರ್ಯ)
2. ಮಾರಮ್ಮ(ಬೆಂಕಿ)
3. ವೀರು–ಮುನಿ(ಆಕಾಶ)
4. ಕಲ್ಲುಗುಡಿ(ಗಾಳಿ)
5. ಅಬ್ಬಿ(ನೀರು)

ಈ ಮೇಲಿನ ಪಂಚಭೂತಗಳ ದೈವಗಳು ಪ್ರತಿಯೊಂದು ಕುಲದ ಎಲ್ಲೆಗಳಲ್ಲಿ ಕಾಣಬಹುದಾಗಿದೆ.

ಪ್ರತಿಯೊಂದು ಕುಲಚಿನ್ನೆಗಳೂ ಸೋಲಿಗರ ಪ್ರಮುಖ ಗಡಿದೈವ(ಸೀಮಾ)ಗಳಾಗಿವೆ. ಉದಾಹರಣೆಗೆ ದೊಡ್ಡ ಸಂಪಿಗೆ, ಸಣ್ಣ ಸಂಪಿಗೆ, ಕರಡಿ ದೇವರು, ಆನೆ ದೇವರು, ಹುಲಿಯೀರಪ್ಪ, ಮಾರಮ್ಮ, ಕಲ್ಲುಗುಡಿ, ನೀರು ಅಬ್ಬಿ, ಮುನಿಗಳೇ ಸೀಮಾದೈವಗಳಾಗಿದ್ದು ಅದಕ್ಕೆ ಬೇರೆ ಬೇರೆ ಸಮಯಗಳಲ್ಲಿ ಬೇರೆ ಬೇರೆ ಹಬ್ಬ ಹರಿದಿನಗಳಲ್ಲಿ ಆಚರಿಸಲಾಗುತ್ತದೆ. ಇವರ ಪುರಾಣ ವೀರರು ಮತ್ತು ಸಮುದಾಯಕ್ಕಾಗಿ ದುಡಿದವರ ಆತ್ಮಗಳೇ ದೈವಗಳನ್ನಾಗಿ ಇವರು ಪೂಜಿಸುತ್ತಾರೆ, ಆರಾಧಿಸುತ್ತಾರೆ. ಕಾರಯ್ಯ, ಬಿಲ್ಲಯ್ಯ, ಜಡೆಸ್ವಾಮಿ, ಕೆತ್ತಯ್ಯ, ಮಂಟೇಸ್ವಾಮಿ, ಮಾದೇಶ್ವರ, ಬಿಳಿಗಿರಿರಂಗ, ನಿಲಯ್ಯ, ಸಂಕಮ್ಮಗಳೇ ಇವರ ಎಲ್ಲೆಗಳ ದೈವಗಳಾಗಿವೆ.

ಸೋಲಿಗರು ವಾಸಿಸುವ ನೆಲೆಗಳನ್ನು 'ಪೋಡು' ಎಂದು ಕರೆಯಲಾಗುತ್ತದೆ. ಪೋಡು ಎಂದರೆ 'ಕುಂಬರಿ' ಎಂದರ್ಥ. ಈ ಹೆಸರೇ ಸೂಚಿಸುವ ಹಾಗೆ ಸೋಲಿಗರು ತಮ್ಮ ಆದಿವಾಸಿಯ ಆದಿಮ ಸ್ಥಿತಿಯಲ್ಲಿ ಆಹಾರಸಂಗ್ರಹಣೆ ಮತ್ತು ಬೇಟೆಯನ್ನು ನಂಬಿದ್ದರು. ನಂತರ ತಮ್ಮ ವಲಸಿಗ ಪ್ರವೃತ್ತಿಯ ನಡವಳಿಕೆಗಳ ಒಳಗೇ ಆದಿಮ ಸಾಂಪ್ರದಾಯಿಕ ಕೃಷಿ ಕುಂಬರಿ ಬೇಸಾಯವನ್ನು ಆ ಪ್ರದೇಶದ ಜೇನುಕುರುಬ ಮತ್ತು ಬೆಟ್ಟಕುರುಬರಿಗಿಂತಲೂ ಮೊದಲು ರೂಪಿಸಿಕೊಂಡಿರಬಹುದು. ಹಾಗಾಗಿ ಕುಂಬರಿ ಬೇಸಾಯ ಮಾಡುವ ಹಾಡಿಗಳನ್ನು 'ಪೋಡು' ಎಂದೇ ಕರೆದಿರಲೂಬಹುದು. ಉತ್ತರ ಕನ್ನಡ ಜಿಲ್ಲೆಯಲ್ಲಿ ಇದೇ ತರಹ ಎಷ್ಟೋ

ಹಳ್ಳಿಗಳಿಗೆ 'ಕುಂಬರಿ' ಎಂಬ ಹೆಸರನ್ನಿಡಲಾಗಿದೆ. ಅಷ್ಟೇ ಅಲ್ಲ, ಒಂದು ಸಮುದಾಯಕ್ಕೆ 'ಕುಂಬ್ರಿಮರಾಶಿ' ಎಂಬ ಹೆಸರನ್ನೇ ಇಟ್ಟುಕೊಂಡಿರುವುದನ್ನು ನಾವು ಗಮನಿಸಬಹುದಾಗಿದೆ.

**ಸೀಮಾವಿಂಗಡಣೆಯನ್ನು ಪ್ರತಿಬಿಂಬಿಸುವ ಸೋಲಿಗರಲ್ಲಿನ ಕುಲಗಳು**

ಈಗಾಗಲೇ ಪ್ರಸ್ತಾಪಿಸಿಸಿರುವ ಹಾಗೆ ಸೋಲಿಗರಲ್ಲಿನ ಕುಲಗಳ ವಿಂಗಡಣೆಯೇ ಅವರ ಸಮುದಾಯದಲ್ಲಿನ ಎಲ್ಲೆ(ಸೀಮಾ) ವಿಂಗಡಣೆಯಾಗಿದೆ. ವ್ಯಕ್ತಿಗಿಂತ ಅವರ ಸಮುದಾಯದಲ್ಲಿ 'ಕುಲ' ಮುಖ್ಯವೆಂಬುಧನ್ನು ಅವರ ಪುರಾಣ ಕತೆಗಳೇ ಹೇಳುತ್ತವೆ. ಆದ್ದರಿಂದ ಸೋಲಿಗರಲ್ಲಿ ಕುಟುಂಬಕ್ಕೆ ಹೆದರದವರು ಕುಲಕ್ಕೆ ಹೆದರುತ್ತಾರೆ. ಆದ್ದರಿಂದ ಇವರು ಏನು ಬೇಕಾದರೂ ಬಿಟ್ಟರು ಕುಲವನ್ನು ಮಾತ್ರ ಬಿಟ್ಟು ಯಾರೂ ಬದುಕುವುದಿಲ್ಲ. "ನೀಲಯ್ಯ ತನ್ನ ಮಡದಿ ಸಂಕಮ್ಮನನ್ನು ಬಿಡಲಾರದೇ ಬಿಟ್ಟು, ಕುಲದವರ ಜೊತೆ ಹೆಜ್ಜೇನು ಬೇಟೆಗೆ ಹೋಗುತ್ತಾನೆ" ಎಂದು ಮಹದೇಶ್ವರ ಕಾವ್ಯದ ಸಂಕಮ್ಮನ ಸಾಲಿನಲ್ಲಿ ವ್ಯಕ್ತವಾಗಿರುವುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಹಾಗಾಗಿ ಸೋಲಿಗರು ತಮ್ಮ ಯಾವುದೇ ಧಾರ್ಮಿಕ ವಿಧಿ ವಿಧಾನ, ವಿಧಿನಿಷೇಧ, ದೈವೋಪಾಸನೆ, ಬೇಟೆ ಯಾವುದೇ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳ ಸಂದರ್ಭಗಳಲ್ಲಿ 'ಕುಲ'ದೈವಕ್ಕೆ ಹೇಳಿಕೆ ಮಾಡದೇ, ಬಹಳ ಮುಖ್ಯವಾಗಿ ಸಮುದಾಯದ 'ಕುಲದ' ಮುಖಂಡರ ಒಪ್ಪಿಗೆ ಪಡೆಯದೇ, ಯಾವುದೇ ನಿರ್ಣಯ ತೆಗೆದುಕೊಳ್ಳುವ ಹಾಗಿಲ್ಲ. ಪರಸ್ಪರ ಒಂದೇ ಕುಲದಲ್ಲಿ ವೈವಾಹಿಕ ಸಂಬಂಧ ನಿಷಿದ್ಧವಾಗಿರುತ್ತದೆ. ಕುಲಗಳನ್ನು ಆಧಾರವಾಗಿಟ್ಟುಕೊಂಡೇ ತಮ್ಮ ಗೌರವ, ಬಂಧುತ್ವ, ನೆಂಟಸ್ತಿಕೆಗಳನ್ನು ಅವರು ಗುರ್ತಿಸಿಕೊಳ್ಳುತ್ತಾರೆ.

ಸೋಲಿಗರಲ್ಲಿ ಕುಲಗಳ ವಿಚಾರದಲ್ಲಿ ಮೂರು ಗುಂಪುಗಳನ್ನಾಗಿ ವಿಂಗಡಣೆ ಮಾಡಲಾಗಿದೆ.

1. ಐದು ಕುಲದವರು: ಹೊಂಗೇಲರಕುಲ, ಆಲರುಕುಲ, ಸೂರೀರು ಕುಲ, ತೆನೇರು ಕುಲ ಮತ್ತು ಬೆಲ್ಲೇರು ಕುಲ
2. ಎರಡು ಕುಲದವರು: ಜೇನು ಕುಲ, ಕುಂಬಳ ಕುಲ
3. ಹದಿನಾಲ್ಕು ಕುಲದವರು: ಸಂಪಿಗೆ ಕುಲ, ಸೆಲಿಕಿರು ಕುಲ, ಬಲೆಯರ ಕುಲ, ಕರಡಿ ಕುಲ, ಆನೆ ದೇವರ ಕುಲ, ಹುಲಿಯೀರಪ್ಪನ ಕುಲ ಮುಂತಾದವು.

1. **ಹೊಂಗೆಲರ ಕುಲ**: ಸಿದ್ದೇಶ್ವರ ಇವರ ಕುಲದೇವತೆ. ಒಮ್ಮೆ ಈ ಗುಂಪಿನ ಸೋಲಿಗರು ಹೊಂಗೆಯ ಮರವನ್ನು ಒಂದು ಬಂಡೆಯ ಹತ್ತಿರ ಕಡಿಯುತ್ತಿದ್ದಾಗ ಈ ದೇವತೆ ಇರುವುದರ ಅರಿವಾಯಿತು. ಅಂದಿನಿಂದ ಹೊಂಗೆಯ ಮರವನ್ನು ಕಡಿಯುವುದನ್ನೂ ಅದನ್ನು ಒಲೆಗೆ ಹಾಕುವುದನ್ನೂ ನಿಲ್ಲಿಸಿದರು.

**2. ಆಲೂರು ಕುಲ:** ಇವರ ಕುಲದೇವತೆ ಮಹದೇಶ್ವರ. ಹಾಗೆಯೇ ಬಿಳಿಗಿರಿರಂಗನ ಬೆಟ್ಟದ ಹತ್ತಿರ ಇರುವ ಕನ್ನೇರ ಕಾಲೋನಿ ಹತ್ತಿರದಲ್ಲಿರುವ ಕ್ಯಾತೇದೇವರೂ ಈ ಕುಲದ ದೇವತೆಯಾಗಿದೆ.

**3. ಬೆಲ್ಲದ ಕುಲ:** ಇದನ್ನು ಬೆಳ್ಳಿಕುಲ ಎಂದೂ ಕರೆಯುತ್ತಾರೆ. ಪಂದೇಶ್ವರ ಎಂಬ ದೇವರ ಬೆಟ್ಟದಲ್ಲಿ ನೆಲೆಸಿರುವ ದೇವತೆ ಇವರ ಕುಲದೇವತೆ. ಈ ದೇವರ ಬೆಟ್ಟವು ಕೊಯಂಬತ್ತೂರು ಜಿಲ್ಲೆಯ ಭನಲಿ ತಾಲ್ಲೂಕಿನಲ್ಲಿದೆ. ಪಂದೇಶ್ವರ ದೇವತೆಗೆ ಸೋಲಿಗರನ್ನು ಅವರ ಕುಲದ ಬಗೆಗೆ ವಿಚಾರಿಸುತ್ತಿದ್ದಾಗ ನಾಡಿನ ಆಚಾರಿಗಳು ಚಿನ್ನಬೆಳ್ಳಿ ಕೆಲಸದಲ್ಲಿ ತೊಡಗಿದ್ದರು. ಆದುದರಿಂದ ಇವರಿಗೆ "ಬೆಳ್ಳಿಕುಲ" ಎಂದು ಹೆಸರಾಯಿತು.

**4. ಸೂರ್ಯನ ಕುಲ:** ಇವರ ಕುಲದೇವತೆ 'ಬರಮ ಸ್ವಾಮಿ'. ಈ ದೇವತೆಯ ದೇವಸ್ಥಾನ ಕೊಳ್ಳೇಗಾಲ ತಾಲ್ಲೂಕಿನ ಮಾತಳ್ಳಿಯಲ್ಲಿ ಇದೆ. ಈ ಸುತ್ತಿನ ಜನರು ಕೈಯಲ್ಲಿ ಚೂರಿ ಹಿಡಿದಿದ್ದರಿಂದ (ಸೋಲಿಗರು) ಆ ಹೆಸರು ಬಂತು ಎಂಬ ನಂಬಿಕೆ ಇದ್ದರೆ, ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತ ಈ ಕುಲದೇವತೆ ಸೂರ್ಯ ಎಂದೆ.

**5. ತೆನೇರು ಕುಲ:** ಮಹದೇಶ್ವರ ಇವರ ಕುಲದೇವತೆ. ಮಹದೇಶ್ವರರು ಕೆಲವು ಸೋಲಿಗರ ಕುಲದ ವಿಷಯ ವಿಚಾರಿಸುತ್ತಿದ್ದಾಗ ಅವರು ರಾಗಿಯತೆನೆಯ ಹೊರೆಯನ್ನು ತಲೆಯಮೇಲೆ ಹೊತ್ತಿದ್ದರು. ಆದುದರಿಂದ ಇವರಿಗೆ ತೆನೆಯವರ ಕುಲ ಎಂದು ಹೆಸರಾಯಿತು.

ಇದೇ ರೀತಿಯಲ್ಲಿಯೇ ಏಳುಕುಲದವರು, ಹದಿನಾಲ್ಕು ಕುಲದವರು ತಾವು ನಿರ್ದಿಷ್ಟ ಕುಲಕ್ಕೆ ಸೇರಿದುದರ ಹಿನ್ನೆಲೆಯ ಐತಿಹ್ಯವನ್ನು ಕುಲಕತೆಯಾಗಿ ಗುರುತಿಸಿಕೊಳ್ಳುತ್ತಾರೆ. ಈ 'ಕುಲ' ಪದ್ಧತಿಯು ಅವರಲ್ಲಿ ಸಂಬಂಧವನ್ನು ಬೆಳೆಸುವ ಸಂದರ್ಭದಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಒಂದು ಕುಲದಿಂದ ಇನ್ನೊಂದು ಕುಲಕ್ಕೆ ಹೆಣ್ಣನ್ನು ತಂದುಕೊಳ್ಳುವುದು ಸರ್ವೇ ಸಾಮಾನ್ಯ. ಆದರೆ ಒಂದು ಕುಲದೊಳಗೇ ಸಂಬಂಧ ಬೆಳೆಸುವುದು ನಿಷಿದ್ಧವಾದುದು.

ಸೋಲಿಗರಲ್ಲಿ 'ಕುಲ' ವಿಂಗಡಣೆಯೇ ಅಲ್ಲದೆ ಅವರಲ್ಲಿ ಕೆಲವು ಒಳಗುಂಪುಗಳಿವೆ. ಈ ಒಳಗುಂಪುಗಳು ಅವರು ಭೌಗೋಳಿಕವಾಗಿ ಹಂಚಿಕೊಂಡಿರುವಿಕೆಯನ್ನು ಆಧಾರವಾಗಿ ವಿಂಗಡಿತವಾಗಿರುವುದನ್ನು ಗುರುತಿಸಬಹುದು.

**1. ಉರುಳಿ ಸೋಲಿಗರು:** ಈ ಗುಂಪಿನ ಜನರು ಚಾಮರಾಜನಗರ, ಸತ್ಯಮಂಗಲ ಮುಂತಾದ ಕಡೆಗಳಲ್ಲಿನ ಸಮೀಪದ ಕಾಡುಗಳಲ್ಲಿ ಕಂಡುಬರುತ್ತಾರೆ.

**2. ಕಾಡು ಸೋಲಿಗರು:** ಕಾಡಿನಲ್ಲಿ ಹೆಚ್ಚಾಗಿ ಇವರು ವಾಸಿಸುವುದು ಕಂಡುಬರುತ್ತದೆ. ಇವರು ಬಿಳಿಗಿರಿರಂಗನ ಬೆಟ್ಟ, ಮಹದೇಶ್ವರ ಬೆಟ್ಟದ ಸುತ್ತಮುತ್ತಿನ ಕಾಡುಗಳಲ್ಲಿ ಕಂಡು ಬರುತ್ತಾರೆ.

**3. ಮಲೆ ಸೋಲಿಗರು:** ಈ ಗುಂಪಿನ ಜನರು ಬಿಳಿಗಿರಿರಂಗನ ಬೆಟ್ಟ, ಮಲೆಯ ಮಹದೇಶ್ವರ ಬೆಟ್ಟದ ಸುತ್ತಮುತ್ತ ಹೆಚ್ಚಾಗಿ ಕಂಡುಬರುತ್ತಾರೆ.

**4. ಊರುಬತ್ತಿ ಸೋಲಿಗರು:** ಇವರು ಹೆಚ್ಚಾಗಿ ಕಾಕನಕೋಟೆ ಕಾಡುಗಳಲ್ಲಿ ಕಂಡುಬರುತ್ತಾರೆ.

**5. ಬುರುಡೆ ಸೋಲಿಗರು:** ಇವರು ಕೊಳ್ಳೇಗಾಲ ತಾಲ್ಲೂಕಿನ ಸುತ್ತಮುತ್ತ, ಹೆಗ್ಗಡದೇವಕೋಟೆಯ ಸುತ್ತಮುತ್ತ ಕಂಡುಬರುತ್ತಾರೆ.

ಸೋಲಿಗರ ಈ ಬಗೆಯ ವಿಂಗಡಣೆ ಎಷ್ಟಿದೆ ಎಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಹೆಗ್ಗಡದೇವನ ಕೋಟೆಯ ಸುತ್ತಮುತ್ತ "ದೇವರ ಸೋಲಿಗ" ಎಂಬ ಸೋಲಿಗರು ಕಂಡುಬರುತ್ತಾರೆ.[13]

## 'ಸೋಲಿಗ' ಹೆಸರಿನ ವೈಶಿಷ್ಟ್ಯ

'ಸೋಲಿಗ'ರಿಗೆ ಸೋಲಿಗ ಎಂಬ ಹೆಸರು ಹೇಗೆ ಬಂದಿತು ಎಂದು ಹೇಳುವುದು ತುಂಬಾ ಕಷ್ಟದ ಮಾತೇ ಆಗಿದೆ. "ಸೋಲಿಗರು" ಎಂದು ನಿಮ್ಮನ್ನು ಏಕೆ ಕರೆಯುತ್ತಾರೆ? ಎಂದು ನಾವು ಸೋಲಿಗರನ್ನೇ ಕೇಳಿದರೂ ಸಮರ್ಥವಾದ ಉತ್ತರ ದೊರೆಯುವುದಿಲ್ಲ. ಈ ಪದಕ್ಕೆ ಸೋಲಿಗರಲ್ಲಿ ಕೆಲವು ಕಾರ್ಯ ಕಾರಣ ಸಂಬಂಧವುಳ್ಳ ಐತಿಹ್ಯಗಳೂ ತಮ್ಮದೇ ಆದ ವ್ಯಾಖ್ಯಾನಗಳನ್ನು ಮಾಡುತ್ತಾರೆ. ಆದರೆ ಈ ಐತಿಹ್ಯಗಳು ನಿಜಸಂಗತಿಗಳೆಂದು ನಂಬಲು ನಮಗೆ ಯಾವುದೇ ಆಧಾರ ಇಲ್ಲದಿರುವುದರಿಂದ ಕೇವಲ ಕಲ್ಪನೆಗಳಾಗಿಯೇ ಉಳಿದುಬಿಡುತ್ತವೆ.

'ಸೋಲಿಗ' ಎಂಬ ಹೆಸರು ಅವರಿಗೆ ಬಂದದ್ದಕ್ಕೆ ಅವರಲ್ಲಿ ಒಬ್ಬ ವ್ಯಕ್ತಿ ನೀಡಿದ ಕಾರ್ಯ ಕಾರಣ ಐತಿಹ್ಯ ಒಂದು ಈ ರೀತಿ ಇದೆ: ಒಮ್ಮೆ ಪಾರ್ವತಿ ಪರಮೇಶ್ವರರು ತಮ್ಮ ಬೆವರಿನಿಂದ ಎರಡು ಗೊಂಬೆಗಳನ್ನು ಮಾಡಿ ಅವಕ್ಕೆ ಜೀವ ತುಂಬಿದರು. ಒಂದು ನೀಲಯ್ಯನಾಯಿತು, ಇನ್ನೊಂದು ಸಂಕಮ್ಮನಾಯಿತು. ಮುಂದೆ ವಂಶ ಇವರಿಂದ ಬೆಳೆಯಿತು. ಈ ಮಕ್ಕಳು ಸೋಲನ ಹಂಬಿನ ಗೆಡ್ಡೆಯನ್ನು ತಿಂದು ಜೀವಿಸುತ್ತಿದ್ದರು. ಹೀಗೆಯೇ ಅವರು ಗೆಡ್ಡೆಯನ್ನು ಕಿತ್ತು ಬೇಯಿಸುತ್ತಾ ತಿನ್ನುತ್ತಲೇ ಮುಪ್ಪಾದರು. ಆದರೆ ಸೋಲನ ಹಂಬು ಮಾತ್ರ ಮತ್ತೆ ಚಿಗುರಿ, ಹೊಸ ಹೊಸ ಗೆಡ್ಡೆ ಬಿಟ್ಟಿತು. ಈ ಮುದುಕ ಗೆಡ್ಡೆ ಕೀಳಲು ಬಂದಾಗ ಆ ಸೋಲನ ಹಂಬು "ನಿನ್ನ ಕೈಯಿಂದ ನನ್ನ ಗೆಡ್ಡೆಯನ್ನು ನೀನು ಸಾಯೋವರೆಗೂ ಕಿತ್ತರೂ ನನ್ನ ಸೋಲಿಸಕ್ಕೆ ಆಗಲ್ಲ ಆದ್ದರಿಂದ ನನ್ನ ಗೆಡ್ಡೆ ಕಿತ್ತು ಸೋತವನು ನೀನು ಸೋಲಿಗ" ಎಂದು ಹೇಳಿತು.

ಅಂದಿನಿಂದ ಸೋಲಿಗರಿಗೆ, ಸೋಲಿಗರು ಎಂಬ ಹೆಸರು ಬಂದಿತು. ಇದೊಂದು ವಿವರಣಾತ್ಮಕ ಐತಿಹ್ಯ ಎಂಬಷ್ಟು ಬೆಲೆಯನ್ನು ಮಾತ್ರ ನೀಡಬಹುದೇ ಹೊರತು 'ಸೋಲಿಗ'

ಎಂಬ ಪದ ಎಲ್ಲಿಂದ ಬಂತು ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಮರಗಿಡಗಳೂ ಮಾತಾಡುತ್ತವೆ ಎಂಬುಧು ಒಂದು ಕಲ್ಪನೆಯ ಸಂಗತಿಯೇ ಹೊರತು ವಾಸ್ತವಾಂಶಗಳು ಅದರಲ್ಲಿ ಇಲ್ಲ. ಆದರೆ ಈ ಪದದೊಳಗೆ ಇರುವ "ಸೋಲು" ಎಂಬ ಪದವನ್ನು ಗಮನಿಸದೆ ಇರುವಂತಿಲ್ಲ. ಹಾಗೆಯೇ ಸೋಲಿಗರು ಹೊಟ್ಟೆಗಿಲ್ಲದೆ ಇದ್ದಾಗ ಸೋಲನ ಗೆಣಸು ತಿಂದರು ಎಂಬುಧು ಕಲ್ಪನೆಯ ಮಾತು ಆಗಿರಲಾರದು. ಏಕೆಂದರೆ ಅವರ ಹಾಡುಗಳಲ್ಲಿ ಈ ಸೋಲನ ಗೆಣಸಿನ ಹೆಸರು ಸೂಚಿತವಾಗುತ್ತದೆ.

"ಆರನೆಯ ಕೋಲು ನೂರೆಯ ಗೆಣಸು
ಕಾಯಂಬು ಗೆಣಸು ಕಲಂಬುತ್ತಾರೆ
ಸೋತುಹೋಗಾದು ಸೊಲನ ಗೆಣಸು"

ಆದರೆ ಸೋಲನ ಗೆಣಸು ತಿನ್ನುತ್ತಿದ್ದರಿಂದ ಸೋಲಿಗರಿಗೆ ಆ ಹೆಸರು ಬಂತು ಎಂದು ಹೇಳಲು ಬರುವುದಿಲ್ಲ. "ಸೋಲಿಗ" ಎಂಬ ಹೆಸರು ಅವರಿಗೆ ಹೇಗೆ ಬಂತು? ಏಕೆ ಬಂತು ಎಂದು ಹೇಳುವ ಇನ್ನೊಂದು ವಿವರಣಾತ್ಮಕ ಕಥೆ ಈ ರೀತಿ ಇದೆ:

"ಪಾರ್ವತಿ ಪರಮೇಶ್ವರರಿಂದ ನೀಲಯ್ಯ ಮತ್ತು ನಿಜಗೆಂಪೆಯರ ಜನನವಾಗಿ ಮಹದೇಶ್ವರರ ದಯದಿಂದ ಕಾರಯ್ಯ ಬಿಲ್ಲಯ್ಯರು ಹುಟ್ಟಿದರು. ಅವರ ಕಾಲ ಮುಗಿದು ಅವರಿಂದ ವಂಶಾಭಿವೃದ್ಧಿಯಾದ ಮೇಲೆ ಈ ಗುಂಪಿನ ಜನರಿಗೆಲ್ಲಾ ಒಬ್ಬ ರಾಜನಿದ್ದ. ಅವನು ಒಮ್ಮೆ ಶತ್ರುರಾಜರ ವಿರುದ್ಧ ಯುದ್ಧ ಮಾಡಬೇಕಾಗಿ ಬಂದು ಪರಾಜಿತನಾಗಿ ಜೀವರಕ್ಷಣೆಗಾಗಿ ತನ್ನ ಪರಿವಾರದೊಡನೆ ಕಾಡಿಗೆ ಓಡಿಹೋದ. ಅವನು ಯುದ್ಧದಲ್ಲಿ ಸೋತದ್ದರಿಂದ "ಸೋಲುರಾಜ" ಎಂಬ ಹೆಸರಾಯಿತು. ಅವನ ವಂಶಸ್ಥರಿಗೆ ಸೋಲಿಗರು ಎಂದು ಹೆಸರಾಯಿತು..."

ಸೋಲಿಗರು ಮೊದಲು ಒಬ್ಬ ರಾಜನಿದ್ದನೇ ಅಥವಾ ಇಲ್ಲವೇ ಎಂಬುಧನ್ನು ಪರಿಶೀಲಿಸಲು ನಮಗೆ ಯಾವುದೇ ಐತಿಹಾಸಿಕ ಆಧಾರಗಳಿಲ್ಲ. ವಾಚಿಕ ಇತಿಹಾಸಗಳಾದ ಮೇಲಿನ ಆಧಾರಗಳನ್ನು ಸಂಪೂರ್ಣ ನಿಜವಾದುದು ಎಂದು ನಂಬುವಂತೆಯೂ ಇಲ್ಲ. ಹೀಗಾಗಿ ಇವರ ಹೆಸರಿಗೆ ಮೂಲದ ಹುಡುಕಾಟ ತುಂಬಾ ತೊಡಕಿನದಾಗಿದೆ. ಸೋಲಿಗರು ಕಾಡಿನಲ್ಲಿ ಇದ್ದವರು. ಅವರ ಪುರಾಣಗಳು ಕಾಡಿನಿಂದ ಆರಂಭವಾಗಿ ಕಾಡಿನಲ್ಲಿಯೇ ಮುಗಿಯುತ್ತವೆ. ಅವರು ನಾಡಿನಲ್ಲಿ ಇದ್ದರು ಎಂಬುಧಕ್ಕೆ ಯಾವುದೇ ಲಿಖಿತ ಆಧಾರಗಳಿಲ್ಲ. ಸೋಲಿಗರು ತಮ್ಮ ಗಂಡುಮಕ್ಕಳಿಗೆ ಇಡುವ ಹೆಸರುಗಳು "ಗೌಡ" ಎಂಬುಧರಿಂದ ಮುಕ್ತಾಯವಾಗುತ್ತದೆ. ಈ "ಗೌಡ ಎಂಬ ಪದದ ಹಳೆಯ ಮೂಲರೂಪ "ಗ್ರಾಮವೃದ್ಧ" ಎಂದಿದ್ದು ಅನಂತರದಲ್ಲಿ ಗಾವುಂಡ ಎಂದಾಗಿ ಗೌಡ ಆಗಿದೆ ಎಂಬುಧು ಈಗಾಗಲೇ ಭಾಷಾಶಾಸ್ತ್ರದಿಂದ ಸಾಧಿತವಾಗಿರುವ ವಿಷಯ. ಈ

ನಿಟ್ಟಿನಿಂದ ನಾವು ಆಲೋಚಿಸುವುದಾದರೆ ಸೋಲಿಗರು "ಗೌಡ" ಎಂಬ ಹೆಸರನ್ನು ಇಟ್ಟುಕೊಳ್ಳಬೇಕಾದರೆ ಅವರು ತುಂಬಾ ಹಿಂದೆ "ಗ್ರಾಮ"ಗಳಲ್ಲಿ ವಾಸವಾಗಿದ್ದವರಾಗಿರಬೇಕು. ಈ ಸಂದರ್ಭದಲ್ಲಿ ಈ ಜನರಿಗೂ ಬೇರೆಯ ಗುಂಪಿಗೂ ಘರ್ಷಣೆಗೂ ನಡೆದು ಜೀವರಕ್ಷಣೆಯ ಸಲುವಾಗಿ ಕಾಡಿಗೆ ಓಡಿಹೋಗಿರಲೂ ಸಾಧ್ಯ. ಹೀಗೆ ಸೋತವರನ್ನು "ಸೋಲಿಗರು" ಎಂದು ಕರೆದಿರಲೂ ಸಾಧ್ಯ.

ಸೋಲಿಗರು ಬೇರೆಯ ಗುಂಪಿನೊಡನೆ ಹೋರಾಡಿ ಸೋತದ್ದು ಹಾಗಿರಲಿ, ಅವರ ಜೀವನ ನಿರ್ವಹಣೆಯಲ್ಲಿಯೂ ದಿನನಿತ್ಯ ಸೋಲುತ್ತಲೇ ಬಂದಿದ್ದಾರೆ. ಅವರು ದಿನದಿನಕ್ಕೆ ಆರ್ಥಿಕವಾಗಿಯೂ ಕಡುಬಡವರಾಗುತ್ತಿದ್ದಾರೆ ಎಂಬುಧನ್ನು ಈ ಮಾತು ಹೇಳುತ್ತದೆ. ಇದೇ ಅಭಿಪ್ರಾಯವನ್ನು ಅವರ ಒಂದೆರಡು ಗಾದೆಗಳು ಹೇಳುತ್ತವೆ.

"ಸೋಲಿಗರ ಬಾಳು ಸೋತು ಹೋತು" ಎಂಬ ಈ ಮೇಲಿನ ಗಾದೆ ಅವರು ಆರ್ಥಿಕವಾಗಿ ದಿನದಿನಕ್ಕೆ ಕ್ಷೀಣಿಸುತ್ತಿದ್ದಾರೆ ಎಂಬುಧನ್ನು ವ್ಯಕ್ತಪಡಿಸುತ್ತದೆ.

ವಿದ್ವಾಂಸರೊಬ್ಬರ ಪ್ರಕಾರ ಸೋಲಿಗರಲ್ಲಿ 'ಲ' ಕಾರದ ಸ್ಪಷ್ಟ ಉಚ್ಚಾರಣೆ ಇಲ್ಲದುದರಿಂದ 'ಇಲು' ಎಂಬುದು 'ಇವು' ಆಗಿ ಉಚ್ಚಾರಣೆ ಪಡೆದು "ಸೋಯಿ" ಎಂಬುಧು ಈ ಉಚ್ಚಾರಣೆಯಾಗಿದ್ದು ಅದರ ನಿಜವಾದ ರೂಪವು "ಸ್ವಾಮಿ" ಎಂದಾಗಿದ್ದು ಮಹದೇಶ್ವರ ಸ್ವಾಮಿಯ ಭಕ್ತರಾದುದರಿಂದ ಇವರನ್ನು ಮೊದಲು "ಸ್ವಾಮಿಗ" ಎಂದು ಕರೆಯುತ್ತಿದ್ದರು ಆ ನಂತರದಲ್ಲಿ "ಸೋಯಿಗ" ಎಂದಾಗಿದ್ದು ಮುಂದೆ ಜನಬಳಕೆಯಲ್ಲಿ "ಸೋಲಿಗ" ಎಂದಾಗಿರಬಹುದು ಎಂಬ ಇವರ ವಿವರಣೆ ಹೆಚ್ಚು ಸಮರ್ಥನೀಯ ಎನ್ನಿಸದಿದ್ದರೂ ಸ್ವಾರಸ್ಯವಾದುದಾಗಿದೆ.

ಸೋಲಿಗ ಪದದ ನಿಷ್ಪತ್ತಿಯ ಬಗೆಗೆ ಬರೆಯುತ್ತಾ ಲುಜಿ(Luzi) ತಮ್ಮ "ಟ್ರೈಬ್ಸ್ ಆಫ್ ಮೈಸೂರು" ಗ್ರಂಥದಲ್ಲಿ "The name(Sholaga) is the corruption of the Tamil word Colai or Social(thicket) and has reference to the dense thickets amidst which they live" ಎಂದು ಹೇಳಿದ್ದಾರೆ.[14] ಇವರ ಅಭಿಪ್ರಾಯಗಳನ್ನು ಕುರಿತು ಚರ್ಚಿಸುತ್ತ ಎಸ್.ಜಿ. ಮೊರೆಬ್ ತಮಿಳುನಾಡಿನಲ್ಲಿಯ ಎಲ್ಲೆಯಲ್ಲಿಯೂ ಇವರು ವಾಸಿಸುತ್ತಾರೆ. ಇದೇ ಭೌಗೋಳಿಕ ಆವರಣದೊಳಗೆ ಬೇರೆಯ ಬುಡಕಟ್ಟಿನ ಜನರಾದ ಉರಳಿಗರು, ಇರುಳಿಗರು, ಕುಂಬಾರ ಮುಂತಾದವರು ವಾಸಿಸುತ್ತಾರೆ ಎಂದು ಹೇಳಿದ್ದಾರೆ. ಸೋಲಿಗರ ಭಾಷೆಯ ಮೇಲೆ ತಮಿಳು ಭಾಷೆಯ ಪ್ರಭಾವ ಉಂಟಾಗಿರುವ ಸಾಧ್ಯತೆಗಳು ಇದ್ದುದರಿಂದ ಲುಜಿಯವರ ಅಭಿಪ್ರಾಯವನ್ನು ಸುಲಭವಾಗಿ ತಳ್ಳಿಹಾಕಲು ಬರುವುದಿಲ್ಲ.

## ಸೀಮಾಪದ್ಧತಿಯನ್ನು ಪ್ರತಿಬಿಂಬಿಸುವ ಸೋಲಿಗರ ಹಬ್ಬಗಳು

ಇತರ ಬುಡಕಟ್ಟುಗಳಲ್ಲಿರುವ ಹಬ್ಬಗಳು ಅವರ ಸೀಮಾಪದ್ಧತಿಯನ್ನು ಹೇಗೆ ಪ್ರತಿಬಿಂಬಿಸುತ್ತದೆಯೋ ಅದೇ ರೀತಿಯಲ್ಲಿ ಸೋಲಿಗರಲ್ಲಿಯೂ ಅನೇಕ ಹಬ್ಬ ಹರಿದಿನ, ಜಾತ್ರೆಗಳನ್ನು ಸೋಲಿಗರು ಆಚರಿಸುತ್ತಿದ್ದು, ಆ ಹಬ್ಬಗಳಲ್ಲಿನ ಪ್ರತಿ ಆಚರಣೆಗಳೂ ಅವರೊಳಗಿನ ಸೀಮಾಪದ್ಧತಿಯನ್ನು ಪ್ರತಿಬಿಂಬಿಸುವಂತಹ ಆಚರಣೆಗಳನ್ನು ಗಮನಿಸಬಹುದಾಗಿದೆ.

ಎರೆ ನೋಡುವ ಹಬ್ಬ, ಭೂತಾಯಿ ಪಂಡುಗ, ಮಿಲ್ಪ, ಹೊನ್ನೇರು, ಹೊಸರಾಗಿ ಹಬ್ಬ, ರೊಟ್ಟಿ ಹಬ್ಬ, ಮುನಿಮಾಡುವುದು, ದನದ ಹಬ್ಬ, ಕೀಳು ನಾಟಿ ದನಗಳ ಜಾತ್ರೆಗಳು ಸೀಮಾಪದ್ಧತಿಯ ಅಂಗ ಪದ್ಧತಿಯಾದ ಕುಂಬರಿಬೇಸಾಯ ಕೃಷಿಯ ವ್ಯವಸಾಯದ ಸಂಬಂಧಪಟ್ಟ ಹಬ್ಬಗಳಾಗಿವೆ. ಸಂಕಮ್ಮನ ಹಬ್ಬ, ಕಾರಯ್ಯ, ಬಿಲ್ಲಯ್ಯ, ಮಾರಮ್ಮ, ಕೆತ್ತಯ್ಯ, ನೀಲಯ್ಯ, ಸಂಕಮ್ಮ, ಜಡೇಸ್ವಾಮಿ, ಮಂಟೇಸ್ವಾಮಿ, ಮಾದೇಶ್ವರರ ಹಬ್ಬಗಳು ತಮಗಾಗಿ ಹೋರಾಡಿದ ಪೂರ್ವಿಕರ ಆತ್ಮಗಳನ್ನು ಸ್ಮರಿಸುವ ಹಬ್ಬಗಳಾಗಿವೆ. ಉಳಿದಂತೆ ಕರುವಾಡು ಮತ್ತು ಪಾಡಿ ಹಬ್ಬಗಳು ತಮ್ಮ ಬೇಟೆಯ ದೈವಗಳನ್ನು ನೆನೆದು ಆಚರಿಸುವ ಹಬ್ಬಗಳಂತೆ, ಮಲೆಮಹದೇಶ್ವರ ಜಾತ್ರೆ, ಬಿಳಿಗಿರಿ ರಂಗಸ್ವಾಮಿ ಜಾತ್ರೆಗಳು ತಮ್ಮ ಸಂಸ್ಕೃತಿಯ ಮೇಲೆ ಧಾರ್ಮಿಕವಾಗಿ ಹೇರಲ್ಪಟ್ಟ ಸಾಂಸ್ಕೃತಿಕ ಸ್ಥಿತ್ಯಂತರವನ್ನು ಸಾರಿ ಹೇಳುವ ದ್ಯೋತಕವಾದ ಹಬ್ಬಗಳಾಗಿರುವುದನ್ನು ಸೋಲಿಗರಲ್ಲಿ ಕಾಣಬಹುದಾಗಿದೆ.

## ಪುರಾಣ ಸಂಬಂಧವುಳ್ಳ ಹಬ್ಬಗಳು

ಕೆಲವು ಪೌರಾಣಿಕ ಅಥವಾ ಚಾರಿತ್ರಿಕ ಹಿನ್ನೆಲೆಯಿಂದ ರೂಪಿತಗೊಂಡಂತಹ ಈ ಹಬ್ಬಗಳು ಸೋಲಿಗರಲ್ಲಿ ಕಡಿಮೆ ಎಂದೇ ಹೇಳಬೇಕು. ಹಾಗೆಯೇ ಈ ಹಬ್ಬಗಳು ಅವರಿಗೆ ಅಷ್ಟೇನೂ ಮಹತ್ವದ ಹಬ್ಬಗಳಾಗಿ ಕಾಣಿಸುವುದಿಲ್ಲ. ದೀಪಾವಳಿಯನ್ನು ಅವರು ಆಚರಿಸಿದರೂ ಅದು ನಾಡಿನ ಜನರ ಪ್ರಭಾವಕ್ಕೆ ಒಳಗಾಗಿ ಬೆಳೆದು ಬಂದಿರುವಂತಹದು. ಇದಕ್ಕೆ ಒಂದು ನಿದರ್ಶನ ಹೇಳಬಹುದಾದರೆ, ಎಷ್ಟೋ ಜನ ಸೋಲಿಗರು ಗೌರಿ, ಯುಗಾದಿ, ದೀಪಾವಳಿ, ಸಂಕ್ರಾಂತಿ ಮುಂತಾದ ಹಬ್ಬಗಳನ್ನು ಆಚರಿಸುವುದಿಲ್ಲ. ಆದರೆ ಈ ಹಬ್ಬಗಳ ಸಂದರ್ಭದಲ್ಲಿಯೇ ಅವರವೇ ಆದ ಕೆಲವು ಹಬ್ಬಗಳು ಆಚರಿಸಲ್ಪಡುತ್ತವೆ. ಯುಗಾದಿಯ ಸಂದರ್ಭದಲ್ಲಿ ಸ್ನಾನದ ನಂತರ ಮನೆಯಲ್ಲಿ ಎಲ್ಲರೂ ಬೇವು ಬೆಲ್ಲ ತಿನ್ನುತ್ತಾರೆ. ಅದರ ಮರುದಿನ ಸಂಜೆ ಚಂದ್ರನನ್ನು ನೋಡಿ ಆ ವರ್ಷದ ಮಳೆ-ಬೆಳೆಯನ್ನು ನಿರ್ಧರಿಸುತ್ತಾರೆ. ಇದನ್ನು "ಎರೆ ನೋಡುವುದು" ಎಂದು ಅವರು ಕರೆಯುತ್ತಾರೆ.

ಮೇಲಿನ ಈ ಹಬ್ಬಗಳ ಸಂದರ್ಭದಲ್ಲಿ ಸೋಲಿಗರು ಸ್ನಾನ ಮಾಡಿ ಮಡಿಬಟ್ಟೆಗಳನ್ನು ತೊಡುತ್ತಾರೆ. ಸ್ತ್ರೀಯರು ಅನ್ನ, ಸಾರು ಜೊತೆಗೆ ಕಜ್ಜಾಯದಂತಹ ಸಿಹಿತಿಂಡಿಯನ್ನು

ತಯಾರಿಸುತ್ತಾರೆ. ಅನಂತರ ದೇವರಿಗೆ ಪೂಜೆ ಸಲ್ಲಿಸಿ ಎಲ್ಲರೂ ಒಟ್ಟಾಗಿ ಊಟ ಮಾಡುತ್ತಾರೆ. ಗೌರಿಹಬ್ಬದ ಸಮಯದಲ್ಲಿ ಹತ್ತಿರದ ತಮ್ಮ ಸ್ಥಳದೇವತೆಯ ಗುಡಿಗೋ, ಇಲ್ಲವೇ ಮಹದೇಶ್ವರನ ದೇವಸ್ಥಾನಕ್ಕೋ, ರಂಗನಾಥಸ್ವಾಮಿ ದೇವಸ್ಥಾನಕ್ಕೋ ಹೋಗಿ ಪೂಜೆಯನ್ನು ಸಲ್ಲಿಸಿ ಬರುವರು.

**ಸೋಲಿಗರ ಕೃಷಿ ಸಂಬಂಧ ಹಬ್ಬಗಳು**

ಸೋಲಿಗರ ಬದುಕಿನ ಬೆನ್ನೆಲುಬು ಬೇಸಾಯ. ಅದುದರಿಂದ ಇವರ ಮುಂದಿನ ಬಾಳು ನಿಂತಿರುವುದು ವ್ಯವಸಾಯದ ಮೇಲೆ ಅವಲಂಬಿತವಾಗಿ. ಆದುದರಿಂದ ಇವರ ವ್ಯವಸಾಯ ಸಂಬಂಧವಾದ ಹಬ್ಬಗಳು ಪುರಾತನವಾಗಿ ಬಂದವು. ಬಿತ್ತಿದ ಬೆಳೆ ಚೆನ್ನಾಗಿ ಬಂದು ಕೈ ಸೇರಲೆಂದು ಹಬ್ಬ ಆಚರಿಸಿ ದೇವರಿಗೆ ಪೂಜೆ ಸಲ್ಲಿಸುವುದು, ಬೆಳೆ ಹುಲುಸಾಗಿ ಬಂದಾಗ ಅದನ್ನು ಕೊಯ್ಲು ಮಾಡುವ ಸಂದರ್ಭದಲ್ಲಿ ಭೂತಾಯಿಗೆ ಪೂಜೆ ಸಲ್ಲಿಸುವುದು ಬೆಳೆ ಕೈಸೇರಿದ ನಂತರವೂ 'ಸೋಲಿಗ'ರು ತಾವೊಬ್ಬರೇ ತಿಂದು ತೇಗಲಾರರು. ಅವರಿಗೆ ಆ ವರ್ಷದಲ್ಲಿ ಎಂತಹ ಕನಿಷ್ಠ ಮಟ್ಟದ ಬೆಳೆಯೇ ಬಂದಿರಲಿ ಅದನ್ನು ಮೊದಲ ದಿನ ಎಲ್ಲರಿಗೂ ಗುಂಪಿನಲ್ಲಿ ಹಬ್ಬವನ್ನು ಆಚರಿಸುವುದರ ಮೂಲಕ ಅವರ ಹತ್ತಿರದವರ ಜೊತೆಯಲ್ಲಿ ಅದನ್ನು ಹಂಚಿ ಊಟಮಾಡುವುದು ಅವರಲ್ಲಿ ಬೆಳೆದುಬಂದಿರುವ ಒಂದು ಉದಾರ ಗುಣ. ಈ ಸಂದರ್ಭದಲ್ಲಿ ಅವರ ಬೆಳೆಗೆ ಕಾರಣವಾದ ಭೂತಾಯಿಯ ಬಗೆಗೆ ಇರುವ ಭಕ್ತಿಯನ್ನು ಈ ಮೂಲಕ ಪ್ರಕಟಿಸುತ್ತಾರೆ. ಆಂಧ್ರಪ್ರದೇಶದ ಗುಡ್ಡಗಾಡುಗಳಲ್ಲಿ ವಾಸಿಸುವ ಕೊಂಡರೆಡ್ಡಿಗಳೆಂಬ ಬುಡಕಟ್ಟಿನ ಜನರು ಬಿತ್ತಿದ ಬೆಳೆ ಚೆನ್ನಾಗಿ ಬೆಳೆಯಲು "ಭೂತಾಯಿ ಪಂಡುಗ" ಎಂಬ ಹಬ್ಬವನ್ನು ಆಚರಿಸುವರು. ಹಾಗೆಯೇ ಛಾಂಕೋಮ್‌ನ ಮಾಯಾಜನರು ಮೊದಲು ಭೂಮಿಯನ್ನು ಉತ್ತುಬಿತ್ತುವಾಗ "ಮಿಲ್ಪ" ಎಂಬ ಹಬ್ಬವನ್ನು ಆಚರಿಸುವರು. ಇದೇ ಬಗೆಯ ಆಚರಣೆಯೊಂದು ಕರ್ನಾಟಕದ ಜನರಲ್ಲಿಯೂ ರೂಢಿಯಲ್ಲಿದೆ. ಒಂದು ಗ್ರಾಮದಲ್ಲಿ ಮಳೆ ಭೂಮಿಗೆ ಬಿದ್ದ ತಕ್ಷಣ ರೈತರು ಏರು ಹೂಡುವುದಿಲ್ಲ. ಮೊದಲು ಏರಿಗೆ ಪೂಜೆ ಸಲ್ಲಿಸುವುದರ ಮೂಲಕ ಹೂಡುತ್ತಾರೆ. ಇದಕ್ಕೆ "ಹೊನ್ನೇರು ಕಟ್ಟುವರು" ಎಂದು ಕರೆಯುತ್ತಾರೆ. ಈ ಬಗೆಯ ರೂಢಿಯನ್ನು ಯಶೋಧಪುರದಲ್ಲಿನ ಸೋಲಿಗರು ಬೆಳೆಸಿಕೊಂಡಿರುವುದು ಕಾಣುತ್ತದೆ. "ಮುಂಗಾರು ಮಳೆ ಭೂಮಿಗೆ ಬಿದ್ದ ಮೊದಲ ದಿನ ನೇಗಿಲು ನೊಗ ತೆಗೆದುಕೊಂಡು ಬಂದು ಏರು ಹೂಡುತ್ತಾರೆ. ಅದಕ್ಕೆ ಮೊದಲು ಎತ್ತುಗಳ ಕೋಡುಗಳಿಗೆ, ನೇಗಿಲಿಗೆ, ಮೇಣಿಗೆ ಅರಿಶಿನದ ನೂಲನ್ನು ಶಾಸ್ತ್ರೋಕ್ತವಾಗಿ ಕಟ್ಟುವರು. ಅನಂತರ ಗಂಧಪತ್ರೆಯನ್ನು ಅವಕ್ಕೆ ಧರಿಸಿ, ಕಾಯಿ ಒಡೆದು ಬಾಳೆಹಣ್ಣುಗಳ ತೊಟ್ಟು ಮುರಿದು, ಊದುಗಡ್ಡಿ ಹೊತ್ತಿಸಿ, ಒಂದು ರೀತಿಯ ಪರಿಮಳಭರಿತ ಧೂಪದ ಚಕ್ಕೆಯನ್ನು ಹಾಕಿ ಪೂಜೆ ಮಾಡುವರು. ಹೊಲದಲ್ಲಿಯೇ ಮೂರುಸುತ್ತು ಬಂದು ಏರುಬಿಡುವರು. ಆ ದಿನದಂದು ಮನೆಯಲ್ಲಿ ಯಾವುದೇ ವಿಶೇಷ ಊಟ-ತಿಂಡಿ ಮಾಡುವುದಿಲ್ಲ. ಈ ರೀತಿಯ ಸರಳ ಸಮಾರಂಭದ ಮೂಲಕ "ಹೊನ್ನೇರು ಹೂಡುವ" ಆಚರಣೆ ನೆರವೇರುತ್ತದೆ.

ವ್ಯವಸಾಯಸಂಬಂಧ ಹಬ್ಬಗಳಲ್ಲಿ ಸೋಲಿಗರಿಗೆ ಮುಖ್ಯವಾದ ಹಬ್ಬಗಳೆಂದರೆ

1. ಹೊಸರಾಗಿ ಹಬ್ಬ
2. ರೊಟ್ಟಿ ಹಬ್ಬ
3. ಮುನಿ ಮಾಡುವುದು

**1. ಹೊಸರಾಗಿ ಹಬ್ಬ:** ಈ ಹಬ್ಬವನ್ನು ಸೋಲಿಗರು ಸಾಮಾನ್ಯವಾಗಿ ಡಿಸೆಂಬರ್ ಅಥವಾ ಜನವರಿ ತಿಂಗಳ ಗಡುವಿನಲ್ಲಿ ಮಾಡುವರು. ಈ ಹಬ್ಬವನ್ನು ವರ್ಷದಲ್ಲಿ ನಿರ್ದಿಷ್ಟ ದಿನವೇ ಮಾಡಬೇಕೆಂಬ ಯಾವ ನಿಯಮವೂ ಇರುವುದಿಲ್ಲ. ಈ ಹಬ್ಬ ಒಂದು ಕುಟುಂಬದ ತೀರ್ಮಾನದ ಮೇಲೆ ನಡೆಯುವಂತಹದು. ಹಬ್ಬದ ದಿನದಂದು ಮನೆಯಲ್ಲಿ ಹಿರಿಯರು ಉಪವಾಸವಿರುತ್ತಾರೆ. ಆ ದಿನ ಮನೆಯಲ್ಲಿ ಎಲ್ಲರೂ ಸ್ನಾನಮಾಡಿ ಮಡಿಬಟ್ಟೆಗಳನ್ನು ಧರಿಸುತ್ತಾರೆ. ಸ್ತ್ರೀಯರು ತಮ್ಮ ಗುಡಿಸಿಲನ್ನು ಸಾರಿಸಿ ಸಂಜೆಯಲ್ಲಿ ಅಡಿಗೆಗೆ ಆರಂಭಿಸುತ್ತಾರೆ. ಈ ಮೊದಲೇ ತಿಳಿಸಿದಂತೆ ಇದು ಹೊಸರಾಗಿಯ ಹಬ್ಬ. ಅದಕ್ಕೆ ಅನ್ವರ್ಥವಾಗಿಯೇ ಆ ದಿನದ ಹಬ್ಬದ ವಿಶೇಷವಾದ ತಿನಿಸು ಹೊಸರಾಗಿಯ 'ಮುದ್ದೆ'. ಅದರ ಜೊತೆಗೆ ಸ್ವಲ್ಪ ಸ್ಥಿತಿವಂತರಾದವರು ಅನ್ನ, ಸಾರು, ಪಲ್ಯದ ಜೊತೆಗೆ ಪಾಯಸವನ್ನು ತಯಾರಿಸುತ್ತಾರೆ. ಸೋಲಿಗರಲ್ಲಿ ಕುಲದಿಂದ ಐದುಜನ ಹಿರಿಯರನ್ನು ಊಟಕ್ಕೆ ಕರೆಯುವ ಪದ್ಧತಿ ಇದೆ. ಆದುದರಿಂದ ತಮಗೆ ಪೋಡಿನಲ್ಲಿ ಬೇಕಾದವರಿಗೆಲ್ಲಾ ಊಟಕ್ಕೆ ಆ ದಿನ ರಾತ್ರಿ ಕರೆದು ಮನೆಯಲ್ಲಿ ಒಂದೆಡೆ ಬಾಳೆ ಎಲೆಯನ್ನು ಹಾಕಿ ಒಂದು ಚೊಂಬಿನಿಂದ ಒಂದು ಕಳಸವನ್ನು ಪೂಜಿಸಿ, ಅದಕ್ಕೆ ಹೂವು ಮುಡಿಸಿ, ಗಂಧ, ನಾಮ ಮುಂತಾದುವನ್ನು ಇರಿಸಿ ಮನೆಯ ಹಿರಿಯರು ಮೊದಲು ಪೂಜೆ ಮಾಡುವರು. ಆ ನಂತರ ಉಳಿದವರು ಪೂಜೆಯನ್ನು ಸಲ್ಲಿಸುವರು. ಆ ನಂತರದಲ್ಲಿ ಎಲ್ಲರೂ ಕುಳಿತು ಸಂತೋಷದಿಂದ ಊಟ ಮಾಡುವರು. ಇದು ಸಂಪೂರ್ಣವಾಗಿ ಒಂದೊಂದು ಕುಟುಂಬದವರೇ ಆಚರಣೆ ಮಾಡುವ ಹಬ್ಬ. ಆದುದರಿಂದ ಈ ಹಬ್ಬಕ್ಕೆ ಯಾವುದೇ ಸಾಮೂಹಿಕತೆಯ ಮಹತ್ವವಿಲ್ಲ. ಬಂದ ಬೆಳೆಯ ಮೊದಲು ತುತ್ತನ್ನು ತಿನ್ನುವ ಸಂದರ್ಭದಲ್ಲಿ ಸೋಲಿಗರು ದೇವರಲ್ಲಿ ತೋರಿಸುವ ಗೌರವ ಈ ಬಗೆಯದಾಗಿರುತ್ತದೆ.

**2. ರೊಟ್ಟಿ ಹಬ್ಬ:** ಸೋಲಿಗರಿಗೆ ಇದೊಂದು ಮುಖ್ಯವಾದ ಹಾಗೂ ಸಾಮೂಹಿಕವಾದ ಹಬ್ಬ. ಇದನ್ನು "ರೊಟ್ಟಿಯ ಪೊರ" ಎಂದು ಕೂಡ ಕರೆಯುತ್ತಾರೆ. ಸೋಲಿಗರಲ್ಲಿ ಮಾತ್ರ ವಿಶಿಷ್ಟವಾಗಿ ಕಂಡುಬರುತ್ತದೆ. ಆಚರಿಸುವ ಪ್ರದೇಶ, ಸ್ಥಳೀಯ ದೇವತೆಯ ಗುಡಿಯ ಮುಂಭಾಗ, ಸಾಮಾಜಿಕವಾಗಿ ಈ ಹಬ್ಬವನ್ನು ಸಂಕ್ರಾಂತಿಯ ತಿಂಗಳಿನಲ್ಲಿ ಆಚರಿಸುವರು. ಇದಕ್ಕೆ ಕಾರಣವೆಂದರೆ ಅವರು ಸಾಮೂಹಿಕವಾಗಿ ಒಂದುಗೂಡಲು ಅನುಕೂಲಕರವಾದ ಕಾಲ ಅದು. ಜೊತೆಗೆ ಅವರಿಗೆ ಅದು ಸುಗ್ಗಿಯ ಕಾಲ. ಅದೇ ಆಗ ಅವರು ವರ್ಷದಲ್ಲಿ ಬೆಳೆದ ಬೆಳೆ ಅವರ ಕೈ

ಸೇರಿರುತ್ತದೆ. ಮುಂದಿನ ಮುಂಗಾರು ಮಳೆ ಬೀಳುವವರೆಗೆ ಈ ಜನರಿಗೆ ಬಿಡುವು ದೊರೆಯುತ್ತದೆ. ಈ ಸನ್ನಿವೇಶದಲ್ಲಿ ಒಂದು ಹುಣ್ಣಿಮೆಯ ದಿನ ಈ ಹಬ್ಬವನ್ನು ಸಾಮೂಹಿಕವಾಗಿ ಆಚರಿಸುತ್ತಾರೆ. ಹುಣ್ಣಿಮೆಯ ದಿನ ಚಂದ್ರ ಆಕಾಶದಲ್ಲಿ ಪೂರ್ಣವಾಗಿ ಶೋಭಿಸುತ್ತ ತನ್ನ ಸಂಪೂರ್ಣ ಬೆಳಕನ್ನು ಭೂಮಿಯ ಮೇಲೆ ಚೆಲ್ಲಿರುತ್ತಾನೆ. ಯಾವುದೇ ವಿದ್ಯುತ್ ಬೆಳಕಿನ ಸೌಕರ್ಯವಿಲ್ಲದ ಸೋಲಿಗರು ನಿಸರ್ಗದ ಕೊಡುಗೆಯಾದ ಈ ಬೆಳಕಿನಲ್ಲಿ ಸಾಮೂಹಿಕವಾಗಿ ಒಂದು ಕಡೆ ಸೇರಿ ಹಬ್ಬವನ್ನು ಆಚರಿಸುತ್ತಾರೆ.

ಹಬ್ಬವನ್ನು ಆಚರಿಸುವ ದಿನವನ್ನು ಯಜಮಾನ, ಕೋಲುಕಾರ, ಸಲುವಾದಿ ಹಾಗೂ ಪೋಡಿನ ಜನರು, ಇವರ ಸಮ್ಮುಖದಲ್ಲಿ ಸಭೆ ಸೇರಿ ನಿರ್ಧರಿಸುತ್ತಾರೆ. ಪ್ರತಿ ಕುಟುಂಬವೂ ಹಬ್ಬದ ಖರ್ಚಿಗಾಗಿ ಇಂತಿಷ್ಟು ಹಣವನ್ನೊ, ರಾಗಿಯನ್ನೊ ಕೊಡಬೇಕೆಂದು ನಿರ್ಧಾರವಾಗುತ್ತದೆ. ಅದು ಮುಗಿದ ನಂತರ ಹಬ್ಬಕ್ಕೆ ಸಂಬಂಧಿಸಿದ ಸಿದ್ಧತೆಗಳು 'ಪೋಡಿ'ನಲ್ಲಿ ನಡೆಯುತ್ತವೆ. ಹಬ್ಬಕ್ಕೆ ಒಂದು ದಿನ ಮುಂಚಿತವಾಗಿ ಗುಂಪಿನಲ್ಲಿಯ ಯಾವನಾದರೂ ಒಬ್ಬ ಹತ್ತಿರದ ನಗರಕ್ಕೆ ಹೋಗಿ ಹಬ್ಬಕ್ಕೆ ಹಾಗೂ ದೇವರ ಪೂಜೆಗೆ ಬೇಕಾದ ಸಾಮಗ್ರಿಗಳನ್ನು ತರುತ್ತಾನೆ.

ಹಬ್ಬದ ದಿನ ಬರುತ್ತದೆ. ಆ ದಿನ 'ತಮ್ಮಡಿ' ಉಪವಾಸವಿರಬೇಕಾಗುತ್ತದೆ. ಅವನು ಆ ದಿನ ಸ್ನಾನ ಮಾಡಿ ಮಡಿಬಟ್ಟೆಗಳನ್ನು ಧರಿಸಿ ಹಬ್ಬ ಮಾಡಲು ನಿರ್ಧರಿಸಿರುವ ಸ್ಥಳೀಯ ದೇವತೆಯ ದೇವಾಲಯದಲ್ಲಿ ಹತ್ತಿರಕ್ಕೆ ಬಂದು ಆ ದೇವತೆಗೆ ಪೂಜೆಯನ್ನು ಸಲ್ಲಿಸಿ ಹೊಸದಾಗಿ ಮಾಡಿರುವ ಅಡುಗೆಯ ಒಲೆಗೆ ಪೂಜೆ ಸಲ್ಲಿಸುವನು. ಆಗ ಹಾಕಿದ ಒಲೆಯು ದೇವರ ಹಬ್ಬಕ್ಕೆ ಅಡುಗೆ ತಯಾರಿಸಲು ಪವಿತ್ರವಾಗಿದೆ ಎಂದು ಭಾವಿಸುವರು.

ಆ ನಂತರದಲ್ಲಿ ಜನರು ನೆರೆಯುತ್ತಾರೆ. ದೊಡ್ಡ ದೊಡ್ಡ ಎಲೆಗಳ ಮೇಲೆ ರಾಗಿಯ ಹಸಿಯ ಹಿಟ್ಟನ್ನು ಕಲಸಿ ಎಲೆಯ ಮೇಲೆ ತಟ್ಟಿ, ಕೆಂಡಕ್ಕಿಟ್ಟು ಬೇಯಿಸುತ್ತಾರೆ. ಇವರು ಆ ರೊಟ್ಟಿಯನ್ನು ಸುಡಲು "ತವೆ"ಯನ್ನು ಬಳಸುವುದು ಕಂಡುಬರುವುದಿಲ್ಲ ಹೀಗೆ ಸುಟ್ಟು ತಯಾರಿಸಿದ ಆ ರೊಟ್ಟಿಯನ್ನು ಕೆಂಡದ ರೊಟ್ಟಿ ಎಂದು ಕರೆಯುತ್ತಾರೆ. ಈ ರೊಟ್ಟಿಯನ್ನು ಸುಡುವ ಪ್ರಾಚೀನ ರೀತಿಯನ್ನು ಅನೇಕ ಆದಿವಾಸಿ ಸಮಾಜಗಳಲ್ಲಿ ಕಾಣಬಹುದು. ಸೋಲಿಗರು ಮೇಲೆ ತಯಾರಿಸಿದ ರೊಟ್ಟಿಗೆ ನೆಂಚಿಕೊಳ್ಳುವ ಸಲುವಾಗಿ ಅವರೇ ಬೆಳೆದಂತಹ ಸೋರೆಕಾಯಿ, ಕುಂಬಳಕಾಯಿ ಮುಂತಾದ ತರಕಾರಿಯ ಪಲ್ಯವನ್ನು ತಯಾರಿಸುವರು.

ಅಡುಗೆ ಎಲ್ಲ ಮುಗಿದ ನಂತರ ತಮ್ಮಡಿ ಬರುತ್ತಾನೆ. ಸ್ಥಳದೇವತೆಯ ದೇವಾಲಯದೊಳಗೆ ದೇವರ ಪೀಠದ ಮುಂದೆ ಐದು ಬಾಳೆಯ ಎಲೆಯನ್ನು ಹಾಕಿ ಅದಕ್ಕೆ ತಯಾರಿಸಿದಂತಹ ರೊಟ್ಟಿ-ಪಲ್ಯವನ್ನು ಎಡೆ ಮಾಡಿ ಪೂಜೆ ಮಾಡುವರು. ಇಲ್ಲಿ ದೇವರು ಎಡೆಯನ್ನು ಸ್ವೀಕರಿಸಲು ಒಂದೆರಡು ಕ್ಷಣ ಎಲ್ಲರೂ ಬೇರೆ ಕಡೆಗೆ ಮುಖ ಮಾಡಿ ನಿಲ್ಲುವರು. ಪೂಜೆ ಸಲ್ಲಿಸಿದ ನಂತರ

ದೇವರಿಗೆ ಹೂವನ್ನು ಒಡ್ಡಿ ತಮ್ಮ ಕಷ್ಟ-ಸುಖಗಳನ್ನು ಕುರಿತು ಕೇಳುವರು ಅಥವಾ ದೇವರನ್ನು ಯಾರ ಮೇಲಾದರೂ ಬರುವಂತೆ ಎಲ್ಲರೂ ಸಾಮೂಹಿಕವಾಗಿ 'ಕಿಲಲಯೋ ಕಿಲಲಯೋ...'ಎಂದು ಜೋರಾಗಿ ಕೂಗುವರು. ಅಲ್ಲಿ ಸುಖಗಳನ್ನು ವಿಚಾರಿಸುವರು ಅಥವಾ 'ಮುಂದಿನ ಮಳೆ ಬೆಳೆ ಹೇಗೆ' ಎಂದು ಮುಂತಾಗಿ ಮಾತಾಡುವರು. ಇದೆಲ್ಲ ಮುಗಿದ ಮೇಲೆ ದೇವರು ಬಂದಿದ್ದವನು ನೆಲಕ್ಕುರುಳಿ ಮೂರ್ಛೆ ಹೋಗುತ್ತಾನೆ. ಅನಂತರ ಅವನ ಮುಖಕ್ಕೆ ನೀರು ಚಿಮುಕಿಸಲಾಗುತ್ತದೆ. ಅನಂತರ ಅವನು ಯಥಾಸ್ಥಿತಿಗೆ ಬರುತ್ತಾನೆ.

ಇದೆಲ್ಲವೂ ಮುಗಿದ ನಂತರ ಬಂದಿದ್ದ ನಂಟರು, ಪೋಡಿನ ಎಲ್ಲರೂ ಸಾಲಾಗಿ ಹಂತಿಯಲ್ಲಿ ಕೂರುತ್ತಾರೆ. ಹೆಂಗಸರು ಪ್ರತ್ಯೇಕವಾಗಿ ಕೂರುತ್ತಾರೆ. ಮೊದಲೇ ತಯಾರಿಸಿದ್ದಂತಹ ರೊಟ್ಟಿ ಪಲ್ಯವನ್ನು ಎಲ್ಲರಿಗೂ ಬಡಿಸಲಾಗುತ್ತದೆ. ಎಲ್ಲರೂ ಸಂತೃಪ್ತಿಯಿಂದ ರೊಟ್ಟಿಯನ್ನು ತಿನ್ನುತ್ತಾರೆ.

ಎಲ್ಲರೂ ತಿಂದು ಮುಗಿಸಿದ ನಂತರ ಮನರಂಜನೆ ಕಾರ್ಯಕ್ರಮ ಎಂದರೆ "ಗೋರುಕ" "ಹಾಡುಕೆ" ಪದಗಳನ್ನು ಹಾಡಿಕೊಂಡು ಸಾಮೂಹಿಕವಾಗಿ ನರ್ತಿಸುವರು. ಈ ಕುಣಿತಗಳಲ್ಲಿ ಹೆಂಗಸರು ಭಾಗವಹಿಸುವುದು ಕಂಡುಬರುವುದಿಲ್ಲ, ಆದರೆ ಹೆಂಗಸರು ಪ್ರೇಕ್ಷಕರಾಗಿ ಮಾತ್ರ ಇರುತ್ತಾರೆ. ಅಷ್ಟು ಮಾತ್ರವೇ ಅಲ್ಲದೆ ಇವರೂ "ಹಾಡುಕೆ"ಯನ್ನೂ 'ಗುಬ್ಬಿಯಾಲೆ'ಯನ್ನೂ ಹಾಡುವರು. ಇಡೀ ರಾತ್ರಿ ಈ ಬಗೆಯ ಕುಣಿತ ಇರುತ್ತದೆ. ಬೆಳಗಿನ ಸೂರ್ಯ ಹುಟ್ಟುವ ತನಕ ಈ ಕುಣಿತ ನಡೆದಿರುತ್ತದೆ.

ರೊಟ್ಟಿಯ ಹಬ್ಬವನ್ನು ಮಾಡುವಲ್ಲಿ ಎರಡು ಮುಖ್ಯ ದೃಷ್ಟಿಗಳು ಇರುವಂತೆ ಕಾಣಿಸುತ್ತದೆ. ಒಂದು ಲೌಕಿಕವಾದರೆ, ಎರಡನೆಯದು ಧಾರ್ಮಿಕ ದೃಷ್ಟಿಯಿಂದ ಕೂಡಿದುದು.

**1. ಲೌಕಿಕ ದೃಷ್ಟಿ:** ಸೋಲಿಗರ ಬದುಕು ಕಾಡು-ಗುಡ್ಡಗಳಲ್ಲಿನ ಸಾಹಸಕ್ಕೆ ಅಂಟಿಕೊಂಡದ್ದು. ಅದುದರಿಂದ ಅವರು ಪರಸ್ಪರರು ಒಟ್ಟುಗೂಡುವುದಕ್ಕೆ ಒಂದು ಸನ್ನಿವೇಶ ಅವರಿಗೆ ಬೇಕು. ಇಂಥದೊಂದು ಸದವಕಾಶವನ್ನು ಈ ಹಬ್ಬ ಅವರಿಗೆ ತಂದುಕೊಡುತ್ತದೆ. ಹೀಗೆ ಅವರು ಪರಸ್ಪರ ಒಂದುಗೂಡಿದಲ್ಲಿ ಅವರಿಗೆ ಮನರಂಜನೆಯನ್ನು ನಾವು ಕಡೆಗಣಿಸುವಂತಿಲ್ಲ ಒಟ್ಟಾಗಿ ಒಂದೆರಡು ದಿನಗಳಾದರೂ ಸಂತೋಷದಲ್ಲಿ ಕಾಲ ಕಳೆಯುತ್ತಾರೆ.

**2. ಧಾರ್ಮಿಕ ದೃಷ್ಟಿ:** ಸೋಲಿಗರ ಬದುಕು ವ್ಯವಸಾಯಕ್ಕೆ ಅಂಟಿಕೊಂಟದ್ದು, ವ್ಯವಸಾಯದಿಂದ ಬಂದದ್ದನ್ನು ದೇವರಿಗೆ ಸಲ್ಲಿಸಿ ಅನಂತರ ಅವರು ಸ್ವೀಕರಿಸುವುದು ದೇವರಲ್ಲಿನ ಅವರ ನಂಬಿಕೆ ಇಲ್ಲಿ ವ್ಯಕ್ತವಾಗುತ್ತದೆ.

ರೊಟ್ಟಿಯ ಹಬ್ಬ ಸೋಲಿಗರ ಒಂದೆರಡು ಪ್ರಮುಖ ಹಬ್ಬಗಳಲ್ಲಿ ಒಂದು. ಆದರೆ ಈ ಹಬ್ಬವು ಸೋಲಿಗರ ಅನೇಕ ಗುಂಪುಗಳಲ್ಲಿ ಮರೆಯಾಗುತ್ತಿರುವುದನ್ನು ಗುರುತಿಸಬಹುದು.

ನಿದರ್ಶನಕ್ಕೆ ಹುಣಸೂರು ತಾಲ್ಲೂಕಿನಲ್ಲಿ ಹಾಗೂ ತಮಿಳು ನಾಡಿನಲ್ಲಿ ವಾಸಿಸುವ ಸೋಲಿಗರಲ್ಲಿ ಕೆಲವರು ಈ ಹಬ್ಬವನ್ನು ಆಚರಿಸುವುದನ್ನು ಕೈಬಿಟ್ಟಿದ್ದಾರೆ. ಇದಕ್ಕೆ ಅವರಿಗಾದ ಸಂಸ್ಕೃತೀಕರಣ ಕ್ರಿಯೆಯು ಕಾರಣವಾಗಿದೆ ಎಂಬ ಮಾತನ್ನು ಹೇಳಬಹುದು.

**ಮುನಿ ಮಾಡುವುದು**

ವ್ಯವಸಾಯದ ಭೂಮಿಯಲ್ಲಿ ಜಡೆಯ ಮುನಿ ಇರುತ್ತದೆ ಎಂಬದು ಸೋಲಿಗರಲ್ಲಿ ಇತ್ತೀಚೆಗೆ ನಾಡಿನ ಜನರಿಂದ ಪ್ರಭಾವಿತವಾಗಿರುವ ಒಂದು ನಂಬಿಕೆ. "ಈ ಮುನಿ ಭಾರಿ ಗಡ್ಡ ಬಿಟ್ಟುಕೊಂಡು ಕಾಲಿಗೆ ಕೈಗೆ ಜಂಗು ಹಾಕಿಕೊಂಡು ಕೈಯಲ್ಲಿ ತ್ರಿಶೂಲ ಹಿಡಿದು, ತಲೆಯನ್ನು ಉದ್ದವಾಗಿ ಬೆಳೆಸಿಕೊಂಡಿರುತ್ತಾನೆ. ಹಾಗೇನಾದರೂ ಜಮೀನಿಗೆ ಪೂಜೆ ಸಲ್ಲಿಸದಿದ್ದರೆ ಆ ಜಮೀನಿನವನಿಗೆ ಕೆಡಕು ಉಂಟಾಗುತ್ತದೆ" ಎಂದು ಮಹದೇಶ್ವರನ ಬೆಟ್ಟದ ಸೋಲಿಗರು ನಂಬುವರು. ಅದಕ್ಕಾಗಿ ಈ ಮುನಿಗಾಗಿ ಒಂದು ಹಬ್ಬವನ್ನು ಆಚರಿಸುವರು. ಈ ಬಗೆಯ ಹಬ್ಬ ಆಚರಿಸುವುದನ್ನು ಮಲೆಯಮಹದೇಶ್ವರ ಬೆಟ್ಟದ ಸುತ್ತಮುತ್ತ ಹಣೆಹೊಲ, ಮೆಂದರೆ, ಗೊರಸಣಿ ಮುಂತಾದ ಕಡೆ ಕಾಣಬಹುದು. ವ್ಯವಸಾಯ ಯೋಗ್ಯವಾದ ಭೂಮಿಯಲ್ಲಿ 'ಮುನಿ' ಇದೆ ಎಂಬುಧನ್ನು ಕೊಯ್ಲಿಗೆ ಬರುವ ಬೆಳೆಯ ಮೇಲೆ ಹಾಗೂ ಪೈರನ್ನು ರಾಶಿ ಮಾಡುವಾಗ ಕಂಡುಹಿಡಿಯುವರು ಅಥವಾ ಮಲಗಿದಾಗ ಕನಸಿನಲ್ಲಿ ಯಾವುದಾದರೂ ಒಂದು ಶಕುನದ ಮೂಲಕ ಗುರುತಿಸುವರು. ಈ ಸಂದರ್ಭದಲ್ಲಿ ಮನೆಯಿಂದ ಜಮೀನಿಗೆ ಎಲ್ಲರೂ ಹೋಗಿ ಜಮಿನಿನಲ್ಲಿಯೇ ಕೋಳಿಯನ್ನೋ, ಕುರಿ, ಆಡನ್ನೋ ಬಲಿ ನೀಡಿ ಅಲ್ಲಿಯೇ ಅಡಿಗೆ ಮಾಡಿ, ದೇವರಿಗೆ ಎಡೆ ಮಾಡಿ ಅನಂತರದಲ್ಲಿ ಎಲ್ಲರೂ ಊಟ ಮಾಡಿ ಮನೆಗೆ ಹಿಂತಿರುಗುವರು. ಇದರಿಂದ 'ಮುನಿ'ಗೆ ಸಮಾಧಾನವಾಯಿತು ಎಂದು ನಂಬುವರು.

**ಸಂಕಮ್ಮನ ಹಬ್ಬ**

ಸಂಕಮ್ಮ ಸೋಲಿಗರ ಬುಡಕಟ್ಟಿನ 'ತಾಯಿ' ಎಂಬುದು ಅವರ ಪುರಾಣಗಳಿಂದ ವ್ಯಕ್ತವಾಗುತ್ತದೆ. ಒಂದು ಕಾಲದಲ್ಲಿ ಬದುಕಿದ್ದ ವ್ಯಕ್ತಿ ವಿಶಿಷ್ಟ ರೀತಿಯ ಬದುಕನ್ನು ರೂಢಿಸಿಕೊಂಡಿದ್ದರಿಂದ ಪರಿಣಾಮವಾಗಿ ಪೌರಾಣಿಕ ವ್ಯಕ್ತಿಯಾಗಿ ಪರಿಗಣಿತರಾಗುತ್ತಾರೆ. "ಪುರಾಣ-ಕತೆಗಳು ಕೆಲವೊಂದು ಸಾಮಾಜಿಕ ಸಂಬಂಧಗಳ ಕಾರಣ ಪ್ರತೀಕಗಳನ್ನು ವ್ಯಕ್ತಪಡಿಸುತ್ತದೆ. ಈ ಸಂಬಂಧ ತಂದೆ ಮಕ್ಕಳದಾಗಿರಬಹುದು, ಗಂಡ-ಹೆಂಡಿರದಾಗಿರಬಹುದು, ಅಣ್ಣ-ತಮ್ಮಂದಿರು ಗಳದ್ದಾಗಿರಬಹುದು, ನಾಯಕ ಮತ್ತು ಅವನ ಸಮಾಜದ್ದಾಗಿರಬಹುದು, ರಾಮ-ಸೀತೆ, ಕೌರವ-ಪಾಂಡವರು ಇಂಥವರ ಕತೆಗಳೆಲ್ಲ ಇಂಥ ಕೌಟುಂಬಿಕ ಸಂಬಂಧಗಳ ಕಾರಣ ಪ್ರತೀಕಗಳಾಗಿವೆ. 'ನಾಯಕ-ಸಮುದಾಯ'ದ ಸಂಬಂಧವನ್ನು ತೋರಿಸುವ ಕತೆಗಳಲ್ಲಿ ಹಲವು ಸಲ ನಾಯಕನ ಸಮುದಾಯ ಸಂಕಟದಲ್ಲಿ ಬಿದ್ದಿರುವುದು, ನಾಯಕ ತನ್ನ ಬಲದಿಂದಲೋ, ಬೇರೆ ಯಾವ

ಹೆಚ್ಚಿನ ಶಕ್ತಿಯ ಸಹಾಯದಿಂದಲೋ ಈ ಸಂಕಟವನ್ನೆದುರಿಸಿ ಸೋಲಿಸುವುದು. ಈ ಪ್ರಸಂಗ ಚಿತ್ರಿತವಾದದ್ದು ಕಂಡುಬರುತ್ತದೆ.

ಎರಡನೆಯದಾಗಿ ನಮಗರಿವಾಗದಂತೆಯೇ ನಮ್ಮ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಶಕ್ತಿಯು ಪುರಾಣ-ಕತೆಗಳಲ್ಲಿ ಇರುತ್ತದೆ. ಅವುಗಳಲ್ಲಿ ನಮ್ಮ ಅನುಭವದ ತರ್ಕ(Essence) ಸಾಂಕೇತಿಕವಾಗಿ ಮೂಡಿರುವುದರಿಂದ ಅವುಗಳಿಗೊಂದು ಸಾರ್ವತ್ರಿಕತೆ ಬಂದುಬಿಟ್ಟಿರುತ್ತದೆ. 'ಸಂಕಮ್ಮ ಅವರ ಪುರಾಣಗಳಲ್ಲಿ ಒಂದು ಕಾಲಕ್ಕೆ ಬದುಕಿದ್ದವಳು ಎಂಬುಧು ವ್ಯಕ್ತವಾಗುತ್ತದೆ. ಅನಂತರದಲ್ಲಿ ಈ ಕೆಲವರು ಧಾರ್ಮಿಕಾಚರಣೆಗಳಲ್ಲಿ ಅವಳು ಅವರ ಆರಾಧ್ಯದೈವವಾಗಿರುವುದನ್ನು ಕಾಣಬಹುದು.

ಸಂಕಮ್ಮನ ಹಬ್ಬದ ಸಂದರ್ಭದಲ್ಲಿ ಎಲ್ಲರೂ ಮನೆಯಲ್ಲಿ ಉಪವಾಸವಿರುತ್ತಾರೆ. ಆ ದಿನ ಎಲ್ಲರೂ ಮನೆಯಲ್ಲಿ ಪವಿತ್ರ ಸ್ನಾನ ಮಾಡುವರು. ತಮ್ಮ ಮನೆಗಳಿಗೆ ಕಾಪು(ತೋರಣ) ಕಟ್ಟುವರು, ತೋರಣ ಕಟ್ಟುವುದಕ್ಕಾಗಿ ಮಾವಿನಸೊಪ್ಪು, ಬೇವಿನ ಸೊಪ್ಪು, ಉತ್ತರಾಣಿ, ಅಣ್ಣೆಹೂ, ಮುಂತಾದವನ್ನು ಸೇರಿಸಿ ಗುತ್ತಿಯಾಗಿ ಕಟ್ಟಿ ಮನೆಯ ಒಳಗೆ; ಹೊರಗೆ, ರಾಗಿಯ ಮೆದೆಗೆ, ಬೇಲಿಯ ಬಾಗಿಲಿಗೆ, ದನದ ಹಟ್ಟಿಯ ಬಾಗಿಲು, ಗೊಬ್ಬರದ ಗುಂಡಿಗಳಿಗೆ ಈ ಗುಚ್ಛಗಳನ್ನು ಕಟ್ಟುವರು. ಆ ಹಬ್ಬದ ದಿನ ಸಂಕಮ್ಮ ಮನೆಗೆ ಬರುತ್ತಾಳೆ ಆದುದರಿಂದ ಎಲ್ಲವೂ ಪವಿತ್ರವಾಗಿರಬೇಕು ಎಂಬುಧು ಅವರ ನಂಬಿಕೆ. ಹಬ್ಬದ ದಿನ ಪ್ರತಿ ಮನೆಯಲ್ಲಿ ಯಾರೂ ದಿನನಿತ್ಯದ ಕೆಲಸವನ್ನು ಮಾಡುವುದಿಲ್ಲ. ಕುಟ್ಟುವುದು, ಒಕ್ಕುವುದು, ಬೀಸುವುದು, ಸೌದೆ ಒಡೆಯುವುದು ಮುಂತಾದ ಕೆಲಸಗಳನ್ನು ಮಾಡುವಂತಿಲ್ಲ. ಆಯಾ ಪದಾರ್ಥಗಳೂ ಅವರಿಗೆ ಪವಿತ್ರವಾದವು. ಆದುದರಿಂದ ಅವುಗಳಿಗೆ "ಕಾಪು" ಕಟ್ಟಿರುತ್ತಾರೆ. ಈ ಸಲಕರಣೆಗಳೂ ವರ್ಷವಿಡೀ ದುಡಿದಿರುತ್ತವೆ. ಹಬ್ಬದ ದಿನ ಅವುಗಳಿಗೆ ಬಿಡುವು ಮತ್ತು ಹಬ್ಬದ ದಿನದ ಮಟ್ಟಿಗಾದರೂ ಅವುಗಳನ್ನು ಮುಟ್ಟಿ ಬಾಧೆ ಪಡಿಸಬಾರದು ಎಂಬುಧು ಅವರಲ್ಲಿ ಬೆಳೆದಿರುವ ನಂಬಿಕೆ. ಈ ಹಬ್ಬ ಮಲೆಯ ಮಹದೇಶ್ವರ ಬೆಟ್ಟದ ಸುತ್ತ ಕಂಡುಬರುತ್ತದೆ.

**ದನದ ಹಬ್ಬ**

ದನದ ಹಬ್ಬವನ್ನು ಆಚರಿಸುವುದು ಮಲೆಯ ಮಹದೇಶ್ವರ ಬೆಟ್ಟದ ಸುತ್ತಮುತ್ತ ಹೆಚ್ಚಾಗಿ ಕಂಡುಬರುತ್ತದೆ. ಈ ಹಬ್ಬವನ್ನು ಸಂಕಮ್ಮನ ಹಬ್ಬ ಮತ್ತು ರೊಟ್ಟಿಹಬ್ಬ ಆದ ಮರುದಿನ ಆಚರಿಸುವ ಪದ್ಧತಿಯನ್ನು ಇವರು ಹೊಂದಿದ್ದಾರೆ. ಈ ಹಬ್ಬವು ನಾಡಿನವರ ಹಬ್ಬಗಳ ಪ್ರಭಾವದಿಂದ ಆಚರಣೆಗೊಳ್ಳುತ್ತಿರುವ ಒಂದು ಹಬ್ಬವಾಗಿದೆ. ಸೋಲಿಗರು ಹಿಂದೆ ಪಶುಸಂಗೋಪನೆಯನ್ನು ಒಂದು ವೃತ್ತಿಯನ್ನಾಗಿ ಮಾಡಿಕೊಂಡಿದ್ದರೇ ಎಂಬುದನ್ನು ತಿಳಿಯಲು ನಮಗೆ

ಆಧಾರಗಳಿಲ್ಲ. ಇತ್ತೀಚೆಗೆ ಪಶುಸಂಗೋಪನೆಯು ಸೋಲಿಗರಲ್ಲಿ ಹಲವರಿಗೆ ಒಂದು ವೃತ್ತಿಯಾಗಿದೆ. ವ್ಯವಸಾಯಕ್ಕೆ ಪಶುಗಳನ್ನು ಬಳಸುವುದೂ ಅವರಲ್ಲಿ ಇತ್ತೀಚೆಗೆ ರೂಢಿಯಲ್ಲಿ ಬಂದಿದೆ.

ದನದ ಹಬ್ಬದ ದಿನ ಮಲೆಯ ಮಹದೇಶ್ವರ ಬೆಟ್ಟದಲ್ಲಿನ ಸೋಲಿಗರು ಮುಂಜಾವಿನಲ್ಲಿ ಕೋಳಿ ಕೂಗಿದಾಗ ಏಳುವರು. ವ್ಯವಸಾಯಸಂಬಂಧ ಸಲಕರಣೆಗಳು, ಜೇನು ಕುಯ್ಯುವಾಗಿನ ಸಲಕರಣೆಗಳು ಹಾಗೂ ಬೇಟೆಯ ಸಾಧನಗಳನ್ನು ಒಂದು ಕಡೆಗೆ ತಂದು ಇರಿಸುವರು. ಮುಂಜಾವಿನಲ್ಲಿಯೇ ಅವುಗಳಿಗೆ ಪೂಜೆ ಸಲ್ಲಿಸುವರು. ಆಗಲೇ ದನಗಳಿಗೆ ಮೈ ತೊಳೆದು ಅವುಗಳನ್ನು ಮೇಯಿಸಲು ಆ ಸಮಯದಲ್ಲಿ ಮನೆಯ ಹತ್ತಿರ ಇದ್ದವರು ಬೀದಿಯಲ್ಲಿ ಒಂದು ಕೊಂಡವನ್ನು ಹೊತ್ತಿಸಿ ಬೆಂಕಿ ಉರಿಸುತ್ತಾ ದನಗಳ ಬರುವಿಕೆಗಾಗಿ ಕಾಯುತ್ತಾ ಇರುತ್ತಾರೆ. ದನಗಳು ಮೇಯ್ದು ಬರುವಾಗ ಕೊಂಡದ ಮುಂದೆ ಅವುಗಳನ್ನು ತಡೆದು ಕೊಂಡಕ್ಕೂ– ದನಗಳಿಗೂ ಪೂಜೆ ಮಾಡಿ ಬೆಂಕಿಯ ಮೇಲೆ ದನಗಳನ್ನು ನಡೆಸುವರು. ಇದೇ ಸಮಯದಲ್ಲಿ ಒಂದು ಬಾಳೆಯ ಎಲೆಯನ್ನು ಹಾಸಿ ಅದಕ್ಕೆ ಎಡೆ ಮಾಡಿ ದನಕ್ಕೆ ತಿನ್ನಿಸುವರು.

ಇಲ್ಲಿಗೆ ದನದ ಹಬ್ಬ ಮುಗಿಯುತ್ತದೆ. ಮನೆಯಲ್ಲಿ ಎಲ್ಲರೂ ಆ ದಿನ ಭೋಜನ ಮಾಡುತ್ತಾರೆ. ದನಗಳನ್ನು ಅವುಗಳ ಕೊಟ್ಟಿಗೆಗಳಲ್ಲಿ ಕಟ್ಟುತ್ತಾರೆ.

**ಕರುವಾಡು**

"ಕರುವಾಡು" ಎಂಬುಧು ತಮಿಳು ಪದ. ಇದಕ್ಕೆ ಕನ್ನಡದಲ್ಲಿ 'ಕರಿಮೀನು' ಎಂಬ ಅರ್ಥಬರುತ್ತದೆ. ಹಬ್ಬಗಳೆಲ್ಲ ಮುಗಿದ ಮೇಲೆ ಕಡೆಯ ಒಂದು ದಿನ ಮಾಂಸಾಹಾರವನ್ನು ಸ್ವೀಕರಿಸುವ ಪದ್ಧತಿ ದ್ರಾವಿಡರಿಗೆ ಪುರಾತನವಾದುದು. ಇಂತಹ ಒಂದು ಪದ್ಧತಿ ಸೋಲಿಗರಲ್ಲಿ ತಮಿಳುನಾಡಿನ ಜನರ ಪ್ರಭಾವದಿಂದ ಉಂಟಾಗಿ ಆಚರಣೆಯಲ್ಲಿ ಬಂದಿರುವುದು ಒಂದು ಕುತೂಹಲದ ಸಂಗತಿ. ಈ ಹಬ್ಬವನ್ನು ಮಲೆಯ ಮಹದೇಶ್ವರ ಬೆಟ್ಟದ ಸುತ್ತಿನ ಸೋಲಿಗರು ಹೆಚ್ಚಾಗಿ ರೂಢಿಸಿಕೊಂಡಿದ್ದಾರೆ. ಅವರು ತಮ್ಮ ಹಬ್ಬದ ರುಚಿ ಬದಲಾವಣೆಯ ಸಲುವಾಗಿ ಈ ಹಬ್ಬವನ್ನು ಇತ್ತೀಚೆಗೆ ಅವರು ರೂಢಿಸಿಕೊಂಡಂತೆ ಕಾಣುತ್ತದೆ. ಅಲ್ಲದೆ ಸೋಲಿಗರು ಮಾಂಸಾಹಾರಿಗಳು ಆಗಿರುವುದರಿಂದ ಸಹಜವಾಗಿಯೇ ಈ ಬಗೆಯ ರೂಢಿಯನ್ನು ಬೆಳೆಸಿಕೊಂಡಿದ್ದಾರೆ.

'ಕರುವಾಡಿ'ನ ದಿನ ಹೆಸರಿಗೆ ಅನುಗುಣವಾಗಿ ಕರಿಮೀನಿನ ಸಾರನ್ನೇ ಮಾಡುವುದಿಲ್ಲ. ಆ ದಿನದ ತನಕ ಸೋಲಿಗರು ದೇವರು ಹೆಸರು ಹೇಳಿ ಸಾಕಿದ್ದ ಕೋಳಿ ಅಥವಾ ಕುರಿ, ಮೇಕೆಯನ್ನು ದೇವರಿಗೆ ಬಲಿ ಕೊಟ್ಟು ಅದರ ಮಾಂಸವನ್ನು ಪಾಲು ಮಾಡಿಕೊಂಡು ಹಬ್ಬವನ್ನು ಆಚರಿಸುತ್ತಾರೆ.

ಸೋಲಿಗರು ಒಳ್ಳೆಯ ಬೇಟೆಗಾರರು. ಹಬ್ಬದ ಮರುದಿನ ಮೀನಿನ ಬೇಟೆಯನ್ನು ಆಡಿ, ಅದರಿಂದ ದೊರೆತ ಮೀನಿನಿಂದ ಈ ಬಗೆಯ ಹಬ್ಬವನ್ನು ಆಚರಿಸುತ್ತಿದ್ದಿರಬಹುದು ಎನ್ನಿಸುತ್ತದೆ. ಏಕೆಂದರೆ ಈ ಹಬ್ಬಕ್ಕೆ "ಕರುವಾಡು" ಎಂದು ಕರೆಯುವುದರ ಜೊತೆಗೆ 'ಪಾಡಿಹಬ್ಬ' ಎಂದೂ ಕರೆಯುತ್ತಾರೆ. 'ಪಾಡಿ' ಎಂದರೆ ಮುಸುವುನ ಬೇಟೆ. ಹಿಂದೆ ಮುಸುವಿನ ಬೇಟೆಯನ್ನು ಆ ದಿನ ಆಡಿ ಪ್ರಾಣಿಯನ್ನು ಹಿಡಿದು ತಂದು ಹಬ್ಬವನ್ನು ಆಚರಿಸುತ್ತಿದ್ದರೆಂದು ಕಾಣುತ್ತದೆ. ಆದುದರಿಂದ ಆ ಹೆಸರು ರೂಢಿಗೆ ಬಂದಿದೆ.

**ಮಾರಿಹಬ್ಬ**

ಮಾತೃದೇವತಾ ಪೂಜೆ ದ್ರಾವಿಡರ ಒಂದು ಲಕ್ಷಣ. ಉತ್ತರ ಭಾರತದಲ್ಲಿ ಕಾಳಿಯನ್ನು ಮಾತೃದೇವತೆಯಾಗಿ ಪೂಜಿಸುತ್ತಾರೆ. ಹಾಗೆಯೇ ಮಾರಿಹಬ್ಬವನ್ನು ದಕ್ಷಿಣ ಭಾರತದಲ್ಲಿ ಬಹುಪಾಲು ಹಳ್ಳಿಗಳಲ್ಲಿ ಆಚರಿಸುತ್ತಾರೆ. ಕರ್ನಾಟಕದ ಅಥವಾ ತಮಿಳುನಾಡಿನ ಪ್ರತಿಯೊಂದು ಹಳ್ಳಿಯಲ್ಲೂ ಸಾಮಾನ್ಯವಾಗಿ ಒಂದು ಮಾರಿಗುಡಿ ಅಥವಾ ಅದಕ್ಕೆ ಸಮಾನವಾದ ದೇವತೆಯೊಂದರ ಗುಡಿ ಇರುತ್ತದೆ. ಹೀಗಾಗಿ 'ಮಾರಿ'ಯ ಕಲ್ಪನೆ ಕರ್ನಾಟಕದ ಉದ್ದಗಲಕ್ಕೂ ವ್ಯಾಪಿಸಿದೆ. ಮಾರಿಹಬ್ಬವನ್ನು ಸೋಲಿಗರಲ್ಲಿ ಮಲೆಯ ಮಹದೇಶ್ವರ ಬೆಟ್ಟದ ಸುತ್ತಲಲ್ಲಿ ಆಚರಿಸುವುದನ್ನು ಕಾಣಬಹುದು. ಅಲ್ಲಿ ಕೆಲವು ವೇಳೆ ಸೋಲಿಗರು ತಮ ಅಕ್ಕಪಕ್ಕದ ಪೋಡುಗಳಲ್ಲಿ ವಾಸಿಸುವ ಬೇಡಗಂಪಣರೊಡನೆಯೂ ಸೇರಿ ಆಚರಿಸುವುದೂ ಅವರಲ್ಲಿ ರೂಢಿಯಲ್ಲಿದೆ. ಇದೇ ಅಲ್ಲದೇ ಸೋಲಿಗರೇ ಬೇರೆಬೇರೆಯಾಗಿಯೂ ಆಚರಿಸುವುದೂ ರೂಢಿಯಲ್ಲಿದೆ.

ಮಲೆಮಹದೇಶ್ವರ ಬೆಟ್ಟದ ಕೊಕ್ಕುಬರೆ ಸೋಲಿಗರೂ ಆಚರಿಸುವ ಮಾರಿಯ ಹಬ್ಬ ವಿಶಿಷ್ಟ ರೀತಿಯದಾಗಿದೆ. ಮಾರಿಹಬ್ಬಕ್ಕೆ ಪೀಠಿಕೆಯಾಗಿ ಹಬ್ಬ ಇನ್ನು ಹದಿನೈದು ದಿನ ಇದೆ ಎನ್ನುವಾಗಲೇ ತಮ್ಮಡಿಯು ಪೂಜೆಯನ್ನು ಆರಂಭಿಸುತ್ತಾನೆ. ಈ ಆರಂಭೋತ್ಸವಕ್ಕಾಗಿ ಮೂರು ಕವೆ ಇರುವಂತಹ ಆಲದ ಮರ ಅಥವಾ ಹತ್ತಿಯ ಮರದ ಕೊನೆಯನ್ನು ತರುವ ಶಾಸ್ತ್ರ ನಡೆಯುತ್ತದೆ.

**ಕಂಬ ತರುವ ಶಾಸ್ತ್ರ**

ಮೊದಲು ತಮ್ಮಡಿ ಮಾರಿದೇವತೆಗೆ ಪೂಜೆಯನ್ನು ಸಲ್ಲಿಸುತ್ತಾನೆ. ಆ ನಂತರ ಕುಲದ ಐದು ಮಂದಿ ಜೊತೆಯಾಗಿ ಮಂಗಳಾರತಿಯ ತಟ್ಟೆಯನ್ನು ತೆಗೆದುಕೊಂಡು ಪೀನಾಸಿ, ಮದ್ದಳೆ ಮುಂತಾದ ವಾದ್ಯಗಳ ಜೊತೆಗೂಡಿ ಮೂರು ಕವೆ ಇರುವಂತಹ ಒಂದು ಮರದ ಹತ್ತಿರಕ್ಕೆ ಹೋಗುವರು. ತಮ್ಮಡಿಯು ಮರದ ತಾಳಿಗೆ ಪೂಜೆಯನ್ನು ಮಾಡಿ ಎಲ್ಲರಿಗೂ

ಪ್ರಸಾದವನ್ನು ಕೊಡುವನು. ಅಲ್ಲಿರುವವರಲ್ಲಿ ಯಾರಾದರೂ ಒಬ್ಬ ಪೂಜೆ ಸಲ್ಲಿಸಿದ ಕೊಡಲಿಯನ್ನು ತೆಗೆದುಕೊಂಡು ಹೋಗಿ ಪೂಜಿಸಿದ ಕೊಂಬೆಯನ್ನು ಕಡಿಯುವನು. ಅನಂತರ ಆ ಕೊಂಬೆಯಲ್ಲಿನ ಮೂರು ಕವೆಗಳನ್ನು ಮಾತ್ರ ಉಳಿಸಿ, ಉಳಿದ ಕವೆಯಲ್ಲಿನ ಎಲೆಯನ್ನು ಕೊಚ್ಚಿ ಅಲ್ಲಿಯೇ ಒಂದು ಕಡೆ ಮರೆ ಮಾಡಿ ಇಡುವರು. ಆ ನಂತರ ವಾದ್ಯಸಮೇತ ಮನೆಗೆ ಹಿಂತಿರುಗುವರು. ಆ ಗುಂಪಿನಲ್ಲಿಯೇ ಇದ್ದ ಇನ್ನೊಬ್ಬ ವ್ಯಕ್ತಿ ಅದೇ ದಿನವೇ ಹೋಗಿ ಆ ಕೊನೆಯನ್ನು ಇನ್ನೊಂದು ಕಡೆಗೆ ಮರೆ ಮಾಡಿ ಬರುವನು. ಅದೇ ದಿನ ಎಲ್ಲರೂ ಮಾರಿ ಗುಡಿಯ ಹತ್ತಿರ ಸೇರಿ ಮತ್ತೆ ಮಾರಿ ಪೂಜೆಯನ್ನು ನೆರವೇರಿಸುತ್ತಾರೆ. ಆಗ ಮಾರಿದೇವತೆಯನ್ನು ಯಾವೊಬ್ಬನ ಮೇಲಾದರೂ ಮೈದುಂಬಿ ಬರುವಂತೆ ಪ್ರಾರ್ಥನೆ ಮಾಡಿಕೊಳ್ಳಲಾಗುತ್ತದೆ. ಹಾಗೆಯೇ ಮಾರಿದೇವತೆ ಮೈದುಂಬಿ ಬರುತ್ತದೆ. ಹೀಗೆ ಮಹಿಮೆ ಬಂದವನು ಕೊಂಬೆಯನ್ನು ಹುಡುಕಲು ಹೊರಡುತ್ತಾನೆ. ಅವನನ್ನು ಹಿಂಬಾಲಿಸಿ ಕೆಲವರು ಸ್ಥಳವನ್ನು ತನಗೆ ಮೈದುಂಬಿ ಬಂದಿರುವ ಮಹಿಮೆಯ ಪ್ರಭಾವದಿಂದ ಪತ್ತೆ ಹಚ್ಚಿ ಅವನನ್ನು ಹಿಂಬಾಲಿಸಿ ಬಂದಿದ್ದವರಿಗೆ ತೋರಿಸುವನು. ಆಗ ಕೊನೆಯನ್ನು ಒಂದೆರಡು ಜನ ಸೇರಿ ಹೊತ್ತುಕೊಂಡು ದೇವಸ್ಥಾನದ ಹತ್ತಿರ ಬರುತ್ತಾರೆ. ದೇವರು ಬಂದವನು ಕೆಳಗುರುಳುತ್ತಾನೆ. ಅನಂತರ ಅವನಿಗೆ ಮಹಿಮೆ ಇಳಿಯುತ್ತದೆ.

ಮಾರಮ್ಮನ ಗುಡಿಯ ಮುಂದೆ ಅಗಲವಾದ ಒಂದು ಮೈದಾನದ ನಡುವೆ ಕಂಬವನ್ನು ನೆಟ್ಟು ಪೂಜೆಯನ್ನು ಮಾಡುತ್ತಾರೆ. ಹೀಗೆ ಶಾಸ್ತ್ರೋಕ್ತವಾಗಿ ಕಂಬವನ್ನು ನೆಟ್ಟ ರಾತ್ರಿಯಿಂದ ಕುಣಿತದ ಅಭ್ಯಾಸವನ್ನು ಅರಂಭಿಸುತ್ತಾರೆ. ಮನೆಗೊಂದು ಜನರಂತೆ ಕುಣಿತಕ್ಕೆ ಬಂದೇ ಬರಬೇಕು ಎಂಬ ಕಡ್ಡಾಯವಿರುತ್ತದೆ. ಹೀಗೆ ಕುಣಿತಕ್ಕೆ ಬರುವವರು ಗೆಜ್ಜೆಯನ್ನು ಕಾಲಿಗೆ ಕಟ್ಟಿಕೊಂಡಿರುತ್ತಾರೆ. ತಮ್ಮಡಿಯು ಶಾಸ್ತ್ರದ ಕಂಬವನ್ನು ನೆಡುತ್ತಾನೆ. ಆ ಕಂಬದ ಮೂರು ಕವಲಿನ ನಡುವೆ ಒಂದು ಅಗಲವಾದ ಬಾಯುಳ್ಳ ಮಡಕೆಯನ್ನು ಇಟ್ಟು ಅದರೊಳಗೆ ಬೆಂಕಿಯ ಕೆಂಡವನ್ನು ಸುರಿದು ಸಣ್ಣ ಸಣ್ಣ ಸೌದೆಯ ತುಂಡುಗಳನ್ನು ಅದರೊಳಗಿಟ್ಟು ಬೆಂಕಿ ಹಾಕುವನು. ಆ ನಂತರ ಆ ಬೆಂಕಿಗೆ ಪೂಜೆ ಮಾಡಿದ ನಂತರ ಕುಣಿತ ಆರಂಭವಾಗುತ್ತದೆ. ಕುಣಿಯುವವರಿಗೆಲ್ಲ ತಮ್ಮಡಿಯು ದೇವರಿಗೆ ಪೂಜೆ ಸಲ್ಲಿಸಿ ತೀರ್ಥ ಕೊಡುತ್ತಾನೆ. ಆ ನಂತರ ಕೆಲವರು ಪೀನಾಸಿ, ಮದ್ದಳೆ, ತಮಟೆಯನ್ನು ಬಡಿಯುವರು. ಉಳಿದವರು ಬೆಂಕಿಯ ಸುತ್ತ ತಮಟೆಯ ಲಯಕ್ಕೆ ತಕ್ಕಂತೆ ಕಾಲು ಹಾಕುತ್ತ ವಿವಿಧ ಬಗೆಯ ಕುಣಿತಗಳನ್ನು ಕುಣಿಯುತ್ತಾರೆ. ತಮಟೆಯಲ್ಲಿ ಬೇರೆ ಬೇರೆ ರೀತಿಯ ವರಸೆಗಳಿರುತ್ತವೆ. ಹೀಗೆ ಒಂದು ಅಥವಾ ಎರಡು ಬಗೆಯ ಕುಣಿತಗಳು ಮುಗಿದಾಗ ನಡುವೆ ವಿರಾಮವಿರುತ್ತದೆ. ಈ ವಿರಾಮದ ಸಮಯದಲ್ಲಿ ಮಾರಿದೇವತೆಯ ಮೇಲೆ ತ್ರಿಪದಿಗಳನ್ನು ಹಾಡುವರು. ಉಳಿದವರು ಅದಕ್ಕೆ 'ಕಿಲಲಯೋ...' ಎನ್ನುತ್ತ ಬೆಂಕಿಯನ್ನು ಬಳಸುವರು. ಈ ಹಾಡುಗಳಿಗೆ ಒಂದೆರಡು ನಿದರ್ಶನ ನೀಡಬಹುದು.

1. ಮಾರಮ್ಮ ಮಾರಮ್ಮ ಮಳೆಯಾಳ ದೇಸಾಕೆ ಹೊಂಟವಳೆ
ಮಳೆಬಂದ್ರೆ ಎಲ್ಲಿ ತಂಗವಳೊ। ಮಾರಮ್ಮ
ಒಡೆದಂಬಳ ಸುಳಿಯಲ್ಲಿ ತಂಗ್ಗಳಿ

2. ಮಾದೇಸುರನ ತಂಗೆ ಶಿವಗಣರ
ಬಟ್ಟುಮಲೆ ಮಾದಪ್ನ ಬೆಟ್ಟಕ್ಕೆ।
ಮಂಜುಕವುದಾವೋ॥
ಮಾರಿಗುಡಿ ಮುಂದೆ ಮಾರಿಗುಡಿ ಮುಂದೆ
ನೂರೊಂದು ಇಂಬಿಗಿಡ ಹಾಕಿ
ಕಳ್ಳರು ಕುಯ್ವಾಗ ಕಶುಗಾಯಿ
ತಾನೆದ್ದು ಬೆಳೆಯೋದು ತನುವಣ್ಣ॥

ಹೀಗೆಯೇ ಕುಣಿತ ಹಾಗೂ ಹಾಡಿನ ಅಭ್ಯಾಸವನ್ನು ಪ್ರತಿದಿನ ಅರ್ಧರಾತ್ರಿಯ ತನಕ ಹನ್ನೊಂದು ದಿನದವರೆಗೆ ಮಾಡುವರು. ಇದೇ ಸಂದರ್ಭದಲ್ಲಿ ಮಕ್ಕಳು ದೊಡ್ಡವರೊಡನೆ ಕುಣಿತವನ್ನು ಅನುಕರಿಸುತ್ತಾ ಕಲಿಯುವರು. ಮಕ್ಕಳು ಮೊದಮೊದಲಲ್ಲಿ ತಪ್ಪು ಹೆಜ್ಜೆಗಳನ್ನು ಇಟ್ಟರೂ ದೊಡ್ಡವರು ಅದನ್ನು ಸರಿಪಡಿಸಿಕೊಳ್ಳುತ್ತಾರೆ. ಹೀಗೆ ಹನ್ನೊಂದು ದಿನ ಕುಣಿತದ ಅಭ್ಯಾಸ ಚೆನ್ನಾಗಿ ಸಾಗುತ್ತದೆ.

ಮಾರಿಯ ಹಬ್ಬ ಹನ್ನೆರಡನೆಯ ದಿನ ಏರ್ಪಾಡಾಗುತ್ತದೆ. ಆ ದಿನ ತಮ್ಮಡಿ ಬಂದು ದೇವಾಲಯವನ್ನು ಸಾರಿಸಿ, ದೇವರನ್ನು ತೊಳೆದು ಪವಿತ್ರ ಮಾಡುವನು. ಆ ನಂತರ ಪೋಡಿನ ಪ್ರತಿಯೊಂದು ಮನೆಯಲ್ಲಿಯೂ ಬೆಲ್ಲ ಮತ್ತು ಅಕ್ಕಿ ಹಾಗೂ ಕಡಲೆಯಿಂದ ತಯಾರಿಸಿದ ತಂಬಿಟ್ಟನ್ನು ಮಾಡಿ ಅದನ್ನು ಚೌಕಾಕಾರವಾಗಿ ಸುಮಾರು ಅರ್ಧ ಅಡಿಯಷ್ಟು ಎತ್ತರವಾಗಿ ಕಟ್ಟುವರು. ಅದನ್ನು ಬೇವಿನ ಸೊಪ್ಪಿನಿಂದ ಅಲಂಕರಿಸಿ ಅದಕ್ಕೆ ಕಣಗಿಲೆ ಹೂವನ್ನು ಮುಡಿಸುವರು. ಈ ತಂಬಿಟ್ಟಿನ ಉಂಡೆಯ ನೆತ್ತಿಯ ಮೇಲೆ ಕೈಹಣತೆಯೊಂದನ್ನು ಹಚ್ಚಿ ತಂದು ಅದನ್ನು ಮಾರಮ್ಮನ ದೇವಾಲಯಕ್ಕೆ ಇಡುವರು.

ಇದೇ ಸಮಯದಲ್ಲಿ ಒಂದು ಕುರಿಯನ್ನೋ, ಆಡನ್ನೋ ತಂದು ದೇವರಿಗೆ ಬಲಿ ಕೊಡುವರು. ಹೀಗೆ ಮರಿಯನ್ನು ಕಡಿದ ನಂತರ ಅದರ ಕಾಲೊಂದನ್ನು ಕತ್ತರಿಸಿ ಮರಿಯ ಕಟಬಾಯಿಗೆ ಕೊಡುವರು. ಮರಿಯ ಚರ್ಮ ಸುಲಿದು ಮಾಂಸವನ್ನು ಪಾಲು ಮಾಡುವರು.

ಅಡಿಗೆಯಾದ ನಂತರ ಮಾರದೇವತೆಗೆ ತಳಿಗೆಯನ್ನು ನೀಡಿ ಎಡೆ ಮಾಡುವರು. ಆ ದಿನ ಎಲ್ಲರೂ ಅಲ್ಲಿಯೇ ಕುಳಿತು ಊಟ ಮಾಡುವರು.

ಈ ವೇಳೆಗಾಗಲೇ ಸುಮಾರು ರಾತ್ರಿ ಹತ್ತು ಗಂಟೆಯಾಗಿರುತ್ತದೆ. ತಮ್ಮಡಿ ಮತ್ತೊಮ್ಮೆ ದೇವರಿಗೆ ಪೂಜೆ ಸಲ್ಲಿಸಿ ಗೆಜ್ಜೆ ಕಟ್ಟಿಕೊಂಡು ಕುಣಿತಕ್ಕೆ ಸಿದ್ಧವಾಗುತ್ತಿದ್ದವರಿಗೆ ತೀರ್ಥ-ಪ್ರಸಾದ ಕೊಡುತ್ತಾನೆ. ಈ ವೇಳೆಗೆ ಮದ್ದಳೆ, ಪೀನಾಸಿ ಹಾಗೂ ತಮಟೆಗಳು ಬೆಂಕಿಯ ಹಿತವಾದ ಶಾಖ ಪಡೆದು ಶ್ರುತಿಗೈಯ್ಯುತ್ತವೆ. ಆ ನಂತರ ತಮ್ಮಡಿ ಮೂರು ಕವೆಯ ಕಂಬದ ಮೇಲೆ ಮಡಕೆ ಇರಿಸಿ ಕೆಂಡ ತುಂಬಿ ಬೆಂಕಿ ಹಚ್ಚುತ್ತಾನೆ. ಹಾಡು-ಕುಣಿತ ಒಂದಾದ ಮೇಲೊಂದು ಆರಂಭವಾಗುತ್ತವೆ. ಇಡೀ ರಾತ್ರಿ ಕುಣಿತ ಆರಂಭವಾಗುತ್ತದೆ. ಪ್ರತಿ ಕುಟುಂಬದ ಸ್ತ್ರೀಯರು, ಮುದುಕರು, ಹತ್ತಿರದ-ದೂರದ ನಂಟರೇ ಪ್ರೇಕ್ಷಕ ವೃಂದವಾಗಿ ಈ ಮನರಂಜನೆಯನ್ನು ನೋಡಿ ಆನಂದಿಸುತ್ತಾರೆ.

ಆದರೆ ಮಾರಿಹಬ್ಬದಲ್ಲಿ ದೊರೆಯುವ ಈ ಸಂತಸವೇ ಪರಮಾವಧಿಯದಲ್ಲ. ಈ ಮಾರಿಯ ಹಬ್ಬಕ್ಕೆ ಧಾರ್ಮಿಕ ಹಿನ್ನೆಲೆಯೊಂದು ಇದೆ ಎಂಬುಧನ್ನು ನಾವು ಮರೆಯುವಂತಿಲ್ಲ. 'ಮಾರಿ' ಎಂದರೆ ರೋಗ-ರುಜಿನಗಳನ್ನು ಉಂಟುಮಾಡುವ ದೇವತೆ ಎಂಬ ನಂಬಿಕೆ ಸೋಲಿಗರಲ್ಲಿ ಬೆಳೆದಿದೆ. ಈ ದೇವತೆ ತಮಗೆ ಯಾವುದೇ ಅಂಟುರೋಗವನ್ನು ಕೊಡದ ರೀತಿಯಲ್ಲಿ ಕಾಪಾಡಲಿ ಎಂಬ ನಂಬಿಕೆ ಅವರಿಗಿದೆ.

ಇಲ್ಲಿಯೇ ಇನ್ನೊಂದು ಮುಖ್ಯವಾದ ಮಾತನ್ನು ಹೇಳಿಬಿಡಬಹುದು. ಮಾರಿ ದೇವತೆಯನ್ನು ಪೂಜಿಸುವುದು ದ್ರಾವಿಡರ ವಿಶಿಷ್ಟವಾದ ಲಕ್ಷಣಗಳಲ್ಲಿ ಒಂದು. ಇಲ್ಲಿ ಸೋಲಿಗರು ದ್ರಾವಿಡ ವರ್ಗಕ್ಕೆ ಸೇರುತ್ತಾರೆ ಎಂಬುಧು ವ್ಯಕ್ತವಾಗುತ್ತದೆ.

### ಜಾತ್ರೆಗಳು

ಜಾತ್ರೆಗಳು ಹಬ್ಬಗಳನ್ನು ಅನುಸರಿಸಿ ಹುಟ್ಟಿಕೊಂಡಿರುವಂತೆ ಕಾಣಿಸುತ್ತದೆ. ಹಬ್ಬದ ಮುಖ್ಯ ಉದ್ದೇಶ ದೇವರ ಸ್ಮರಣೆ, ಗುರುಹಿರಿಯರ ಆರಾಧನೆಯಾದರೆ ಜಾತ್ರೆಯ ಮುಖ್ಯ ಉದ್ದೇಶ ಆರ್ಥಿಕ ವಿಚಾರಕ್ಕೆ ಸಂಬಂಧಿಸಿದುದು. ಜಾತ್ರೆಯ ಮುಖ್ಯ ಉದ್ದೇಶವನ್ನು ಕುರಿತು ಅಮೆರಿಕ ವಿಶ್ವಕೋಶದಲ್ಲಿ "A fair is a periodical meeting of merchants in an open market held at particular place and generally for translation of particular class of business" ಎಂದು ಹೇಳಲಾಗಿದೆ. ವ್ಯಾಪಾರವನ್ನು ಒಂದು ವೃತ್ತಿಯನ್ನಾಗಿ ಉಳ್ಳ ಅಥವಾ ಸಂಸಾರದ ಹಿತದೃಷ್ಟಿಯಿಂದ ವಸ್ತು ವಿಶೇಷಗಳನ್ನು ಕೊಳ್ಳುವ-ಮಾರುವ ಜನರು ಒಂದೆಡೆ ಸೇರುತ್ತಾರೆ. ಸೋಲಿಗರು ಅನೇಕ ಜಾತ್ರೆ ಉತ್ಸವಗಳಲ್ಲಿ ಭಾಗವಹಿಸುತ್ತಾರೆ. ಅವರ ಬಹುಮುಖ್ಯವಾದ ಜಾತ್ರೆಗಳೆಂದರೆ:

1. ಮಲೆಯ ಮಹದೇಶ್ವರ ಸ್ವಾಮಿಯ ಜಾತ್ರೆಗಳು

2. ಬಿಳಿಗಿರಿ ರಂಗಸ್ವಾಮಿಯ ಜಾತ್ರೆ

3. ಕೀಳುನಾಟಿನ ದನಗಳ ಜಾತ್ರೆ

ಇವೇ ಅಲ್ಲದೆ ನಾಡಿನಲ್ಲಿ ನಡೆಯುವ ಸಣ್ಣಪುಟ್ಟ ಜಾತ್ರೆಗಳಿಗೂ ಇವರು ಹೋಗುತ್ತಾರೆ. ನಾಡು ಎಂದರೆ ಇವರ ಅರ್ಥದಲ್ಲಿ ಹಳ್ಳಿಗಳು, ತಾಲ್ಲೂಕುಗಳು.

**ಶ್ರೀ ಮಲೆಯ ಮಹದೇಶ್ವರ ಸ್ವಾಮಿಯ ಜಾತ್ರೆಗಳು**

ಮಲೆಯ ಮಹದೇಶ್ವರ ಬೆಟ್ಟ ಮೈಸೂರಿಗೆ ಪೂರ್ವ ಭಾಗದಲ್ಲಿದ್ದು, ದಕ್ಷಿಣ ಭಾರತದಲ್ಲಿ ಒಂದು ಪವಿತ್ರ ಯಾತ್ರಾಸ್ಥಳವಾಗಿದೆ. ಹಲವಾರು ಪವಾಡಗಳನ್ನು ಮೆರೆದ ಸೋಲಿಗರ ಪುರಾಣ ಪುರುಷ ಮಹದೇಶ್ವರರು ನೆಲೆಗೊಂಡಿರುವ ಸ್ಥಳ ಇದು. ಪ್ರತಿವರ್ಷವೂ ಅಸಂಖ್ಯಾತ ಭಕ್ತಕೋಟಿಗಳನ್ನು ಆಕರ್ಷಿಸುತ್ತಾ, ಇಂದಿಗೂ ಹಲವು ಪವಾಡಗಳ ಕೇಂದ್ರವಾಗಿದೆ. "ಮೊದಲು ಈ ಭಾಗ ಮದ್ರಾಸ್ ಸರಕಾರಕ್ಕೆ ಸೇರಿದ್ದಿತು. ಆ ಸರಕಾರದವರು ಧರ್ಮದರ್ಶಿ ಸಮಿತಿಯನ್ನು ನೇಮಿಸಿದ್ದರು. ಆಗ ವರ್ಷಕ್ಕೆ ಸುಮಾರು 64,000 ಸಾವಿರ ರೂಪಾಯಿ ಆದಾಯ ಇದ್ದಿತು. ಈಗ ಈ ಪ್ರದೇಶ ಕರ್ನಾಟಕ ಸರಕಾರದ ಆಡಳಿತಕ್ಕೆ ಒಳಪಟ್ಟಿದೆ" ಇಲ್ಲಿ ವರ್ಷಕ್ಕೆ ನಾಲ್ಕು ಬಾರಿ ಜಾತ್ರೆಗಳು ನಡೆಯುತ್ತವೆ.

1. ಮಹಾನವಮಿಯ ಪರಿಸೆ

2. ದೀಪಾವಳಿಯ ಜಾತ್ರೆ

3. ಕಾರ್ತಿಕದ ಜಾತ್ರೆ

4. ಶಿವರಾತ್ರಿಯ ಜಾತ್ರೆ(ದೊಡ್ಡ ಜಾತ್ರೆ)

"ಮೈಸೂರು ಸಂಸ್ಥಾನ, ನೀಲಗಿರಿ, ಕೊಯಮತ್ತೂರು ಮತ್ತು ಸೇಲಂ ಜಿಲ್ಲೆಗಳಿಂದ ಭಕ್ತರು ಇಲ್ಲಿಗೆ ಬಹಳವಾಗಿ ಬಂದು ಹೋಗುತ್ತಾರೆ". ಈ ಜಾತ್ರೆಗಳಲ್ಲಿ ಸೋಲಿಗರಿಗೆ ಅಷ್ಟೇನು ಪ್ರಮುಖ ಪಾತ್ರವಿಲ್ಲದಿದ್ದರೂ ಸಾವಿರಾರು ಭಕ್ತರಂತೆ ಇವರೂ ಮಹದೇಶ್ವರ ಸ್ವಾಮಿಗೆ ತಮ್ಮ ಭಕ್ತಿಯನ್ನು ನಿವೇದಿಸುತ್ತಾರೆ. ಈ ಜಾತ್ರೆಯ ಸಂದರ್ಭದಲ್ಲಿ ಸೋಲಿಗರು ತಮ್ಮ ಮನೆಯನ್ನು ಹಸುವಿನ ಸಗಣಿಯಿಂದ ಪವಿತ್ರಗೊಳಿಸಿ ಎಲ್ಲರೂ ಸ್ನಾನ ಮಾಡಿ ಮಡಿಯಾದ ಬಟ್ಟೆಗಳನ್ನು ಧರಿಸುತ್ತಾರೆ. ಹಣ್ಣುಕಾಯಿ, ಕರ್ಪೂರ ಮುಂತಾದ ಪೂಜೆ ಸಾಮಗ್ರಿಗಳನ್ನು ತೆಗೆದುಕೊಂಡು ಮಹದೇಶ್ವರ ಸ್ವಾಮಿಯವರ ದೇವಾಲಯಕ್ಕೆ ಹೋಗುವರು. ದೇವಾಲಯಕ್ಕೆ ಹೋಗಿ ಪೂಜೆ ಮಾಡಿಸುವರು. ಆ ನಂತರ ಜಾತ್ರೆಯಲ್ಲಿ ಕಡಲೆಪುರಿ, ಬೆಲ್ಲ, ಬತ್ತಾಸು, ಹಣ್ಣು ಮುಂತಾದ ತಿಂಡಿಗಳನ್ನು ಕೊಳ್ಳುವರು. ಆ ದಿನ ತೇರನ್ನು ಎಳೆಯುವ ಉತ್ಸವದಲ್ಲಿ ಸೋಲಿಗರೂ ಭಾಗವಹಿಸುವರು. ಇನ್ನೂ ಕೆಲವು ಸಂದರ್ಭದಲ್ಲಿ ತೇರನ್ನು ಎಳೆಯಲು ಅಡ್ಡದೇವರನ್ನು

ಹೊರಲು ದೇವಾಲಯಕ್ಕೆ ದಿನಕೂಲಿಯ ಮೇಲೆ ಹೋಗುವುದೂ ಉಂಟು. ಮೇಲಿನ ನಾಲ್ಕು ಜಾತ್ರೆಗಳಲ್ಲಿಯೂ ಸೋಲಿಗರು ಅಷ್ಟೇನು ಪ್ರಮುಖ ಪಾತ್ರವಿಲ್ಲದಿದ್ದರೂ ಜಾತ್ರೆ ಅವರಿಗೆ ಒಂದು ಸಂತೋಷದ ಸಮಾರಂಭ.

**ಕೀಳುನಾಟಿನ ದನಗಳ ಜಾತ್ರೆ**

ಕೀಳುನಾಟು ಮಲೆಯ ಮಹದೇಶ್ವರ ಬೆಟ್ಟದಿಂದ ಐವತ್ತು ಮೈಲಿಗಳಷ್ಟು ದೂರದಲ್ಲಿ ಇರುವ ತಮಿಳುನಾಡಿನ ಆಡಳಿತಕ್ಕೆ ಒಳಪಟ್ಟಿರುವಂತಹ ಒಂದು ಪ್ರದೇಶ. ಇಲ್ಲಿ ಬೇಸಿಗೆಯ ಕಾಲದಲ್ಲಿ ವರ್ಷಕ್ಕೆ ಒಂದು ಬಾರಿ ದನಗಳ ಜಾತ್ರೆ ನಡೆಯುತ್ತದೆ. ಕೀಳುನಾಟಿನಲ್ಲಿನ ಸ್ಥಳೀಯ ದೇವತೆ ಕುರ್ನಸ್ವಾಮಿಯ ಜಾತ್ರೆ ಎಂದೂ ಕರೆಯುತ್ತಾರೆ. ಈ ಜಾತ್ರೆಗೆ ಸೋಲಿಗರು ತಾವು ಸಾಕಿದ ದನಗಳನ್ನು ಮಾರಾಟ ಮಾಡುವ ಸಲುವಾಗಿಯೂ ಅಥವಾ ಹೊಸ ದನಗಳನ್ನು ಕೊಂಡು ತರುವ ಸಲುವಾಗಿಯೂ ಹೋಗುವರು.

**ಸಮಾರೋಪ**

ಪ್ರಸ್ತುತ ಅಧ್ಯಾಯದಲ್ಲಿ ಆಹಾರ ಸಂಗ್ರಾಹಕ ಬುಡಕಟ್ಟುಗಳಾದ ಬೆಟ್ಟಕುರುಬ, ಜೇನುಕುರುಬ, ಬೇಟೆ ಸಮುದಾಯವಾದ ಮ್ಯಾಸಬೇಡ, ಪಶುಪಾಲಕ ಸಮುದಾಯದ ಕಾಡುಗೊಲ್ಲ, ಕೃಷಿಕ ಸಮುದಾಯಗಳಾದ ಸೋಲಿಗರು, ಸಿದ್ಧಿಗಳು ಮತ್ತು ಹಾಲಕ್ಕಿಗಳ ಹಾಗೂ ಸ್ಥಳಾಂತರಗೊಂಡ ಈ ಸಮುದಾಯಗಳಲ್ಲಿನ ಸೀಮಾಪದ್ಧತಿಯ ಕುರಿತು ಮೇಲೆ ವಿವರಗಳನ್ನು ಚರ್ಚಿಸಲಾಗಿದೆ. ಇದಕ್ಕೆ ನಾನು ಈ ಅಧ್ಯಯನಕ್ಕಾಗಿ ಮೇಲೆ ಹೆಸರಿಸಲಾಗಿರುವ ಬುಡಕಟ್ಟುಗಳ ಜಿಲ್ಲೆಯ ಹಾಡಿಗಳಿಗೆ ಅಧ್ಯಯನದ ಕ್ಷೇತ್ರಕಾರ್ಯ ಕೈಗೊಂಡು ಅಂಕಿ-ಅಂಶಗಳನ್ನು ಪ್ರಶ್ನಾವಳಿಯ ಮೂಲಕ ಮಾಹಿತಿ ಪಡೆದು ವಿಶ್ಲೇಷಣೆ ಮಾಡಲಾಗಿದೆ. ಮೇಲಿನ ಸಮುದಾಯಗಳ ಭೌಗೋಳಿಕ ವಿವರ, ಸಾಮಾಜಕ, ಆರ್ಥಿಕ, ಪಾರಂಪರಿಕ ವಿಧಿ ನಿಷೇಧಗಳು ಮತ್ತು ದೈವಾರಾಧನೆಯಲ್ಲಿ ಸೀಮೆಯ(ಜಮ್ಮಾ) ಕುರಿತು ಅವರ ಆಲೋಚನೆ ಮತ್ತು ಆಚರಣೆಗಳನ್ನು ವಿವೇಚಿಸಲಾಗಿದೆ.

**ಅಡಿ ಟಿಪ್ಪಣಿಗಳು**

1. ಕಿಕ್ಕೇರಿ ನಾರಾಯಣ, ಜೇನುಕುರುಬ ಬುಡಕಟ್ಟು ಜನಾಂಗದ ಸಾಂಸ್ಕೃತಿಕ ಪರಂಪರೆ, ನ್ಯಾಷನಲ್ ಫೋಲ್ಕಲೋರ್ ಸೆಂಟರ್, ಚೆನ್ನೈ, ಪು.110, 2011
2. ಸಂದರ್ಶನ: ಸೋಮಣ್ಣ, ಹೆಚ್.ಡಿ ಕೋಟೆ, ಮೈಸೂರು ಜಿಲ್ಲೆ.
3. ಲಲಿತ, ಎ ಸಿ, ಕಾಡುಕುರುಬ ಮತ್ತು ಜೇನುಕುರುಬ ಸಂಸ್ಕೃತಿ, ಪು.55, 1993
4. ಕೃಷ್ಣಮೂರ್ತಿ ಹನೂರು, ಬೇಡನಾಯಕರು(ಪಿಎಚ್.ಡಿ.ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಪು.84-90, 1989

5. ಶಂಕರ ನಾರಾಯಣ ತೀ.ನಂ., ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು. ಪು.98, 1989

6. Nanjundiah H.V., Ananth krishnna Iyer, The Mysore Tribes and Castes, Vol 3, P 87, Mittal Publications, New Delhi, 1922.

7. ನಾಯಕ್, ಎನ್ ಆರ್, ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಪು.25, 1993

8. ವಿಜಯಲಕ್ಷ್ಮಿ ಆರ್, ಹಾಲಕ್ಕಿ ಒಕ್ಕಲಿಗರ ಮಹಿಳೆ, (ಪಿಎಚ್.ಡಿ. ಮಹಾಪ್ರಬಂಧ, ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.48, 2008

9. ಅದೇ ಪು.55, 2008

10. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.34, 1993

11. Thurston and Rangachari K.(Ed), Caste and Tribes of Southern India p 185, Vol 5, 1909

12. Luiz, A A D, Tribes of Mysore, P. 135, 1955

13. ಚಂದ್ರು ಕಾಳೇನಹಳ್ಳಿ, ಸೋಲಿಗರ ಸಂಸ್ಕೃತಿ, ಪು.60, 1993

14. Luiz, A A D, Tribes of Mysore, P. 136, 1955

## ಅಧ್ಯಾಯ: ನಾಲ್ಕು

# ಬುಡಕಟ್ಟುಗಳ ಸೀಮಾಪದ್ಧತಿ ಮತ್ತು ಪಾರಂಪರಿಕ ಜ್ಞಾನ

### ಪೀಠಿಕೆ

ಪ್ರಸ್ತುತ ಅಧ್ಯಾಯದಲ್ಲಿ ಬುಡಕಟ್ಟು ಸಮುದಾಯಗಳಲ್ಲಿರುವ ಸೀಮಾಪದ್ಧತಿಯ ಕುರಿತು ವಿವರಗಳನ್ನು ನೀಡಲಾಗಿದೆ. ಸೀಮಾಪದ್ಧತಿ ಎಂದರೇನು? ಸೀಮಾಪದ್ಧತಿಯ ಹುಟ್ಟು ಮತ್ತು ವಿಕಾಸ ಹೇಗೆ? ಸೀಮಾಪದ್ಧತಿಯ ಸ್ವರೂಪ ಮತ್ತು ಅಸ್ತಿತ್ವದ ಮಹತ್ವಗಳೇನು, ವಿವಿಧ ದೇಶಗಳಲ್ಲಿನ ಆದಿವಾಸಿಗಳಲ್ಲಿ ಸೀಮಾಪದ್ಧತಿಯ ಸಾಧ್ಯತೆ ಸ್ವರೂಪಗಳೇನೆಂದು ವಿಶ್ಲೇಷಿಸಲಾಗಿದೆ.

ಕರ್ನಾಟಕದ ಬುಡಕಟ್ಟುಗಳ ಸೀಮಾಪದ್ಧತಿಯೊಳಗಿನ ಅವರ ಪಾರಂಪರಿಕ ಜ್ಞಾನದ ಭಾಗಗಳಾದ ನಾಟಿ ಚಿಕಿತ್ಸಾಪದ್ಧತಿ, ನೋಟ, ಬೇಟೆ, ಆಹಾರಸಂಗ್ರಹಣೆ, ಆದಿಮ ಕೃಷಿ 'ಕುಂಬರಿ ಬೇಸಾಯ' ಪದ್ಧತಿಗಳ ವಿಶ್ಲೇಷಣೆಗಳು ಮತ್ತು ಈ ಪಾರಂಪರಿಕ ಜ್ಞಾನದ ಮೂಲ ನೆಲೆಗಳನ್ನು ಆಡಳಿತ ವರ್ಗ ಕಸಿದುಕೊಳ್ಳುವ ಕುತಂತ್ರಗಳು ಹಾಗೂ ತಮ್ಮ ಅಸ್ತಿತ್ವದ ಪಾರಂಪರಿಕ ನೆಲೆಗಳನ್ನು ಉಳಿಸಿಕೊಳಳಲು ಸಮುದಾಯಗಳು ನಡೆಸಿದ ಹೋರಾಟಗಳನ್ನು ದಾಖಲಿಸಿ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ವಿವಿಧ ಬುಡಕಟ್ಟುಗಳು ಆಡಳಿತ ವರ್ಗದ ಅಭಿವೃದ್ಧಿಯ ಹೆಸರಿನಲ್ಲಿ ನಡೆಸಲಾಗಿರುವ ಆಕ್ರಮಣಗಳ ಮಧ್ಯೆಯು ಉಳಿಸಿಕೊಂಡು ಬಂದಿರುವ ಔಷಧಿ ಚಿಕಿತ್ಸಾವಿಧಾನ ಮತ್ತು ಮರಗಿಡಬಳ್ಳಿಗಳ ವಿವರಣೆಗಳನ್ನು ಸಂಗ್ರಹಿಸಿ ಮಾಹಿತಿ ನೀಡಲಾಗಿದೆ.

### 1. ಸೀಮೆಯ ಅರ್ಥ

ಸೀಮೆ ಎಂದರೆ ಗಡಿ ಎಂದರ್ಥ. ಆದಿವಾಸಿಗಳು ತಮ್ಮ ಆದಿಮ ತಲಾಂತರದ ಪ್ರಾಣಿ ಜೀವನದಿಂದ ಸಾಂಸ್ಕೃತಿಕ ವಿಕಸಿತ ಬದುಕನ್ನು ಮಾರ್ಪಾಟುಗೊಳಿಸಿ ನೆಮ್ಮದಿಯ ಜೀವನ ರೂಪಿಸಿಕೊಳ್ಳುವಾಗ ಬೇಟೆ, ಆಹಾರ, ಸಂಗಾತಿ, ಸಂತತಿ ಮತ್ತು ಸಂಪನ್ಮೂಲಗಳ ವಿಚಾರದಲ್ಲಿ ಆಗಬಹುದಾದ ಸ್ಪರ್ಧೆ, ವ್ಯಾಜ್ಯ, ಹೊಡೆದಾಟ ಇವುಗಳಿಂದಾಗಬಹುದಾದ ಹಾನಿಗಳ ವಿರುದ್ಧ

ಪರಸ್ಪರ ಅವುಗಳ ಸಮಾನ ಹಂಚಿಕೆಗಾಗಿ ನಿರ್ಮಿಸಿಕೊಂಡ ನಿರ್ದಿಷ್ಟ ವಲಯವನ್ನು ಗಡಿ ಅಥವಾ ಸೀಮೆ ಎಂದು ಕರೆಯಬಹುದು.

ಬುಡಕಟ್ಟು ಸಮುದಾಯಗಳ ಸಂಸ್ಕೃತಿಯ ವಿಕಾಸದಲ್ಲಿ ಸಮುದಾಯವು ಸಾವಿರಾರು ವರ್ಷಗಳಲ್ಲಿ ರೂಪಿಸಿಕೊಂಡ ಈ ಸೀಮಾವ್ಯವಸ್ಥೆಯ ಮೂಲಕಾರಣ ಆಹಾರದ ಉತ್ಪನ್ನ ಮತ್ತು ಸಂಪನ್ಮೂಲಗಳ ಸಮಾನ ಹಂಚಿಕೆ ಮತ್ತು ರಕ್ಷಣೆ ತನ್ಮೂಲಕವಾಗಿ ನೆಮ್ಮದಿಯ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಸಮಾಜವನ್ನು ರೂಪಿಸಿಕೊಳ್ಳುವ ಉದ್ದೇಶವಿತ್ತು. ಅದಕ್ಕಾಗಿ ಕಾಲಕಾಲಕ್ಕೆ ಹುಟ್ಟಿಕೊಂಡ ವ್ಯವಸ್ಥೆಯೊಳಗೆ ಮಡಿದವರ ಆತ್ಮಗಳು ದೈವಗಳಾದವು. ಜೊತೆಗೆ ತಮಗನುಕೂಲ ಅಥವಾ ಸಾವು ಎದುರಿಸಲಾಗದ ಪಾಕೃತಿಕ ಶಕ್ತಿ ಮತ್ತು ಪ್ರಾಣಿಗಳನ್ನು ದೈವಗಳನ್ನಾಗಿ ಎತ್ತರಿಸಿ ಪೂಜಿಸತೊಡಗಿತು. ಹೀಗೆ ಇದರ ಸುತ್ತಲೂ ಹೆಣೆದುಕೊಂಡ ಉಪಾಸನೆ(Rituals)ಗಳ ಭಾಗವಾಗಿ ನೃತ್ಯ, ಹಾಡು, ಕಥೆ, ಬೇಟೆ, ಸಹಜ ಸಾಮೂಹಿಕ ಕೃಷಿ, ಹಬ್ಬ ಹರಿದಿನ, ಜಾತ್ರೆಗಳು, ಭಾಷೆ, ಸಾಮಾಜಿಕ ಜೀವನದ ಹುಟ್ಟು ಸಾವು, ಮದುವೆ ಇತ್ಯಾದಿಗಳು ಅಭಿವೃದ್ಧಿಗೊಂಡವು. ಮೇಲಿನ ವಿವಿಧ ಬುಡಕಟ್ಟುಗಳು ಸಂಪೂರ್ಣ ಬದುಕಿನ ಸಾಂಸ್ಕೃತಿಕ ಚಟುವಟಿಕೆಗಳನ್ನು ನಿಯಂತ್ರಿಸಲು ಸ್ವಯಂ ಆಡಳಿತ, ನ್ಯಾಯಮಂಡಳಿಗಳು ನಿರ್ಮಾಣವಾದವು. ಇವುಗಳನ್ನು ನಿರ್ದೇಶಿಸಲು ಹಟ್ಟಿಯ ಯಜಮಾನ ಬುದವಂತ ನೇಮಕವಾದ ಬುಡಕಟ್ಟುಗಳಲ್ಲಿ ರೂಪಿತವಾದ ಈ ಎಲ್ಲಾ ವಿಭಾಗಗಳು ಪರಸ್ಪರ ಒಂದಕ್ಕೊಂದು ಪೂರಕವಾದ ಘಟಕಗಳಾಗಿದ್ದು ಪರಸ್ಪರ ಅವಲಂಬಿತ ವಾಗಿರುತ್ತವೆ. ಕಾಡು ಮತ್ತು ಹಟ್ಟಿಯ ನಿರ್ದಿಷ್ಟ ಮೌಲ್ಯದಲ್ಲಿ ಜರುಗುವ ನಿರ್ದಿಷ್ಟ ಬುಡಕಟ್ಟುಗಳ ಸಾಂಸ್ಕೃತಿಕ ಚಟುವಟಿಕೆಗಳ ಒಟ್ಟು ಮೊತ್ತದ ಕೇಂದ್ರೀಕೃತ ವ್ಯವಸ್ಥೆಯನ್ನು 'ಸೀಮಾಪದ್ಧತಿ' ಎಂದು ಕರೆಯಬಹುದಾಗಿದೆ.

ಈ ರೀತಿಯಲ್ಲಿ ವಿಭಿನ್ನವಾದ ಸಂಸ್ಕೃತಿಯಲ್ಲಿ ವಿಕಸಿತಗೊಂಡ ನಿರ್ದಿಷ್ಟ ಭೌಗೋಳಿಕ ಪ್ರದೇಶದಲ್ಲಿನ ಬುಡಕಟ್ಟುಗಳು ಸಾವಿರಾರು ವರ್ಷಗಳಿಂದ ನಡೆಸಿದ ಜೀವನವನ್ನು ಅದರ ನಿರ್ದಿಷ್ಟ ವ್ಯಾಪ್ತಿಯಲ್ಲಿ ತನ್ನ ಸಾಂಸ್ಕೃತಿಕ ಚಟುವಟಿಕೆಗಳ ಬದುಕಿಗಾಗಿ ನಿಗದಿತಗೊಳಿಸಿದ ಬುಡಕಟ್ಟುಗಳ ಒಟ್ಟಾರೆ ಸಾಂಸ್ಕೃತಿಕ ಬದುಕನ್ನು ಸೀಮಾಪದ್ಧತಿಯು ನಿರ್ದೇಶಿಸುತ್ತದೆ. ಈ ಸೀಮಾಪದ್ಧತಿಯ ಆಚರಣೆಗಳು ಬೇರೆ ಬೇರೆ ಪ್ರದೇಶದ ಬುಡಕಟ್ಟುಗಳಲ್ಲಿ ವೈವಿಧ್ಯವೂ ವಿಶಿಷ್ಟವೂ ವಿಭಿನ್ನವೂ ಆಗಿದ್ದರೂ ಪ್ರಪಂಚದಲ್ಲಿನ ಎಲ್ಲಾ ಬುಡಕಟ್ಟುಗಳಲ್ಲಿರುವ ಸೀಮಾಪದ್ಧತಿಯಲ್ಲಿನ ಮೂಲ ಆಶಯಗಳು ಮಾತ್ರ ಒಂದೇ ತೆರನದ್ದಾಗಿರುತ್ತವೆ.

## 2. ಸೀಮಾಪದ್ಧತಿಯ ಹುಟ್ಟು ಮತ್ತು ವಿಕಾಸ

ಸೀಮಾಪದ್ಧತಿಯು ಮನುಷ್ಯ ಸೃಷ್ಟಿಸಿದ ಒಂದು ವಿಶಿಷ್ಟ ಪದ್ಧತಿ ಎನ್ನುವ ಹಾಗಿಲ್ಲ. ಜೀವಿಗಳಲ್ಲಿ ಇದು ಪ್ರಾಣಿಸಹಜ ನೈಸರ್ಗಿಕ ಗುಣಕ್ರಿಯೆ(Animal instinct). ಪ್ರತಿಯೊಂದು

ಜೀವಿಗಳಲ್ಲೂ ಮೂಲ ದ್ರವ್ಯಗುಣವಾಗಿ ಈ ಸೀಮಾಪದ್ಧತಿ ನೈಸರ್ಗಿಕ ಭಾಗವೇ ಪ್ರಾಣಿ ಮತ್ತು ಪಕ್ಷಿಗಳಲ್ಲಿ ಈ ಪ್ರಕ್ರಿಯೆಗಳನ್ನು ಕಾಣಬಹುದಾಗಿದೆ. ಹಿಂದಿಯಲ್ಲಿರುವ ಗಾದೆಯಂತೆ 'ಹಮಾರ ಕುತ್ತೆ ಹಮಾರ ಗಲ್ಲಿಮೆ ಶೇರ್ ಹೈ" ಎನ್ನುತ್ತಾರೆ. ಈ ಗಾದೆಗೆ ನಾಯಿಯೊಳಗಿನ ಸೀಮಾಪದ್ಧತಿಯೇ ಕಾರಣವಾಗಿದೆ. ಪ್ರತಿಯೊಂದು ಜೀವಿಗಳೂ ತನ್ನ ಆಹಾರ ಮತ್ತು ಸಂಗಾತಿಗಳಿಗಾಗಿ ಗಡಿವಲಯಗಳನ್ನು ರಚಿಸಿಕೊಳ್ಳುತ್ತವೆ. ತಾನು ರಚಿಸಿಕೊಂಡ ವೃತ್ತ ಆವರಣದ ವಲಯದೊಳಗೆ ತನ್ನ ಸಮುದಾಯದಲ್ಲದ ಇತರ ಗುಂಪಿನವು ತಪ್ಪಿ ಒಳ ಪ್ರವೇಶಿದರೆ ವಲಯ ವ್ಯಾಪ್ತಿಯ ಗುಂಪು ಕದನವನ್ನೇ ಹೂಡುತ್ತವೆ. ಹೀಗೆ ಇಂತಹ ಪ್ರಾಣಿಗಳಲ್ಲಿರುವ ನಡವಳಿಕೆಯನ್ನು ಕೋತಿ, ಹುಲಿ, ಕಾಡುನಾಯಿ, ತೋಳ, ಪಕ್ಷಿ, ಕೀಟಗಳಲ್ಲೂ ಗಮನಿಸಬಹುದಾಗಿದೆ. ಪ್ರಾಣಿ ಮತ್ತು ಕೀಟಗಳಲ್ಲಿ ಈ ರೀತಿಯ ಗಡಿಗಳನ್ನು ಗುರ್ತಿಸಿಕೊಳ್ಳಲೆಂದೇ ತನ್ನ ದೇಹದಲ್ಲಿ ವಿಶೇಷವಾದ ರಾಸಾಯನಿಕ ರಸವಿಶೇಷವನ್ನು ಸ್ರವಿಸುತ್ತದೆ. ಅದನ್ನು ಆಂಗ್ಲಭಾಷೆಯಲ್ಲಿ 'ಫೆರಮೊನ್ಸ್' ಎಂದು ಕರೆಯುತ್ತಾರೆ. ಈ ರೀತಿ ದೇಹದಲ್ಲಿ ಸ್ರವಿಸುವ ಈ ರಾಸಾಯನಿಕವನ್ನು ತನ್ನ ವಲಯದ ಸೀಮೆಯೊಳಗೆ ಪ್ರಸರಿಸುತ್ತವೆ. ಈ ರಸಾಯನಿಕ ಫೆರಮೊನ್‌ನನ್ನು ನಾಸಿಕ ಇಂದ್ರಿಯದಿಂದ ಗ್ರಹಿಸುವ ಈ ತರಹದ ಜೀವಿಗಳು ತಮ್ಮ ಗಡಿಯನ್ನು ಗುರ್ತಿಸಿಕೊಳ್ಳುತ್ತವೆ. ಹಾಗಾಗಿ ಪ್ರಾಣಿಗಳ ಕಲ್ಲು, ಮರ, ಬಂಡೆಗಳಿಗೆ ಆಗಾಗ ಮೂತ್ರ ವಿಸರ್ಜನೆ ಮಾಡುವುದನ್ನು ಅದನ್ನು ಬೇರೆ ಅದೇ ಜಾತಿಯ ಪ್ರಾಣಿಗಳು ಮೂಸಿ ಗಡಿಯನ್ನು ಗಮನಿಸುವುದನ್ನು ಗಮನಿಸಿರಬಹುದು. ಸಾಮಾನ್ಯವಾಗಿ ನಾಯಿ ಈ ರೀತಿ ಗಡಿಯನ್ನು ಮೂತ್ರದಲ್ಲಿನ ಫೆರಮೊನ್ ಮೂಲಕ ಗುರ್ತಿಸಿಕೊಳ್ಳುತ್ತದೆ. ಅದೇ ರೀತಿ ಹುಲಿ ಕೂಡ ಕಾಡಿನ ತನ್ನ ಗಡಿಯ ಒಳಗೆ ಮರಗಡಿ ಕಲ್ಲುಬಂಡೆಗಳಿಗೆ ಹಿಂಭಾಗದಿಂದ ಮೂತ್ರವನ್ನು ಸ್ಪ್ರೇ ಮಾಡುವ ಮೂಲಕ ತನ್ನ ಗಡಿ ಇದು. ಅನ್ಯರು ಪ್ರವೇಶ ಮಾಡುವಂತಿಲ್ಲವೆಂಬ ಸಂದೇಶವನ್ನು ಸಾರಿರುತ್ತದೆ. ಇದನ್ನು ಉಲ್ಲಂಘಿಸಿದಾಗ ಘೋರ ಕದನವಾಗುತ್ತದೆ. ಇದೇ ರೀತಿಯ ಸ್ವಭಾವ ಆನೆಗಳಲ್ಲಿ ಕಾಣಬಹುದಾಗಿದೆ. ಹಾಗಾಗಿ ಅವುಗಳ ಗಡಿಯೊಳಗಿನ ಓಡಾಟವನ್ನು ಟೈಗರ್ ಟ್ರ್ಯಾಕ್, ಎಲಿಫೆಂಟ್ ಕಾರಿಡಾರ್‌ಗಳೆಂದು ಕರೆಯಲಾಗುತ್ತದೆ. ಅದು ಅವುಗಳ ಸೀಮಾಪದ್ಧತಿಯೊಳಗಿನ ಮಾರ್ಗಗಳಾಗಿವೆ(ಹುಲಿ ತನ್ನ ಪಂಜಗಳಿಂದ ಮರಗಳಿಗೆ ಗೀರು ಗುರುತು ಮಾಡಿ ತನ್ನ ಗಡಿಗಳನ್ನು ಗುರ್ತಿಸಿಕೊಳ್ಳುತ್ತದೆ). ಇದೇ ರೀತಿ ಕೀಟಗಳ ಲೋಕದಲ್ಲಿನ ಇರುವ ಜೇಡ ಗೆದ್ದಲುಗಳು ಜೇನುಗಳಲ್ಲಿ ಸೀಮಾಪದ್ಧತಿ ವಿಶಿಷ್ಟವಾದ ರೂಪದಲ್ಲಿದೆ. ಪ್ರಾಣಿಗಳನ್ನು ದ್ರವರೂಪದಲ್ಲಿ ಅಂದರೆ ಮೂತ್ರ ವಿಸರ್ಜನೆಯಲ್ಲಿ ಫೆರಮೊನ್ ರಾಸಾಯನಿಗಳ ಮೂಲಕ ತಮ್ಮ ಸೀಮೆಗಳನ್ನು ಗುರ್ತಿಸಿ ತನ್ನ ಸೀಮಾ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿದರೆ, ಈ ಕೀಟಗಳು ಪರಿಸರದಲ್ಲಿನ ಗಾಳಿಗೆ ಪೆರಮೊನ್‌ನನ್ನು ಸಿಂಪಡಿಸಿ ತಮ್ಮ ಗಡಿಗಳನ್ನು ಗುರ್ತಿಸಿಕೊಳ್ಳುತ್ತವೆ. ಜೇನು ಹೀಗೆ ಫೆರಮೊನ್ ಮೂಲಕ ನಿರ್ದೇಶಿಸಿದ ಗಡಿಯೊಳಗೆ ಮಾತ್ರ ಬದುಕುತ್ತವೆ ಮತ್ತು ನಿರ್ದಿಷ್ಟ

ಹೂವು ಮರಗಿಡಗಳಲ್ಲಿ ಮಕರಂದ ಹೀರುತ್ತವೆ. ಹೀಗೆ ಸೀಮಾ ಕಾರ್ಯಚಟುವಟಿಕೆಗಳು ಅವುಗಳ ಗಡಿಯೊಳಗಿನ ವ್ಯಾಪ್ತಿಗಳಲ್ಲಿ ನಡೆಯುತ್ತಿರುತ್ತವೆ. ಹಾಗೆಯೇ ಸಸ್ಯಲೋಕದಲ್ಲಿ ಬೇರೆಯದೇ ರೂಪದಲ್ಲಿ ಅವುಗಳದೇ ಆದ ಸೀಮಾರೇಖೆ, ಪ್ರಪಂಚವಿದೆ. ಹಾಗಾಗಿ ನಾವು ಕೊನಿಪೆರಸ್ ಕಾಡು, ಕಾಂಡ್ಲವನ, ಸೀಗೇಮೆಳೆ, ಅಶೋಕವನಗಳೆಂದು ವಿಂಗಡಿಸಿ ಕರೆಯುತ್ತೇವೆ. ಸಸ್ಯಗಳೂ ಕೂಡ ತನ್ನ ಸುತ್ತಲೂ ಬೇರೆ ಗಿಡಗಳು ಬೆಳೆಯದಂತೆ ರಸಾಯನಿಕವನ್ನು ಸ್ರವಿಸುವುದು ಕಂಡುಬಂದಿದೆ. ನೀಲಗಿರಿ ಮರವು ತನ್ನ ಸುತ್ತಲೂ ಬೇರೆ ಗಿಡಗಳು ಬೆಳೆಯದಂತೆ ರಾಸಾಯನಿಕವನ್ನು ಸ್ರವಿಸುತ್ತವೆಯಂತೆ. ಸಸ್ಯಗಳು ಈ ಪ್ರಕಿಯೆಯನ್ನು 'ಅಲೆಲೋಪತಿ' ಎನ್ನುತ್ತಾರೆ. ಹಾಗಾಗಿ ಬುಡಕಟ್ಟುಗಳೊಳಗಿನ ಸೀಮಾಪದ್ಧತಿ ಹೊಸತೇನಲ್ಲ. ಜೀವಿಗಳ ಲೋಕದಲ್ಲಿ ಅಡಕವಾಗಿರುವ ಸಾವಿರಾರು ಕೋಟಿ ವರ್ಷಗಳಿಂದ ಆಹಾರ ಸಂಗಾತಿ ಮತ್ತು ಸಂತತಿಗಳಿಗಾಗಿ ಬೇರೆ ವೈವಿಧ್ಯಮಯ ವಿಧಗಳಲ್ಲಿ ಸೀಮಾಪದ್ಧತಿಯು ವಿಕಾಸಗೊಂಡ ರೂಪಗಳನ್ನು ಗುರ್ತಿಸಬಹುದಾಗಿದೆ.

ಮನುಷ್ಯ ಹಾಗೂ ಅನೇಕ ಜೀವಿಗಳಲ್ಲಿ 'ವಲಸೆ' ಎನ್ನುವ ಒಂದು ಪ್ರಕ್ರಿಯೆ ಇದೆಯಲ್ಲ. ಆಗ ಹೇಗೆ ಇಂತಹ ಜೀವಿಗಳು ಗಡಿಯ ವ್ಯಾಪ್ತಿಯನ್ನು ಸೀಮಾಪದ್ಧತಿಗೆ ಅಳವಡಿಸಿಕೊಳ್ಳುತ್ತವೆ ಎಂಬ ಪ್ರಶ್ನೆ ಉದ್ಭವವಾಗುತ್ತದೆ.

ಜೀವಿಗಳಲ್ಲಿ ಋತುಗಳ ಏರಿಳಿಕೆ, ಆಹಾರದ ಲಭ್ಯತೆಗಳಿಗನುಗುಣವಾಗಿ ವಲಸೆಯ ಪ್ರವೃತ್ತಿಯೂ ವಿಕಸಿತವಾಗಿದೆ. ಪ್ರಾಣಿ, ಪಕ್ಷಿ, ಕೀಟಗಳಲ್ಲಿ ಭೌಗೋಳಿಕ ಪ್ರದೇಶದ ಋತು ವ್ಯತ್ಯಾಸ, ಹವಾಮಾನ ವೈಪರೀತ್ಯ, ಆಹಾರದ ಪೈಪೋಟಿಗಳಿಗನುಸಾರವಾಗಿ ವಲಸೆ ಹೋಗುವ ಮತ್ತೆ ವಾಪಸ್ಸು ಬರುವ ವಿಧಾನವನ್ನು ಜೀವಿಗಳು ಅಳವಡಿಸಿಕೊಂಡಿವೆ. ಅದರಂತೆ ಪ್ರಾಣಿ ಪಕ್ಷಿ ಕೀಟಗಳೂ ವಲಸೆ ಹೋಗುತ್ತವೆ. ಅನೇಕ ಪಕ್ಷಿಗಳು ಉತ್ತರಧ್ರುವಗಳಲ್ಲಿನ ಅಗಾಧ ಚಳಿಯಿಂದ ವಾತಾವರಣ ಹೆಪ್ಪುಕಟ್ಟಿ ಮಂಜುಗಡ್ಡೆಗಳಾಗುವ ಕಾರಣ ಅಲ್ಲಿ ಬದುಕಲು ಅಸಹನೀಯ ವಾತಾವರಣವಿರುವ ಕಾರಣ, ಚಳಿಗಾಲಕ್ಕೆ ಉಷ್ಣಾಂಶವಿರುವ ಪ್ರದೇಶಗಳಿಗೆ ವಲಸೆ ಬಂದು ಗೂಡುಕಟ್ಟಿ ಮೊಟ್ಟೆಯನ್ನಿಟ್ಟು ಮರಿ ಮಾಡಿ ಅಲ್ಲಿನ ವಾತಾವರಣ ಚಳಿಯಿಂದ ಸುಧಾರಿಸಿದ ಮೇಲೆ ಪುನಃ ವಾಪಸ್ಸಾಗುವ ಪಕ್ಷಿಗಳ ಬರ್ಡ್ ಮೈಗ್ರೇಷನ್ ಬಗ್ಗೆ ನಾವೆಲ್ಲಾ ತಿಳಿದಿದ್ದೇವೆ. ಅದರಂತೆ ಜೇನುಗಳೂ ಕೂಡ ಒಂದು ಕಡೆಯಿಂದ ಮಳೆಗಾಲ ತಪ್ಪಿಸಲು, ಮಳೆಗಾಲವಿಲ್ಲದ ಕಡೆ ಬಂದು ಗೂಡುಕಟ್ಟಿ ಮೊಟ್ಟೆಯನ್ನಿಟ್ಟು ಮರಿ ಮಾಡಿ ಮಳೆಗಾಲ ಶುರುವಾಗುವ ಮೊದಲೇ, ಹುಟ್ಟಿದ ಪುಟ್ಟ ಮರಿಗಳೊಂದಿಗೆ ಸಂಗ್ರಹಿಸಿಟ್ಟ ಜೇನು ಕುಡಿದು ಹಾರಿ ಮತ್ತೊಂದು ನಿರ್ದಿಷ್ಟ ಪ್ರದೇಶಕ್ಕೆ ವಲಸೆ ಹೋಗಿ ಮತ್ತೆ ಅದೇ ನಿರ್ದಿಷ್ಟ ಜಾಗಕ್ಕೆ ಬಂದು ಗೂಡು ಕಟ್ಟುವ ಕ್ರಿಯೆಯನ್ನು ನಾವು ಗಮನಿಸಿದ್ದೇವೆ. ಹೀಗೆ ವಲಸೆ ಹೋಗುವಾಗ ಮತ್ತೊಂದು ಪ್ರದೇಶದ ಭೌಗೋಳಿಕ ಪರಿಸರದ ವ್ಯತ್ಯಾಸಗಳಿಗೆ ತಕ್ಕಂತ ತನ್ನ ದೇಹದ ಬಣ್ಣ ರಚನೆಗಳಲ್ಲಿ ಜೀವಿಗಳು

ಹವಾಮಾನ ಮತ್ತು ವಾತಾವರಣಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳುತ್ತವೆ. ಇದನ್ನು ಹೊಂದಾಣಿಕೆ (Adoptation) ಎನ್ನುತ್ತೇವೆ. ಈ ತರಹದ ಹೊಂದಾಣಿಕೆಯಿಂದ ತನ್ನಲ್ಲಾಗುವ ಬದಲಾವಣೆಯನ್ನು ನಾವು ಜಾತಿಸೃಷ್ಟಿ(Speciation), ಇದರಿಂದ ಇರುವ ಜೀವಿಗಳು ಕೊಂಚಕೊಂಚವಾಗಿ ಬದಲಾವಣೆ ರೂಪಾಂತರ ಹೊಂದಿ ಹೊಸ ವರ್ಗಗಳ/ಜಾತಿಗಳ ಸೃಷ್ಟಿಗೆ ನಾಂದಿಯಾಗುತ್ತದೆ. ಈ ಅಂಶವೇ ಜೀವಿಗಳಲ್ಲಿರುವ ವೈವಿಧ್ಯತೆಗಳಿಗೆ(Bio-diversity) ಕಾರಣವಾದ ಸಂಗತಿಯಾಗಿದೆ.

ಕಾಡಿನ ಪರಿಸರದ ಜಗತ್ತಿನ ಜೀವಿಗಳಲ್ಲಿ ನೈಸರ್ಗಿಕ ವಿಕಾಸದಿಂದ ಆಗುತ್ತಿರುವ ಸೀಮಾಪದ್ಧತಿಯು ಆದಿಮ ಸ್ಥಿತಿಯಲ್ಲಿ ಮಾನವನಲ್ಲೂ ಇತ್ತು. ಆದರೆ ಯಾವಾಗ ಮನುಷ್ಯ ಇತರೆ ಜೀವಿಗಳಿಗಿಂತ ಭಿನ್ನವಾಗಿ ತನ್ನ ಮಾನಸಿಕ ಮಟ್ಟವನ್ನು ವಿಕಸಿತಗೊಳಿಸಿಕೊಂಡನೋ ಅದರ ಜೊತೆ ಜೊತೆಗೆ ನಿಸರ್ಗದ ಪ್ರಾಕೃತಿಕವಾದ ಸೂತ್ರಗಳನ್ನು ಮೀರಿ ತನ್ನ ಅಭಿವೃದ್ಧಿಗಾಗಿ ಪರಿಸರವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿಕೊಂಡು, ಇತರ ಜೀವಿಗಳಿಗಿಂತ ವಿಭಿನ್ನವಾದ ಅತ್ಯಂತ ವಿಕಸಿತವಾದ ವ್ಯವಸ್ಥೆಗಳನ್ನು ಮಾಡಿಕೊಂಡ. ಹೀಗೆ ತನಗೆ ತಕ್ಕಂತೆ ನಿಸರ್ಗವನ್ನು ಬದಲಾಯಿಸಿ ತನ್ನ ಬದುಕನ್ನು ವಿಕಾಸಗೊಳಿಸಲು ಅಡಿ ಇಟ್ಟು ಕ್ರಮೇಣವಾಗಿ ಆದಿಮ ಸ್ಥಿತಿಯಿಂದ ಇಂದಿನ ನಾಗರಿಕತೆಯ ಆಧುನಿಕ ಜಗತ್ತಿಗೆ ಮನುಷ್ಯ ಪಾದಾರ್ಪಣೆ ಮಾಡಿದ. ಹೀಗೆ ಆಧುನಿಕ ನಾಗರಿಕತೆಯ ಬದುಕಿಗಾಗಿ ಕಾಪಾಡಲು ಶುರುಮಾಡಿದ ಪ್ರಾರಂಭಿಕ ಹಂತದ ಅದಿಮ ಸ್ಥಿತಿಯ ವ್ಯವಸ್ಥೆಯೇ ಬುಡಕಟ್ಟುಗಳ ಸೀಮಾಪದ್ಧತಿಯಾಗಿತ್ತು.

ಹೀಗಾಗಿ ಕಾಡಿನ ಪ್ರಾಣಿಜೀವನ ವಿಕಸಿತವಾದ ಭಾಗವಾಗಿ ಬುಡಕಟ್ಟುಗಳ 'ಸೀಮಾಪದ್ಧತಿ' ವಿಕಸಿತವಾಗಿದೆ ಎಂದು ಹೇಳಬಹುದಾಗಿದೆ. ಹಾಗಾಗಿ ಬುಡಕಟ್ಟುಗಳ ಜೀವನದ ಕಾಡಿನ ಪರಿಸರದ ಒಂದು ವಿಕಸಿತ ಭಾಗವೆಂದು ಹೇಳಬಹುದು(Tribals life is the part of the forest). ಹಾಗೆಯೇ ಕಾಡಿನ ಜೀವ ವೈವಿಧ್ಯಗಳಂತೆ(Bio-diversity) ಬುಡಕಟ್ಟುಗಳಲ್ಲಿರುವ ಸೀಮಾಪದ್ಧತಿಯ ವೈವಿಧ್ಯತೆಗಳೂ ಕಾಡಿನ ಜೀವ ವೈವಿಧ್ಯತೆಗಳ ಒಂದು ಭಾಗವೇ ವಿಕಸಿತವಾಗಿ (Traditional Bio-diversity) ನಂತರ ಕಾಡಿನಿಂದ ವೈರುಧ್ಯ ದಿಕ್ಕಿಗೆ ನಾಗರಿಕತೆ ಅಭಿವೃದ್ಧಿಯ ಚಹರೆ ಹೊತ್ತೇ ಇಂದಿನ ಆಧುನಿಕತೆಯ ಬದುಕಿಗೆ ಅನಾವರಣಗೊಂಡಿದೆ.

### 3. ಸೀಮಾಪದ್ಧತಿಯ ಸ್ವರೂಪ ಮತ್ತು ಅಸ್ತಿತ್ವ

ಮನುಷ್ಯನ ಬುಡಕಟ್ಟು ಸಂತತಿ ಹೆಚ್ಚಿದಂತೆಲ್ಲಾ ಬದುಕಿಗಾಗಿ ಅವಲಂಬಿತವಾಗಿದ್ದ ಬೇಟೆ ಆಹಾರ, ಕಾಡಿನ ಕಿರು ಉತ್ಪನ್ನ, ಸಂಗಾತಿ ಮತ್ತು ತನ್ನ ಸಂತತಿಗಳಾಗಿ ಯಾವಾಗ ತೀವ್ರ ಪೈಪೋಟಿ ಮತ್ತು ಸ್ಪರ್ಧೆಗಳು ಶುರುವಾದವೋ ಅವುಗಳ ಜೊತೆ ಜೊತೆಗೆ ಸೀಮಾಪದ್ಧತಿಯಲ್ಲಿನ ನಿಯಮ ಕಟ್ಟುಪಾಡು ಸ್ವಯಂ ಆಡಳಿತ ವ್ಯವಸ್ಥೆ, ದೈವಗಳು, ನಂಬಿಕೆ, ಆಚರಣೆ ಇತ್ಯಾದಿಗಳು ಇತರೆ ಸೀಮೆಯ ಪದ್ಧತಿ ಮತ್ತು ವ್ಯವಸ್ಥೆಗಳಲ್ಲೂ ಬದಲಾವಣೆ ಮತ್ತು ವಿಕಾಸವು ಅಭಿವೃದ್ಧಿಗೊಳ್ಳುತ್ತಾ

ಬಂದಿತು. ಜನಸಂಖ್ಯೆ ಹೆಚ್ಚಿದ ಸಮುದಾಯಗಳು ಮೊದಲೇ ಒಂದು ಪಂಗಡವಾಗಿದ್ದುದು ಬೇರೆ ಬೇರೆ ಬೆಡಗು ಕುಲಗಳಾಗಿ ವಿಂಗಡಣೆಗೊಂಡವು. ವಿಂಗಡಣೆಗೊಂಡ ಗುಂಪುಗಳು ಕಾಡಿನ ಸಂಪನ್ಮೂಲಗಳ ಬಳಕೆಗಾಗಿ ನಿರ್ದಿಷ್ಟ ಗಡಿ/ಸೀಮೆಗಳನ್ನು ಹಂಚಿಕೊಂಡವು. ಹೀಗೆ ಹಂಚಿಕೆಯಾದ ಕಾಡಿನ ಗಡಿಗಳಲ್ಲಿ ಕಾಡಿನ ಸಂಪನ್ಮೂಲಗಳಾದ ಕಾಡಿನ ಕಿರು ಉತ್ಪನ್ನಗಳ ಸಂಗ್ರಹಣೆ ಮತ್ತು ಬಳಕೆ, ಬೇಟೆ ಮತ್ತು ಆಹಾರದ ಹಂಚಿಕೆ ಇವುಗಳಿಗಾಗಿ ನಿಯಮ, ನ್ಯಾಯ, ಸ್ವಯಂ ಆಡಳಿತದ ನ್ಯಾಯಮಂಡಳಿ, ಈ ಸೀಮಾರಕ್ಷಣೆಗಾಗಿ ದೈವಗಳು, ನಂಬಿಕೆ, ಹಬ್ಬ ಹರಿದಿನ ಜಾತ್ರೆ, ಉತ್ಸವ ಇತ್ಯಾದಿ ಹೀಗೆ ಸೀಮಾಪದ್ಧತಿಯ ಸುತ್ತಲೂ ಬುಡಕಟ್ಟು ಸಾಮಾಜಿಕವ್ಯವಸ್ಥೆ ಹೆಣೆಯಲ್ಪಟ್ಟವು.

ಸೀಮಾಪದ್ಧತಿಯ ಸ್ವರೂಪ ಕಾಡಿನ ಅವಲಂಬನೆಗೆ ಆಧಾರಿತವಾದ ಬುಡಕಟ್ಟು ಸಮುದಾಯಗಳು, ಪಶುಪಾಲನೆಗೆ ಅವಲಂಬಿತವಾದ ಬಯಲು ಪ್ರದೇಶದ ಬುಡಕಟ್ಟುಗಳು ಮತ್ತು ಋತುಮಾನಗಳು ಮತ್ತು ಅವಶ್ಯಕತೆಗೆ ತಕ್ಕಂತೆ ವಲಸೆಗೊಳ್ಳುತ್ತಿರುವ ಬುಡಕಟ್ಟುಗಳಲ್ಲಿ ಸೀಮಾಪದ್ಧತಿಯ ಸ್ವರೂಪಗಳು ಪರಸ್ಪರ ವ್ಯತಿರಿಕ್ತವಾದ ರೀತಿಯಲ್ಲಿ ವ್ಯವಸ್ಥೆ ರೂಪಿತವಾಗಿರುವುದನ್ನು ಕಾಣಬಹುದಾಗಿದೆ.

ಸಾಮಾನ್ಯವಾಗಿ ಬುಡಕಟ್ಟು ಸಮುದಾಯದ ಹಳ್ಳಿಗಳನ್ನು ಹಾಡಿ, ಹಟ್ಟಿ, ಕುಳಾವಿ, ವಾಡ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಒಂದು ಕಾಡಿನ ಹಾಡಿಗೂ ಅಕ್ಕಪಕ್ಕದ ವ್ಯಾಪ್ತಿಯಲ್ಲಿರುವ ಇತರ ಹಾಡಿಗಳ ಮಧ್ಯೆ ನಿರ್ದಿಷ್ಟವಾದ ಗಡಿರೇಖೆಯನ್ನು ಅನಾದಿಕಾಲದಿಂದಲೂ ಬುಡಕಟ್ಟು ಸಮುದಾಯಗಳು ಸೀಮಾವಲಯವನ್ನು ಗುರ್ತಿಸಿವೆ. ಅವುಗಳು ಪರಸ್ಪರ ಬೇರೆ ಬೇರೆ ಹಾಡಿಗಳಿಂದ ನಿರ್ದಿಷ್ಟವಾಗಿ ಪ್ರತ್ಯೇಕಿಸಲ್ಪಟ್ಟಿರುತ್ತವೆ. ಪ್ರತಿಯೊಂದು ಹಾಡಿಯ ಕಾಡಿನ ನಿರ್ದಿಷ್ಟ ವರ್ತುಲದ(radius) ರೇಖೆಯೊಳಗಿನ ಕಾಡಿನ ಸಂಪನ್ಮೂಲ ಬೇಟೆ ಆಹಾರಸಂಗ್ರಹಣೆ, ಅದರೊಳಗಿನ ದೇವಗಳು, ಹಬ್ಬ, ಹರಿದಿನ, ಪೂಜೆ, ಜಾತ್ರೆ, ಕೃಷಿ ಎಲ್ಲವೂ ಆ ಹಾಡಿನ ನಿಯಮ ನ್ಯಾಯಮಂಡಳಿಯ ಸೀಮಾಪದ್ಧತಿಯ ವ್ಯವಸ್ಥೆಯ ಸಾಮ್ರಾಜ್ಯವಾಗಿರುತ್ತದೆ.

ಒಂದು ಹಾಡಿಯ ಸೀಮಾವಲಯದೊಳಗೆ ಹಾಡಿಗಾಗಿ ಮಡಿದ ಬುಡಕಟ್ಟು ಸಮುದಾಯದ ಹಿರಿಯರ ಆತ್ಮಗಳು ಸಾಂಪ್ರದಾಯಿಕ ಆಚರಣೆಗೊಳಪಟ್ಟು ದೈವಗಳಾಗಿ ಗಡಿಗಳಲ್ಲಿ ಕಲ್ಲುಗಳಾಗಿ ಪ್ರತಿಷ್ಠಾಪಿಸಲ್ಪಟ್ಟಿರುತ್ತವೆ. ಅವುಗಳಿಗೆ ಪ್ರತ್ಯೇಕವಾದ ಬುಡಕಟ್ಟು ಸಮುದಾಯದ ರಕ್ಷಣೆಯ ಮತ್ತು ಗಡಿರಕ್ಷಣೆಯ ಜವಾಬ್ದಾರಿ ಪಾತ್ರಗಳನ್ನು ಹೊತ್ತು ನಿರಂತರವಾಗಿ ಅದನ್ನು ಪಾಲಿಸುತ್ತಿರುತ್ತವೆ. ಈ ಆತ್ಮಗಳು ತಮ್ಮ ಗಡಿಯನ್ನು ಪಕ್ಕದ ಗಡಿಯ ಸಮುದಾಯಗಳ ಅಥವಾ ಕಳ್ಳಕಾಕರು, ಕಾಡು ಮೃಗಗಳಿಂದ ಸದಾ ಕಾಯುತ್ತಾ ಸಂರಕ್ಷಿಸುತ್ತಿರುತ್ತವೆಯೆಂಬುಧು ಸಮುದಾಯಗಳ ನಂಬಿಕೆಯಾಗಿರುತ್ತದೆ. ಈ ಮಡಿದ ದೈವಗಳ ಆತ್ಮಗಳೊಟ್ಟಿಗೆ ಕಾಡಿನ ದೈವಗಳಾದ ವಾಗ್ರೊ(ಹುಲಿ)

ದೈವ, ಜನ್ಮಿ ದೈವ, ಸಿದ್ದಿನಾಸ ಚುಡಗೊಡಾಸ ಕರಿದೇವರು, ಸತಿಗಳು, ಮಾರಮ್ಮ ಹೀಗೆ ಸಾವಿರಾರು ರೀತಿಯ ನೈಸರ್ಗಿಕ ದೈವಗಳು, ಆತ್ಮಗಳ ಜೊತೆಗೂಡಿ ಪ್ರತ್ಯೇಕವಾದ ಜವಾಬ್ದಾರಿಗಳನ್ನು ಹೊತ್ತು ಕಾಡು ಬೆಳೆ ಮತ್ತು ಹಾಡಿಯ ಗಡಿ/ಸೀಮೆಯನ್ನು ಸದಾ ರಕ್ಷಿಸುತ್ತಿರುತ್ತದೆ. ಈ ದೈವಗಳು ಹೀಗೆ ಸದಾ ತಮ್ಮನ್ನು, ತಮ್ಮ ಬೆಳೆಯನ್ನು ಮತ್ತು ಕಾಡನ್ನು ತಮ್ಮ ಗಡಿಯನ್ನು ರಕ್ಷಿಸಲು ಅವುಗಳಿಗೆ ಕಾಲಕಾಲಕ್ಕೆ ತಕ್ಕಂತೆ ಪೂಜೆ, ಪುನಸ್ಕಾರ, ಅರಿಕೆ, ಹರಕೆ, ಹಬ್ಬ ಹರಿದಿನ, ಜಾತ್ರೆ, ಉತ್ಸವ, ನೈವೇದ್ಯ, ಬಲಿ, ಹಾಡು, ನೃತ್ಯ ಮುಂತಾದ ಆಚರಣೆಗಳನ್ನು ನೆರವೇರಿಸುತ್ತಾ ತಮ್ಮನ್ನು ತಮ್ಮ ಗಡಿಯನ್ನು ಕಾಯ್ದುಕೊಂಡು ರಕ್ಷಿಸುತ್ತಿರುವ ದೈವಗಳಿಗೆ ಧನ್ಯತಾ ಭಾಗವಾಗಿ ಪೂಜೆ ಪುನಸ್ಕಾರಗಳನ್ನು ನಡೆಸಿಕೊಂಡು ಬರುತ್ತಿರುತ್ತಾರೆ.

ಬೇರೆ ಬೇರೆ ಬುಡಕಟ್ಟುಗಳ ಬದುಕಿನ ಕುಲಕಸುಬುಗಳು ಬೇರೆ ಬೇರೆಯದೇ ಆಗಿರುತ್ತದೆ. ಆ ಕಸುಬುಗಳಿಗಾಧಾರವಾದ ವೃತ್ತಿ, ಕರಕುಶಲ–ಕುಸರಿ, ಹಾಡು, ನೃತ್ಯ, ಹಸೆ, ಉಪಾಸನೆ(Rituals) ಹುಟ್ಟುಸಾವು ಮದುವೆಗಳ ಆಚರಣೆಗಳು ವೈವಿಧ್ಯತೆಗಳನ್ನೊಳಗೊಂಡಿರುತ್ತವೆ.

## 4. ವಿವಿಧ ದೇಶಗಳಲ್ಲಿ ಆದಿವಾಸಿಗಳ ಸೀಮಾಪದ್ಧತಿಯ ವಿಶ್ಲೇಷಣೆ

ಅಧ್ಯಯನದ ವಿಷಯದ ಕುರಿತು ವಿದೇಶದ ಆದಿವಾಸಿಗಳಲ್ಲಿ ಇರಬಹುದಾದ ಇಡೀ ಬುಡಕಟ್ಟು ಸಾಮಾಜಿಕ ಸಂಸ್ಕೃತಿಯನ್ನು ನಿಯಂತ್ರಿಸುತ್ತಿರುವ ಸೀಮಾಪದ್ಧತಿಯ ಬಗ್ಗೆ ಅಧ್ಯಯನದ ಆಕರಗಳೇನಾದರೂ ದೊರಕಬಹುದೇ ಎಂದು ಅಂತರ್ಜಾಲವನ್ನು ಜಾಲಾಡಲಾಗಿ ಈ ಬಗ್ಗೆ ಕೇವಲ ಆದಿವಾಸಿಗಳ ಭೂಮಿ, ಗಡಿ ಮತ್ತು ಸಂಪನ್ಮೂಲಗಳ ಹಕ್ಕುಗಳಿಗಾಗಿ ನಡೆಸುತ್ತಿರುವ ಹೋರಾಟ, ಚಳುವಳಿ, ಸಂಘಟನೆ ಮತ್ತು ವ್ಯಾಜ್ಯ ಹಾಗೂ ನ್ಯಾಯತೀರ್ಮಾನಗಳ ಬಗ್ಗೆ ಇರುವ ಅಧ್ಯಯನಗಳ ಮಾಹಿತಿಗಳು ಮಾತ್ರ ಲಭ್ಯವಾಗುತ್ತಿವೆಯೇ ಹೊರತು ಪ್ರಸ್ತುತ ಅಧ್ಯಯನದ ಸಾಂಸ್ಕೃತಿಕ ಸ್ವರೂಪದ ಮಾಹಿತಿಗಳು ಎಲ್ಲೂ ಲಭ್ಯವಾಗುತ್ತಿಲ್ಲ.

ಮೇಲೆ ತಿಳಿಸಿರುವ ಮಾಹಿತಿಯ ಪ್ರಕಾರ ಅಂತರರಾಷ್ಟ್ರೀಯ ಭೂ ಸಂಘಟನೆ ಪ್ರಕಟಣೆ "[International land coalition publication (ILC)] ಸಂಸ್ಥೆಯು ಮೂಲ ನಿವಾಸಿಗಳ ಭೂಮಿ, ಗಡಿ, ಜಲ ಮತ್ತು ಸಂಪನ್ಮೂಲಗಳ ಹಕ್ಕು ಪ್ರತಿಪಾದನೆಗಾಗಿ ಕಾರ್ಯ ನಿರ್ವಹಿಸುತ್ತಿದೆ. ಇದರಡಿಯಲ್ಲಿ ವಿಶ್ವ ಭೂ ಒಕ್ಕೂಟ, ಮೂಲನಿವಾಸಿ ಸಮುದಾಯಗಳ ಒಕ್ಕೂಟ ಮತ್ತು ಇದೇ ತರಹದ ಪ್ರಪಂಚದ 169 ವಿವಿಧ ಸಂಘಟನೆಗಳು ಕೂಡಿಕೊಂಡು ILC ಆಗಿದೆ. ಇದು ಪ್ರಪಂಚದ 370 ಮಿಲಿಯನ್ ನಿವಾಸಿಗಳಿಗಾಗಿ ಕಾರ್ಯ ನಿರ್ವಹಿಸುತ್ತಿದೆ. 2013ರಲ್ಲಿ ಆಂಟಿಗೂವಾ(Antigua) ಮೂಲ ನಿವಾಸಿಗಳ ಹಕ್ಕು ಘೋಷಣೆಯ ನಂತರ ಇದೇ ತರಹದ ಸಂಘಟನೆಗಳು ಸೇರಿ ಅಂತರರಾಷ್ಟ್ರೀಯ ಆದಿವಾಸಿಗಳ ಭೂಮಿ, ಗಡಿ, ಜಲ ಮತ್ತು ಸಂಪನ್ಮೂಲ

ಹಕ್ಕುಗಳಿಗಾಗಿ ಇಂತಹ ಭೂಮಿತ್ರ ಸಂಘಟನೆ ಸ್ಥಾಪಿತವಾಗಿ ಈ ಕೆಳಕಂಡ ಘೋಷಣೆಯನ್ನು ಪ್ರಕಟಿಸಿತು.

"We voice our concern at the extreme vulnerability of many indigenous peoples to land and criminalization of customary forms of land and natural resource use, particularly in context of extractive industries, conservation area and commercial agriculture recognizing that, respect of indigenous cultures contributes to sustainable and excitable development and management of the environment we commit ourselves to work together to more effectively support Indigenous people in their struggle for territorial rights and the protection of their environments."[1]

ಇದರ ILC Director Madiodio Niasse ಅವರು ಇದಕ್ಕೆ ಪೂರಕವಾಗಿ United Nation Declaration on Rights Indigenous People(UNDRIP) ಮೂಲ ನಿವಾಸಿಗಳ ಕುರಿತು ಈ ಕೆಳಕಂಡ ನಿರ್ಣಯಗಳನ್ನು ತೆಗೆದುಕೊಂಡು ಘೋಷಿಸಿದೆ.

- ಮೂಲನಿವಾಸಿಗಳ ಭೂಮಿ, ಗಡಿ, ಜಲ ಮತ್ತು ಸಂಪನ್ಮೂಲಗಳನ್ನು ರಕ್ಷಿಸಲು ಅವರ ಮೂಲಭೂತ ಬದುಕಿನ ಹಕ್ಕುಗಳಿಗಾಗಿ ತಂತ್ರಗಳನ್ನು ರೂಪಿಸುವುದು.
- ಶತಶತಮಾನಗಳಿಂದ ಆದಿವಾಸಿಗಳು ಗಳಿಸಿದ್ದ ಪಾರಂಪರಿಕ ಜ್ಞಾನಗಳು ದಾಖಲುಗೊಳ್ಳದಿರುವ ಕಾರಣ ಸಾಂಪ್ರದಾಯಿಕ ಸಂಸ್ಥೆ(Customary Institution) ಯನ್ನು ಸ್ಥಾಪಿಸಿ ಅದರ ಮೂಲಕ ಆದಿವಾಸಿಗಳ ಪಾರಂಪರಿಕ ಜ್ಞಾನ, ಸುಸ್ಥಿರ ಕೃಷಿ, ಪರಿಸರ ನಿರ್ವಹಣೆ(Eco System Management), ಪರಿಸರ ವೈಪರೀತ್ಯ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ರಕ್ಷಿಸುವುದು (UNDRIP).
- ಇದಕ್ಕೆ ಪೂರಕವಾಗಿ ಆಫ್ರಿಕಾದ ಬೇಟೆಗಾರರು ಮತ್ತು ಕುರಿ ಕಾಯುವ ಸಮುದಾಯ ಗಳಾದ(hunter, gatherers, pastoralist) ಮಸ್ಸಾಯಿ(Massai) ತುರ್ಕಾನ(turkana), ವೈಕ್(Ogiek), ಸೆಂಗ್‌ವಾರು(Sengwer), ಹಟ್ಜಾಬೆ (Hadzabe), ಸಮುಬುರು(samburu), ಏಂಡೋರೈಸ್(Endorois), ಮೊಬರೊ (Mbroovo), ಎಲ್‌ಮೆಲೋ(Elmelo) ಇತ್ಯಾದಿ ಆಫ್ರಿಕಾ ಆದಿವಾಸಿಗಳ ಗಡಿ ಮತ್ತು ಸಾಮಾಜಿಕ ಸಂಪನ್ಮೂಲಗಳ ಹಕ್ಕುಗಳ ಬಗ್ಗೆ 2012ರಲ್ಲಿ World food security forum ಹೋರಾಟ ನಡೆಸಿ 190ನೇ ಅಧಿನಿಯಮದ ಪ್ರಕಾರ "Non permanent use and occupation of lands, which have made their traditional lands and territories appear unoccupied to the outsider resulting in specific land related injustices throughout the history."[2]

- ಬಹುಕಾಲದಿಂದಲೂ ಸಾಂಪ್ರದಾಯಿಕ ಆದಿವಾಸಿ ಜೀವನ ನಡೆಸಿರುವ ಸಮುದಾಯಗಳು ಶಾಶ್ವತವಾದ ಹಕ್ಕುಗಳನ್ನು ಪಡೆಯದೇ ಇರುವವರು ಗಡಿ ಮತ್ತು ಭೂಹಕ್ಕುಗಳ ಮೇಲೆ ಆಗಿರುವ ಅನ್ಯಾಯದ ವಿರುದ್ಧ ಮೊಕದ್ದಮೆ ಹೂಡಿ African Commission on Human People and Rights(ACHPR) ಸಂಘಟನೆ ಮೂಲಕ ಹಕ್ಕುಗಳ ಪ್ರತಿಪಾದನೆ ಮಾಡ ಲಾಯಿತು.[3]
- ಇದೇ ರೀತಿ ಫಿಲಿಪೈನ್ಸ್‌ನಲ್ಲಿ ಪಿಲಿಪಿನೊ(Pillippino Association for Inter cultural development forum(PAFID) ಸಂಸ್ಥೆಯು ಇದೇ ರೀತಿ ಆ ಪ್ರದೇಶದ ಗಡಿ ಮತ್ತು ಸಂಪನ್ಮೂಲಗಳ ರಕ್ಷಣೆಗಾಗಿ ಕೆಲಸ ನಿರ್ವಹಿಸುತ್ತಿದೆ.
- ಅಲಸ್ಕಾದ ಆದಿವಾಸಿಗಳ ಪರವಾಗಿ "Alasca Native claims settlements (ANCSA) ಸಂಸ್ಥೆಯು ಇದೇ ಉದ್ದೇಶವಿಟ್ಟುಕೊಂಡು ಕಾರ್ಯ ನಿರ್ವಹಿಸುತ್ತಿದೆ.
- ಸೌದಿ ಅರೇಬಿಯಾದಲ್ಲಿರುವ ಕಾರವಾನ್, ಪುಕುದ್, ಬೆಡೊಯಿನ್ ಆದಿವಾಸಿಗಳ ಗಡಿ ಸಂರಕ್ಷಣೆಗಾಗಿ International Union of Antropological and Ethnological Sciences(IUAES) ಸಂಸ್ಥೆಯು ಫೋರ್ಡ್ ಫೌಂಡೇಷನ್ ಜೊತೆಗೂಡಿ ಮೇಲೆ ಹೆಸರಿಸಿರುವ ಅಲೆಮಾರಿ ಆದಿವಾಸಿಗಳ ಭೂಮಿ, ಗಡಿ, ಜಲ ಮತ್ತು ಸಂಪನ್ಮೂಲಗಳ ಹಕ್ಕುಗಳ ಪ್ರತಿಪಾದನೆಗಾಗಿ ಕಾರ್ಯನಿರ್ವಹಿಸುತ್ತಿದೆ. ಅಮೆರಿಕದ ಆರಿಜೋನಾ ಆದಿವಾಸಿಗಳ ವಿಚಾರವಾಗಿ ಜಾನ್ ಸಿ ರೆಸೆಲ್ 2006ರಲ್ಲಿ ಅಲ್ಲಿನ 21 ಆದಿವಾಸಿಗಳ ಗಡಿ ಸಮಸ್ಯೆ ಮಹತ್ವ ಹಾಗೂ ನಂಬಿಕೆಗಳ ಕುರಿತು ಅಧ್ಯಯನ ನಡೆಸಿ ಪುಸ್ತಕ ಪ್ರಕಟಿಸಿದ್ದಾರೆ.[4]
- ಜೇವಿಯರ್ ಬೆಲ್ಟರಾನ್, ಅಡ್ರಿಯನ್ ಫಿಲಿಪ್ಸ್ ಅವರು ಪ್ರಕಟಿಸಿರುವ ಸ್ಥಳೀಯ ಸಾಂಪ್ರದಾಯಿಕ ಸಮುದಾಯ ಮತ್ತು ಸಂರಕ್ಷಿತ ಪ್ರದೇಶಗಳು Indigenous and traditional peoples and protected areas" ಈ ಪ್ರಕಟಿತ ಲೇಖನದಲ್ಲಿ (International Union for conservation of nature), WCDA and WWಈ ಇವುಗಳು ಕೂಡಿಕೊಂಡು ಆದಿವಾಸಿಗಳ ವಾಸದ ನೆಲೆಗಳಲ್ಲಿನ ಅವರ ಸಾಂಪ್ರದಾಯಿಕ ಬಳಕೆಯ ಭೂಮಿ, ಅರಣ್ಯ, ಗಡಿ, ನೀರು ಮತ್ತು ಸಂಪನ್ಮೂಲಗಳ ರಕ್ಷಣೆಗಾಗಿ 5 ಅಂಶಗಳ ತತ್ವಗಳನ್ನು ಅಳವಡಿಸಿಕೊಂಡು ಕಾರ್ಯ ನಿರ್ವಹಿಸುತ್ತಿದೆ. ಆ 5 ತತ್ವ ಅಂಶಗಳು ಈ ಕೆಳಕಂಡಂತಿವೆ.[5]

1. ಮೂಲನಿವಾಸಿಗಳು ಮತ್ತು ಇತರ ಸಾಂಪ್ರದಾಯಿಕ ಸಮುದಾಯಗಳ ಪರಿಸರದೊಟ್ಟಿಗೆ ಅನಾದಿಕಾಲದಿಂದಲೂ ಅವಿನಾಭಾವ ಸಂಬಂಧ ಇರುವ ಕಾರಣ ಆ ಸಮುದಾಯವು ಹೆಚ್ಚಾಗಿ ಕಾಡಿನ ಪರಿಸರವನ್ನು ಅರ್ಥ ಮಾಡಿಕೊಂಡಿದ್ದಾರೆ. ಸೂಕ್ಷ್ಮ ಪರಿಸರದ ವಿಕಾಸದಲ್ಲಿ

ಈ ಜನರ ಕೊಡುಗೆ ಮಹತ್ತರವಾದುದಾಗಿದೆ ಸುಸ್ಥಿರ ಕೃಷಿ, ಉಪಾಸನೆ ಮತ್ತು ಸಾಂಸ್ಕೃತಿಕ ಬದುಕನ್ನು ಪರಿಸರದೊಟ್ಟಿಗೆ ಪರಸ್ಪರ ಕೊಡುಕೊಳ್ಳುವಿಕೆಯ ಗೌರವಿತ ಸಂಬಂಧಗಳೊಟ್ಟಿಗೆ ಕಾಡಿನ ಜೊತೆ ಹೆಜ್ಜೆ ಇಡುತ್ತಾ ಬಂದಿದ್ದಾರೆ. ಆದ್ದರಿಂದ ಕಾಯ್ದಿಟ್ಟ ಅರಣ್ಯಗಳಲ್ಲಿ ಪಾರಂಪರಿಕವಾಗಿ ಅನುವಂಶೀಯಕವಾಗಿ ಯಾವುದೇ ತರಹದ ಜಂಜಾಟ, ಅಶಾಂತಿಗಳನ್ನು ಕಾಡಿನ ಒಳಗೂ ಹೊರಗೂ ಇರದಂತೆ ಪರಿಸರ ಸಂರಕ್ಷಣೆ ನಿರ್ವಹಣೆ ಜೊತೆ ಜೊತೆಗೆ ನೀರು, ಭೂಮಿ, ಗಡಿ ಮತ್ತು ಸಂಪನ್ಮೂಲಗಳ ಹಕ್ಕುಗಳನ್ನು ನಿಯಂತ್ರಿಸುತ್ತಾ ಬಂದಿದೆ. ಹಾಗಾಗಿ ಇದರ ಸಂಪೂರ್ಣ ಜವಾಬ್ದಾರಿಗಳ ಸಹಭಾಗಿತ್ವದ ಹಕ್ಕನ್ನು ಈ ಸಮುದಾಯಗಳಿಗೆ ಪ್ರತಿಪಾದಿಸಲು ಬಿಡಬೇಕು.

2. ಕಾಡಿನ ಪರಿಸರದ ಜೊತೆ ಸಮುದಾಯಗಳು ಅವಲಂಬಿತವಾಗಿರುವ ಸಂಪನ್ಮೂಲಗಳಾದ ನೀರು, ಕಾಡು, ಗಡಿ, ಭೂಮಿ ಮತ್ತು ಇತರೆ ಹಕ್ಕುಗಳಿಗೆ ಚ್ಯುತಿಯಾಗದಂತೆ ಒಪ್ಪಂದವನ್ನು ಸಮುದಾಯ ಮತ್ತು ಸಂರಕ್ಷಣಾ ಸಂಸ್ಥೆ (Protected area management agencies) ಮಾಡಿಕೊಳ್ಳಬೇಕು. ಈ ಒಪ್ಪಂದದಲ್ಲಿ ಜೀವ ವೈವಿಧ್ಯತೆ, ಪರಿಸರ, ಪರಿಸರದ ಏಕತೆಗಳ ಜವಾಬ್ದಾರಿಯುತವಾದ ಅಂಶಗಳನ್ನು ಒಳಗೊಂಡಿರುವಂತೆ ನೋಡಿಕೊಳ್ಳಬೇಕು.

3. ರಾಷ್ಟ್ರೀಯ ಸಂರಕ್ಷಣಾ ಪ್ರದೇಶದಲ್ಲಿ ವಿಕೇಂದ್ರಿಕರಣ, ಭಾಗವಹಿಸುವಿಕೆ ಮತ್ತು ಹೊಣೆಗಾರಿಕೆಗಳ ವಿಚಾರ ಬಂದಾಗ ಪರಿಸರ ಸಂರಕ್ಷಿತ ಪ್ರದೇಶ ಮತ್ತು ಬುಡಕಟ್ಟುಗಳ ಆದ್ಯತೆಗಳನ್ನು ತೆಗೆದುಕೊಂಡು ಮಾರ್ಗಸೂಚಿಗಳನ್ನು ಹಾಕಿಕೊಳ್ಳಬೇಕು.

4. ಬುಡಕಟ್ಟು ಸಮುದಾಯಗಳು ಸಂಪೂರ್ಣವಾಗಿ ಸೌಲಭ್ಯಗಳ ಬಗ್ಗೆ ಪರಸ್ಪರ ಸಮಾನವಾಗಿ ಹಂಚಿಕೊಳ್ಳುವ ಹಕ್ಕುಗಳನ್ನು ಭಾಗೀದಾರರ ಜೊತೆ ಕಾನೂನು ಬದ್ಧಗೊಳಿಸಿಕೊಳ್ಳಬೇಕು.

5. ಬುಡಕಟ್ಟು ಸಮುದಾಯ ಹಕ್ಕುಗಳ ಬಗ್ಗೆ ಸಂರಕ್ಷಿತ ಪ್ರದೇಶಗಳಲ್ಲಿನ ಅಂತರರಾಷ್ಟ್ರೀಯ ಜವಾಬ್ದಾರಿಗಳ ಕುರಿತು ರಾಷ್ಟ್ರೀಯ ಗಡಿ ಮತ್ತು ಪರಿಸರ ಸಂರಕ್ಷಣೆಗಳ ಬಗ್ಗೆ ಮಾರ್ಗಸೂಚಿ ಇರಬೇಕು.

**ಭೂ ಪರಿಸರ ರಕ್ಷಣಾ ಸಂಸ್ಥೆ**(International Union for conservation of nature)

ಸಂಸ್ಥೆಯು 1948ರಲ್ಲಿ ಸ್ಥಾಪನೆಗೊಂಡಿರುವ ಅತ್ಯಂತ ಪುರಾತನ ಸಂಸ್ಥೆಯಾಗಿದೆ ಇದು ಭೂಮಿಯ ಪರಿಸರ, ಸಂರಕ್ಷಣೆ ಮತ್ತು ಸುಸ್ಥಿರ ಅಭಿವೃದ್ಧಿಗಳ ಕುರಿತು ಅವುಗಳ ರಕ್ಷಣೆ ಮತ್ತು ಸುಸ್ಥಿರ ಅಭಿವೃದ್ಧಿಗಳ ಬಗ್ಗೆ ನೀತಿ ನಿಯಮಗಳನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ರೂಪಿಸುತ್ತದೆ. ಈ ಸಂಸ್ಥೆಯಲ್ಲಿ 185ಕ್ಕೂ ಹೆಚ್ಚಿನ ದೇಶಗಳ ಸರ್ಕಾರ ಮತ್ತು ಸರ್ಕಾರೇತನ 1300ಕ್ಕೂ ಹೆಚ್ಚಿನ ಜನಗಳು ಇದರಲ್ಲಿ ಸದಸ್ಯತ್ವ ಪಡೆದಿದ್ದಾರೆ, 15,000ಕ್ಕೂ ಹೆಚ್ಚು ಸ್ವಯಂಸೇವಕರಿದ್ದಾರೆ.

IUCN ಸಂಸ್ಥೆಯು UN environmental programme (UNEP) world wildlife fund(WWF)ಗಳ ಜೊತೆ ಸಹಭಾಗಿತ್ವ ಹೊಂದಿದೆ. ಇದು Commission on Education and Communication(CEN), Commission on Environmental, Economic and social policy(CEESP), world commission on environmental law(WCEL), commission on eco system and management(CEM), Species survival commission(SSC) world commission on protected areas(WCPA) ಮತ್ತು The Canadian committee of the international union of the conservation of nature (CCIUCN) ಈ ಎಲ್ಲಾ ಸಮಾನ ಮನಸ್ಕ ಸಂಘಟನೆಗಳ ಜೊತೆ IUCN ಸಂಸ್ಥೆಯು ಸಹಭಾಗಿತ್ವ ಹೊಂದಿ ಕಾರ್ಯಚಟುವಟಿಕೆಯನ್ನು ನಿರ್ವಹಿಸುತ್ತಿದೆ.[6]

ಇದರ Director General Inger Andreson, President Zhang Xinshang ಮುಖ್ಯಸ್ಥರುಗಳಾಗಿದ್ದು ಇದರ ಕೇಂದ್ರ ಕಛೇರಿ Gland VD Siwterzland ದೇಶದಲ್ಲಿದೆ. IUCN ಸಂಸ್ಥೆಯು ಭೂಮಂಡಲದ ಪರಿಸರ, ಜೀವವೈವಿಧ್ಯತೆಗಳ ಸಂರಕ್ಷಣೆ ಮತ್ತು ಅದಕ್ಕಾಗಿ ನೀತಿ ನಿಯಮ ಮತ್ತು ಉದ್ದೇಶಗಳನ್ನು ರೂಪಿಸುವ ಸಂಸ್ಥೆಯಾದರೂ ಕೂಡ, ಕಾಡಿನೊಳಗೆ ಆದಿವಾಸಿ ಸಾಂಸ್ಕೃತಿಕ ಬದುಕಿನ ಭಾಗವಾದ ಗಡಿ, ಭೂಮಿ, ಸುಸ್ಥಿರ ಕೃಷಿ, ಜಲ ಮತ್ತು ಸಂಪನ್ಮೂಲಗಳ ವಿಚಾರದಲ್ಲಿ ಅಧ್ಯಯನ ನಡೆಸಿ ಪ್ರಪಂಚದ ಬಹಳಷ್ಟು ಆದಿವಾಸಿಗಳ ಪರವಾಗಿ ಪ್ರಮುಖವಾಗಿ ಗಡಿ ಮತ್ತು ಸಂಪನ್ಮೂಲಗಳ ವಿಚಾರದಲ್ಲಿ ಮಧ್ಯ ಪ್ರವೇಶಿಸಿ ಅವರ ಮೂಲ ಹಕ್ಕುಗಳ ಬಗ್ಗೆ ನೀತಿ ನಿಯಮ ಕಾಯಿದೆಗಳನ್ನು ರೂಪಿಸಿ ನ್ಯಾಯ ಕೊಡಿಸುವಲ್ಲಿ ಪ್ರಮುಖವಾದ ಪಾತ್ರ ವಹಿಸುತ್ತಿದೆ. ಈ ಕಾರಣಕ್ಕಾಗಿ ಪ್ರಸ್ತುತ ಅಧ್ಯಯನಕ್ಕೂ IUCN ಸಂಸ್ಥೆಗೂ ಬುಡಕಟ್ಟುಗಳಿಗೆ ಅಧ್ಯಯನದ ಮೂಲಕ ಸೀಮಾಪದ್ಧತಿಯ ಹಕ್ಕು ಪ್ರತಿಪಾದನೆಗಳಿಗೆ ಭವಿಷ್ಯದಲ್ಲಿ ಈ ಸಂಸ್ಥೆಯು ಆದಿವಾಸಿಗಳಿಗೆ ದಾರಿದೀಪವಾಗಬಹುದಾಗಿದೆ.

ಚಾ. ಚಂ. ಎಸ್. ಪ್ರಿನ್ಸ್ ಅವರ ಲೇಖನ Dividing sovereignty in tribal territorial criminal juridiction ಲೇಖನದಲ್ಲಿ ಅಮೆರಿಕದ ರೆಡ್ ಇಂಡಿಯನ್‌ಗಳ ಮೇಲೆ ಅಮೆರಿಕ ದೇಶವು ಆದಿವಾಸಿಗಳ ಪ್ರದೇಶವನ್ನು ಕಸಿದುಕೊಂಡು ಸರ್ಕಾರದ ನೀತಿ ನಿಯಮಗಳನ್ನು ರಚಿಸಿದೆ. ಅದರ ಪ್ರಕಾರ Federral Indian law and United states territories articles ಬಗ್ಗೆ ವಿಶ್ಲೇಷಣೆ ಇದೆ.[7]

ಈ ಲೇಖನದಲ್ಲಿ ಲೇಖಕರು ಮೂರು ಪ್ರಮುಖ ಅಂಶಗಳನ್ನು ಗುರುತಿಸುತ್ತಾರೆ. ಅದರ ಪ್ರಕಾರ

1. ಅಮೆರಿಕ ಸರ್ಕಾರದ ಆದೇಶದ ಆರ್ಟಿಕಲ್‌ನಲ್ಲಿ ಬುಡಕಟ್ಟುಗಳಿಗೆ ವಿಧಿಸಲಾಗಿರುವ ಕ್ರಿಮಿನಲ್ territorialiction jurisd ಹಾಗೂ ಈ ಬಗ್ಗೆ ಸರ್ಕಾರ ಕಠೋರವಾದ ನಿರ್ಧಾರಗಳನ್ನು ಜಾರಿಗೊಳಿಸಿರುವ ಬಗ್ಗೆ ಮರುಪರಿಶೀಲನೆಯಾಗಬೇಕಾಗಿದೆ.

2. ಸರ್ಕಾರದ ಈ ನಿರ್ಧಾರಗಳು ಎರಡು ಮಗ್ಗಲುಗಳಲ್ಲಿ ಅಪಾಯಕ್ಕೆ(Double Jeoparadies) ಸಿಕ್ಕಿಸುವ ಪ್ರಯತ್ನಗಳು ಅಮೆರಿಕ ಸರ್ಕಾರ ಜಾರಿಗೊಳಿಸಿರುವ ಆದೇಶಗಳಲ್ಲಿ ಇದೇ ಆದ್ದರಿಂದ, ಸಂಯುಕ್ತ ರಾಷ್ಟ್ರದ ಕಾರ್ಯಾಂಗದ ಮೇಲ್ವಿಚಾರಣೆಗೆ ಒಳಪಡಿಸಬೇಕಾಗಿದೆ.

3. ಆದಿವಾಸಿಗಳ ಹಕ್ಕಿನ ಭಾಗವಾಗಿದ್ದ ಅವರ ಗಡಿ ಮತ್ತು ಸಂಪನ್ಮೂಲಗಳ ಹಕ್ಕನ್ನು ಸಂರಕ್ಷಿಸಿದಲ್ಲಿ, ಆದಿವಾಸಿಗಳ ಅಪರಾಧ ಗಡಿ ಎಂದು ತಪ್ಪಾಗಿ ಹೇರಲಾಗಿರುವ ಕಾನೂನನ್ನು ಅವರ ಹಕ್ಕಿನ ಭಾಗದ ಗಡಿಗಳನ್ನಾಗಿ ಮನವೊಲಿಸಿ ಬದಲಾಯಿಸಿದರೆ ತಪ್ಪೇನು ಎಂಬಂತಹ ಪ್ರಶ್ನೆಗಳನ್ನು ಈ ಲೇಖನ ಎತ್ತಿ ಹಿಡಿಯುತ್ತದೆ.

ಈ ಲೇಖನವು ಆದಿವಾಸಿ ಮತ್ತು ಅಮೆರಿಕ ಮಧ್ಯೆ "ಬುಡಕಟ್ಟುಗಳ ಸ್ವಯಂ ಆಡಳಿತ ಗಡಿ ನಿರ್ವಹಣಾ ನೀತಿ(Autonomous self governance by tribal communities) ವಿಶ್ಲೇಷಿಸಿ, ತರ್ಕಿಸಿ, ಮಾಹಿತಿಯನ್ನು ಸರ್ಕಾರಕ್ಕೆ ನಿರ್ದೇಶಿಸುವ ಮೂಲಕ ಅಮೆರಿಕ ಸರ್ಕಾರವು ಅಲ್ಲಿನ ಆದಿವಾಸಿಗಳಿಗೆ ಅವರ ಗಡಿ, ಸಂಪನ್ಮೂಲ ಹಾಗೂ ಅವರ ಸ್ವಯಂ ಆಡಳಿತ ನಿರ್ವಹಣಾ ಹಕ್ಕುಗಳನ್ನು ಪಡೆಯುವಲ್ಲಿ ಸಫಲತೆ ಕಂಡ ಬಗ್ಗೆ ವಿವರಣೆಗಳಿವೆ. ಬಹಳ ಮುಖ್ಯವಾಗಿ ಆದಿವಾಸಿ ಪ್ರದೇಶದ ಗಡಿಯೊಳಗೆ ಆದಿವಾಸಿಗಳಲ್ಲದವರಿಗೆ ಚುನಾವಣೆಗಳಲ್ಲಿ ಸ್ಪರ್ಧಿಸುವ ಮತ್ತು ಮತ ಚಲಾಯಿಸುವ ಹಕ್ಕನ್ನು ಮೊಟಕುಗೊಳಿಸಲಾಗಿರುವುದು ಆದಿವಾಸಿಗಳ ಹಕ್ಕಿನ ವಿಚಾರದಲ್ಲಿ ಪ್ರಮುಖವಾದ ಅಂಶವಾಗಿದೆ.

Desmond Morries ಎಂಬ ಲೇಖಕ Territorial Behaviour ಕುರಿತು ಲೇಖನ ಪ್ರಕಟಿಸಿದ್ದಾರೆ. ಅದರ ಪ್ರಕಾರ 'A territory is a defended space. In the broadcast sense there are three kindly of human territory: tribal, family and personal.

ಮೇಲಿನ ವಿಶ್ಲೇಷಣೆಗಿಂತ ಅವರು 'ಆದಿವಾಸಿಗಡಿ'ಯು ಪ್ರಾಣಿವರ್ಗದಲ್ಲಿ ಇರಬಹುದಾದ ಪ್ರಾಣಿಸಹಜ ನೈಸರ್ಗಿಕ ಗುಣ(Animal Natural instinct) ಗುಣದ ಭಾಗ ಮಾನವನಲ್ಲಿ ವಿಕಸಿತಗೊಂಡು ಕ್ರಮೇಣ ಕಾಡಿನೊಳಗಿನ ಗುಂಪು ಮನೆಗಳನ್ನು ಕಟ್ಟಿಕೊಳ್ಳುವ ಮೂಲಕ ಮನುಷ್ಯನ ಸಾಮಾಜಿಕ ಬದುಕಿನ ಮೂಲ ಅಡಿಪಾಯ ಶುರುವಾಯಿತು ಎನ್ನುವುದನ್ನು ಲೇಖಕರು ವಿಶ್ಲೇಷಿಸಿದ್ದಾರೆ. ಪುನಃ ಅದನ್ನು ಜಾಗತಿಕ ಮಟ್ಟದಲ್ಲಿನ ಗಡಿ ವ್ಯಾಜ್ಯಗಳಿಗೆ ವಿಷಯವನ್ನು ತಂದು ನಿಲ್ಲಿಸುತ್ತಾರೆ. ಈ ಲೇಖನದಲ್ಲಿ ಆದಿವಾಸಿಗಳು ನಿರ್ಮಿಸಿಕೊಂಡ ಸಾಂಸ್ಕತಿಕ ಗಡಿ ಸೀಮೆ ಹಾಗೂ ಅದರೊಳಗೆ ಅಡಕವಾಗಿರುವ ಸಾಂಸ್ಕೃತಿಕ ಪದ್ಧತಿ ಮತ್ತು

ಉಪಾಸನೆಗಳ ಬಗ್ಗೆ ಮತ್ತು ವಿವರಣೆಗಳನ್ನು ನೀಡಿಲ್ಲ.

UNDEP-WCMC ಸಂಸ್ಥೆಗಳ ಪ್ರಪಂಚದ 5,000ದಿಂದ 6,000 ವಿವಿಧ ವೈವಿಧ್ಯ ಆದಿವಾಸಿಗಳ 70ಕ್ಕೂ ಹೆಚ್ಚಿನ ಭಾಗದಲ್ಲಿನ 250 ಮಿಲಿಯನ್ ಜನಗಳನ್ನೊಳಗೊಂಡ 11 ರಾಷ್ಟ್ರೀಯ ಉದ್ಯಾನಗಳ ಒಳಗಿನ ಆದಿವಾಸಿಗಳ ವಿಶೇಷ ಪ್ರಕರಣಗಳನ್ನು(special case study) ಅಧ್ಯಯನ ಮಾಡಿ ವರದಿ ಸಲ್ಲಿಸಿರುತ್ತಾರೆ. ಅವರು ಈ ಕೆಳಗಿನ ರಾಷ್ಟ್ರೀಯ ಉದ್ಯಾನವನಗಳಾದ

1. Kaa-lya del Gram chaco National Park and integrated management natural area (KIGC, Bolivia)
2. Cayos Miskitos and Franja Costero Marine Biological Resume (RBMCM : Nicaragua)
3. Sartoon-Temash National park (STNP, Beliza)
4. Wood Buffalo National Park (WBNP, Canada)
5. The lapponian Area (LAPP, Sweden)
6. Siman Mountain National Part (SMNP Ethiopia)
7. Sagarmatha (Mt Everest) National Part (SNP-Nepal)
8. Dio Inthamon National Part (DINP, Thailand)
9. Xishang banna nature reserve (XNR, China)
10. Kytalyk recource Reserve (KRR Russian federation)
11. Kakadu National Part (KNP : Austraila)[8]

ಈ ಬಗ್ಗೆ ವಿಸ್ತೃತವಾಗಿ ಅಧ್ಯಯನವನ್ನು ಬುಡಕಟ್ಟು ಮತ್ತು ರಾಷ್ಟ್ರೀಯ ಉದ್ಯಾನವನ ಆಡಳಿತ ಮಂಡಳಿ ಮತ್ತು ಸಂಪೂರ್ಣ ಪ್ರಕ್ರಿಯೆಯ ಮಧ್ಯೆ ಇರುವ ಪರಸ್ಪರ ವರ್ತನೆ, ಕ್ರಿಯೆ, ಪ್ರಭಾವ ಪರಿಣಾಮಗಳ ಕುರಿತು case study ಮಾಡಲಾಗಿದೆ.

ಸೀಮಾಪದ್ಧತಿಯೊಳಗಿನ ಭಾಗವಾದ ಕುಂಬರಿ ಅಂದರೆ Zoom cultivation ಬಗ್ಗೆ Kaa-lya del gram Chaco ರಾಷ್ಟ್ರೀಯ ಉದ್ಯಾನವದಲ್ಲಿರುವ clinmintanous ಬುಡಕಟ್ಟುಗಳು slash and burn Agricultural ..macities ಬಗ್ಗೆ ಮಾತ್ರ ಪ್ರಸ್ತಾಪವಿದ್ದು, ಎಲ್ಲಿ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಸೀಮಾಪದ್ಧತಿ ಮತ್ತು ಅದರ ಸಾಂಸ್ಕೃತಿಕ ಉಪಾಸನೆ, ನಿರ್ವಹಣೆ ಮತ್ತು ನಿರ್ದೇಶನಗಳ ಬಗ್ಗೆ ಪ್ರಸ್ತಾಪವೇ ಇಲ್ಲವಾಗಿರುವ ವಿಚಾರ ಸೋಜಿಗವಾದದ್ದು.

ಉ.ಎ. Sarwer Fones M ಅವರ ಸಂಶೋಧನಾ ಲೇಖನ "On Human Terriotriality-A contribution to instinct theory"ಯ ತಮ್ಮ ಲೇಖನದಲ್ಲಿ ಪ್ರಾಣಿಪಕ್ಷಿಗಳು ತಮ್ಮ ಸೀಮೆಗಳನ್ನು ಗುರ್ತಿಸಿಕೊಳ್ಳುವಾಗ ಯಾವ ರೀತಿಯಲ್ಲಿ ವರ್ತಿಸುತ್ತವೆಂಬ ಬಗ್ಗೆ ವ್ಯಾಖ್ಯಾನಿಸಿದ್ದಾರೆ. ಪ್ರಾಣಿ ಪಕ್ಷಿಗಳು ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ತಮ್ಮದೇ ಆದ ಆವರಣ (space) ಗುರ್ತಿಸಿಕೊಳ್ಳುತ್ತವೆ. ಅದರೊಳಗೆ ಇತರ ಯಾವುದೇ ಬೇರೆ ಜೀವಿಗಳ ಪ್ರವೇಶವನ್ನು ಅವು ಸಹಿಸುವುದಿಲ್ಲ(ತಮ್ಮ ಸಂಗಾತಿಯನ್ನು ಹೊರತುಪಡಿಸಿ). ಪಕ್ಷಿಗಳು ತಮ್ಮ ಶಬ್ದಗಳಿಂದಲೇ ಗಡಿಗಳನ್ನು ಗುರ್ತಿಸುತ್ತವೆ. ರಿಂಗ್‌ಟೈಲ್ಡ್ ಲೆಮೂರ್‌ಗಳು ಬಾಲವನ್ನು ಎಡಬಲಕ್ಕೆ ವೇಗವಾಗಿ ತಿರುಗಿಸುತ್ತವೆ. ಅಲ್ಲದೆ ಮಲದ್ವಾರದ ಮೂಲಕ ವಿಶಿಷ್ಟವಾದ ಕೆಟ್ಟವಾಸನೆಯನ್ನು ನೆಲಕ್ಕೆ ಉಜ್ಜುತ್ತವೆ ಮತ್ತು ಕಾಲಿನ ಉಗುರಿನಿಂದ ನೆಲವನ್ನು ಕೆರೆಯುತ್ತವೆ. ಇದೇ ರೀತಿಯ ವರ್ತನೆಯನ್ನು ಇತರೆ ಎಲ್ಲಾ ಪ್ರಾಣಿವರ್ಗಗಳಲ್ಲಿ ಜೀವಿಗಳು ಬೇರೆ ಬೇರೆಯದೇ ರೀತಿಯಲ್ಲಿ ತಮ್ಮ ಗಡಿಗಳ ಗುರ್ತಿಸುವಿಕೆಗಾಗಿ ತಮ್ಮ ವರ್ತನೆಗಳನ್ನು ವ್ಯಕ್ತಪಡಿಸುವುದನ್ನು ಗಮನಿಸಬಹುದಾಗಿದೆ.[9]

## ಕರ್ನಾಟಕದ ಬುಡಕಟ್ಟುಗಳ ಸೀಮಾಪದ್ಧತಿ ಮತ್ತು ಪಾರಂಪರಿಕ ಜ್ಞಾನ

## ಬುಡಕಟ್ಟುಗಳಲ್ಲಿ ಪಾರಂಪರಿಕ ವೈದ್ಯಪದ್ಧತಿ

ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿ ಪಾರಂಪರಿಕವಾದ ನಾಟಿ ವೈದ್ಯಪದ್ಧತಿಯನ್ನು ಅನುಸರಿಸಿಕೊಂಡು ಬಂದಿರುತ್ತಾರೆ. ಸಾಮಾನ್ಯವಾಗಿ ಗಿಡಮೂಲಿಕೆಗಳಿಂದ ಜಜ್ಜಿ ರಸ ತೆಗೆದು ಮಾಡುವ ಔಷಧಿಗಳಿಗೆ **'ಕಷಾಯ'**ವೆಂದು ಕರೆಯುತ್ತಾರೆ.

ಸಾಮಾನ್ಯವಾಗಿ ಬರುವ ಕಾಯಿಲೆಗಳಾದ ಜ್ವರ, ಕೆಮ್ಮು, ನೆಗಡಿ, ಚರ್ಮ ಖಾಯಿಲೆ, ಮಲಬದ್ಧತೆ, ಭೇದಿ, ಹೊಟ್ಟೆನೋವು, ಗಡ್ಡೆ ಕಟ್ಟಿದಾಗ ಸಮಸ್ಯೆಗಳೀಗೆ ಪಾರಂಪರಿಕವಾಗಿ ಮದ್ದನ್ನು ಮೂಲಿಕೆಗಳಿಂದ ತಯಾರಿಸುವುದನ್ನು ಸಮುದಾಯ ಕಂಡುಕೊಂಡಿದೆ.

ಬುಡಕಟ್ಟುಗಳಲ್ಲಿನ ಗಿಡಮೂಲಿಕೆಗಳಿಂದ ತಮ್ಮ ಕಾಯಿಲೆಗಳ ಶಮನಕ್ಕೆ ಕಂಡುಕೊಂಡ ಚಿಕಿತ್ಸಾ ನಾಟಿ ವೈದ್ಯಪದ್ಧತಿಯ ಜ್ಞಾನ ಪಾರಂಪರಿಕವಾದದ್ದು. ಸಾಮಾನ್ಯವಾಗಿ ಬುಡಕಟ್ಟುಗಳಲ್ಲಿ ಶಮನ(ಗುಡ್ಡಯ್ಯ, ಬುದವಂತ, ಬಂಜೆಕಾಳ, ಅಜ್ಜಯ್ಯ ಇತ್ಯಾದಿ)ಗಳು ಚಿಕಿತ್ಸಾಪದ್ಧತಿಯನ್ನು ಅರಿತಿರುತ್ತಾರೆ. ಅವರ ಈ ಜ್ಞಾನ ಜಾನಪದ ಜ್ಞಾನವಾಗಿದೆ. ಯಾರು ಈ ಜ್ಞಾನವನ್ನು ಆವಿಷ್ಕಾರಗೊಳಿಸಿದರೆಂಬುಧಕ್ಕೆ ಆದಿವಾಸಿಗಳಲ್ಲಿ ಇರುವ ಉತ್ತರ 'ಸಮುದಾಯದ್ದು'. ಒಂದು ಆದಿವಾಸಿ ಸಮುದಾಯವು ತಮ್ಮ ಸಮುದಾಯದ ಸಾಂಸ್ಕೃತಿಕ ಬದುಕು, ಆಹಾರದ ಉತ್ಪಾದನೆ, ಸಂತೋಷ, ಆಧ್ಯಾತ್ಮಿಕತೆ, ಆಚರಣೆ ಎಲ್ಲಾ ಜೀವನದ ಬೇರೆ ಬೇರೆ ಪುಟಗಳನ್ನು ಸೀಮೆಯ ಒಳಗಡೆ ಸಾಮೂಹಿಕವಾಗಿ ಯೋಜಿಸುತ್ತದೆ ಮತ್ತು ಆಚರಿಸಿಕೊಳ್ಳುತ್ತದೆ ಮತ್ತು ಸಾಮೂಹಿಕ ವಾಗಿಯೇ ಬಗೆಹರಿಸಿಕೊಳ್ಳುತ್ತದೆ. ಅವರಲ್ಲಿನ ಯಾವುದೇ ಪ್ರಕ್ರಿಯೆಗಳು ಸಾಮೂಹಿಕವಾಗಿಯೇ

ಪ್ರಕಟಗೊಳ್ಳುತ್ತವೆ. ಅವರೊಳಗಿನ ಈ ತೆರನಾದ ಜಾಗೃತಗೊಂಡಿರುವ 'ಸಾಮೂಹಿಕ ಪ್ರಜ್ಞೆ'ಯ ಮೂಲ ಸೀಮಾಪರಿಕಲ್ಪನೆಯೇ ಆಗಿದೆ. ಅವರೊಳಗಿನ ಚಿಕಿತ್ಸಾ ಪದ್ಧತಿಯು ಕೂಡ 'ಪಾರಂಪರಿಕ ಜ್ಞಾನ'. ಅದು ಸೀಮಾಪರಿಕಲ್ಪನೆಯ ಒಂದು ಭಾಗವಾಗೇ ಪ್ರಕಟಗೊಂಡಿರುವ ಅಂಶವೆಂದೇ ನಾನು ಪರಿಭಾವಿಸಬೇಕಾಗುತ್ತದೆ. ಪ್ರಸ್ತುತ ಪ್ರಪಂಚದ ಎಲ್ಲಾ ಔಷಧಿ ಚಿಕಿತ್ಸಾ ವಿಧಾನಗಳ ಮೂಲ ಆದಿವಾಸಿಗಳ ನಾಟಿ ವೈದ್ಯಪದ್ಧತಿಯ ಮೂಲ ಸೆಲೆಯಾಗಿತ್ತೆಂಬುದು ತಿಳಿದುಬಂದಿರುವ ವಿಚಾರವಾಗಿದೆ. ಮರಗಿಡಬಳ್ಳಿಗಳಲ್ಲಿ ಅಡಕವಾಗಿರುವ ರಾಸಾಯನಿಕಗಳನ್ನು ಅರಿತು ದೈಹಿಕವಾದ ಖಾಯಿಲೆಗಳಿಗೆ ತಕ್ಕ ಚಿಕಿತ್ಸೆ ನೀಡುವ ತಿಳುವಳಿಕೆಯು ಆದಿವಾಸಿಗಳು ಪಾರಂಪರಿಕವಾಗಿ ಸಂಪಾದಿಸಿದ ಒಂದು ಜ್ಞಾನವಾಗಿದೆ. ಅಷ್ಟೇ ಅಲ್ಲ, ಮಾನಸಿಕ ಕಾಯಿಲೆಗಳಿಗೆ ಮಾಟ, ಮಂತ್ರ, ತಂತ್ರ, ನೋಟಗಳ ಮೂಲಕ ಚಿಕಿತ್ಸೆ ನೀಡುವ ವಿಧಾನಗಳನ್ನು ಕೂಡಿ ಬುಡಕಟ್ಟುಗಳು ಆವಿಷ್ಕಾರಗೊಳಿಸಿಕೊಂಡಿದ್ದಾರೆ. ಮಾನಸಿಕ ರೋಗಿಗಳಿಗೆ ನೀಡಲಾಗುತ್ತಿರುವ 'ಸೈಕೋಥೆರಪಿ'ಯ ಮೂಲರೂಪವೇ ಮಾಟ ಮಂತ್ರ ನೋಟಗಳಾಗಿತ್ತೆಂಬುಧನ್ನು ನಾವು ಮನಗಾಣಬಹುದಾಗಿದೆ. ಅಷ್ಟೇ ಅಲ್ಲದೆ, ತಮ್ಮ ಉತ್ತಮ ಆರೋಗ್ಯಕ್ಕೆ ಆಹಾರದ ರೂಪದಲ್ಲಿ ಬಳಸುವ ಬೇಟೆ, ಆಹಾರ, ಜೇನು, ಅಣಬೆ, ಗೆಡ್ಡೆ ಗೆಣಸು, ತರಕಾರಿ, ಬಳ್ಳಿಗಳೂ ಕೂಡ ಆಹಾರದ ಮೂಲ ಸತ್ಯಾಂಶಗಳನ್ನು, ಆರೋಗ್ಯಕ್ಕೆ ಪೂರಕವಾದ ಅಂಶಗಳನ್ನು ಪೂರೈಸುವುದರ ಮೂಲಕ ಆರೋಗ್ಯವನ್ನು ಕಾಪಾಡಿಕೊಳ್ಳುವ ಮಾರ್ಗವನ್ನು ಆದಿವಾಸಿಗಳು ಅರಿತಿದ್ದರೆಂಬುಧನ್ನು ಅವರ ಆಹಾರಕ್ರಮದಿಂದ ಅರಿಯಬಹುದಾಗಿದೆ.

### ಕುಣಬಿಗಳಲ್ಲಿ ನಾಟಿ ವೈದ್ಯಪದ್ಧತಿ

ಜೋಯಿಡಾ ತಾಲ್ಲೂಕಿನಲ್ಲಿ ಅನಾದಿಕಾಲದಿಂದಲೂ ವಂಶಪಾರಂಪರಿಕವಾಗಿ ಬುಡಕಟ್ಟು ಸಂಸ್ಕೃತಿಯಲ್ಲಿ ವಾಸಿಸುವ ಕುಣಬಿಗಳು ಬಹುಸಂಖ್ಯಾತವಾಗಿ ವಾಸ ಮಾಡಿಕೊಂಡು ಬಂದಿದ್ದಾರೆ. ಕಾಡಿನಲ್ಲಿ ಸಿಗುವ ಕಿರು ಉತ್ಪನ್ನವನ್ನು ಸಂಗ್ರಹಣೆ ಮಾಡಿಕೊಂಡು ಬದುಕು ಕಟ್ಟಿಕೊಂಡಿದ್ದಾರೆ. ಕಾಡಿನಲ್ಲಿ ವಾಸಿಸುವ ಇವರು ಕಾಡಿನಲ್ಲಿ ಸಿಗುವ ವಿವಿಧ ರೀತಿಯ ಗಿಡಗಂಟೆಗಳು, ಸೊಪ್ಪು, ಬೇರು, ಚಕ್ಕೆಗಳನ್ನು ಔಷಧಿಯನ್ನಾಗಿ ಬಳಸಿಕೊಂಡು ಬಂದಿದ್ದಾರೆ.

ಪ್ರಮುಖವಾಗಿ ಈ ಔಷಧಿಗಳನ್ನು ತಮ್ಮ ಹಿಂದಿನ ತಲೆಮಾರಿನಿಂದಲೂ ವಂಶಪಾರಂಪರಿಕ ವಾಗಿ ನೀಡುತ್ತಲೇ ಬಂದಿದ್ದಾರೆ. ಹೀಗಿರುವಾಗ ಮೈನೊಳ್ ಗ್ರಾಮದಲ್ಲಿ ಶ್ರೀ ಮಹಾದೇವ ಗಾವಡಾ ಇವರ ನಂತರ ಅವರ ಮಗ ಶ್ರೀ ಚಂದ್ರಕಾಂತ ಮಹಾದೇವ ಗಾವಡಾ, ಇವರು ಕೈ, ಕಾಲು, ಬೆನ್ನುಮೂಳೆ ಮುರಿದಾಗ ಅದನ್ನು ಜೋಡಣೆ ಮಾಡುವುದು ಅಂದರೆ ಕಾಡಿನಿಂದ ತರಲಾದ ಔಷಧಿಯ ಚಕ್ಕೆಯನ್ನು ರುಬ್ಬಿ, ರಾಗಿಹಿಟ್ಟಿನೊಂದಿಗೆ ಬೇರೆ ಅಂದ ಹಾಗೆ ಮಾಡಿಕೊಂಡು ಅದನ್ನು ಮುರಿದ ಜಾಗದಲ್ಲಿ ಹಚ್ಚಲಾಗಿ ಅದರ ಮೇಲೆ ಬಟ್ಟೆ ಸುತ್ತಲಾಗುತ್ತದೆ. ಈ ಬಟ್ಟೆಯ ಮೇಲೆ ಬಾಂಬೂವಿನ ಪಟ್ಟಿ ಕಟ್ಟಲಾಗುತ್ತದೆ. ಹೀಗೆ ಮರದ ಮೇಲಿನಿಂದ ಬಿದ್ದು

ಮುರಿದುಕೊಂಡವರಿಗೆ ಶ್ರೀ ಚಂದ್ರಕಾಂತ ಗಾವಡಾ ಮೈಗೊಳ ಇವರೇ ಆಧಾರ ಸ್ಥಂಬವಾಗಿದ್ದಾರೆ. ಇವರು ನಮ್ಮ ರಾಜ್ಯದಲ್ಲಿ ಅಷ್ಟೆ ಅಲ್ಲದೇ, ಗೋವಾ, ಮಹಾರಾಷ್ಟ್ರ ರಾಜ್ಯಗಳಿಗೂ ಹೋಗಿ ವೈದ್ಯರಿಂದಲೂ ಸರಿಪಡಿಸಲಾಗದಂತಹ ಕೇಸನ್ನು ಗುಣಪಡಿಸಲಾಗಿದೆ. ಚಂದ್ರಕಾಂತ ಗಾವಡಾ ಇದಷ್ಟೆ ಅಲ್ಲದೇ ಮೈಕೈನೋವು ಬಂದಾಗ ಮಹಿಯಳೆಯರಿಗೆ ಮಕ್ಕಳಾಗದೇ ಇದ್ದಾಗ, ಬಿಳಿ ಸೆರಗು ಹೋಗುತ್ತಿದ್ದಾಗ, ಎದೆ–ನೋವು ಕಾಣಿಸಿಕೊಂಡಾಗ ಹೀಗೆ ಬೇರೆ ಬೇರೆ ರೀತಿಯ ಔಷಧಿಗಳನ್ನು ನೀಡುತ್ತಾ ಬಂದಿದ್ದಾರೆ. ಬುಡಕಟ್ಟು ಕುಣಬಿಗಳಿಗೆ ಇವರೇ ವೈದ್ಯರಾಗಿದ್ದಾರೆ.[10]

ತೆಲೋಲಿ ಗ್ರಾಮದ ಶ್ರೀ ನಾರಾಯಣ ಗಾವಡಾ ಮುರಿದವರಿಗೆ ಔಷಧಿ ಕಟ್ಟುತ್ತಾರೆ. ಕೊಂದರದಲ್ಲಿ ಶ್ರೀ ಶ್ಯಾಣು ಖೋಲಕರ ಮತ್ತು ಕುಟುಂಬದವರು 'ವಾಯದ ಮನಗೆ' ಉತ್ತಮವಾದ ಔಷಧ ನೀಡುತ್ತಾರೆ. ಕುಂಬಾರವಾಡಾದಲ್ಲಿ ಶ್ರೀ ರಾಮ ಕುಂಡಲ್‌ಕರ ಇವರು ಔಷಧ ನೀಡುತ್ತಾರೆ. ಸತಿವಾಡದಲ್ಲಿ ಶ್ರೀಮತಿ ಸುಶೀಲಾ ವಿಠೊಬಾ ಗಾವಡಾ ಇವರು "ಕ್ಷಣ" ಆದವರಿಗೆ ಔಷಧ ನೀಡುತ್ತಾರೆ. ದಿಗಳಂಬದಲ್ಲಿ ಮಕ್ಕಳ "ಘೊಸೆ" ಔಷಧಿ ನೀಡಲಾಗುತ್ತದೆ. ಕೆಕೊರ್ಡಾದಲ್ಲಿ ಮೂತ್ರ ಕಲ್ಲುವಿನಗೆ ಔಷಧಿ ಇದೆ. ನುಜ್ಜಿ ಪಾಟ್ನೆ ಗ್ರಾಮದಲ್ಲಿ ಲಕ್ಷ್ಮಣ ವೆಳಿಸ್ 'ಸೀರ್' ಬೆಳೆದವರಿಗೆ ಔಷಧಿ ನೀಡುತ್ತಾರೆ. ಬಾಕಿತ್ ಗ್ರಾಮದಲ್ಲಿ ಶ್ರೀ ಗಜಾನನ ವೆಳಿಪ್ ಅವರ ತಂದೆಯ ನಂತರ ಬಾವಾಗೆ ಔಷಧಿ ನೀಡುತ್ತಾರೆ. ರಾಮನಗರದಲ್ಲಿ ಲಿಂಗೊ ಮಿರಾಶಿ ಉತ್ತಮ ನಾಟಿ ವೈದ್ಯರಾಗಿದ್ದರು. ಇವರ ಮರಣಾನಂತರ ಇವರ ಕುಟುಂಬಸ್ಥರು ನೀಡುತ್ತಾರೆ. ಹೀಗೆ ಅನೇಕ ಗ್ರಾಮಗಳಲ್ಲಿ ಕುಣಬಿಗಳು ಕಾಡಿನ ಔಷಧಿಗಳನ್ನು ನೀಡುತ್ತಾರೆ. ಕಾಡಿನ ಔಷಧಿಗಳು ತಿನ್ನುವಾಗ ಅದರದೇ ಆದ ಪಥ್ಯ ಇರುತ್ತದೆ. ಈ ಗಾವಟಿ ಔಷಧಕ್ಕೆ ಹೆಚ್ಚು ಪಥ್ಯ ಪಾಲನೆ ಮಾಡಬೇಕಾಗುತ್ತದೆ. ವಿಠೊಬಾಮ್ಹಾದು ಗಾವಡಾ ಕಾಮಾಲೆ, ಗಂದು, ನಾಗೋಮಿರಾಶಿ, ಗೊಸೆ, ಸಿಸೆಲ್, ಕೆಂಪು ಸಾವರ ಚಕ್ಕೆ, ಚನ್ನುಚೆ ಮುಳ, ತುಪಕೋವುಣ, ಧಾಮಣ, ಎಳಂಬಾ ಸಾಲ, ಸಾತನ ಪಾಲ, ಥಿಕ್ಕಯೆ ಸಾಲ, ಫಿಡಗುಸ್ ಬಿಂರಾಸುಲ ಪಾಲೊ ನಂದಗೊಳ ಪಾಲೊ, ಪಟಿಕೊಳ ರೂಡದಾವಾ ತುಳಸಿ ಪಾಲೊಬಂದರಾ ಶಾನ, ತವಸೆ ದುಧಿಬಿಯೊ, ಹೀಗೆ ವಿವಿಧ ಜಾತಿಯ ಗಿಡಗಂಟಿಗಳನ್ನು ಔಷಧಿಯನ್ನಾಗಿ ಬಳಕೆ ಮಾಡಲಾಗುತ್ತದೆ.

ಈ ಔಷಧಿ ಕೊಡುವವರು ಊರಿನಿಂದ ಊರಿಗೆ ಹೋಗಿ ಔಷಧಿ ಕೊಡುವ ಕೆಲಸ ಮಾಡುವುದಿಲ್ಲ. ಇವರ ಮನೆಗೆ ಬಂದು ತಮಗೆ ಬೇಕಾದ ಔಷಧಿಯನ್ನು ಪಡೆದುಕೊಂಡು ಹೋಗುತ್ತಾರೆ. ಔಷಧಿ ಒಯ್ಯುವಾಗ ಹಣವನ್ನು ನೀಡದೇ ದೇವರಿಗೆ ಒಂದು ಕಾಯಿ ಮತ್ತು ಊದಬತ್ತಿ ನೀಡುತ್ತಾರೆ. ಕೈಕಾಲು ಮುರಿದುಕೊಂಡವರ ಮನೆಗೆ ಹೋಗಿ ಔಷಧಿ ಕಟ್ಟುವ ಸಂಪ್ರದಾಯ ಚಂದ್ರಕಾಂತ ಗಾವಡಾ ಮೈನೊಳ ಇವರು ಪಾಲಿಸಿಕೊಂಡು ಬರುತ್ತಾರೆ. ಇವರು ಇಂದಿಗೂ ಇಂತಿಷ್ಟು ಹಣ ಕೇಳಿ ಪಡೆದ ಉದಾಹರಣೆ ಇಲ್ಲವೆಂದು ಇವರು ಹೇಳುತ್ತಾರೆ. ವಿಷ ಸರ್ಪಗಳಿಂದ ಕಚ್ಚಿದಾಗ ವಾಗಬಂದ ಗ್ರಾಮದ ಶ್ರೀ ಮಹಾದೇವ ಇವರು ಔಷಧಿ

ನೀಡುತ್ತಾರೆ. ಸಾಂಪ್ರದಾಯಿಕ ನಾಟಿ ಔಷಧಿಗಳನ್ನು ಮಾಡುತ್ತಾರೆ. ಕುರಾವಳಿ ಗ್ರಾಮದ ಆಪ್ಪಿ ಗುಗೊ ವೆಳಿಪ ಇವರು ಆಕಳುಗಳ ಗಿಳಗೊ ತಪ್ಪಿದ್ದರೆ ಇದನ್ನು ಸರಿಮಾಡುವ ತುಂಬುವ ಕೆಲಸ ಮಾಡುತ್ತಾರೆ.

ದನಕರುಗಳ ಕಾಲು ಮತ್ತು ಇತರೆ ಮೂಳೆಗಳು ಮುರಿದಾಗಲೂ ಮೈನೊಳ ಗ್ರಾಮದ ಶ್ರೀ ಚಂದ್ರಕಾಂತ ಗಾವಡಾ ಇವರ ಔಷಧವೇ ಕಟ್ಟಲಾಗುತ್ತದೆ. ಎತ್ತುಗಳು ಗದ್ದೆಯ ಕೆಲಸದ ಸಂದರ್ಭದಲ್ಲಿ ಆರಾಮ ಇಲ್ಲದೇ ಇದ್ದಾಗ ಜೇನುತುಪ್ಪ ಕುಡಿಯಲು ಹಾಕಲಾಗುತ್ತದೆ. ದನಗಳಿಗೆ ಗಂಟಲು ನೋವು ಕಾಣಿಸಿಕೊಂಡರೆ ಜವದ್ಯಾಚಿ 'ಬೂರ' ಕಟ್ಟಲಾಗುತ್ತದೆ. ಜೊತೆ ಸಂದರ್ಭದಲ್ಲಿ ಎತ್ತುಗಳ ಕುತ್ತಿಗೆಗೆ ನೋವು ಕಾಣಿಸಿಕೊಂಡರೆ ಇದಕ್ಕೆ ಗುವಾಡ್ಯ ಪಾಲೊ ಔಷಧ ಹಚ್ಚಲಾಗುತ್ತದೆ. ಗುವಡ್ಯಾ ಪಾಲೊ ಕೂಡ ಹಚ್ಚಲಾಗುತ್ತದೆ. ಮಿರಿ, ಫೇಯಫಳ್, ಮೂಕಡ ಲಿಮಿತ್ ಪಾಲೊ, ನಿಗುಂಡ್ಯಾ ಪಾಲೊ ಇವರುಗಳನ್ನು ಒಂದು ಕಡೆ ಕುಟ್ಟಿ ನೀರು ಹಾಕಿ ಔಷಧಿಯನ್ನು ದನಗಳಿಗೆ ಹಾಕಲಾಗುತ್ತದೆ. ಆಕಳು ಕಡಿಮೆ ಹಾಲು ಕೊಡುತ್ತಿದ್ದಾಗ ಶ್ರೀ ದತ್ತ ಶೆಳೆಪೇಕರ್ ಮಾಲೆ ಚಂದ್ರಾಳಿ ಅಣ್ಣನ ನಂತರ ಔಷಧಿ ಕೊಡುತ್ತಿದ್ದಾರೆ. ಸಾಕುಪ್ರಾಣಿ ನಾಯಿಕ ಬೆಕ್ಕಿಗೂ ಔಷಧಿಗಳು ಇವೆ.

ಹೀಗೆ ಕುಣಬಿಗಳಲ್ಲಿ ನಾಟಿವೈದ್ಯ ಪದ್ಧತಿ ತಲತಲಾಂತರವಾಗಿ ಸಂಪ್ರದಾಯದಂತೆ ಪಾಲಿಸಿಕೊಂಡು ಬರಲಾಗಿದೆ. ಇದರಲ್ಲಿ ಇನ್ನೊಂದು ಮುಖ್ಯವಾದ ಅಂಶವೆಂದರೆ ಕುಣಬಿಗಳಲ್ಲಿ ಹೆರಿಗೆ ಪದ್ಧತಿ ಇವು ಕೂಡ ಒಂದು ಸಾಂಪ್ರದಾಯಿಕ ಪದ್ಧತಿಯಾಗಿದೆ. ಕುಂಡಲ್, ಮಳ್ನೆ, ಗಾಂಗೋಡಾ ಗ್ರಾಮದಿಂದ ಶ್ರೀಮತಿ ಸುಮತ್ರಾ ಬುಧೊ ವೆಳಿಪ್(ಸುಶೀಲ್ ಮಾವಸಿ) ಹಾಗೂ ತೆಲೋಲಿ ಗ್ರಾಮದ ಶ್ರೀಮತಿ ಪಾರ್ವತಿ ಗಣೇಶ ಗಾವಡಾ ಸಾಂಪ್ರದಾಯಿಕ ಹೆರಿಗೆ ಮಾಡುವುದರಲ್ಲಿ ಪ್ರಸಿದ್ಧಿ ಪಡೆದುಕೊಂಡಿದ್ದಾರೆ. ಸುಶಿಲ್ ಮಾವಸಿ ಮತ್ತು ಪಾರ್ವತಿ ಮಾವಸಿ ಇವರಿಬ್ಬರು ಹೆಚ್ಚಾಗಿ ಮನೆಯಲ್ಲಿಯೇ ಹೆರಿಗೆ ಮಾಡಲಾಗುತ್ತದೆ. ಕುಗ್ರಾಮಗಳಿಗೆ ಮಳೆಗಾಲದಲ್ಲಿ ನಡೆದುಕೊಂಡು ಹೋಗಿ ಇವರು ಹೆರಿಗೆ ಮಾಡುತ್ತಾರೆ. ಇವರು ಹೆರಿಗೆ ಮಾಡಿದ ಒಂದು ಶಿಶು ಅಥವಾ ತಾಯಿಗೆ ತೊಂದರೆ ಆಗದೇ ಇರುವುದು ಇವರ ಸಿಮೂತೆಗೆ ಹಿಡಿದ ಕನ್ನಡಿ ಆಗಿದೆ. ಇವರು ಮೊದಲು ಹೆರಿಗೆ ಮಹಿಳೆಯ ಅಂಗಾಂಗವನ್ನು ಪರೀಕ್ಷಿಸುತ್ತಾರೆ. ನಂತರ ಕೊಬ್ಬರಿ ಎಣ್ಣೆ ಹಚ್ಚಿ ಮಗು ಹೊಟ್ಟೆಯಲ್ಲಿ ಅಡ್ಡ ಇದ್ದರೆ ಸರಿದಾರಿಗೆ ತರುತ್ತಾರೆ. ನಂತರ, ತುಂಬ್ಯಾ ಪಾಲೊ, ಸಾವರ ಲಿಂಬುಕ ಸಾಲಗಳ ಔಷಧಿಯನ್ನು ನೀಡುತ್ತಾರೆ. ಹೀಗೆ ಸರಳವಾಗಿ ಯಾವ ಖರ್ಚು ಇಲ್ಲದೇ ಮನೆಯಲ್ಲಿಯೇ ಹೆರಿಗೆ ಮಾಡಲಾಗುತ್ತದೆ. ಇವರು ಹೆರಿಗೆ ಮಾಡಿದಾಗ ಎಂದಿಗೂ ಹಣ ಕೇಳಿದ ಉದಾಹರಣೆ ಇಲ್ಲ ಇದೊಂದು ದೇವರ ಕೆಲಸವೆಂದು ನಂಬಿ ಮಾಡುತ್ತಾರೆ. ಶ್ರೀಮತಿ ಸುಮಿತ್ರಾ ಬುಧೊ ವೆಳಿಪ್(ಸುಶಿಲ್ ಮಾವಸಿ) ಇವರಿಗೆ ಜಾನಪದ ಅಕಾಡೆಮಿಯಿಂದ 2014ರಲ್ಲಿ ಕಾಡು ಬುಡಕಟ್ಟು ನಾಟಿ ವೈದ್ಯ ಪ್ರಶಸ್ತಿ ಸಿಕ್ಕಿರುವುದು ಕುಣಬಿಗಳಿಗೆ ಹೆಮ್ಮೆಯ

ವಿಷವಾಗಿದೆ. ಅಂದಿನ ಅಧ್ಯಕ್ಷ ಪಿಂಚಳ್ಳಿ ಹಾಗೂ ಗ್ರೀನ್ ಇಂಡಿಯಾ ದಾಂಡೇಲಿ ಜೋಯಿಡಾದ ನಿರ್ದೇಶಕ ಶ್ರೀ ಬಿ.ಪಿ. ಮಹೇಂದ್ರಕಮಾರ್ ಅವರ ಸಂಪೂರ್ಣ ಪ್ರಯತ್ನ ಹಾಗೂ ಕುಣಬಿ ಮುಖಂಡ ಶ್ರೀ ಸುಭಾಷ ಗಾವಡಾ ಇವರ ಪ್ರಯತ್ನದಿಂದ ಸುಶಿಲ್ ಮಾವಸಿಗೆ ಈ ಪ್ರಶಸ್ತಿ ದೊರೆಯಲು ಕಾರಣವಾಗಿತ್ತು. ಸುಶಿಲ್ ಮಾವಸಿ ಪಾರ್ವತಿ ಮಾವಸಿಗೆ ಅನೇಕ ಸಂದರ್ಭಗಳಲ್ಲಿ ಸಂಘ ಸಂಸ್ಥೆಗಳಿಂದ, ಸರಕಾರಿ ಕಾರ್ಯಗಳಲ್ಲಿ ಸನ್ಮಾನಿಸಿ ಗೌರವ ನೀಡಲಾಗಿದೆ. ಇದು ಕುಣಬಿಗಳಿಗೆ ಹೆಮ್ಮೆಯ ವಿಷಯವೇ ಸರಿ.

ನಾಟಿ ವೈದ್ಯಪದ್ಧತಿಯಿಂದ ಇಂದೂ ಕೆಲವರು ದೂರ ಉಳಿಯುತ್ತಿದ್ದಾರೆ. ಇಂದು ವೈದ್ಯಪದ್ಧತಿಗೆ ಜನರು ಹೆಚ್ಚು ಬಲಿಪಶುಗಳಾಗುತ್ತಿದ್ದಾರೆ. ಕುಣಬಿಗಳ ನಾಟಿ ವೈದ್ಯ ಪದ್ಧತಿ ಇಂದಿನ ವೈದ್ಯಪದ್ಧತಿಗೆ ಸಮವಾಗಿ ನಿಂತಿದೆ. ನಾಟಿ ವೈದ್ಯಪದ್ಧತಿಯಿಂದ ಮನುಷ್ಯನ ಆರೋಗ್ಯವು ಹೆಚ್ಚು ಗುಣವಾಗುವುದರೊಂದಿಗೆ ಖರ್ಚು ಕಡಿಮೆಯಾಗುತ್ತದೆ. ಇಂದು ಆಹಾರ ಪದ್ಧತಿಯಲ್ಲಿ ಬದಲಾವಣೆಯಾಗಿರುವುದರಿಂದ ನಾಟಿ ವೈದ್ಯರು ನೀಡುವ ಗಿಡ ಮರಗಳ ಔಷಧಿಯಿಂದ ಬೇಗ ಗುಣಮುಖರಾಗುತ್ತಿಲ್ಲ. ಆದರೆ ಮತ್ತೆ ಜನರು ನಾಟಿ ವೈದ್ಯಪದ್ಧತಿ ಮತ್ತು ಮುಖ ಮಾಡುತ್ತಿದ್ದಾರೆ. ಇದನ್ನು ಮುಂದೆಯೂ ಮುಂದುವರಿಸಿಕೊಂಡು ಹೋಗಬೇಕಾದ ಅಗತ್ಯ ಕುಣಬಿಗಳಿಗೆ ಇದೆ. ತಾಲ್ಲೂಕಿನ ಅನೇಕ ಗ್ರಾಮದಲ್ಲಿ ನಾಟಿ ವೈದ್ಯರು ಸಂಘಟನೆ ಮಾಡಿ ಸರಕಾರದಿಂದ ಇವರಿಗೆ ಪ್ರೋತ್ಸಾಹ ಧನವನ್ನು ನೀಡುವ ಬಗ್ಗೆ ಹೋರಾಟಗಳು ಆಗಬೇಕಿದೆ. ಅಂದಾಗ ಮಾತ್ರ ನಾಟಿ ವೈದ್ಯಪದ್ಧತಿ ಜೀವಂತ ಉಳಿಯಬಹುದಾಗಿದೆ.

ಇಂದು ನಮ್ಮ ಕಾಡಿನಿಂದ ಅನೇಕ ಗಿಡ ಮೂಲಿಕೆ ಔಷಧಿಗಳು ಕದ್ದು ಮಾರಾಟ ಮಾಡಲಾಗುತ್ತದೆ. ದೇಶ ವಿದೇಶಗಳಿಗೂ ರಫ್ತಾಗುತ್ತಿದೆ. ಸ್ಥಳೀಯವಾಗಿ ಇರುವ ಗಿಡ ಮೂಲಿಕೆಗಳ ಪರಿಚಯ ಮತ್ತು ಸ್ಥಳೀಯವಾಗಿ ಬಳಕೆಗೆ ಮಾಹಿತಿ ಕಾರ್ಯಾಗಾರಗಳನ್ನು ವಿಮರ್ಶಿಸಿ ತಿಳುವಳಿಕೆ ನೀಡಬೇಕು ಮತ್ತು ಇವುಗಳ ಸಂರಕ್ಷಣೆ ಮತ್ತು ಸಂಗ್ರಹಣೆ ಮಾಡಬೇಕಾದ ಅಗತ್ಯವೂ ಇದೆ. ಕಾಡಿನಲ್ಲಿ ಸಿಗುವ ಗಿಡಮೂಲಿಕೆಗಳ ಜೊತೆಯಲ್ಲಿ ಮನೆ ಅಂಗಳದಲ್ಲಿ ಗಿಡಮೂಲಿಕೆಗಳನ್ನು ಬೆಳೆಸಿ ಉಪಯೋಗಿಸಲು ಪ್ರೋತ್ಸಾಹಧನವನ್ನು ಈ ನಾಟಿ ವೈದ್ಯರಿಗೆ ನೀಡಬೇಕಿದೆ. ಯುವ ಪೀಳಿಗೆಯವರು ಇಂದೂ ನಾಟಿ ವೈದ್ಯ ಮೂಲ ಕಸುಬಿನಿಂದ ದೂರ ಹೋಗುತ್ತಿದ್ದು ಇವರನ್ನು ಈ ಮೂಲ ಉದ್ಯೋಗಕ್ಕೆ ಪ್ರೋತ್ಸಾಹಿಸಬೇಕು ಮತ್ತು ಆಸಕ್ತಿ ಹುಟ್ಟುವಂತೆ ಮಾಡಬೇಕಿದೆ. ಅಂದಾಗ ಮಾತ್ರ ಸಾಂಸ್ಕೃತಿಕ ಬದುಕು ಪುನರ್ ಸ್ಥಾಪಿಸಬಹುದಾಗಿದೆ.

ಕುಣಬಿಗಳು ನಾಟಿ ವೈದ್ಯಕ್ಕೆ ಸಂಬಂಧಿಸಿದಂತೆ ಕಾಡಿನಲ್ಲಿ ಸಿಗುವ ಔಷಧಿಗಳನ್ನು ಜೊತೆಯಲ್ಲಿ ಮನೆಯ ಸುತ್ತಲೂ ಗಿಡಮೂಲಿಕೆಗಳನ್ನು ಬೆಳೆಸುತ್ತಾರೆ. ಇದರಿಂದ ಮನೆಯಲ್ಲಿಯ ಔಷಧಿ ಸಸ್ಯಗಳು ದೊರೆಯುವಂತಾಗಿದೆ. ಕುಣಬಿಗಳ ಮನೆ ಅಂಗಳಗಳು ಔಷಧಿಯ ತಾಣಗಳಾಗಿವೆ." ಕುಣಬಿಗಳ ಔಷಧಿಗೆ ಸಂಬಂಧಿಸಿದ ಗಿಡಮೂಲಿಕೆಗಳನ್ನು ಕೋಷ್ಟಕದಲ್ಲಿ ನೀಡಲಾಗಿದೆ.

## ಕೋಷ್ಟಕ 1

## ಕುಣಬಿ ಮತ್ತು ಸಿದ್ದಿ ಬುಡಕಟ್ಟುಗಳ ಗಿಡಮೂಲಿಕೆಗಳು ಮತ್ತು ಉಪಯೋಗಗಳ ಪಟ್ಟಿ

| Common Name | Scientific Name | Family | Habit | Parts Used | Method of preparation | Mode of administration | Ailments treated |
|---|---|---|---|---|---|---|---|
| 1 Karayi | Sterculia | Sterculiaceae | Tree | Bark | Along with bark of Ficus bengalensis and Terminalia paniculata paste is made | Orally | Rabies, miscarriage, muscle cramps |
| 2 Temple tree | Plumeria alba | Apocynaceae | Tree | Bark | Paste is prepared from bark then alonf with lime | Orally | To treat poisonous bites |
| 3 Nandi batlu | Tabernamontana het\yneana | Apocynaceae | Tree | | Mixed with milk | Orally | Useful in treatment of jaundice |
| 4 Cup saucer plant | Breynia retusa | Phyllanthaceae | Shrub | Tubers | Tubers washed with rice water and paste is prepared | Orally | Tonsil and throat cancer |
| 5 Pocket fern | Drynaria | Polypodiaceae | Fern | Bulbs | Small portion of bulb is boiled in water and given with jiggery | | To treat ashama and also lung related disorders |
| 6 Glumohar | Cocos nucifera | Areaceae | Tree | Endosperm | Unprocessed | Orally | To treat paralysis |

| Common Name | Scientific Name | Family | Habit | Parts Used | Method of preparation | Mode of administration | Ailments treated |
|---|---|---|---|---|---|---|---|
| 7 pata | Cyclia peltata | | | Roots | | Orally | For poisonous snake bites |
| 8 Ala | Ficus bengalensis | | Tree | Bark | Along with bark of Ficus urens | | Paralysis |
| 9 Gulmohar | Delonix regia | | Tree | Bark | Along with clove, mug and egg white of native hen grinded and made into capsules | Orally | |
| 10 Ragatbol | | | | Resin | Along with urad dal made into paste | External | To treat fractures |
| 11 Kopula | Ixora sps | | | | | | For menstruation related problems |
| 12 Nelanelli | Phyllanthus niruri | | Shrub | | Decoction is made | | Used to trat jaundice |
| 13 Maradarshina | | | | | | | Sorosis and other skin related problems |
| 14 Oleadiaca | | Shrub | Leaves | | Paste is made along with lime | | |
| 15 | | | | | | | |

| Common Name | Scientific Name Family | Habit | Parts Used | Method of preparation | Mode of administration | Ailments treated |
|---|---|---|---|---|---|---|
| 16 | Calicarba tomentosa | Roots | | | | To treat ascaris worm is stomach |
| 17 Shatavari | Asparagus racemosus | | | | | |
| 18 Gul badane | | | | | | |
| 19 | Mcaranga peltata | Latex | | | | To treat skin disease and blain |
| 20 | Lea indica | Roots | | Mixed with 2-3 different roots | | For treatment of AIDS |
| 21 | Cyclia peltata | | | | | For treatment of worms in stomach |
| 22 Insulin plant | | | Leaves | Along with Catharanthus roseus roots and bark of Tinospora | | |
| | | | | cordifolia | | For diabetes |
| 23 Kodasisl | Holigarna arnotiana | | Leaves | Paste is prepared from leaves | | For treat larger wounds which needs stitches cured without stitch |
| 24 | Pothos scandens | | Roots | Paste is made | | To treat wounds and also poisonous bites |
| 25 Chakrani | | | | | Orally | For acidity |

| Common Name | Scientific Name | Family | Habit | Parts Used | Method of preparation | Mode of administration | Ailments treated |
|---|---|---|---|---|---|---|---|
| 26 Lolesara | Aloe vera | | | Liquid gel from leaf | | Orally | For menstrual related problems, stomach ulcers, cramps muscle etc |
| 27 Amruthaballi | Tinospora cordifolia | | | Stem | Paste is prepared from leafs along with chips from stem and taken with honey | Orally | For treatment of jaundice and typhoid |
| 28 Garaga | Eclipta alba | | | Leaves | Paste prepared from leaves and them consumed along with butter milk | Orally | To treatment iron defici ency and also used for hair growth Mygraine |
| 29 Thmbe | Leucas aspera | | | Flowers | Juice is prepared from the flowers | Nasal | To treat headache |
| 30 Wasps | | | | Mud | | | |
| 31 Teak, Tega | Tectona grandis | Lamiaceae | Tree | Leafs | Young leaf flushes grinded by mixing with coconut and paste is prepared | External | To treat burnt scars and bed soars |
| 32 Cashew.Gern | Anacardium occidentale | Anacardiaceae | Tree | Seed Shell | Seed shell of cashew nut, bark of Ficus glomeratus and daman fruits are made into juice | Orally | To treat kidney stone |
| 33 Vayuvidanga | Embelia tejuriyam | | | | | Orally | |

## 1. ಜೇನು ಕುರುಬರು ಬಳಸುವ ಗಿಡ ಮೂಲಿಕೆಗಳು

**ಜೇನುಕುರುಬರಲ್ಲಿ ಸಸ್ಯಶಾಸ್ತ್ರೀಯ ನಾರು / ಔಷಧಿ**

1. ಅಡಸೋಗೆ – ಕೆಮ್ಮು ಅಸ್ತಮಾ ಕಾಯಿಲೆಗೆ
2. ಅರಳಿ – ಮುಟ್ಟಿನ ತೊಂದರೆಗಳಿಗೆ
3. ಬಳಿಉಮ್ಮತ್ತಿ – ಉಬ್ಬಸಕ್ಕೆ
4. ಚಕ್ರಯನಿ – ರಕ್ತಹೀನತೆಗೆ
5. ದಾಸವಾಳ – ಮುಟ್ಟಿನ ದೋಷ
6. ದೊಡ್ಡಬುಗಡಿ – ಉಳುಕಿಗಾಗಿ
7. ಕಾಡುಬಸಳೆ – ಕಿವಿನೋವು
8. ದೊಡ್ಡಪತ್ರೆ – ಪಿತ್ತ
9. ಹಾಲುಬುಗಡಿ(ನಾಗಾರ್ಜುನ) – ಹಾಲು ಹೆಚ್ಚಾಗಲು, ಹಾವಿನ ಕಡಿತಕ್ಕೆ
10. ಕಾಡು ಈರುಳ್ಳಿ – ಅಂಗೈ, ಅಂಗಾಲಿನ ಉರಿ
11. ಕಹಿನೇರಳೆ – ವಿಷ ಇಳಿಸೋದಕ್ಕೆ
12. ಕಹಿಸುಂಡೆ – ವಿಷ ಇಳಿಸೋದಕ್ಕೆ
13. ಕರಿಲಕ್ಕಿ – ಕೀಲುನೋವು
14. ಕರಿತುಳಸಿ – ಕೆಮ್ಮು, ನೆಗಡಿ
15. ಕಾಡು ಅರಿಶಿನ – ಗಾಯಕ್ಕೆ
16. ಕಾಡುನಾಗದಾಳಿ – ಮಂಗನ ಬಾವಿಗೆ
17. ಲೋಳೆಸರ – ಮುಟ್ಟಿನ ತೊಂದರೆ, ಒಳಗಾಯಗಳಿಗೆ
18. ನೆಲನೆಲ್ಲಿ – ಕಾಮಾಲೆ
19. ಕರಿಕಾಣಿಕೆ – ಯಕೃತ್ತಿನ ತೊಂದರೆಗೆ
20. ಮಧುನಾಶಿನಿ – ಸಕ್ಕರೆ ಕಾಯಿಲೆ

| | | |
|---|---|---|
| 21. ಸರ್ಪಗಂಧಿ | – | ಹಾವು ಕಡಿತ, ರಕ್ತದೊತ್ತಡ |
| 22. ಶಂಕಪುಷ್ಪಿ | – | ಬುದ್ಧಿ ಬೆಳವಣಿಗೆ |
| 23. ಸೋಕುಗಿಡ | – | ಸೋಂಕಿಗಾಗಿ |
| 24. ಮರಳೆಹಂಬು | – | |
| 25. ತೊಂಡೆಗಿಡ | – | ತಂಪಿಗಾಗಿ |
| 26. ಉಳುಕಿನ ಹಂಬು | – | ಉಳುಕಿನ ನಿವಾರಣೆಗೆ |
| 27. ಎಕ್ಕ | – | ಕಾಲರಾ, ಕಾಲಿನ ಆನೆ, ಕರೆಸಿಬ್ಬು, ಇತ್ಯಾದಿ |
| 28. ಪಾಷಾಣ ಭೇದಿ | – | ಮೂತ್ರಕೋಶದ ಕಲ್ಲು ಕರಗಿಸಲು |
| 29. ತುಂಬೆಗಗಿ | – | ಜ್ವರ, ಮಂಗನಬಾವು, ಅರ್ಧ ತಲೆನೋವು |
| 30. ಸಂಡುಬಳ್ಳಿ(ಮಂಗರಬಳ್ಳಿ) | – | ಮೂಳೆ ಜೋಡಣೆಬೆಟ್ಟಕುರುಬರು ಕಾಡಿನಲ್ಲಿ ಸುತ್ತಾಡಿ ಸಂಗ್ರಹಿಸುವ ಹಾಗೂ ಆಹಾರವಾಗಿ ಬಳಸುವ ಸ್ವಾಭಾವಿಕ ಸಸ್ಯಗಳು |
| 1. ಮುಳ್ಳುಗೆಣಸು | – | ಆವಿಯಲ್ಲಿ ಬೇಯಿಸುತ್ತಾರೆ |
| 2. ನಾರೆಗೆಣಸು | – | ಸುಟ್ಟು ತಿನ್ನುತ್ತಾರೆ |
| 3. ನವರೆಗೆಣಸು | – | ಹಸಿಯಾಗಿಯೇ ಬಳಸುತ್ತಾರೆ |
| 4. ಅಕ್ಕಿಗೆಣಸು | – | ಹಸಿಯಾಗಿ ಅಥವಾ ಆವಿಯಲ್ಲಿ ಬೇಯಿಸಿ ತಿನ್ನುತ್ತಾರೆ |
| 5. ಬೆಲ್ಲಗೆಣಸು | – | ಹಸಿಯಾಗಿ ಅಥವಾ ಆವಿಯಲ್ಲಿ ಬೇಯಿಸಿ ತೆಗೆದುಕೊಳ್ಳುತ್ತಾರೆ |
| 6. ಎಕ್ಕುಗೆಣಸು | – | ಹಸಿಯಾಗಿ ಅಥವಾ ಸುಟ್ಟು ತಿನ್ನುತ್ತಾರೆ |
| 7. ನೂರೆಗೆಣಸು | – | ಸುಟ್ಟು ಅಥವಾ ಆವಿಯಲ್ಲಿ ಬೇಯಿಸಿ ತಿನ್ನುತ್ತಾರೆ. |

**ಕೋಷ್ಟಕ 2**

**ಬೆಟ್ಟಕುರುಬರ ಅಣಬೆಗಳ ಪಟ್ಟಿ**

| ಕ್ರಸಂ. | ಅಣಬೆಗಳು | ಸಿಗುವ ಸ್ಥಳ |
|---|---|---|
| 1 | ಕಾಂಕಟ್ ಅಣಬೆ | |
| 2 | ಆನೆಕೆಚ್ಚಲು ಅಣಬೆ | ಅಶ್ವತ್ಥ ಮರದ ಬುಡದಲ್ಲಿ |
| 3 | ಬಿದಿರು ಮುಂದೆ ಅಣಬೆ | ಬಿದಿರಿನ ಮೇಲೆ |
| 4 | ಹುತ್ತು ಅಣಬೆ | ಹುತ್ತಗಳ ಒಳಗೆ |
| 5 | ಮರ ಅಣಬೆ ಅಥವಾ ಬೆಕನ ಅಣಬೆ ಬೆಳೆಯುವ ಅಣಬೆ | ಕೊಳೆತ ಬೇರುಗಳ ಮೇಲೆ |
| 6 | ಕಟ್ಟ ಅಣಬೆ | ಬಿದಿರಿನ ಬೇರು |
| 7 | ಗೊಬ್ಬರದ ಅಣಬೆ | ಸೆಗಣಿಯಲ್ಲಿ |
| 8 | ಪಾಡಿ ಅಣಬೆ | ಮರಗಳ ಮೇಲೆ |

ಆಧಾರ: ತಿಳುವಳಿಕೆದಾರರು: ವಿಠಲ್ ನಾಣ್ಣಿ, ಎಚ್ ಡಿ ಕೋಟೆ, ಮೈಸೂರು ಜಿಲ್ಲೆ

**ಸೊಪ್ಪು ಸೊದೆಗಳು**

1. ಒನಗೊನೆ ಸೊಪ್ಪು2.
2. ಗಂಡು ಒನಗೊನೆಸೊಪ್ಪು
3. ತುಂಬೆ ಸೊಪ್ಪು
4. ಅಣ್ಣೆ ಸೊಪ್ಪು
5. ಹಾಗಲ ಸೊಪ್ಪು
6. ಗಣಕೆ ಸೊಪ್ಪು
7. ತೊಂಡೆ ಸೊಪ್ಪು
8. ಹುಣಸೆ ಸೊಪ್ಪು
9. ಕುಂಬಳ ಸೊಪ್ಪು
10. ಜಗಟೆ ಸೊಪ್ಪು
11. ಕೀರೆ ಸೊಪ್ಪು
12. ಸೀಗೆ ಸೊಪ್ಪು
13. ಕಾಡು ಸಾಸಿವೆ ಸೊಪ್ಪು
14. ಕಾಡು ನುಗ್ಗೆ ಸೊಪ್ಪು
15. ಮುಳ್ಳು ಗೀರೆ
16. ಬೊನಗೆರೆ ಸೊಪ್ಪು ಹಾಗೂ ಅದರ ಕಾಯಿ ಇತ್ಯಾದಿ

ಈ ಸೊಪ್ಪುಗಳ ಕಹಿ–ಸಿಹಿಗುಣ ಚೆನ್ನಾಗಿ ತಿಳಿದಿರುವ ಇವರು ಅವುಗಳನ್ನು ಬಳಸುವಾಗ ಎಚ್ಚರಿಕೆ ವಹಿಸಿ ಸರಿಯಾದ ರೀತಿಯಲ್ಲಿ ಸಿದ್ಧಪಡಿಸಿಕೊಂಡು ತಿನ್ನುತ್ತಾರೆ. ಉದಾಹರಣೆಗೆ, ಬಿದಿರುಕಳ್ಳೆಯನ್ನು ಕೊಚ್ಚಿ ತೆಗೆದು, ಅಕ್ಕಿಯಲ್ಲಿ ಎರಡು ದಿನ ನೆನಸಿಟ್ಟು, ಹುಳಿ ಬಂದ ನಂತರ, ಮೂರನೆಯ ದಿನ ಅದನ್ನು ತೊಳೆದು ಕಹಿ ತೆಗೆಯುತ್ತಾರೆ ಮತ್ತು ನೀರಿನಲ್ಲಿ ಕುದಿಸಿದಾಗ

ಪುನಃ ಕಹಿ ಬರುವುದರಿಂದ, ಆ ನೀರನ್ನು ಬಸಿದು ಹಾಕಿ ನಂತರ ಸಾರನ್ನು ತಯಾರಿಸಿಕೊಳ್ಳುತ್ತಾರೆ. ಕಾಡು ಸಾಸಿವೆ ಸೊಪ್ಪಿನ ಬಿತ್ತಗಳಲ್ಲಿ ಕಹಿ ಬರುವುದರಿಂದ ಬಿತ್ತಗಳಿಂದ ಸೊಪ್ಪನ್ನು ಬೇರ್ಪಡಿಸಿ, ಸೊಪ್ಪಿನ ಸಾರು ಮಾಡುತ್ತಾರೆ. ಹೀಗೆ ಇವರು ಕಾಯಿ ಹಾಗೂ ಸೊಪ್ಪು ಇತ್ಯಾದಿಗಳ ಸಿಪ್ಪೆ ಬೀಜಗಳು ಮುಂತಾದವುಗಳನ್ನು ತೆಗೆದುಹಾಕಿ, ಸೊಪ್ಪುಗಳನ್ನು ಬೇಯಿಸಿ ನೀರನ್ನು ಬಸಿದು ಅವುಗಳ ಕಹಿ, ಒಗರು ಇತ್ಯಾದಿಗಳನ್ನು ನಿವಾರಿಸಿ, ನಂತರ ಸಾರನ್ನೋ, ಸಾಂಬಾರನ್ನೋ ತಯಾರಿಸಿ ತಿನ್ನುತ್ತಾರೆ.

**ಕೋಷ್ಟಕ 3**

**ಬೆಟ್ಟಕುರುಬರು ಬಳಸುವ ಕೆಲವು ಹಣ್ಣುಗಳು**

| **ಕ್ರ.ಸಂ.** | **ಹಣ್ಣುಗಳ ಹೆಸರುಗಳು** | **ದೊರಕುವ ಕಾಲ** |
|---|---|---|
| 01. | ಕಾರೆಹಣ್ಣು | ಮಳೆಗಾಲ |
| 02. | ಬೇಲದ ಹಣ್ಣು | ಬೇಸಿಗೆಕಾಲ |
| 03. | ನೇರಳೆ ಹಣ್ಣು | ಮಳೆಗಾಲ |
| 04. | ಮಾವಿನಹಣ್ಣು | ಬೇಸಿಗೆಕಾಲ |
| 05. | ರಾಮಫಲ | ಬೇಸಿಗೆಕಾಲ |
| 06. | ಸೀತಾಫಲ | ಬೇಸಿಗೆಕಾಲ |
| 07. | ಗಣಿಕೆ ಹಣ್ಣು | ಮಳೆಗಾಲ |
| 08. | ಕಲ್ಲಂಗಡಿ | ಬೇಸಿಗೆಕಾಲ |
| 09. | ಸೀಬೆ | ಬೇಸಿಗೆಕಾಲ |
| 10. | ಜಮ್ಮುನೇರಳೆ | ಮಳೆಗಾಲ |

**ಆಧಾರ:** ತಿಳುವಳಿಕೆದಾರರು: ವಿಠಲ್ ನಾಣ್ಚಿ, ಎಚ್ ಡಿ ಕೋಟೆ, ಮೈಸೂರು ಜಿಲ್ಲೆ

ಇವುಗಳಲ್ಲದೆ, ತಾವರೆಗೆಡ್ಡೆ, ಕೊತ್ತಿಗೆಡ್ಡೆ, ಎಲ್ಚಿಹಣ್ಣು, ಚಳ್ಳೆಹಣ್ಣು, ನಲ್ಲಿಕಾಯಿ, ತೂಪುರುಕಾಯಿ, ತಡಸಿಹಣ್ಣು, ಮಿಣಕಿ, ಹೀಜು ಮುಂತಾದ ಸ್ವಾಭಾವಿಕ ಕಾಯಿ ಹಾಗೂ ಹಣ್ಣುಗಳನ್ನು ಆಹಾರವಾಗಿ ತೆಗೆದುಕೊಳ್ಳುತ್ತಾರೆ. ಬೆಟ್ಟಕುರುಬರು ಹಬ್ಬಗಳಲ್ಲಿ ದೋಸೆ, ಇಡ್ಲಿ, ಉಪ್ಪಿಟ್ಟು, ಪಾಯಸ ಇತ್ಯಾದಿಗಳನ್ನು ಸಿದ್ಧಪಡಿಸಿ ಊಟ ಮಾಡುತ್ತಾರೆ. ಕೆಲವರು ತಮ್ಮ ಹಾಡಿಯ ಸುತ್ತಲೂ ಕುಂಬಳಕಾಯಿ, ಸೋರೆಕಾಯಿ, ಹೀರೆಕಾಯಿ, ಬದನೆಕಾಯಿ, ಕೆಸವೆದಂಟು ಇತ್ಯಾದಿಗಳನ್ನು ಬೆಳೆಸಿರುತ್ತಾರೆ.

ಬೆಟ್ಟಕುರುಬರು ಮಾಂಸಾಹಾರಿಗಳಾಗಿದ್ದಾರೆ. ಇವರು ಕಡವೆ, ಹಂದಿ, ಜಿಂಕೆ, ಹಕ್ಕಿ ಮೊದಲಾದವುಗಳನ್ನು ಹಿಡಿದುಕೊಂಡು ಅವುಗಳ ಮಾಂಸವನ್ನು ಭಕ್ಷಿಸುತ್ತಾರೆ. ಇವರು ತಾವು ಬೇಟೆಯಾಡಿ ಕೊಂದು ತಂದಿರುವ ಅಥವಾ ಬಲೆ ಹಾಕಿ ಹಿಡಿದಿರುವ ಸಣ್ಣ-ಸಣ್ಣ ಪ್ರಾಣಿ, ಹಕ್ಕಿಗಳ ಮಾಂಸವನ್ನು ಹಾಗೂ ಮೀನು ಹಾಗೂ ಸೀಗಡಿಗಳನ್ನು ಸಾಂಬಾರಿನಲ್ಲಿ ಹಾಕಿ ತಿನ್ನುತ್ತಾರೆ. ಕಾಡೆಮ್ಮೆ ಹಾಗೂ ಗೋವುಗಳ ಮಾಂಸ, ಇವರಿಗೆ ನಿಷಿದ್ಧ. ಇವರು ಅಡಿಗೆಗೆ ಕಡ್ಲೆಕಾಯಿ ಎಣ್ಣೆಯನ್ನು, ಕೂದಲಿಗೆ ತೆಂಗಿನ ಎಣ್ಣೆಯನ್ನು, ಶರೀರವನ್ನು ತಂಪಾಗಿಸಲು ಹಾಗೂ ಅಂಗಾಂಗಗಳ ನೋವನ್ನು ಹೋಗಲಾಡಿಸಿಕೊಳ್ಳಲು ಕೈ ಎಣ್ಣೆಯನ್ನು ಮತ್ತು ಲಾಂದ್ರ ಇತ್ಯಾದಿಗಳಿಗೆ ಸೀಮೆ ಎಣ್ಣೆಯನ್ನು ಬಳಸುತ್ತಾರೆ. ಇವರಲ್ಲಿ ಕಾಫಿ, ಟೀ, ಕುಡಿಯುವ ಅಭ್ಯಾಸವೂ ಇದೆ. ಈ ಪಾನೀಯಗಳಲ್ಲಿ ಬೆಲ್ಲವನ್ನು ಹೆಚ್ಚಾಗಿ ಬಳಸಲಾಗುತ್ತದೆ. ಪುರುಷರು ಮದ್ಯಸಾರ, ಹೆಂಡ, ಬಿಯರ್ ಇತ್ಯಾದಿಗಳನ್ನು ಕುಡಿಯುತ್ತಾರೆ. ಇವರಲ್ಲಿ ಭಂಗಿಯಂತಹ ಮಾದಕ ಪದಾರ್ಥಗಳ ಸೇವನೆಯೂ ಇದೆ. ಹೊಗೆಸೊಪ್ಪು ಹಾಗೂ ಬಿಡಿ ಸೇದುವ ಚಟವೂ ಇದೆ ಮತ್ತು ಕೆಲವು ಸ್ತ್ರೀಯರು ಸಹ ಯಾವಾಗಲಾದರೊಮ್ಮೆ ವಿಶೇಷ ಸಂದರ್ಭಗಳಲ್ಲಿ ಮದ್ಯಪಾನ ಮಾಡುವುದುಂಟು. ವೀಳ್ಯದೆಲೆ ಹಾಗೂ ಅಡಕೆಯ ಬಳಕೆ ಬಹು ಸಾಮಾನ್ಯವಾಗಿದೆ. ಇವರು ಆರೋಗ್ಯದ ದೃಷ್ಟಿಯನ್ನು ಇಟ್ಟುಕೊಂಡು ವಯಸ್ಸು, ಹೆಣ್ಣುಮಗು ಋತುಮತಿಯಾದಾಗ, ಹೆಣ್ಣು ಗರ್ಭ ಧರಿಸಿದಾಗ, ಮಗುವಿಗೆ ಜನ್ಮ ನೀಡಿದಾಗ ಮತ್ತಿತರ ಅವಸ್ಥೆಗಳಲ್ಲಿ ಯೋಗ್ಯವಾದ ಆಹಾರವನ್ನು ನೀಡುವ ಪದ್ಧತಿಯನ್ನು ಅನುಸರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಇತರ ಸಮುದಾಯಗಳೊಡನೆ ಸಂಪರ್ಕ ಉಂಟಾಗುತ್ತಿರುವುದರಿಂದ ಇವರ ಪಥ್ಯವಿಧಿಗಳಲ್ಲಿ ಬದಲಾವಣೆಗಳು ಕಂಡುಬರುತ್ತಿವೆ.

ಕಾಡಿನ ಮಕ್ಕಳಾಗಿ ಹುಟ್ಟಿ, ಬೆಳೆದು, ಬಾಳುತ್ತಿರುವ ಬೆಟ್ಟಕುರುಬರಿಗೆ ಸಹಜವಾಗಿ ಅರಣ್ಯದ ಪ್ರತಿ ಗಿಡ, ಮರ, ಬೆಳ್ಳಿ, ಎಲೆ, ಹೂವು, ಹಣ್ಣು, ತೊಗಟೆ ಇತ್ಯಾದಿಗಳ ಪರಿಚಯ ಚೆನ್ನಾಗಿರುವುದು ಸಹಜವೇ. ಅವರು ಸಾಮಾನ್ಯವಾಗಿರುವ ರೋಗ-ರುಜಿನಗಳಿಗೆಲ್ಲಾ ನಾರು ಬೇರು, ಮೂಲಿಕೆ, ಹಸುರು ಮುಂತಾದ ಪ್ರಾಕೃತಿಕ ವಸ್ತುಗಳನ್ನು ಬಳಸಿ ಔಷಧಿಗಳನ್ನು ತಯಾರಿಸಿಕೊಂಡು ತೆಗೆದುಕೊಳ್ಳುತ್ತಾರೆ. ಇದರಿಂದ ರೋಗ ನಿವಾರಣೆಯಾಗುವುದು ಸ್ವಲ್ಪ ನಿಧಾನವಾದರೂ, ಇನ್ನಾವ ವಿಧವಾದ ತೊಂದರೆಗಳು ಉಂಟಾಗುವುದಿಲ್ಲ. ಈ ಸಹಜ ಚಿಕಿತ್ಸಾಕ್ರಮ ಬಹು ಪರಿಣಾಮಕಾರಿಯಾದುದೇ. ಹೀಗೆ ಅರಣ್ಯಮಾತೆ ಒದಗಿಸುವ ಔಷಧೀಯ ಗುಣಗಳಿಂದ ಕೂಡಿರುವ ನಾರುಬೇರು, ಮೂಲಿಕೆ ಇತ್ಯಾದಿಗಳು ಬೆಟ್ಟಕುರುಬರ ರೋಗರುಜಿನ ನಿವಾರಣೆಗಾಗಿ ಕೈಗೊಳ್ಳಲಾಗುವ ಚಿಕಿತ್ಸಾಕ್ರಮಗಳಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಇವರು ಬಳಸುವ ಔಷಧೀಯ ಗುಣವುಳ್ಳ ಮೂಲಿಕೆ, ನಾರುಬೇರು, ಸಸ್ಯಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದು.

## ಕೋಷ್ಟಕ 4

## ಬೆಟ್ಟಕುರುಬರು ಬಳಸುವ ಔಷಧಿ ಸಸ್ಯಗಳು

| ಸಸ್ಯದ ಹೆಸರು | ಔಷಧಿಯಾಗಿ ಬಳಸುವ ಗಿಡ, ಮರದ ಭಾಗ | ಕಾಯಿಲೆ |
|---|---|---|
| 1. ಗೌಲದ ಮರ | ಚಕ್ಕೆ | ಗಾಯವಾದ ಕಡೆಗೆ |
| 2. ನಲ್ಲಿಮೆಳೆ | ತೊಗಟೆಯ ತುಣುಕುಗಳು ಉಂಟಾಗುವ ಉರಿವಾತಕ್ಕೆ | ಮೂತ್ರವಿಸರ್ಜನೆ ಸಮಯ |
| 3. ಕಾಡುಕಳ್ಳಿಗಿಡ | ಎಲೆಗಳು | ಹೊಟ್ಟೆ ನೋವಿಗೆ |
| 4. ಕಾರೆಮೆಳೆ | ಬೇರು | ಗಾಯಕ್ಕೆ |
| 5. ಬಿಲ್ವರದಮರ | ತೊಗಟೆಯ ತುಣುಕುಗಳು ವ್ಯಾಧಿಗೆ | ಮಲದಲ್ಲಿ ರಕ್ತ ಹೋಗುವ |
| 6. ಕಾರೆಮೆಳೆ | ಬೇರು | ತಲೆಶೂಲೆಗೆ |
| 7. ಸಣ್ಣಸೂರಾಲ್ | ಸೊಪ್ಪು | ಜ್ವರ ಬಂದಾಗ ಕಷಾಯಕ್ಕೆ |
| 8. ಉಗನಿಹಂಬು | ಕಾಂಡ ರೋಗಕ್ಕೆ | ಮಲದಲ್ಲಿ ರಕ್ತ ಹೋಗುವ |
| 9. ಉತ್ತರಾಣಿ | ಎಲೆಗಳು | ಕೆಮ್ಮಲಿಗೆ |
| 10. ರೋಜಾಗಿಡ | ಕಾಂಡ, ಹೂವು | ಕಣ್ಣಿನ ಬಾಧೆಗೆ |
| 11. ಅರೆನೆಲ್ಲಿ | ಹಣ್ಣು | ಕಾಮಾಲೆಗೆ |
| 12. ಮಧುನಾಶಿನಿ | ಎಲೆಗಳು | ಮಧುಮೂತ್ರ ವ್ಯಾಧಿಗೆ |
| 13. ಸರ್ಪಗಂಧಿ | ಬೇರು | ರಕ್ತದೊತ್ತಡಕ್ಕೆ |
| 14. ಶುಂಠಿ | ಕಾಂಡ | ಅಜೀರ್ಣಕ್ಕೆ |
| 15. ನೆಲ್ಲಿಕಾಯಿಗಿಡ | ಹಣ್ಣು | ಪಿತ್ತವಿಕಾರಕ್ಕೆ ತಲೆ ಸುತ್ತುವುದಕ್ಕೆ |
| 16. ಆಯುಷ್ಯದ ಮರ | ಬಳ್ಳಿ | ನಾಯಿ ಕಡಿತಕ್ಕೆ |
| 17. ಕುಡಿಚೆಂಡು | ಎಲೆಗಳು | ಸುಟ್ಟಗಾಯಗಳಿಗೆ |
| 18. ಹೊನ್ನೆಮರ | ತೊಗಟೆಯ ತುಣುಕುಗಳು | |

ಎದೆನೋವಿಗೆ

## ಕೋಷ್ಟಕ 5

## ಸೋಲಿಗರಲ್ಲಿನ ಔಷಧಿ ಸಸ್ಯಗಳು ಔಷಧಿ ಗಿಡಮೂಲಿಕೆಗಳು

| ಕ್ರ.ಸಂ. | ಸೋಲಿಗರ ಹೆಸರು | ಸಸ್ಯಶಾಸ್ತ್ರೀಯ ನಾಮ | ಕುಟುಂಬ | ಸಂಸ್ಕೃತ |
|---|---|---|---|---|
| 1 | ಅಣ್ಣೆಸೊಪ್ಪಿನ ಗಿಡ | Celosia argentea (L) | Amaranthaceae | Sithivara |
| 2 | ಅಡುಸೋಗೆ | Adhathoda vasica | Acanthaceae | Vaasa |
| 3 | ತುಳಸಿ ಗಿಡ | Ocimum tenuiflorum (L) | Lumiaceae | Tulasi |
| 4 | ಕಾಡುಮೆಣಸಿನ ಗಿಡ | Corchorus olitoius (L) | Tiliaceae | Naadika |
| 5 | ಸರ್ಪಗಂಧಿ ಗಿಡ | Rauvolfia serpentila (L) | Apocynaceae | Sarpagandha |
| 6 | ನಾಗದಾಳಿ ಸೊಪ್ಪು | Rutachalepensis (L) | Rutaceae | Sadaapha |
| 7 | ಸುಂಕಟ್ಟಿ ಗಿಡ | Delonix elata (L) | Caesalpiniaceae | Rathnagandhi |
| 8 | ಹಿರಿಮದ್ದಿನ ಗಿಡ | Withania somnifra (L) | Solanaceae | Ashwagandha |
| 9 | ಕಂಚಗಾಲ ಗಿಡ | Bauhinia purpurea (L) | Caesalpiniaceae | Koovidaara |
| 10 | ಕಸುಳ್ಳಿ ಗಿಡ | Hibiseus cannabinus (L) | Malavaceae | Ambashtha |
| 11 | ಕಾಡುಬಾಳೆ ಗಿಡ | Ensete superbun (roxb) | Musaceae | Vanakadali |
| 12 | ದೊರೆಮಲ್ಲಿಗೆ ಗಿಡ | Jasminumarbore scensroxb | Oleaceae | Navamallika |
| 13 | ಕುರಿ ಒಂಟೆ ಗಿಡ | Aristolochia bracteo lata lam | Aristalo chiaceae | Bhrungi |
| 14 | ಕಾಡುಮಲ್ಲಿಗೆ | Jasminum Angastifolium Wild.var.Angustio Folium | Oleaceae | Vanamallika |
| 15 | ಜೀರಿಗೆ ಗಿಡ | Cuminum Cyminum (L) | Apiaceae | Jeerika |
| 16 | ಕಾಡುತುಂಬೆ ಗಿಡ | Leonotis Nepetigolia (L) R.Br. | Lamiaceae | Ganthiparna |
| 17 | ಕುಂಟೆ ಗಿಡ | Gardenia resinifere Roth | Rubiaceae | Naadi Hungu |
| 18 | ಕಾಡು ಕೊತ್ತಂಬರಿ ಗಿಡ | Eryngium foeidum L | Apiaceae | Vanadhaanyaka |
| 19 | ಎಳ್ಳಿನ ಗಿಡ | Seasanum indicum | Pedaliaceae | Tila |
| 20 | ಎಕ್ಕದ ಗಿಡ | Calotropis gigantean L R.Br | Asclepidaceae | Arka |

| ಕ್ರಸಂ. | ಸೋಲಿಗರ ಹೆಸರು | ಸಸ್ಯಶಾಸ್ತ್ರೀಯ ನಾಮ | ಕುಟುಂಬ | ಸಂಸ್ಕೃತ |
|---|---|---|---|---|
| 21 | ಇಳಿಸಿಂಗಿ ಗಿಡ | Viburnum coriaceum Blume | Carprifoliaceae | Rohini |
| 22 | ಮಾಗಳಿ ಗಿಡ | Decalepis hamiltonii wight. & Arn | Periplocaceae | Swetha Saariva |
| 23 | ದಾಗಡಿ ಗಿಡ | Cocculus hirsutus Linn | Menispermaceae | Paathaala Garudi |
| 24 | ಸುಂಡೆ ಗಿಡ | Solanum anguivi Lam | Solanaceae | Bruthati |
| 25 | ಉತ್ತರಾಣಿ ಗಿಡ | Achyranthes aspera L | Amaranthaceae | Apamarga |
| 26 | ಜ್ವರದ ಗಿಡ | Gymostuchyum febrifugum | Acanthaceae | Benth Hastipada |
| 27 | ತಲೆನೋವಿನ ಗಿಡ | Curculigo orchioides Gaertner | Hypoxidaceae | Krishnamusali |
| 28 | ಮುತ್ತುಂಗ ಗಿಡ | Butea monosperma Lam | Fabaceae | Palaasa |
| 29 | ರೋಜ ಗಿಡ | Lantana camera L | Verbenaceae | Chaturangi |
| 30 | ಕಾಡು ಹೊಂಗೆ | Pongamia pinnate | Leguminoseae | Karanja |
| 31 | ಕಡವರೆ ಗಿಡ | Canavalia ensiformis (L) DC | Fabaceae | Bruhat Shimbi |
| 32 | ಕಾಡು ತುಳಸಿ | Ocimum gratissmum L | Laniaceae | Raama Tulasi |
| 33 | ಒಂದೆಲಗ ಗಿಡ | Centella asiatica L | Apiaceae | Manduka Pama |
| 34 | ಕಕ್ಕೆ ಗಿಡ | Cassia fistula L | Caesalpiniaceae | Aaragwada |
| 35 | ಹೊಂಗೆ ಸೊಪ್ಪು | Alternanthera sessilis (L) | Amaranthaceae | Mathyakshi |
| 36 | ಕೀರೆ ಸೊಪ್ಪು | Amaranthaus spinosus L | Amaranthaceae | Tanduleeya |
| 37 | ದಂಟಿನ ಸೊಪ್ಪು | Amaranthus tricolor L | Amaranthaceae | Raamasithalika |
| 38 | ಕಜ್ಜಿ ಗಿಡ | | | |
| 39 | ಚಪ್ಪೆರಗ ಗಿಡ | | | |
| 40 | ನಸರಿ ಗಿಡ | | | |
| 41 | ಹೊಟ್ಟೆನೋವಿನ ಗಿಡ | | | |
| 42 | ಹರೆ ಅಣ್ಣೆ ಗಿಡ | | | |

ಆಧಾರ: ಡಾ. ಜೆ ಸೋಮಶೇಖರ್, Diminishing Role of Soliga Herbal Health Healer, Dr. Ambedkar Research and Extension Centre, Mysore University

## ಕೋಷ್ಟಕ 6

## ಸೋಲಿಗರ ಬಳ್ಳಿಬೇರು ಮತ್ತು ಗೆಡ್ಡೆಗಳು

| ಕ್ರಸಂ. | ಸೋಲಿಗರ ಹೆಸರು | ಸಸ್ಯಶಾಸ್ತ್ರೀಯ ನಾಮ | ಕುಟುಂಬ | ಸಂಸ್ಕೃತ |
|---|---|---|---|---|
| 1 | ಬೆಳ್ಳಿ ಹೊಂಬು | Ipomoea batatas (L) Lamk | Convolvulaceae | Pindaalu |
| 2 | ತೊಂಡೆ ಹೊಂಬು | Cocciniagrandis (L) Voigl | Cucurbitaceae | Bimbi |
| 3 | ಸಿರಮಾಲೆ ಹೊಂಬು | Secamone emetic Retz | Asclepiadaceae | |
| 4 | ಕುಸುಬಿನ ಹೊಂಬು | Carthamus tinctroius L | Asteraceae | Kusumba |
| 5 | ಅರಿಶಿನ ಗೆಡ್ಡೆ | Curcuma longa koengi | Zingiberaceae | Haridra |
| 6 | ಕಾಡು ಶುಂಠಿ | Zingiber zerumbet Roscoe ex smith | Zingiberaceae | Sthulagranthi |
| 7 | ಕಾಡು ಈರುಳ್ಳಿ | Crinum viviparum (Lam) Hemadri | Liliaceae | Vanapallandu |
| 8 | ಬೆಳ್ಳುಳ್ಳಿ | Allium sativum | Liliaceae | Laruna |
| 9 | ದೊರೆಮಲ್ಲಿಗೆ ಗಿಡ | Jasminum arborescens Roxb | Oleaceae | Navamallika |
| 10 | ಅಗಳು ಶುಂಠಿ | Zingiber zerumbet Rosceo ex smith | Zingiberaceae | Sthulagandhi |
| 11 | ನೊರೆ ಗೆಣಸು | | | |
| 12 | ನವೆ ಗೆಣಸು | | | |
| 13 | ಇಸುಬಿನ ಗೆಡ್ಡೆ | | | |
| 14 | ಕರಿಮುಂಡೆ ಗೆಣಸು | | | |

ಆಧಾರ: ಡಾ. ಜೆ ಸೋಮಶೇಖರ್, Diminishing Role of Soliga Herbal Health Healer, Dr. Ambedkar Research and Extension Centre, Mysore University

# ಕೋಷ್ಟಕ 7

## ಸೋಲಿಗರ ಮರಗಳು

| ಕ್ರ.ಸಂ. | ಸೋಲಿಗರ ಹೆಸರು | ಸಸ್ಯಶಾಸ್ತ್ರೀಯ ನಾಮ | ಕುಟುಂಬ | ಸಂಸ್ಕೃತ |
|---|---|---|---|---|
| 1 | ಅತ್ತಿ ಮರ | Ficus glomerata Roxb | Moraceae | Udumbara |
| 2 | ಆಲದ ಮರ | Fiscus benglensis L | Moraceae | Nyagrodha |
| 3 | ಇಟ್ವಿ ಮರ | Clerodendrum viscosum Vent | | Verbenaceae Bhandeera |
| 4 | ಗೊಟ್ವಿ ಮರ | Ficus tinctoria Forster F | Moraceae | Plaksha |
| 5 | ಅಶೋಕ ಮರ | Saraca ashoka | Ceasalpinaceae | Ashoka |
| 6 | ಸಂಪಿಗೆ ಮರ | Michelia champaca L Roxb | Magnoliaceae | Champaka |
| 7 | ಹೊನ್ನೆ ಮರ | Pterocarpus marsupium smith | | Fabaceae Asana |
| 8 | ಕರವಂಡಿ ಮರ | Alseodaphne Semecarpi folia Ness | Lauraceae | |
| 9 | ಗಂಧದ ಮರ | Santalum album L | Santalanaceae | Chandana |
| 10 | ಬೆಜ್ಜಲು ಮರ | Anogessus latifolia (Roxb cx Dv) | Eombrataceae | Dhava |
| 11 | ಅಗೂರಿ ಮರ | Dalbergia sisoo Roxb | Fabaceae | Shimshupa |
| 12 | ಕಕ್ಕೆ ಮರ | Cassia fistula L | Ceasalpiniaceae | Aaragwadha |
| 13 | ಕಾಡು ಸೀಗೆ ಮರ | Acacia sinuate (Lour) Merr | Mimosaceae | Sapthala/ Bahupena |
| 14 | ಕದ್ರಳ್ಳಿ ಮರ | Fiscus rumphii Blume | Moraceae | Nandi Vruksha |
| 15 | ನೇರಳೆ ಮರ | Syzygium cumini (L) skeels | | Myrtaceae Jambhu |
| 16 | ಮಾವಿನ ಮರ | Mangifera indica L | Anacardiaceae | Aamra |
| 17 | ದಡಸಿ ಮರ | Arenga wightii Griffith | Arecaceae | |
| 18 | ನೆಲ್ಲಿಕಾಯಿ ಮರ | Emblica officinalis L | Euphorbiaceae | Aamalare |
| 19 | ಕರುನೆಲ್ಲಿ | Phyllanuthus aeidus (L) Sklee | Euphorbiaceae | Bhumi Aamaliki |

| ಕ್ರಸಂ. | ಸೋಲಿಗರ ಹೆಸರು | ಸಸ್ಯಶಾಸ್ತ್ರೀಯ ನಾಮ | ಕುಟುಂಬ | ಸಂಸ್ಕೃತ |
|---|---|---|---|---|
| 20 | ಕಿಂಡೆ ಮರ | Avicennia officianalis L | Rhizophoraceae | Tuvara |
| 21 | ಸಿರಿಹೊನ್ನೆ ಮರ | Calophyllum polyanthum wall ex | Clusiaceae | Punnaaga |
| 22 | ಗಜನಿಂಬೆ | Citruslimettiodies Tanaka | Rutaceae | Madhu Jambeera |
| 23 | ಕರಿಬೇವು ಮರ | Murrya koengii L Spernge | Rutaceae | Kaiderya |
| 24 | ಹೂಬ ಮರ | Bolichandrone falcate (wall. Ex Dc) | Bignoniaceae | Megha Shrungi |
| 25 | ಗಣಗಲು ಮರ | Dillenia indica L | Delleniaceae | Bhavya |
| 26 | ಕಾಡಟ್ಟಿ ಮರ | Fiscus hispida L f | Moraceae | Kaakodumbara |
| 27 | ಕಾಡು ಹಿಪ್ಪೆ ಮರ | Maduca.indica J Gmelina | Sapotaceae | Madhuka |
| 28 | ಕಾಡರಳು ಮರ | Jotropa curcas I | Euphorbiaceae | Dravanthi |
| 29 | ಕೀಚಕ ಮರ | Erythina stricta Roxb | Fabaceae | Paaribhadra |
| 30 | ಕುನ್ನೇರಳೆ ಮರ | Syzygium zelyanicum (L) Dc | Myrtaceae | |
| 31 | ಕೆಂದಾಳ ಮರ | Cordia dichotoma Forster F | Cordiaceae | Shelshamantaka |
| 32 | ನಿಂಬೆ ಹೊನ್ನಿನ ಮರ | Citrus aurantifolia swingle | Rutaceae | Nimbuka |
| 33 | ಗೊರವಿ ಮರ | Ailanthus triphysa. Alston | Simaroubaceae | Aralu |
| 34 | ಜಂ ನೇರಳೆ ಮರ | Syzygium cumini (L) skeels | | Myrtaceae<br>Jambhu |
| 35 | ತೆಂಗಿನ ಮರ | Cocos nucifera L | Arecaceae | Narrikela |
| 36 | ದೊಡ್ಡ ಮರ | Ailanthus excels Roxb | Simaroubaceae | Mahaanimba |
| 37 | ನಂಜಿನ ಮರ | Strychnos nux-Vomica (L) | Strychanceae | Vishatindoka/ Kupilu |
| 38 | ನಾಗಸಂಪಿಗೆ ಮರ | | | Naagakesara |
| 39 | ನಾಯಿಬೆಲೆ ಮರ | | | Kapistha |
| 40 | ನಿರದ್ವಿತೀಯ ಮರ | | | Tuvaraka |
| 41 | ನುಗ್ಗೆ ಮರ | Moringa oleifera aucto, Non. Lam | | Moringaceae<br>Shigru |

| ಕ್ರ.ಸಂ. | ಸೋಲಿಗರ ಹೆಸರು | ಸಸ್ಯಶಾಸ್ತ್ರೀಯ ನಾಮ | ಕುಟುಂಬ | ಸಂಸ್ಕೃತ |
|---|---|---|---|---|
| 42 | ಬನ್ನಿ ಮರ | Acacia ferruginea DC | Mimosaeae | Shami |
| 43 | ಚಂಡ್ಲೆ ಮರ | Cordia dichotoma Forster F | Cordiaceae | Bhukarbudaara |
| 44 | ಬಿಲ್ವಪತ್ರೆ ಮರ | Aegle marmelos (L) Correa | Rutaceae | Bilwa |
| 45 | ಬೆಲದ ಹೊನ್ನಿನ ಮರ | Limonia acidissima L | Rutaceae | Kapitha |
| 46 | ಬೇವಿನ ಮರ | Azadhirachate indica. A. Juss | Meliaceae | Nimba |
| 47 | ಬೆಪ್ಪಳೆ ಮರ | Wrightia tinctoria R. Br | Apocynaceae | Kutaja |
| 48 | ಕಾಡು ನಿಂಬೆ | Atlantia monophyla (L) correa | Rutaceae | Vanajambeera |
| 49 | ಪುಡು ಮಾವಿನ ಮರ | | | |
| 50 | ಸಿಲನ ಮರ | | | |

ಆಧಾರ: ಡಾ. ಜೆ ಸೋಮಶೇಖರ್, Diminishing Role of Soliga Herbal Health Healer, Dr. Ambedkar Research and Extension Centre, Mysore University

## ಕೋಷ್ಟಕ 8

## ಸೋಲಿಗರಲ್ಲಿ ನಾಟಿ ಔಷಧಿ ತಯಾರಿಕೆ

| ಕ್ರ.ಸಂ. | ಔಷಧಿ | ಕಾಯಿಲೆ |
|---|---|---|
| 1 | ಮೆಣಸು, ಕಿರುನೆಲ್ಲಿ ಮೆಳ, ಆಲದ ಮರ, ಬಜೆ ಮರ | ಕೆಮ್ಮು |
| 2 | ಗಂಟೆ ಮರ | ಗೂರಲು |
| 3 | ಮೆಣಸು, ಜೀರಿಗೆ, ಬೆಳ್ಳುಳ್ಳಿ, ಕಜ್ಜಿ ಗಿಡ, ಕುಸುಬಿನ ಗಿಡ, ನಸರಿ ಗಿಡ, ಎಳ್ಳಿನ ಗಡಿ, ಕೊತ್ತಂಬರಿ ಗಿಡ, ಕಿರುನೆಲ್ಲಿ ಮೆಳ | ಅಸ್ತಮಾ |
| 4 | ನಾಗದಾಳಿ ಎಲೆ | ಹೃದಯ ಮತ್ತು ಶ್ವಾಸಕೋಶದ ತೊಂದರೆ |
| 5 | ಗೊರವಿ ಮರ | ನಾಯಿಕೆಮ್ಮು |
| 6 | ಮೆಣಸು, ಜೀರಿಗೆ ಬೀಜ | ನೆಗಡಿ / ಜ್ವರ |
| 7 | ಜೀರಿಗೆ ಬೀಜ | ಜ್ವರ |
| 8 | ಮೆಣಸು ಬೀಜ, ಶುಂಠಿ | ಫ್ಲ್ಯೂ |
| 9 | ಹಿರೆಮದ್ದಿನ ಮರದ ಬೇರು | ದೊಡ್ಡರೋಗ |
| 10 | ಕಸುಳ್ಳಿ ಗಿಡದ ಬೇರು | ಸೆಲೆರೋಗ |
| 11 | ನಂಜಿನ ಮರ ಕಾಂಡ, ನೆಲಮುಸಳಿ, ತುಂಬೆ ಗಿಡ, ಬಿಟ್ಟರ್ ಗಾರ್ಡ್ ಎಲೆಗಳಿಂದ | ತಲೆನೋವು |
| 12 | ಇಟ್ಟಿ ಮರ, ಇಳಿಸಿಂಗಿ ಗಿಡ, ಬೆಳ್ಳುಳ್ಳಿ, ಮೆಣಸು | ಹೊಟ್ಟೆನೋವು |
| 13 | ಮುದು ಮಾವಿನ ಮರ | ಭೇದಿ |
| 14 | ಒಣ ಸೀಗೆ ಮರ, ರಾಗಿ ಬೀಜ | ಕಾಲರಾ |
| 15 | ದಾಗದಿ ಬಳ್ಳಿ | ಹೊಟ್ಟೆ ಉರಿ |
| 16 | ಕಾಡುಹಟ್ಟಿ ಮರದ ಹಣ್ಣು | ಯಕೃತ್ತಿನ ತೊಂದರೆ |

| ಕ್ರ.ಸಂ. | ಔಷಧಿ | ಕಾಯಿಲೆ |
|---|---|---|
| 17 | ಗಜನಿಂಬೆ ಹಣ್ಣು | ಕಾಮಾಲೆ |
| 18 | ಮುಟ್ಟಿದ್ರೆ ಮುನಿ ಬೇರು, ಸೇಬು | ಮೂತ್ರದ ತೊಂದರೆಗಳಿಗೆ |
| 19 | ಚಪ್ಪರೆ ಗಿಡ ಎಲೆ, ಎಳನೀರು | ಗುಹ್ಯರೋಗ |
| 20 | ಕಲ್ಲು ಬಾಳೆ ಬೀಜ, ಎಳನೀರು | ಗುಹ್ಯರೋಗ |
| 21 | ಚೊಡ್ಲೆ ಮರ | ಮೂತ್ರಕೋಶದ ತೊಂದರೆ |
| 22 | ಸುರಹೊನ್ನೆ ಮರ | ನರದೌರ್ಬಲ್ಯಗಳಿಗೆ |
| 23 | ಕಂಚಗಳ ಗಿಡದ ಎಲೆ ಮತ್ತು ಬೇರು | ತಲೆಸುತ್ತುವಿಕೆ |
| 24 | ಗೊರವಿ ಮರ | ರಕ್ತಹೀನತೆ |
| 25 | ನೇರಳೆ ಮರದ ಬೀಜ ಮತ್ತು ಅತ್ತಿ ಮರದ ಬೇರು | |
| | ಹಾಲು ಮತ್ತು ಕಾಯಿ | ಸಕ್ಕರೆ ಖಾಯಿಲೆ |
| 26 | ಸರ್ಪಗಂಧ ಎಲೆ ಮತ್ತು ಬೇರು | ರಕ್ತದೊತ್ತಡ |
| 27 | ಅಶೋಕ ಮರ ತೊಗಟೆ, ಹಣ್ಣು, ಬೀಜ ಮತ್ತು ಹೂವು | ಮುಟ್ಟಿನ ತೊಂದರೆ |
| 28 | ಚಂಪಕ ಮರ ಮತ್ತು ಉಡ ಮರ | ಗರ್ಭಪಾತ |
| 29 | ಹೊನ್ನೆ ಮರ | ಪಾದ ಮತ್ತು ಕೈ ಒಡೆಯುವುದಕ್ಕೆ |
| 30 | ಕಾಡು ಹೊಂಗೆ ಮರ ಮತ್ತು ಕಕ್ಕೆ ಮರ | ಹಾವಿನ ಕಡಿತಕ್ಕೆ |
| 31 | ನಂಗಿನ ಮರ, ತಲೆನೋವು ಗಿಡ, ನೆಲಮುಸಳಿ, | |
| | ಎಕ್ಕ ಗಿಡ, ಅರಶಿನ, ಸಿಲ್ಲನ ಮರ | ತಲೆನೋವು |
| 32 | ತುಳಸಿ ಗಿಡ | ಮಕ್ಕಳ ಜ್ವರ |
| 33 | ನಂಗಿನ ಮರ, ತುಂಬೆ ಗಿಡ, ಬಿಟ್ಟರ್ ಗಾರ್ಡ್, | |
| | ನಾಗದಾಳಿ ಗಿಡ, ಎಕ್ಕ ಗಿಡ, ಕೀಚಕ ಮರ | ಜ್ವರ |
| 34 | ಗೊಂಡೆ ಬಳ್ಳಿ | ಗಂಟಲುನೋವು |
| 35 | ನಿಂಬೆ ಮರದ ಎಲೆ | |

| ಕ್ರ.ಸಂ. | ಔಷಧಿ | ಕಾಯಿಲೆ |
|---|---|---|
| 36 | ಸಿರಮಲೆ ಬಳ್ಳಿ, ಗಂಧದ ಮರ | ಕುತ್ತಿಗೆ ನೋವು |
| 37 | ಸಿರಿಹೊನ್ನೆ ಗಿಡ | ವಾತ |
| 38 | ನಾಗ ಚಂಪಕ ಮರ | ಕೀಲುನೋವು |
| 39 | ಕಾಡು ಹರಳು ಮರ | ಉಳುಕು |
| 40 | ಕಕ್ಕೆ ಮರ, ಎಳ್ಳು ಗಿಡ, ಕಾಡು ಹರಳು ಮರ | ಮೂಳೆ ಮುರಿತ |
| 41 | ಹೊಂಗೆ ಗಿಡ, ಇಚಾಚಿ ಮರ | ಚರ್ಮದ ತೊಂದರೆ |
| 42 | ಕಜ್ಜಿ ಗಿಡ, ಇಸುಬಿನ ಹಂಬು ಬಳ್ಳಿ | ಚರ್ಮದ ತುರಿಕೆ, ಉರಿ |
| 43 | ಕರ್ವದಿ ಗಿಡ | ಮೊಡವೆ |
| 44 | ಕಾಡು ಈರುಳ್ಳಿ | ಅಂಗಾಲು, ಅಂಗೈ ಉರಿಗೆ |
| 45 | ದಂಡಸಿ ಮರ | ಮರಗಂಟು |
| 46 | ಗುಲಾಬಿ ಗಿಡ | ಕುಷ್ಠರೋಗ |
| 47 | ಮುಟ್ಟಿದ್ರೆ ಮುನಿ | ಆನೆಕಾಲು ರೋಗ |
| 48 | ಅಗೊರಿ ಮರ, ಕಕ್ಕೆ ಮರ | ಹಾವು ಕಡಿತಕ್ಕೆ |
| 49 | ಹಳ್ಳಸುಳಿ ಬಳ್ಳಿ | ತೀವ್ರ ಕೆಮ್ಮು |
| 50 | | ಭೇದಿ |
| 51 | ತೊಂಡೆ ಬಳ್ಳಿ | ಮೂತ್ರದ ತೊಂದರೆ |
| 52 | ಕಾಡು ಹರಳು ಮರ, ಕಿಚಕ ಮರ | ಸಂದು ನೋವು |
| 53 | ಚಿಟ್ಟು ಹರಳು ಮರ | ಪಿಟ್ಸ್ |

**ಆಧಾರ:** ಡಾ. ಜೆ ಸೋಮಶೇಖರ್, Diminishing Role of Soliga Herbal Health Healer, Dr. Ambedkar Research and Extension Centre, Mysore University

## ಮ್ಯಾಸಬೇಡರ ವೈದ್ಯ ಪದ್ಧತಿ

### ವೈದ್ಯ

ಮಾಟಕ್ಕೆ ಮತ್ತು ವೈದ್ಯಕ್ಕೆ ಸಾಮಾನ್ಯವಾಗಿ ಆದಿವಾಸಿ ಸಮಾಜಗಳಲ್ಲಿ ಮತ್ತು ಅವಿದ್ಯಾವಂತ ಸಮಾಜಗಳಲ್ಲಿ ಸಂಬಂಧವಿರುತ್ತದೆ. ಕಾಯಿಲೆಗಳು ಬರಲು ಕೆಲವು ಅಲೌಕಿಕ ಶಕ್ತಿಗಳು ಕಾರಣ ಎಂಬ ನಂಬಿಕೆ ಬಲವಾಗಿ ಬೇರೂರಿವುದು ಇದಕ್ಕೆ ಮುಖ್ಯವಾದ ಕಾರಣ. ಕೆಲವು ಸಲ ದೇಹದ ಕಾರ್ಯನಿರ್ವಹಣೆಯಲ್ಲಿ ವ್ಯತ್ಯಾಸ ಉಂಟಾದಾಗ ಕಾಯಿಲೆಗಳು ಬರುತ್ತವೆ ಎಂಬುಧನ್ನು ಅರ್ಥ ಮಾಡಿಕೊಂಡು ಅದಕ್ಕೆ ಸೂಕ್ತವಾದ ಚಿಕಿತ್ಸೆಯನ್ನು ಮಾಡಿದಾಗಲೂ ಆ ಕಾಯಿಲೆಯನ್ನು ಮಾಟದ ಕ್ರಮದಿಂದಲೂ ಹೋಗಲಾಡಿಸಲು ಪ್ರಯತ್ನಿಸುತ್ತಾರೆ. ಮಾಟದ ಕ್ರಮವನ್ನು ಅನುಸರಿಸದೆ ಔಷಧಿಯಿಂದಲೇ ಕಾಯಿಲೆಗಳನ್ನು ವಾಸಿ ಮಾಡಲು ಕಾಡುಗೊಲ್ಲರಲ್ಲಿ ಬಳಕೆಯಲ್ಲಿರುವ ಕ್ರಮಗಳನ್ನು ಇಲ್ಲಿ ಪ್ರಸ್ತಾಪಿಸುವುದಿಲ್ಲ. ಆದರೆ ಮಾಟದ ಕ್ರಮ ಮತ್ತು ಔಷಧಿಯ ಕ್ರಮ ಎರಡರಿಂದಲೂ ಕಾಯಿಲೆಗೆ ಚಿಕಿತ್ಸೆ ಮಾಡುವ ಎರಡು ಉದಾಹರಣೆಗಳನ್ನು ಕೊಡಲಾಗಿದೆ.

**ಕರೇಗಾಟು:** ಕುರಿಗಳಿಗೆ ಮತ್ತು ಮೇಕೆಗಳಿಗೆ ಗದ್ದ ಊದಿಕೊಂಡು ಮೂಗಿನ ಎರಡು ಹೊಳ್ಳೆಗಳಿಂದಲೂ ಹಸಿರು ಬಣ್ಣದ ಸಿಂಬಳ ಒಂದೇ ಸಮನೆ ಸುರಿಯುತ್ತಿದ್ದರೆ ಅದು ಕರೇಗಾಟು ರೋಗ ಎಂದು ಗುರುತು ಹಿಡಿಯುತ್ತಾರೆ. ಈ ಕಾಯಿಲೆಯನ್ನು ಹೋಗಲಾಡಿಸಲು ಔಷಧಿಯನ್ನು ಕ್ರಮವಾಗಿ ಬಳಸುವಂತೆಯೇ ಮಾಟದ ಕ್ರಮವನ್ನೂ ಬಳಸುತ್ತಾರೆ.

**ಔಷಧಿಯ ಕ್ರಮ:** ಧೂಪ ಕಣಿಗಲ ಗಿಡದ ಮೂರು ಎಲೆ, ದೊಡ್ಡಕಾಯಿ ಗಿಡದಲ್ಲಿ ಪೂರ್ವದಿಕ್ಕಿಗೆ ಹಬ್ಬಿರುವ ಬಳ್ಳಿಯಲ್ಲಿರುವ ಮೂರು ಎಲೆ, ಬಿಳಿ ಎಕ್ಕದ ಬೇರು, ಒಂದು ಹಿಡಿ ಬಿಳಿಯ ಗುಲಗಂಜಿ ಸೊಪ್ಪು, ಒಂದು ಹಿಡಿ ಕರಿ ಗುಲಗಂಜಿಯ ಸೊಪ್ಪು, ಒಂದು ಹಿಡಿ ದಾಸವಾಳದ ಸೊಪ್ಪು, ಒಂದು ಮೊಲದ ಕಿವಿಗೆಡ್ಡೆ, ಒಂದು ಹಿಡಿ ಮೇಟಳ್ಳಿ ಸೊಪ್ಪು, ಒಂದು ಹಿಡಿ ಹಾಲುಬಳ್ಳಿ ಸೊಪ್ಪು, ಒಂಬತ್ತು ನಿಂಬೆಕಾಯಿ, ಮೂರು ತುಂಡು ಹಸಿಯ ಅರಸಿನ ಇವೆಲ್ಲವನ್ನೂ ಒಟ್ಟಿಗೆ ಸೇರಿಸಿ ಒರಳಿನಲ್ಲಿ ಹಾಕಿ ಕುಟ್ಟಬೇಕು. ಕೋಣಗರುವನ್ನು ಈಯ್ದಿರುವ ಎಮ್ಮೆಯ ಹಾಲನ್ನು ಕರೆಯಬೇಕು. ಮೇಲೆ ಹೇಳಿದ ವಸ್ತುಗಳನ್ನು ಕುಟ್ಟಿ ಒಂದು ಮಡಕೆಗೆ ಹಾಕಿ ಅದಕ್ಕೆ ಎಮ್ಮೆಯ ಹಾಲನ್ನು ಹಾಕಬೇಕು. ಇನ್ನೂ ಎರಡು ಹೊತ್ತು ಎಮ್ಮೆಯ ಹಾಲು ಕರೆದು ಮಡಕೆಗೆ ಹಾಕಿ ಅದರಲ್ಲಿರುವ ಮಿಶ್ರಣವನ್ನು ಹಾಲಿನಲ್ಲಿ ಕಲೆಸಿ, ಅದನ್ನು ಕುರಿಯ ಅಥವಾ ಮೇಕೆಯ ರೊಪ್ಪದಲ್ಲಿ ಚೆಲ್ಲಿದರೆ ಅದರ ವಾಸನೆಯನ್ನು ಕುರಿಗಳಾಗಲಿ ಮೇಕೆಗಳಾಗಲಿ ಸೇವಿಸುತ್ತವೆ. ಎರಡು ಮೂರು ಸಲ ಹೀಗೆಯೇ ಮಾಡಿದರೆ ಕುರಿಗಳಿಗಾಗಲಿ ಮೇಕೆಗಳಿಗಾಗಲಿ ಉಂಟಾಗಿದ್ದ ಕರೇಗಾಲು ರೋಗ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ.

**ಪಶುರೋಗಗಳು ಮತ್ತು ವೈದ್ಯ**

ಪ್ರಾಚೀನ ಕಾಲದಿಂದ ಪಶುಪಾಲನೆ ಮಾಡಿಕೊಂಡು ಬಂದ ಬೇಡನಾಯಕರು ಸಹಜವಾಗಿ ದನಕರುಗಳ ಪೋಷಣೆಯ ವಿಧಾನವೆಲ್ಲ ಅರಿತುಕೊಳ್ಳಲೇಬೇಕಾಗಿತ್ತು. ತಾವಿರುವ ಸ್ಥಳದಲ್ಲಿ ಹುಲ್ಲು ನೀರು ಇಲ್ಲದೇ ಹೋದರೆ ಅದು ಇರುವ ಸ್ಥಳ ಹುಡುಕಿಕೊಂಡು ಇಡೀ ಕಂಪಳವನ್ನೇ ಸಾಗಿಸಿಕೊಂಡು ಹೊರಡುವುದು, ತುರುಕರುಗಳಿಗೆ ರೋಗರುಜಿನಗಳಾದರೆ, ರೋಗದ ಮೂಲ ಕಂಡುಹಿಡಿದು ಅದಕ್ಕೆ ತಕ್ಕ ಗಿಡ ತಂದು ಔಷಧಿ ಅರೆಯುವುದು ಇದೆಲ್ಲಾ ಬೇಡನಾಯಕರ ಅಗತ್ಯದ ಕೆಲಸಗಳಾಗಿದ್ದವು. ಹೀಗಾಗಿ ಕಾಡಿನಲ್ಲಿ ಈಗಲೂ ಗೂಡು ತಿರುವಿಕೊಂಡು ಎತ್ತು ಕಾಯುವ ಕೀಲಾರಿಗಳು ತಾವು ನೋಡಿಕೊಳ್ಳುತ್ತಿರುವ ನೂರಾರು ಎತ್ತುಗಳಲ್ಲಿ ಯಾವುದೇ ಹಸು, ಎತ್ತಿಗೆ ರೋಗ ತಗಲಿದರೂ ತಕ್ಷಣವೇ ಗುರುತಿಸಿ ಬಿಡುವಷ್ಟು ನಿಪುಣರಾಗಿರುತ್ತಾರೆ. ದನಕರುಗಳು ಗೂಡಿಗೆ ಬಂದು ಮಲಗಿರುವಾಗ, ನಿಂತಿರುವಾಗ ಕಿಲಾರಿ ಒಮ್ಮೆ ಕಣ್ಣು ಹಾಯಿಸಿದನೆಂದರೆ, ಯಾವುದಾದರೂ ಒಂದು ಹಸು ಮೆಲುಕು ಹಾಕದೆ, ಕಿವಿಯನ್ನು ಜೋಲುಗಿವಿ ಮಾಡಿಕೊಂಡಿದ್ದರೆ, ಅದಕ್ಕೆ ಮೈ ಸರಿಯಿಲ್ಲವೆಂದು ತಿಳಿದುಬಿಡುತ್ತಾನೆ. ಆಗ ಆ ಹಸುವಿನ ರೋಗವನ್ನು ಕಂಡುಹಿಡಿದು ಅದಕ್ಕೆ ಅದರದೇ ಮದ್ದು ತಯಾರಿಸುವನು. ಹೀಗಾಗಿ ಬೇಡನಾಯಕರ ಕೀಲಾರಿಗಳಲ್ಲಿ ಎಲ್ಲ ಅಲ್ಲದಿದ್ದರೂ ಕೆಲವರು ಮಾತ್ರ ಪಶುವೈದ್ಯದಲ್ಲಿ ತುಂಬ ಪರಿಣತರಾದವರಿದ್ದಾರೆ. ಅವರು ತಾವು ನಂಬಿದ ಇನ್ನೊಬ್ಬರಿಗೆ ಮಾತ್ರ ಪಶು ರೋಗಗಳ ವನಸ್ಪತಿ ಔಷಧಿಯನ್ನು ತಿಳಿಸಿಕೊಡುವರೇ ವಿನಾಃ ಎಲ್ಲರಲ್ಲಿಯೂ ಹೇಳುವುದಿಲ್ಲ. ಆದರೆ ಕೆಲವು ಸಾಮಾನ್ಯ ರೋಗಗಳಿಗೆ ಸಂಬಂಧಿಸಿದಂತೆ ಅವರು ಮಾಡುವ ವೈದ್ಯ ಎಲ್ಲರಿಗೂ ತಿಳಿಯುವಂತಿರುತ್ತದೆ. ಅಂಥವುಗಳಲ್ಲಿ ಕೆಲವನ್ನು ಈ ಮುಂದೆ ಗಮನಿಸಬಹುದು.

**ಮೂಳೆ ಮುರಿದರೆ:** ದನಕರುಗಳು ಗುಂಡಿಗೊಟರಿಗೆ ಜಾರಿಬಿದ್ದಾಗ ಅವುಗಳ ಕಾಲಿನ ಮೂಳೆ ಮುರಿಯುವ ಸಾಧ್ಯತೆ ಇರುತ್ತದೆ. ಆಗ ಆ ಹಸುವಿನ ಯಾವ ಕಾಲಿನ ಮೂಳೆ ಮುರಿದಿದೆಯೋ ಆ ಭಾಗಕ್ಕೆ ಮೊದಲು ಕಳ್ಳಿ ಹಾಲು ತಂದು ಸವರಬೇಕು. ಸವರಿದ ನಂತರ ಅದರ ಸುತ್ತ ಬಂದರಿಕೆ ಸೊಪ್ಪು ಇಟ್ಟು ಬಟ್ಟೆ ಸುತ್ತುವುದು. ಬಟ್ಟೆ ಸುತ್ತಿ ಮೇಲೆ ಅದರ ಸುತ್ತ ತುಂಡು ತುಂಡಾಗಿ ಕತ್ತರಿಸಿಕೊಂಡ ಬಿದಿರ ಅಚ್ಚೆ ಅಥವಾ ಪಟ್ಟಿಗಳನ್ನು ಕೂರಿಸಿ ಬಿಗಿಯಬೇಕು. ಹೀಗೆ ಕಟ್ಟಿದ ತಿಂಗಳೊಳಗಾಗಿ ಮುರಿದುಕೊಂಡ ಮೂಳೆ ಕೂಡಿಕೊಳ್ಳುವುದು ಹಾಗೆ ಮೂಳೆ ಕೂಡಿಕೊಂಡ ತಕ್ಷಣವೇ ಹಸು, ಎತ್ತನ್ನು ಕೆಲಸಕ್ಕೆ ಉಪಯೋಗಿಸಲು ಬರುವುದಿಲ್ಲ. ಯಾಕೆಂದರೆ ಮೂಳೆ ಇನ್ನೂ ಕೂಡುತ್ತಿರುತ್ತದೆ. ಮೂಳೆ ಕೂಡಿಕೊಳ್ಳುತ್ತಿರುವ ರಾಸನ್ನು ಸುಮ್ಮನೆ ಎರಡು ಮೂರು ತಿಂಗಳು ಹಾಗೆಯೇ ಓಡಾಡಿಸಿ ತದನಂತರ ಉಳುಮೆ, ಗಾಡಿ ಇನ್ನಿತರ ಕೃಷಿ ಸಂಬಂಧದ ಕೆಲಸಗಳಲ್ಲಿ ತೊಡಗಿಸಬಹುದು.

**ಸೆಲೆ ಖಾಯಿಲೆ:** ಸೆಲೆ ಖಾಯಿಲೆ ಆದರೆ ದನಕರುಗಳ ಕತ್ತು ಊದಿಕೊಳ್ಳುತ್ತದೆ. ಇದರ ಜತೆಗೆ ನಾಲಿಗೆಯೂ ದಪ್ಪವಾಗಿ ಊದಿ ಬಾಯಾಡಿಸುವುದು ಕಷ್ಟವಾಗುತ್ತದೆ. ಇದರ ಪರಿಣಾಮವಾಗಿ ದನವು ಹುಲ್ಲು ಮೇಯುವುದನ್ನು ಬಿಟ್ಟು ಸುಮ್ಮನೆ ನಿಂತು ಬಿಡುವುದು. ಒಂದು ವೇಳೆ ಅಷ್ಟಿಷ್ಟು ಹುಲ್ಲು ಮೇಯ್ದರೂ ಅದನ್ನು ಮೆಲುಕು ಹಾಕುವುದು ಸಾಧ್ಯವಾಗುವುದಿಲ್ಲ. ಎತ್ತು ತುಂಬ ಮಣ್ಣು ಬೆರೆತ ಅಥವಾ ಕೆಸರೆದ್ದು ಕೊಂಡ ಹೊಂಡದ ನೀರು ಕುಡಿದಿದ್ದರೆ ಅಥವಾ ಬೇರಿನಲ್ಲಿ ಹಸಿ ಹಸಿ ಮಣ್ಣು ಬೆರೆತ ಹುಲ್ಲು ಮೇಯ್ದಿದ್ದರೆ ಆಗ ಅದಕ್ಕೆ ಸೆಲೆ ರೋಗ ತಗಲುತ್ತದೆ. ಆ ಮುಂದಿನ ದಿನಗಳಲ್ಲಿ ಎತ್ತು ಮೇವು ಬಿಟ್ಟು ಮೂಗಿನ ಹೊಳ್ಳೆಗಳನ್ನು ಹಿಂದು ಮುಂದೆ ಸೆಳೆದುಕೊಳ್ಳುತ್ತಿರುತ್ತದೆ. ಮೂಗಿನ ನರವೂ ಊದಿಬಿಡುತ್ತದೆ. ಆಗ ಪಶುವೈದ್ಯನು ಕಬ್ಬಿಣದ ಒಂದು ಚೂಪಾದ ಸರಳು ತೆಗೆದುಕೊಂಡು ದನದ ಮೂಗಿನಲ್ಲಿ ಉಬ್ಬಿದ ನರಕ್ಕೆ ಚುಚ್ಚುವನು. ಚುಚ್ಚುತ್ತಿದ್ದಂತೆ ಮೂಗಿನಿಂದ ಕಪ್ಪು ಬಣ್ಣದ ರಕ್ತ ಹರಿಯುವುದು. ಕಪ್ಪು ರಕ್ತವೆಲ್ಲ ಈಚೆ ಸುರಿದರೆ ಎತ್ತು ಬದುಕಿದಂತೆಯೇ.

ರಕ್ತವೆಲ್ಲ ಸುರಿದಾದ ಮೇಲೆ ಪಚ್ಚರಿಗಿಡದ ಎಲೆಯ ರಸವನ್ನು ಚೆನ್ನಾಗಿ ಹಿಂಡಿಕೊಂಡು ಬೆಳ್ಳುಳ್ಳಿ ಮೆಣಸಿನೊಂದಿಗೆ ಬೆರೆಸಿ ಕೊಟ್ಟಕ್ಕೆ ಹಾಕಿ ಕುಡಿಸಿಬಿಡುವರು. ಅನಂತರದ ಒಂದೆರಡು ದಿನಗಳಲ್ಲಿ ಎತ್ತು ಮೇಯಲು ತೊಡಗುವುದು. ಸಲೆ ಬಂದು ಸ್ವಲ್ಪ ದಿನಗಳೇ ಆಗಿದ್ದರೆ ಎತ್ತು ಕಾಯಿಲೆ ವಾಸಿಯಾಗಿ ಮೇವು ಮೇಯಲು ಮೂರ್‍ನಾಕು ದಿನವೇ ಬೇಕು. ಒಮ್ಮೊಮ್ಮೆ ಕೆಲವು ಇದು ಸರಿಯಾದ ವಿಧಾನವಲ್ಲ. ನಾಲಿಗೆ ಕೆಳಗಿನ ನರ ಕುಯ್ದರೆ ಸೆಲೆ ರೋಗ ವಾಸಿಯಾಗುವುದೇನೋ ಸರಿ, ಆದರೆ ಆ ಕುಯ್ದ ಭಾಗ ವಾಸಿಯಾಗಿ ಮತ್ತೆ ಮೇವು ಕಚ್ಚಲು ಅದಕ್ಕೆ ಬಹಳ ಕಾಲ ಬೇಕಾಗುವುದು. ಅದರಿಂದ ಸೆಲೆ ಆದಾಗ ಎತ್ತು ಎಮ್ಮೆಗೆ ಮೂಗಿನ ನರ ಕುಯ್ದು ಕೆಟ್ಟ ರಕ್ತ ಹೋಗುವಂತೆ ಮಾಡುವುದೇ ಒಳ್ಳೆಯದು. ಸೆಲೆ ರೋಗವನ್ನು ಆರಂಭದಲ್ಲಿಯೇ ಕಂಡುಕೊಳ್ಳಬೇಕು. ಇಲ್ಲದಿದ್ದರೆ ರಾಸು ಸಾಯುವುದು ಖಂಡಿತ.

**ಕಾಲುಜ್ವರ ಬಾಯಿ ಜ್ವರ:** ಎತ್ತು ಎಮ್ಮೆಗೆ ಈ ಕಾಯಿಲೆ ಆದರೆ ಅವುಗಳ ಆರೋಗ್ಯಕ್ಕೆ ಇದು ಒಳ್ಳೆಯದೇ ಎಂದು ಪಶುವೈದ್ಯರು ಹೇಳುತ್ತಾರೆ. ರಾಸುಗಳು, ಬಿಸಿಲಲ್ಲಿ ಒಣಗಿದಾಗ ಈ ಜ್ವರ ಬರುವುದು. ಕಾಲು ಜ್ವರವಾದರೆ ಮೊದಲು ಅದರ ಹಿಮ್ಮಡಿ ಬಾತುಕೊಳ್ಳುತ್ತದೆ. ಆಗ ಕಾಲನ್ನು ಊರಲಾಗದೆ ಅದು ಕುಂಟುತ್ತಿರುತ್ತದೆ. ಆಮೇಲಾಮೇಲೆ ಕಾಲಿನ ಕೊಳವು ಅಥವಾ ಗೊರಸುಗಳು ಮಾಗಿದಂತೆ ಕೆಂಪಗಾಗಿ ಕೀವು ರಕ್ತ ತುಂಬಿಕೊಳ್ಳುತ್ತದೆ. ಕೀವು, ರಕ್ತಕ್ಕೆ ಕೂತುಕೊಳ್ಳುವ ನೀಲಿ ಬಣ್ಣದ ಹಿಪ್ಪೆನೊಣ ಅಲ್ಲಿಯೇ ಮೊಟ್ಟೆ ಇಡುತ್ತದೆ. ಮೊಟ್ಟೆ ಇಟ್ಟ ಮರುಕ್ಷಣಗಳಲ್ಲಿಯೇ ಹುಳುಗಳು ಒಡೆದು ಕೀವು ರಕ್ತ ಸೋರುವ ಗಾಯದಲ್ಲಿ ಸೇರಿಕೊಂಡು ಬಿಡುತ್ತವೆ. ಈ ಹುಳುಗಳು ಕೀವು, ರಕ್ತ ಸೇವಿಸುತ್ತ ಏನಿಲ್ಲವೆಂದರೂ ಅರ್ಧ ಇಂಚು ಬೆಳೆದು ಬಿಡುವುವು. ಆಗ ರಾಸನ್ನು ಕೆಡವಿ ಕೊಳವುಗಳ ಸಂದಿಗೆ ಆಲದ ಹಾಲು, ಮುತ್ತುಗದ ಹಾಲು ಇಲ್ಲದಿದ್ದರೆ

ಎಕ್ಕದ ಹಾಲು ಬಿಟ್ಟರೆ ಹುಳುಗಳು ಸತ್ತು ಉದುರುತ್ತವೆ. ಆಮೇಲೆ ಗಾಯವೂ ವಾಸಿ ಮಾಡುವುದಕ್ಕಾಗಿ ತಂಬಾಕಿನ ಕಸಿಯನ್ನು ಅರೆದು ನೀಲು ಹಿಪ್ಪೆ ನೊಣವು ಇತರ ನೊಣಗಳು ಕೂರದಂತೆ ಮಾಡಲು ಹಚ್ಚುತ್ತಾರೆ. ಗಾಯವು ವಾಸಿಯಾಗಿ ಬಿಡುತ್ತದೆ. ಹಾಗೆಯೇ ಎತ್ತಿಗೆ ಬಾಯಿಜ್ವರವಾದರೆ ಬಾಯಿ ಬಾತುಕೊಂಡು ಮೇಯಲು ಬರುವುದಿಲ್ಲ. ಇದು ಉಷ್ಣ ಸಂಬಂಧದ ಕಾಯಿಲೆಯಾದುದರಿಂದಾಗಿ ಅಂಬಲಿ ಕಾಯಿಸಿ ಅದು ಕುಡಿಯುವಂತೆ ಮಾಡಬೇಕು. ಅದರ ಜತೆಗೆ ಈರುಳ್ಳಿಯನ್ನು ಜಜ್ಜಿ, ಅದರೊಂದಿಗೆ ಉಪ್ಪು ಬೆರಸಿ ಎತ್ತಿನ ನಾಲಿಗೆಯನ್ನು ಈಚೆಗೆ ಹಿಡಿದುಕೊಂಡು ನಾಲಿಗೆಗೆ ಚೆನ್ನಾಗಿ ತಿಕ್ಕಿದರೆ ಉಷ್ಣ ಇಳಿದು ಬಾಯಿಜ್ವರ ವಾಸಿಯಾಗುವುದು.

**ಗಾಳಿಸೆಟಕು:** ಗಾಳಿಸೆಟಕು ದೇವತೆಗೆ ಸಂಬಂಧಪಟ್ಟಿದ್ದು. ಇದನ್ನು ಮಾರಮ್ಮನ 'ಸೆಟಕು' ಎಂತಲೂ ಕರೆಯುತ್ತಾರೆ. ಈ ಕಾಯಿಲೆಯಾದರೆ ದನಕರು, ಕುರಿ ಮೇಕೆ ಎಲ್ಲ ಒಟ್ಟಾಗಿ ಹೊಟ್ಟೆ ಉಬ್ಬರ ಮಾಡಿಕೊಂಡು, ಮೇವು ಮೇಯದೇ ಇದ್ದು ಸುಸ್ತು ಹೊಡೆದಂತೆ ಕಾಣಿಸುವುದು. ಇದನ್ನೇ ಗಾಳಿಸೆಟಕು, ಮಾರಮ್ಮನ ಸೆಟಕು ಎಂದು ತಿಳಿಯುತ್ತಾರೆ. ಗಾಬುರೋಗ ಎಂತಲೂ ಹೇಳುವರು. ಇದಕ್ಕೆ ಮೊದಲನೇ ಪರಿಹಾರವೆಂದರೆ ಗುಚ್ಚಿ ಒತ್ತುವುದು. ಮುಂಡಕಳ್ಳಿ ಹಾಲು ತಂದು, ಬಟ್ಟೆ ಸುತ್ತಿದ್ದ ಕಡ್ಡಿಗೆ ಹಾಲು ಒತ್ತಿಕೊಂಡು ಗಾಳಿಸೆಟಕು ಆದ ರಾಸುಗಳ ಪಕ್ಕೆಯ ಮೇಲೆ ಮೂರು ಮೂರು ಕಡೆ ಒತ್ತಬೇಕು. ಇದು ಮೊದಲ ಪರಿಹಾರ. ಎರಡನೆಯದು ಊರ ಮಾರಮ್ಮನನ್ನು ಹೊರಡಿಸುವುದು.

ಊರಮುಂದೆ ಒಂದು ತಾತ್ಕಾಲಿಕವಾದ ಗುಡಿಸಲು ನಿರ್ಮಾಣ ಮಾಡುತ್ತಾರೆ. ಆ ಗುಡಿಸಲು ವಿಶೇಷವಾಗಿ ಹೊಂಗೆ ಬೇವು ಆಲದ ಸೊಪ್ಪಿನಿಂದ ಕಟ್ಟಿದ್ದಾಗಿರುತ್ತದೆ. ಹುತ್ತದ ಮಣ್ಣನ್ನು ಅಗೆದು ತಂದು ನೀರಿನಲ್ಲಿ ಚೆನ್ನಾಗಿ ಕಲೆಸಿ ಮುದ್ದೆ ಮಾಡಿ ಅದರಲ್ಲಿ ಮಾರಮ್ಮನ ವಿಗ್ರಹ ತಯಾರಿಸುತ್ತಾರೆ. ಅದಕ್ಕೆ ಮುಖ, ಕೈಕಾಲು, ಕ್ವಾರೆಮೀಸೆ, ಕತ್ತಿ ಎಲ್ಲ ಮಣ್ಣಿನಿಂದಲೇ ತಯಾರಾಗಿರುತ್ತದೆ. ಬಿಳಿಬಟ್ಟೆ ಉಡಿಸಿದ ನಂತರ ಕುಂಕುಮ ಭಂಡಾರ ಇಟ್ಟು, ಆ ವಿಗ್ರಹಕ್ಕೆ ಪೂಜೆ ಆಗುವುದು. ಊರೊಳಗೆ ಹನ್ನೆರಡು ಜನ ಆಯಗಾರರಿರುತ್ತಾರೆ. ಆಯಗಾರರೆಂದರೆ ಜಾತಿಗೊಬ್ಬ ಮುಖ್ಯಸ್ಥರು. ಅವರಲ್ಲಿ ಕಮ್ಮಾರರ ಆಯಗಾರ ದೇವತೆಗೆ ಪೂಜೆ ಮಾಡುವ, ಬಹುಪಾಲು ವಿಗ್ರಹ ಮಾಡುವವನೂ ಅವನೇ. ಈ ವಿಗ್ರಹವನ್ನು ಮಾಡುವುದಕ್ಕೆ ಕಮ್ಮಾರರ ಆಯಗಾರ, ಊರ ಮೇಟಿ ಆಯಗಾರನಿಂದ ಎಡೆಯನ್ನು ಪಡೆದಿರುತ್ತಾರೆ. ಉಳಿದ ಆಯಗಾರರೆಲ್ಲ ಅವರವರ ಮನೆಯಲ್ಲಿ ಮಾಡಿದ ಎಡೆ ಕೊಂಡು ಬರುತ್ತಾರೆ. ಎಡೆಯಲ್ಲಿ ತರುವುದು ಅನ್ನ, ಹೋಳಿಗೆ, ಹಾಲು, ಮೊಸಲು ಏನಾದರೂ ಆಗಿರಬಹುದು. ಈ ಪೂಜೆ ಆದ ಮೇಲೆ ಮಾರಮ್ಮನ ಹರಕೆಯಾಗಿ ಕುರಿ ಬಲಿ ಕೊಡುವರು. ತಿರುಗಿ ಅದೇ ಮೇಟಿ ಗೊಂಚ್ಕಾರ ಅಥವಾ ಆಯಗಾರನಿಂದ ಅನ್ನದ ಎಡೆ ಬಂದು ಅದಕ್ಕೆ ಬಲಿ ಕೊಟ್ಟ ಪ್ರಾಣಿಯ ರಕ್ತವನ್ನು ಬೆರೆಸಿ ಊರುಸುತ್ತ ಚರಗ ಚೆಲ್ಲಿಕೊಂಡು ಬರುತ್ತಾರೆ. ರಾತ್ರಿಯೆಲ್ಲ ಚರಗ ಚೆಲ್ಲಿ ಅರ್ಧರಾತ್ರಿಯ

ಹೊತ್ತಿಗೆ ಗುಡಿಸಲು ಒಳಗೆ ಅಂದರೆ ಊರ ದೇವತೆಯನ್ನು ಹೊತ್ತುಕೊಂಡು ಅದನ್ನು ಹಾಗೆಯೇ ಊರಗಡಿ ದಾಟಿಸಿ ಬರಲು ಹೋಗುತ್ತಾರೆ. ಜನವೂ ಆ ಮೆರವಣಿಗೆಯ ಹಿಂದೆ ಊರೊಳಗಿನ ತಂತಮ್ಮ ಮನೆಯಲ್ಲಿ ಹಳೆಯ ಮೊರ, ಪುಟ್ಟಿ, ಕಸ ಪೊರಕೆ ಎಲ್ಲ ತೆಗೆದುಕೊಂಡು ಹೋಗಿ ಬಿಸಾಡಿ ಬರುತ್ತಾರೆ. ಈ ಆಚರಣೆಯಿಂದ ದನ ಮತ್ತು ಜನಕ್ಕೆ ಒಳ್ಳೆಯದೆಂದು ಬೇಡನಾಯಕರು ತಿಳಿಯುವರು.

**ಬುಡ್ಡೆಕಲ್ಲು ಪೂಜೆ:** ಬುಡ್ಡೆಕಲ್ಲು ಪೂಜೆಯು ಸಹ ದನಕರುಗಳಿಗೆ ಒಳ್ಳೆಯದಾಗಲೆಂದು ಮಾಡುವ ಆಚರಣೆಯಾಗಿರುತ್ತದೆ. ಬುಡ್ಡೆಕಲ್ಲು ಊರ ಮುಖ್ಯದ್ವಾರ ಅಥವಾ ಅಗಸೆ ಬಾಗಿಲಿನಿಂದ ಸ್ವಲ್ಪ ಮುಂಭಾಗಕ್ಕೆ ಇರುತ್ತದೆ. ಆ ಕಲ್ಲು ಊರವರ ದೃಷ್ಟಿಯಲ್ಲಿ ದೇವರ ಕಲ್ಲೇ ಆಗಿರುತ್ತದೆ. ಇದರ ಸುತ್ತ ಸೆಗಣಿಯಲ್ಲಿ ಕಟ್ಟೆ ಕಟ್ಟಿ, ಅದರಿಂದಾಚೆ ಅಷ್ಟು ದೂರದಲ್ಲಿರುವ ಯಾವುದಾದರೂ ಒಂದು ಲಿಪಿ ಕಲ್ಲಿಗೆ(ಇದು ಶಾಸನವಿರಬಹುದು, ವೀರಗಲ್ಲು ಅಥವಾ ಒಂದು ಸತಿ ಕಲ್ಲು ಇರಬಹುದು) ಸುಮಾರು ನೂರೊಂದು ಕೊಡ ನೀರು ಹುಯ್ಯುವರು. ಇತ್ತ ಬುಡ್ಡೆಕಲ್ಲಿಗೂ ಕೊಡಗಟ್ಟಲೆ ನೀರು ಹುಯ್ಯುವರು. ಊರ ಜನ ಬುಡ್ಡೇಕಲ್ಲಿನ ಸುತ್ತ ಪೂಜೆಗೆಂದು ತಂದಿಟ್ಟ ವೀಳೆಯದೆಲೆ ಬಾಳೆಯಹಣ್ಣು ನೀರಿನಲ್ಲಿ ತೇಲುವುದು. ಆಗ ಊರ ದನಗಳನ್ನು ಹೊಡೆದುಕೊಂಡು ಬಂದು ಬುಡ್ಡೆಕಲ್ಲಿನ ಸುತ್ತ ಪ್ರದಕ್ಷಿಣೆ ಹಾಕಿಸುವರು. ಇದಾದ ಮಾರನೇ ದಿನ ಬುಡ್ಡೆಕಲ್ಲಿನ ಬಳಿಗೆ ಯಾರನ್ನೂ ಬಿಡುವುದಿಲ್ಲ.

ಮರುದಿನ ಆಯಾ ಮನೆಯ ಮಕ್ಕಳನ್ನು ಅವರವರ ಮನೆಯಲ್ಲಿ ಒನಕೆಯ ಮೇಲೆ ಕೂರಿಸಿ ಮೊಸರನ್ನ ಊಟ ಮಾಡಿಸಿ ಅಲ್ಲಿಂದ ಕೈಗೆ ಬೇವಿನ ಸೊಪ್ಪು ಹಿಡಿಸಿಕೊಂಡು ಬುಡ್ಡೆಕಲ್ಲಿನ ಬಳಿ ತಂದು, ಸೊಪ್ಪನ್ನು ಕಲ್ಲಿನ ಮೇಲೆ ಹಾಕಿಸಿ ಮೊಸರು ತಿಂದ ಎಂಜಲು ಕೈಯನ್ನು ಅದರ ಮೇಲೆ ತೊಳೆಸುವರು. ಇಷ್ಟೆಲ್ಲವನ್ನು ಮಕ್ಕಳಿಗೆ ಮಾಡಿಸುವರು. ಗಂಡನನ್ನು ಕಳೆದುಕೊಂಡ ವಿಧವೆಯರು, ಮಕ್ಕಳು ಎಂಜಲು ಕೈ ತೊಳೆದ ಬುಡ್ಡೆಕಲ್ಲನ್ನು ಅನಂತರ ದನಗಳು, ಜನಗಳು ಎಲ್ಲ ತುಳಿದುಕೊಂಡು ಓಡಾಡುವರು. ಹಾಗೆ ತುಳಿದುಕೊಂಡು ಓಡಾಡುವುದರಿಂದ ಜನಗಳಿಗೂ ದನಗಳಿಗೂ ಒಳ್ಳೆಯದಾಗುವುದೆಂದು ಗ್ರಾಮಸ್ಥರು ಭಾವಿಸುವರು.

**ಕೆಂಪುಕಣ್ಣು:** ದನಕರುಗಳು ಮೇಯುವಾಗ ಎಲ್ಲಿಯಾದರೂ ಹೊತ್ತೆಸೆತ್ತೆಯ ಕಡೆ ಚಾಚಿಕೊಂಡಿದ್ದ ಮುಳ್ಳು ಚುಚ್ಚಿಯೋ ಅಥವಾ ಬೇರೊಂದು ದನದ ಕೋಡು ಸವರಿಯೋ ಕಣ್ಣು ಕೆಂಪಾಗಿ ನೀರು ಸುರಿಯತೊಡಗುವುದು. ಇಂಥ ಸಂದರ್ಭದಲ್ಲಿ ಇದಕ್ಕೆ ಹೆಚ್ಚಿಗೆ ಮಾಡಬೇಕಾದ ವೈದ್ಯವೇನೂ ಇರುವುದಿಲ್ಲ. ಅಡಿಗೆ ಉಪ್ಪನ್ನು ಉಗುರು ಬೆಚ್ಚಗಿನ ನೀರಿನಲ್ಲಿ ಕರಗಿಸಿ ಅದನ್ನು ಕೆಂಪುಕಣ್ಣಿಗೆ ಎರಚಿದರೆ ಕಣ್ಣುನೋವು ಮತ್ತು ಕೆಂಪುಬಣ್ಣ, ನೀರು ಸುರಿವುದು ನಿಂತು ಹೋಗುವುದು.

**ಕುಂದುರೋಗ:** ಎತ್ತು ಬಚ್ಚಲು ನೀರು ಅಥವಾ ಅನೇಕ ದಿನಗಳ ಕಾಲ ಒಂದೇ ಕಡೆ ಕಸಕಡ್ಡಿಗಳಿಂದ ಕೊಳೆತು ನಿಂತ ನೀರನ್ನು ಕುಡಿಯುವುದರಿಂದ ಈ ರೋಗ ಬರುತ್ತದೆ. ಈ ರೋಗದ ಲಕ್ಷಣಗಳೆಂದರೆ ಎತ್ತು ಸರಿಯಾಗಿ ನಿಲ್ಲಲಾರದೆ ತರತರ ನಡುಗುತ್ತಿರುತ್ತದೆ. ಒಮ್ಮೊಮ್ಮೆ ಎತ್ತು ಬಹಳ ಹೊತ್ತು ಕೆರೆಯಲ್ಲಿಯೋ ಹೊಳೆಯಲ್ಲಿಯೋ ನಿಂತಿದ್ದರೆ, ಈಜು ಹೊಡೆದಿದ್ದರೂ ಈ ರೋಗ ಬರುವ ಸಾಧ್ಯತೆ ಇದೆ. ಇದಕ್ಕೆ ಮಾಡುವ ಮದ್ದು ಈರುಳ್ಳಿ, ಬೆಲ್ಲ, ಮೆಣಸು ಮತ್ತು ಶುಂಠಿಯನ್ನು ಕುಟ್ಟಿ ಬಿಸಿ ನೀರಿನಲ್ಲಿ ಬೆರೆಸಿ ದಿನಕ್ಕೆ ಎರಡು ಬಾರಿ ಕುಡಿಸಿದರೆ ರೋಗ ವಾಸಿಯಾಗುತ್ತದೆ. ಈ ರೋಗ ಎತ್ತಿಗೆ ಚಳಿ, ಜ್ವರ ಹಿಡಿದಂತೆ.

**ದೊಡ್ಡರೋಗ:** ಎತ್ತುಗಳಿಗೆ ಇದು ಬಹಳ ಅಪಾಯಕಾರಿಯಾದ ರೋಗ. ಇದು ಬಂದರೆ ಬಹುಪಾಲು ರಾಸು ಸಾಯುವುದೇ ಉಂಟು. ಇದರ ಲಕ್ಷಣವೆಂದರೆ ನೀರಿನಂತೆ ಸೆಗಣಿಯನ್ನು ಉಚ್ಚಿಕೊಳ್ಳುವುದು. ಜೊತೆಗೆ ಸೆಗಣಿಯಲ್ಲಿ ರಕ್ತವೂ ಬೀಳುವುದು. ಈ ರೋಗದ ಗುರುತು ಕಂಡ ತಕ್ಷಣವೇ ಬಾಳೆಯ ಹಣ್ಣು ಮತ್ತು ಇಂಗನ್ನು ಬೆರೆಸಿ ಎರಡು ಮೂರು ದಿವಸ ಕೊಡಬೇಕು. ಇದರ ಜತೆಗೆ ಅಕ್ಕಿನುಚ್ಚು ಅಥವಾ ರಾಗಿನುಚ್ಚಿನಲ್ಲಿ ಕಾಯಿಸಿದ ಅಂಬಲಿ ಕೊಡಬೇಕು.

ಈ ಮೇಲ್ಕಂಡ ರೋಗಗಳ ಜತೆಗೆ ಎತ್ತುಗಳಿಗೆ ಇನ್ನಿತರ ಸಣ್ಣಪುಟ್ಟ ರೋಗಗಳೂ ಬರುವುದುಂಟು. ಮನುಷ್ಯರಿಗೆ ಒಮ್ಮೊಮ್ಮೆ ಕಿವಿ ಸೋರುವಂತೆ ದನಕರುಗಳಿಗೂ ಕಿವಿ ಸೋರಬಹುದು. ಇದಕ್ಕೆ ಅಡವಿಯಲ್ಲಿ ಸಿಕ್ಕುವ ಒಂದು ಬೇರನ್ನು ಕೊಬ್ಬರಿ ಎಣ್ಣೆಯಲ್ಲಿ ಹಾಕಿ ಕಾಯಿಸಿ, ಅದನ್ನು ಒಂದು ವಾರ ಕಿವಿಗೆ ಬಿಟ್ಟರೆ ಕಿವಿ ಸೋರುವಿಕೆ ನಿಲ್ಲುತ್ತದೆ. ಹಾಗೆಯೇ ಎತ್ತುಗಳಿಗೂ ಕೆಮ್ಮು ಬರುವುದುಂಟು. ಗಂಡಸರೇ ಸ್ವಲ್ಪ ಜೋರಾಗಿ ಕೆಮ್ಮಿದರೆ ಅದನ್ನು ದನಗೆಮ್ಮು ಎಂದು ಹೆಸರಿಸು ತ್ತಾರೆ. ದನಗಳಿಗೆ ಕೆಮ್ಮು ಬಂದರೆ, ಕಾಡಿನಲ್ಲಿ ದನಗಳಿಗಾಗಿಯೇ ಕೆಮ್ಮಿನ ಸೊಪ್ಪು ಎಂದು ಸಿಕ್ಕುವ ಒಂದು ಜಾತಿಯ ಸೊಪ್ಪನ್ನು ತಂದು ಹರಳೆಣ್ಣೆಯೊಳಗೆ ಬೆರೆಸಿ ಅರೆದು ರಾಸಿನ ಬಾಯಿಗೆ ಅಟ್ಟಿದರೆ ಕೆಮ್ಮು ನಿಲ್ಲುವುದು. ಇದರ ಜತೆಗೆ ಕೆಲವು ಸಂದರ್ಭಗಳಲ್ಲಿ ಎತ್ತಿನ ಹೆಗಲು ಊದಿಕೊಂಡುಬಿಡುವುದು. ಆಗ ಎತ್ತಿನಿಂದ ಯಾವ ಕೆಲಸ ಮಾಡಿಸಲು ಸಾಧ್ಯವಾಗುವುದಿಲ್ಲ. ಇದಕ್ಕಾಗಿಯೇ ಕಾಡಿನಲ್ಲಿ ಸಿಕ್ಕುವ ಬೇರು ತಂದು ಅದನ್ನು ಎಳ್ಳಿನ ಎಣ್ಣೆಯೊಂದಿಗೆ ಅರೆದು ಊದಿಕೊಂಡ ಭಾಗಕ್ಕೆ ಹಚ್ಚಿದರೆ ಅದು ಎರಡು ಮೂರು ದಿನಗಳಲ್ಲಿ ಇಳಿಯುವುದು.

ಒಟ್ಟಿನಲ್ಲಿ ಬೇಡನಾಯಕರಲ್ಲಿ ಕೆಲವು ಜನ ಕೀಲಾರಿಗಳು ಅತ್ಯಂತ ಪರಿಣತ ಪಶುವೈದ್ಯರಾಗಿರುತ್ತಾರೆ. ಅವರು ಸಾಕುವ ದನಕರುಗಳಿಗೆ ಅಲ್ಲದೆ ತಮ್ಮ ಸುತ್ತಿನ ಯಾವುದೇ ರಾಸುಗಳಿಗೆ ತೊಂದರೆಯಾದರೆ ಹೋಗಿ ಅದನ್ನು ಪರೀಕ್ಷಿಸಿ ಔಷಧಿ ಕೊಡುತ್ತಾರೆ.

## ಪಾರಂಪರಿಕ ನಂಬಿಕೆಗಳಲ್ಲಿ ಮಾಟ, ಮಂತ್ರ, ತಂತ್ರ ಮತ್ತು ನೋಟಗಳು

ಆದಿವಾಸಿಗಳು ಕಾಡಿನ ಪರಿಸರದಲ್ಲೇ ಬದುಕನ್ನು ಸವೆಸಿದವರು. ಅವರು ಪ್ರಾಣಿ ವಾಸಿ ಜೀವನದಿಂದ ಹಿಡಿದು ಆದಿವಾಸಿ ಮಾನವ ಮತ್ತು ಪ್ರಸ್ತುತಬುಡಕಟ್ಟು ಜೀವನದಲ್ಲಿ ಅವರು ಕಾಡಿನ ಪರಿಸರದ ಪ್ರಕೃತಿಯೊಟ್ಟಿಗಿನ ಒಡನಾಟ ಮತ್ತು ಅವಿನಾಭಾವ ಸಂಬಂಧಗಳು ಪರಸ್ಪರ ಅವರ ಜೀವನದ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹೆಣೆದುಕೊಂಡಿವೆ. ಮೊದಲಿನಿಂದಲೂ ಪ್ರಾಕೃತಿಕ ಶಕ್ತಿಯೇ ದೈವವೆಂದೂ ಪಂಚಭೂತಗಳನ್ನು ಆರಾಧಿಸುತ್ತಾ ಬಂದಿರುವ ಆದಿವಾಸಿಗಳಿಗೆ ಪ್ರಕೃತಿಯ ಶಕ್ತಿಯನ್ನು ಪಳಗಿಸಿ ತನ್ನ ಉಪಯೋಗಕ್ಕೆ ಯಾಕೆ ಬಳಸಿಕೊಳ್ಳಬಾರದೆಂಬ ಆಲೋಚನೆಯ ಪ್ರಾಚೀನ ಆವಿಷ್ಕಾರವೇ 'ಮಾಟ'. ಈ ಮಾಟದ ಬಗ್ಗೆ ಪಠಿಸು ನುಡಿಗಳೇ ಮಂತ್ರ ಮತ್ತು ಅದಕ್ಕಾಗಿ ನಡೆಸುವ ಕ್ರಿಯೆಗಳೇ ತಂತ್ರಗಳಾಗುತ್ತವೆ.

ತುಂಬಾ ಪ್ರಾಚೀನವಾದ ಮಾಟವು ಆದಿವಾಸಿಗಳ ಒಂದು ಪಾರಂಪರಿಕ ಜ್ಞಾನವಾಗಿದೆ. ಸೀಮೆಯ ಗಡಿಯೊಳಗೆ ನುಗ್ಗುವ ದುಷ್ಟಶಕ್ತಿ ರಕ್ಷಣೆ, ಮಳೆ, ಬೇಟೆ, ವ್ಯವಸಾಯ, ಪ್ರೀತಿ, ರೋಗರುಜಿನ ಇತ್ಯಾದಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ನಡೆಸಲೂ ಪ್ರಕೃತಿಯ ಶಕ್ತಿಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆಂಬ ನಂಬಿಕೆಯನ್ನಿಟ್ಟು ಪ್ರಕೃತಿಯ ಶಕ್ತಿಗಳು, ಮಡಿದವರ ಆತ್ಮದ ದೈವಗಳು, ಇಂತಹ ಅತಿಮಾನುಷ ಶಕ್ತಿಗಳನ್ನು ನಿರ್ದಿಷ್ಟ ಉಪಾಸನೆಗಳ ಮೂಲಕ ಪ್ರಭಾವ ಬೀರಿ ಕೈ ವಶಮಾಡಿಕೊಳ್ಳುವ ತಂತ್ರವೇ ಮಾಟವಾಗಿರುತ್ತದೆ.

ಸಾಮಾನ್ಯವಾಗಿ ಬುಡಕಟ್ಟುಗಳಲ್ಲಿ ಮಾಟ, ಮಂತ್ರ, ತಂತ್ರ ನೋಟ ನೋಡುವುದು, ಚಿಕಿತ್ಸೆ ನೀಡುವುದು ಇತ್ಯಾದಿ ಎಲ್ಲಾ ಜವಾಬ್ದಾರಿಯ ಹೊಣೆಯನ್ನು ಸೀಮೆಯೊಳಗಿನ ಸಮುದಾಯದ 'ಶಮನ್' ಹೊತ್ತಿರುತ್ತಾನೆ(ಶಮನ್ ಬೇರೆ ಬೇರೆ ಬುಡಕಟ್ಟುಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತದೆ. ಅಜ್ಜಯ್ಯ, ಗುಡ್ಡಯ್ಯ, ಬಿಂಜೆಕಾಳ, ಆದಿವಾಯ್ಸ್, ಬುಧುವಂತ, ಪೂಜಾರಿ ಇತ್ಯಾದಿ).

'ಮಾಟ'ವು ತುಂಬಾ ಪ್ರಾಚೀನವಾದ ಆದಿವಾಸಿ ಆವಿಷ್ಕಾರ ಆದ್ದರಿಂದ ಇದಕ್ಕೆ ನಿರ್ದಿಷ್ಟವಾದ ತಾರ್ಕಿಕ ನೆಲೆಗಟ್ಟಿರುವುದಿಲ್ಲ. ಆದರೆ ಮಾನವನ ಇದೇ ಪ್ರಕ್ರಿಯೆಗೆ ವಿಕಸಿತ ರೂಪವಾಗಿ ಪ್ರಕೃತಿಯ ಶಕ್ತಿಯನ್ನರಿಯುವ ಸಲುವಾಗಿ ನಿರ್ದಿಷ್ಟವಾದ ತಾರ್ಕಿಕ ನೆಲೆಗಟ್ಟು ಇಟ್ಟುಕೊಂಡು ಬುದ್ಧಿ, ವೀಕ್ಷಣೆ ಹಾಗೂ ಪ್ರಯೋಗಗಳ ಮೂಲಕ ವಿವೇಚಿಸಿ ಪ್ರಕೃತಿಯ ರಹಸ್ಯಗಳನ್ನು ಅರಿತು ತನ್ನ ಕೈ ವಶಪಡಿಸಿಕೊಳ್ಳುವ ಪ್ರಕ್ರಿಯೆಯನ್ನೇ ನಾವು 'ವಿಜ್ಞಾನ' ಎನ್ನುತ್ತೇವೆ. ಇಷ್ಟೇ ಇವೆರಡಕ್ಕಿರುವ ವ್ಯತ್ಯಾಸ.

ಪ್ರಕೃತಿಯ ಶಕ್ತಿಯ ಸ್ಪಷ್ಟತೆಗಳ ಕೊರತೆಯಿಂದಾಗಿ ತಾರ್ಕಿಕ ನೆಲೆಗಟ್ಟಿನ ಅರಿವಿಲ್ಲದೇ ಅತಿಮಾನುಷ, ದೈವಗಳ ಮೊರೆಹೋಗಿ ನಂಬಿಕೆಯ ಆಧಾರದ ಮೂಲಕ ಪ್ರಕೃತಿಯ ಶಕ್ತಿಯನ್ನು

ಅರಿಯುವ ಮಾರ್ಗ ವ್ಯವಹರಿಸುವ ಮಾರ್ಗಕ್ಕೆ ಧರ್ಮವೆಂದು ಕರೆದಿರಬಹುದು. ಈ ವಿಷಯದ ಕುರಿತು ಅನೇಕ ಸಂಶೋಧಕರು ಬೇರೆಗಳಾದ ಮ್ಯಾಲಿನೋಸ್ಕಿ, ಬೋನಿಸ್ಲಾ, ಜಾರ್ಜ್ ಫ್ರೇಜರ್‌ಗಳು ತಮ್ಮದೇ ರೀತಿಯಲ್ಲಿ ಮಾಟ, ಮಂತ್ರಗಳ ಕುರಿತು ವಿಶ್ಲೇಷಿಸಿದ್ದಾರೆ.

**ಜೇನುಕುರುಬರಲ್ಲಿ ಮಾಟ, ಮಂತ್ರ ಮತ್ತು ದೇವರಗುಡ್ಡ ಕರೆಯುವುದು**

**ದೇವರಗುಡ್ಡ**

ಜೇನುಕುರುಬರಂತಹ ಬುಡಕಟ್ಟು ಜನಾಂಗದವರನ್ನು ಬಂಧಿಸಿಡುವ ಆಧಾರವೆಂದರೆ ಕ್ರಿಯಾ-ವಿಧಾನಗಳು ಮತ್ತು ನಂಬಿಕೆಗಳು. ಆದ್ದರಿಂದ ಇವರಿಗೆ ಪೊಲೀಸ್‌ರವರಾಗಲಿ, ಕಾನೂನು ಪಾಲಕರಾಗಲಿ ಇವರಿಗೆ ಇಲ್ಲ. ಇವರ ನಂಬಿಕೆಗಳು ಪುರಾತನ ಆತ್ಮಗಳಲ್ಲಿರುತ್ತದೆ. ಪುರಾತನರ ಆತ್ಮಗಳಿಗೆ ಜೈಲು, ಪೊಲೀಸ್, ಕಾನೂನು ಉಲ್ಲಂಘನೆ ಇವೆಲ್ಲವುಗಳನ್ನು ಇವು ಕಾಯ್ದುಕೊಂಡಿರುತ್ತವೆ. ಇವರೆಲ್ಲರನ್ನು ಬಂಧಿಸುವ ಶಕ್ತಿ ಆದಿ ಅಯ್ಯ(ಮೂಲಪುರುಷ)ನಿಗೆ ಇರುತ್ತದೆ. ದೇವರ ಪೂಜೆಯನ್ನಾಗಲೀ, ಮೂರ್ತಿ ಪೂಜೆಯನ್ನಾಗಲೀ ಇವರು ಮಾಡುವುದಿಲ್ಲ. ಅದಕ್ಕೆ ಬದಲಾಗಿ ಆದಿ ಅಯ್ಯ 'ಗಾಳಿ' ಆತ್ಮವನ್ನು ಕರೆದು ಅದರ ಜೊತೆ ಸಂವಾದ ನಡೆಸಿ ತಮಗೆ ಆಗುತ್ತಿರುವ ಒಳ್ಳೆಯದು ಕೆಟ್ಟದ್ದನ್ನು ವಿಚಾರಿಸಿಕೊಳ್ಳುತ್ತಾರೆ. ಈ ಶಕ್ತಿಯನ್ನು ಪಡೆದಿರುವವನು ಹಾಡಿಗೊಬ್ಬನಂತೆ ಇರುತ್ತಾನೆ. ಇವನನ್ನೇ ಗುಡ್ಡ ಎಂದು ಕರೆಯುತ್ತಾರೆ.

**ಯಾರು ದೇವರಗುಡ್ಡನಾಗಬಹುದು?**

ಗುಡ್ಡನಾಗುವವನು ತನ್ನ ಶಕ್ತಿಯನ್ನು ಮೊದಲು ಕನಸಿನಲ್ಲಿ ಕಾಣುವನು. ಆಗ ಅವನ ಆದಿ ಅಯ್ಯನ ಚೇತನವು ಅವನ ಮನದುಂಬಿ ಕೆಲವು ವಿಷಯಗಳನ್ನು ಬೋಧಿಸುತ್ತದೆ. ಅವನು ಗುಡ್ಡನಾಗಿ ಮುಂದೆ ಮಾಡಬೇಕಾದ ಕ್ರಿಯಾವಿಧಾನಗಳ ಬಗ್ಗೆ ಆ ಚೇತನವು ನೀಡುತ್ತದೆ. ದೈಹಿಕ, ಮಾನಸಿಕ, ಕಾಯಿಲೆಗಳನ್ನಾಗಲಿ, ಸಾಮಾಜಿಕ ಕಟ್ಟಳೆಗಳನ್ನಾಗಲೀ, ಸಾಂಸ್ಕೃತಿಕ ರೀತಿನೀತಿಗಳನ್ನು, ನಡವಳಿಕೆಗಳ ಬಗ್ಗೆಯಾಗಲಿ ಆದಿಚೇತನವು ನ್ಯಾಯವಾದ ತೀರ್ಮಾನವನ್ನು ತೆಗೆದುಕೊಳ್ಳುವುದನ್ನು ಕರುಣಿಸುತ್ತದೆ. ಅನಂತರ ಅವನಿಗೆ ಅವರ ಹಿರಿಯನ ಆತ್ಮ ಸೇರುತ್ತದೆ. ಆಗ ಅವನಿಗೆ ಮೈದುಂಬಿ ಬರುತ್ತದೆ. ಹೀಗೆ ಮೈದುಂಬಿ ಬರುವುದನ್ನು ಹಾಡಿಯ ಜನರು ಗಮನಿಸುತ್ತಾರೆ. ಆಗ ಈತನನ್ನು ಗಮನಿಸಿ ಯಾಕೆ ಹೀಗೆ ಬದಲಾಗಿದ್ದೀ ಎಂದು ಕೇಳುತ್ತಾರೆ. ಆಗ ಅವನಲ್ಲಿ ಮೈದುಂಬಿರುವ ಆತ್ಮವು(ಅವರ ಬಲವಾದ ನಂಬಿಕೆ) ತನ್ನ ಇರುವಿಕೆಯನ್ನು ಸಾರುತ್ತದೆ. ಆಗ ಅವನ/ಳನ್ನು ಕೆರೆಗೋ, ನದಿಯ ಹತ್ತಿರವೋ, ಕೆರೆಗೋ ಕರೆದುಕೊಂಡು ಹೋಗಿ ಸ್ನಾನ ಮಾಡಿಸುತ್ತಾರೆ. ಹೀಗೆ ಅವನನ್ನು ಎರಡು-ಮೂರು ದಿನಗಳು ನಡೆಸಿಕೊಂಡು ಮುಂದೆ ಈತನನ್ನು ಹಿರಿಯಗುಡ್ಡನ ಸಹಾಯಕನನ್ನಾಗಿ ಬಿಡುತ್ತಾರೆ. ಹಿರಿಯಗುಡ್ಡನಿಗೆ ಮೈದುಂಬಿದಾಗ ಈತನಿಗೂ ತುಂಬಬಹುದು.[12]

ಸಾಮಾನ್ಯವಾಗಿ ಗುಡ್ಡನಾಗುವವನಿಗೆ ಹದಿನಾರು ವರ್ಷ ಅಥವಾ ಮೇಲಾಗಿರುತ್ತದೆ. ಗುಡ್ಡನು ಮದುವೆಯಾಗಬಹುದು ಅಥವಾ ಆಗದೆಯೇ ಇರಬಹುದು. ಗುಡ್ಡದ ಶಕ್ತಿಗನುಸಾರವಾಗಿ ಮತ್ತು ಆತನು ಯಾವ ಶಕ್ತಿಯನ್ನು ಪಡೆದಿರುತ್ತಾನೆ ಎಂಬುದರ ಮೇಲೆ ಅವರನ್ನು ವಿಂಗಡಿಸಬಹುದು. ಸಾಮಾನ್ಯವಾಗಿ ಗಂಡಸರು ಗುಡ್ಡರಾಗುತ್ತಾರೆ. ಹೆಂಗಸರು ಅಪರೂಪವಾದರೂ ಬೆರಳೆಣಿಕೆಯಷ್ಟಿರುತ್ತಾರೆ.

1. ಹಾಡಿಯ ಗುಡ್ಡ
2. ನೆರಳು ಕರೆಯೋ ಗುಡ್ಡ
3. ಜೇಟೆ ಒಡೆಯೋ ಗುಡ್ಡ
4. ಚಿಲ್ಲು ಒಡೆಯೋ ಗುಡ್ಡ ಎಂದು ವಿಭಾಗಿಸಬಹುದು.

**1. ಹಾಡಿಯಗುಡ್ಡ:** ಈ ಗುಡ್ಡನಿಗೆ ತನ್ನ ಹಾಡಿಯ ಜನರಿಗೆ ಬರುವ ಸಣ್ಣ ಪುಟ್ಟ ಕಾಯಿಲೆಗಳನ್ನು ವಾಸಿ ಮಾಡುವ ಶಕ್ತಿ ಇರುತ್ತದೆ. ಕಳ್ಳತನ, ಮೋಸ, ನಿಯಮೋಲ್ಲಂಘನೆ ಮಾಡಿದವರಿಗೆ ಪತ್ತೆ ಹಚ್ಚಿ ಇವುಗಳನ್ನು ಮಾಡಿದವರಿಗೆ ಶಿಕ್ಷೆ ವಿಧಿಸುವ ಶಕ್ತಿ ಇರುತ್ತದೆ.

**2. ನೆರಳು ಕರೆಯುವ ಗುಡ್ಡ:** ಇವನಿಗೆ ಹಾಡಿಯಲ್ಲಿ ಯಾರಾದರೂ ಮರಣ ಹೊಂದಿದರೆ 14ನೇ ದಿನ ಆ ಸತ್ತ ವ್ಯಕ್ತಿಯ ನೆರಳನ್ನು ಕರೆದು, ಅವನಿಗೆ ಸಾವು ಬರಲು ಏನು ಕಾರಣ, ಈತನಿಗೆ ಸಾವಿನ ಸಮಯದಲ್ಲಿ ಯಾವುದಾದರೂ ಆಸೆ ಪೂರೈಸದೇ ಬಿಟ್ಟಿತ್ತೆ ಇತ್ಯಾದಿಯನ್ನು ಕೇಳಿ ಅವನ ಕುಳ(ಆತ್ಮ) ವನ್ನು ಹೆತ್ತಯ್ಯನ ಬಳಿಗೆ ಕಳುಹಿಸುವ ಶಕ್ತಿಯನ್ನು ಹೊಂದಿರುತ್ತಾನೆ.

**3. ಜೇಟೆ ಒಡೆಯೋ ಗುಡ್ಡ:** ಮಾಟ, ಮಂತ್ರದಿಂದ ಬಂದ ಕಾಯಿಲೆಯನ್ನು ವಾಸಿ ಮಾಡುವ ಶಕ್ತಿ ಈ ಗುಡ್ಡನಿಗಿರುತ್ತದೆ. ಗಾಳಿಗರಾವೊ ಮೆಟ್ಟಿಕೊಂಡ ವ್ಯಕ್ತಿಗೆ ಅವನ ದೇಹದಿಂದ ಅದನ್ನು ಓಡಿಸುವ ಶಕ್ತಿ ಇರುತ್ತದೆ.

**4. ಚಿಲ್ಲು ಒಡೆಯೋ ಗುಡ್ಡ:** ಯಾವುದಾದರೂ ವ್ಯಕ್ತಿಯ ದೇಹದೊಳಕ್ಕೆ ಹೊರಗಿನ ವಸ್ತು ಬಂದು ಸೇರಿಕೊಂಡು ಬಾಧೆ ಕೊಡುತ್ತಿದ್ದರೆ ಅಂಥ ಕಾಯಿಲೆಯನ್ನು ಈತ ವಾಸಿ ಮಾಡಬಲ್ಲ. ಈ ಗುಡ್ಡರಿಗೆ ಇಷ್ಟೆ ಅಲ್ಲದೆ ಇನ್ನೂ ಕೆಲವು ಶಕ್ತಿಗಳು ಇರುತ್ತವೆ.

1. ತಮ್ಮ ಹಾಡಿಯ ಜನರಿಗೆ ಅಂಟುರೋಗಗಳಾದ ವಾಂತಿ, ಭೇದಿ, ಸಿಡುಬು ರೋಗಗಳು ಕಾಣಿಸಿಕೊಂಡರೆ ಇಂತಹದನ್ನು ಮುಂಗಾಣುವ ಶಕ್ತಿ ಈ ಗುಡ್ಡರಿಗೆ ಇರುತ್ತದೆ. ಹೀಗೆ ಅಂಟು ಜಾಡ್ಯ ಬಂದಿದೆ ಎಂದು ಈ ಗುಡ್ಡನಿಗೆ ಗೊತ್ತಾದ ಕೂಡಲೇ ಕಾಯಿಲೆ ಬಂದ ವ್ಯಕ್ತಿಯನ್ನು ಹಾಡಿಯಿಂದ ಹೊರಗೆ ಹಾಕಿ, ಹಾಡಿಗೆ ಬರದ ಹಾಗೆ ಮತ್ತು ಕಾಯಿಲೆ ಬಂದ ವ್ಯಕ್ತಿಗೆ ಮತ್ತು ಬರಬಹುದಾದ ಮುನ್ಸೂಚನೆಯನ್ನರಿತು ಅವರಿಗೆ ಔಷಧೋಪಚಾರವನ್ನು

ಮಾಡುತ್ತಾನೆ. ಇವರು ಮುಂಗಾಣ್ಕೆಯ ಶಕ್ತಿಯಿಂದ ತಮ್ಮ ಹಾಡಿಯ ಜನರನ್ನು ಕಾಪಾಡುವ ಶಕ್ತಿ ಇರುತ್ತದೆ.

2. ಈತನಿಗೆ ಆದಿ ಅಯ್ಯನ ಚೇತನವು ಮೈದುಂಬಿ ಬಂದಾಗ ತನ್ನ ಸಾಮಾನ್ಯ ಇಂದ್ರಿಯಗಳ ಕ್ರಿಯೆಗಳನ್ನು ನಿಲ್ಲಿಸುತ್ತಾನೆ. ಅವನ ಅಂತರಾತ್ಮಕ್ಕೆ ಆದಿ ಅಯ್ಯ ಗೋಚರಿಸುತ್ತಾನೆ. ಮಾನಸಿಕವಾಗಿ ಆದಿ ಅಯ್ಯನ ಪ್ರಪಂಚವನ್ನು ಪ್ರವೇಶಿಸುತ್ತಾನೆ. ಆತನಿಗೆ ಮಾಮೂಲಿನಂತೆ ದೇಹಸ್ಥಿತಿಗೆ ಬಂದಾಗ ಅವನ ಆಗಿನ ಅನುಭವವನ್ನು ಹೇಳಿಕೊಳ್ಳಲು ಜ್ಞಾಪಕಕ್ಕೆ ಬರುವುದಿಲ್ಲ.

3. ಗುಡ್ಡ ತನ್ನ ಜನಸಮೂಹವನ್ನು ಅವರ ಸಮೂಹವನ್ನು ಒಂದೆಡೆಗೆ ತಂದು ನಿಲ್ಲಿಸಿಕೊಳ್ಳುವ ಶಕ್ತಿ ಇರುತ್ತದೆ. ಅವನಿಗೆ ತನ್ನ ಮೈದುಂಬಿ ಬಂದಿರುವ ಆತ್ಮಗಳನ್ನು ಅದರ ಕ್ರಿಯೆ ಮುಗಿದ ನಂತರ ಆ ಪ್ರಪಂಚದಿಂದ ಬಿಡಿಸಿಕೊಂಡು ಬರುವ ಶಕ್ತಿಯೂ ಇರಬೇಕು.

4. ಆತನಿಗೆ ಆತ್ಮ ಅಥವಾ ಚೈತನ್ಯದೊಡನೆ ವರ್ತಿಸುವುದು ಅಪಾಯಕಾರಿಯಾಗಿರುತ್ತದೆ ಎಂಬ ಅರಿವು ಇರುತ್ತದೆ. ಆದ್ದರಿಂದ ಆತ ತನ್ನ ಹಾಡಿಯ ಜನರೊಟ್ಟಿಗೂ, ಪ್ರಾಣಿ ಪಕ್ಷಿ ಜೀವರಾಶಿಯ ಬಗ್ಗೆ ವಿಶಿಷ್ಟ ಆಪ್ತತೆ ಗೌರವವನ್ನು ಗಳಿಸಿಕೊಳ್ಳಬೇಕಾಗುತ್ತದೆ.

5. ಈತ ಕೇವಲ ತನ್ನ ಮನೋನಿಗ್ರಹದಿಂದ ಮಾತ್ರ ಈ ಶಕ್ತಿಯನ್ನು ಪಡೆಯಲಾಗುವುದಿಲ್ಲ. ಅದರ ಜೊತೆಗೆ ದೈಹಿಕ-ಮಾನಸಿಕ ಯಾತನೆಗಳನ್ನು ತಡೆದುಕೊಳ್ಳುವ ಶಕ್ತಿಯನ್ನು ಪಡೆದಿರುತ್ತಾನೆ. ಆದ್ದರಿಂದ ಬೆಂಕಿ ಹಚ್ಚಿಕೊಂಡು ಎದೆ ಮೈಗಳನ್ನು ಸುಟ್ಟುಕೊಂಡರೂ ಅವನಿಗೆ ಯಾವ ಸುಟ್ಟಗಾಯವೂ ಆಗುವುದಿಲ್ಲ.

6. ತನ್ನ ವಾಕ್ ಮತ್ತು ಕ್ರಿಯಾಶಕ್ತಿಯಿಂದ ಜನರ ಮನಸ್ಸನ್ನು ಹಿಡಿದಿಟ್ಟುಕೊಳ್ಳಬಲ್ಲ ಶಕ್ತಿ ಮತ್ತು ತನ್ನ ಸಮಾಜದ ಕಟ್ಟುಕಟ್ಟಳೆ ರೀತಿನೀತಿಯನ್ನು ನಿರ್ದೇಶಿಸುವ ಶಕ್ತಿಯನ್ನು ಪಡೆದಿರುತ್ತಾನೆ.

ಹೀಗೆ ಗುಡ್ಡನಿಗೆ ಜನರ ಮತ್ತು ಆದಿ ಅಯ್ಯನ ಚೇತನವನ್ನು ಬೆಸೆಯುವ ಶಕ್ತಿ ಬರುತ್ತದೆ.

**ರೋಗಗಳು-ಮಾಟ-ಜೇಟೆ**

ರೋಗಗಳನ್ನು ಗುರುತಿಸುವುದರಲ್ಲಿ ಮತ್ತು ಗುಣಪಡಿಸುವುದರಲ್ಲಿ ಜೇನುಕುರುಬರು ಸಾಂಕೇತಿಕ ಕ್ರಿಯಾವಿಧಾನಗಳನ್ನು ಅನುಸರಿಸಿಕೊಂಡು, ಜೊತೆ ಜೊತೆಗೆ ನಾರು-ಬೇರು, ಎಲೆ, ಗಡ್ಡೆ ಇವುಗಳನ್ನು ಔಷಧಿಯಾಗಿ ಕೊಡುತ್ತಾರೆ. ಹೀಗೆ ರೋಗ ಗುರುತಿಸುವುದನ್ನು, ಗುಣಪಡಿಸುವುದನ್ನು, ಕ್ರಿಯೆಯನ್ನು ಹೀಗೆ ಅರ್ಥ ಮಾಡಿಕೊಳ್ಳಬಹುದು. ರೋಗ ಬರುವ ನಂಬಿಕೆಯನ್ನು ಅರ್ಥ ಮಾಡಿಕೊಳ್ಳಲು ರೋಗ ಬರುವುದಕ್ಕೆ ಕಂಡುಕೊಳ್ಳುವ ಕಾರಣ, ದೇಹ ನಶಿಸುವ ವಿಧಾನ ಮತ್ತು ಸಾವುಗಳ ನಂಬಿಕೆಗಳನ್ನು ಅರ್ಥ ಮಾಡಿಕೊಳ್ಳುವುದು ಮುಖ್ಯ.

ಸಣ್ಣಪುಟ್ಟ ಕಾಯಿಲೆಗಳನ್ನು ಕೆಟ್ಟಗಾಳಿಯ ಕಾರಣವಿರಬಹುದೆಂದು ಅವರ ನಂಬಿಕೆ. ಆದಿ ಅಯ್ಯನ ಗಾಳಿಯನ್ನು 'ಒಳ್ಳೆಯ ಗಾಳಿ'ಯೆಂದು ಕರೆಯುತ್ತಾರೆ. ಕಾಡಿನಲ್ಲಿ ವಾಸಿಸುವ ಇವರಿಗೆ ಸಾವು ಯಾವ ಗಳಿಗೆಯಲ್ಲಿ ಸಂಭವಿಸುತ್ತದೋ ಎಂಬ ಸಹಜ ಅನುಮಾನ ಇದ್ದೇ ಇದೆ. ಅಲ್ಲದೆ ತಮ್ಮ ಪೂರ್ವಿಕರ, ಸತ್ತವರ ಗಾಳಿ ತಮ್ಮನ್ನು ಕಾಡುತ್ತವೆ. ತಾವು ತಪ್ಪು ಮಾಡಿದರೆ ಅವುಗಳು ಕಾಡುತ್ತವೆ ಎಂದು ನಂಬುತ್ತಾರೆ. ತಮ್ಮ ನೆಗಡಿ, ಹೊಟ್ಟೆನೋವು, ಇಂಥ ಕಾಯಿಲೆಗಳು ಬಂದರೂ ಸತತವಾಗಿ ಇವರು ಪುರಾಣಗಳನ್ನು ಸೃಷ್ಟಿಸುತ್ತಾರಲ್ಲದೆ, ಯೋಜನಾಬದ್ಧವಾಗಿ ಸೊಗಸಾದ 'ಕಥೆ'ಗಳನ್ನು ಹೇಳುತ್ತಾರೆ. ಈ ಮೂಲಕ ದೇಹದಲ್ಲಾಗುವ ಸಾಮಾನ್ಯ ಬದಲಾವಣೆಯನ್ನು ಸಮಾಜದಲ್ಲಿ ಊರುತ್ತಾ ಹೋಗುತ್ತಾರೆ.

ಮಾಟ ಜೇಟೆಗಳನ್ನು ಇವರು ಬಲವಾಗಿ ನಂಬುತ್ತಾರೆ. ಈ ನಂಬಿಕೆಗಳನ್ನು ಅವರ ನಂಬಿಕೆಗಳನ್ನು ಹೊಕ್ಕು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವನ್ನು ಅವು ಬಯಸುತ್ತವೆ. ಅವರ ರೋಗ ಕಥಾನಕಗಳ ಮೂಲಕ ತಮ್ಮ ದೇಹದಲ್ಲಾಗುವ ಬದಲಾವಣೆಯನ್ನು ಗುರುತಿಸಿಕೊಳ್ಳುವ, ತೆರೆದಿಡುವ ಕೆಲಸವನ್ನು ಈ ಕಥಾನಕಗಳು 'ನಟಿ'ಸುತ್ತವೆ. ಆದ್ದರಿಂದ ಅವರಿಗೆ ರೋಗಗಳ ಬರುವಿಕೆ, ರೋಗಸ್ಥಿತಿ, ಸಾವಿನೊಡನೆ, ಹೋರಾಟ, ಸಾವು ಸಾವಿನ ನಂತರದ ಜೀವನ ಇವೆಲ್ಲವನ್ನು ಅದರ ಸಮಗ್ರತೆಯಲ್ಲಿ ಕಂಡುಕೊಳ್ಳಬೇಕಾಗುತ್ತದೆ. ಅದರಲ್ಲೂ ಮನೋರೋಗಗಳು ಇವರನ್ನು ಆಗಾಗ್ಗೆ ಕಾಡುವ ಇನ್ನೊಂದು ಕಾಯಿಲೆಗಳು. ಈ ಸಮಾಜದಲ್ಲಿ ಈ ರೋಗಗಳನ್ನು ಮೊದಲು ಗುರುತಿಸುವವರು 'ಡಾಕ್ಟರ್'ಗಳಲ್ಲ. ಆ ಸಮಾಜದಲ್ಲಿರುವ ಜನಗಳೇ ಆಗಿರುತ್ತಾರೆ. ಈ ಸಮಾಜದಲ್ಲೇ ರೋಗಸಂಬಂಧಿ ಮಾನದಂಡಗಳಿರುತ್ತವೆ. ಆರೋಗ್ಯಕ್ಕೆ ಸಂಬಂಧಿಸಿದ ಲಕ್ಷಣಗಳಿರುತ್ತವೆ. ಅದಕ್ಕೆ ಭಿನ್ನವಾದ 'ಲಕ್ಷಣ' ಕಂಡುಬಂದರೆ ಅದನ್ನು ರೋಗಗಳೆಂದು ಪರಿಗಣಿಸುತ್ತಾರೆ. ರೋಗವನ್ನು ಇವರು ಸಾಮಾನ್ಯವಾಗಿ ದೇಹಕ್ಕೆ ಸಂಬಂಧಿಸಿದ್ದು ಮನಸ್ಸಿಗೆ ಸಂಬಂಧಿಸಿದ್ದು ಎಂದು ವಿಂಗಡಿಸುವುದಿಲ್ಲ. ಕಾಯಿಲೆಗಳು ದೇಹದ ಒಳಗಿನಿಂದ ಬರುತ್ತವೆಂದು ಅವರು ನಂಬುವುದಿಲ್ಲ. ಅದು ಯಾವಾಗಲೂ ದೇಹದ ಹೊರಗಿನಿಂದ ಬಂದು ದೇಹದೊಳಕ್ಕೆ ಸೇರಿಕೊಂಡು ತೊಂದರೆ ಕೊಡುತ್ತದೆ.

**ಕಾಯಿಲೆಯ ಕಾರಣಗಳು–ವಿಧಗಳು**

1. ಜಲ್ಮ ಕಳೆದು ಹೋಗುವುದು: ಈ ರೀತಿಯ ನಂಬಿಕೆಗಳಲ್ಲಿ ತಮ್ಮ ಸತ್ತ ತಂದೆ, ತಾಯಿ, ಅಣ್ಣ, ತಮ್ಮ, ಸಂಬಂಧಿಗಳ ಆತ್ಮ ಬಂದು ದೇಹದೊಳಕ್ಕೆ ಸೇರಿಕೊಳ್ಳುತ್ತದೆ ಎಂದು ನಂಬುತ್ತಾರೆ. ಈ ಗಾಳಿಯ ಲೋಕ ಅವರು ಬದುಕಿರುವ ಲೋಕದಂತೆಯೇ ಇರುತ್ತದೆ. ಅದು ಜನರ ತಲೆಯ ಮೇಲೆ ಇರುತ್ತದೆ. ನಮ್ಮ ಕಣ್ಣಿಗೆ ಕಾಣುವುದಿಲ್ಲ. ಅವರ

ಪ್ರಪಂಚದಲ್ಲಿ ಅವರಿಗೆ ಯಾವುದಾದರೂ ವಸ್ತುವಿನ ಕೊರತೆಯಾದರೆ ಅವರು ರಾತ್ರಿ ಹೊತ್ತು ಅಂಗಾಲನ್ನು ಯಾವುದಾದರೂ ಬಟ್ಟೆಯಿಂದ ಮುಚ್ಚದೆ ಮಲಗಿ ನಿದ್ರಿಸುವಾಗ ಅಂಗಾಲಿನ ಮೂಲಕ ಆ ವ್ಯಕ್ತಿಯ ದೇಹದಲ್ಲಿ ಪ್ರವೇಶಿಸುತ್ತದೆ. ಅದು ಕಾಡಲು ಶುರು ಮಾಡುತ್ತದೆ. ಆಗ ಬುಂಡೆ ಕರೆಸಿ ಕಾರಣ ತಿಳಿದು ಅದು ಏನನ್ನು ಕೇಳುತ್ತದೋ ಅದನ್ನು ಕೊಟ್ಟು, ಅದರ ಆಸೆಯನ್ನು ತೀರಿಸಬೇಕಾಗುತ್ತದೆ. ಕೆಲವು ಸಮಯ ಕೇವಲ ಬೀಡಿಗೋಸ್ಕರ ಬಂದಿರುವುದೂ ಉಂಟು ಹೀಗೆ ಅದರ ಆಸೆಯನ್ನು ತೀರಿಸಿದರೆ ದೇಹವನ್ನು ಬಿಟ್ಟು ಹೋಗುತ್ತದೆ.

2. ಸಾಮಾಜಿಕ ನಿಯಮಗಳನ್ನು ಮುರಿಯುವುದರಿಂದ ಕಳ್ಳತನ, ಮೈಲಿಗೆ, ಜಗಳ, ಇನ್ನೊಬ್ಬನ ವಸ್ತುಗಳಿಗೆ ಹಾನಿ, ಇವೆಲ್ಲವೂ ಈ ರೀತಿಯ ಕಾಯಿಲೆಗಳಿಗೆ ಕಾರಣಗಳಾಗಿರುತ್ತವೆ. ಆಗಲೂ ಬುಂಡೆಯನ್ನು ಕರೆದು ಅದರ ಸಲಹೆಯನ್ನು ಕೇಳುತ್ತಾರೆ. ಈ ಸಂದರ್ಭದಲ್ಲಿ ತಪ್ಪನ್ನು ಒಪ್ಪಿಕೊಂಡು ಅದಕ್ಕೆ ಪರಿಹಾರ ಕೊಟ್ಟರೆ ಕಾಯಿಲೆ ವಾಸಿಯಾಗುತ್ತದೆ. ವ್ಯಕ್ತಿಯನ್ನು ಕಾಡುವ ಅಳುಕು, ಮನೋವಿಕಲ್ಪ ಇವುಗಳಿಂದ ದೂರವಾಗಿರಬಹುದೆಂದು ನಂಬಿಕೆ ಇವರದು. ಕ್ರಿಯಾ ವಿಧಿಯ ಮೂಲಕ ಆದಿ ಅಯ್ಯನಿಗೆ ತಪ್ಪು ಒಪ್ಪಿಸಿಕೊಳ್ಳುವುದು. ಆ ಧಾರ್ಮಿಕ ಕ್ರಿಯೆ ಇದನ್ನು ತಿಳಿಯಾಗಿಸಿ ಕಾಯಿಲೆಯನ್ನು ಹೋಗಿಸುತ್ತದೆ.

ಈ ಎರಡು ವಿಧದ ಕಾಯಿಲೆಗಳನ್ನು ಸಾಮಾನ್ಯ ಹಾಡಿಮಟ್ಟದ ಗುಡ್ಡ ಗುಣಪಡಿಸಬಲ್ಲ.

3. **ಚಿಲ್ಲು ಒಡೆಯುವುದು:** ಯಾವುದೋ ಕಾರಣಕ್ಕಾಗಿ ಒಬ್ಬರಿಗೊಬ್ಬರು ಮಾತು ಬೆಳೆದು ವೈಮನಸ್ಸು ಬಂದಿರುತ್ತದೆ. ಆಗ ಒಂದು ಜಾತ್ರೆಯಲ್ಲೋ, ಒಂದು ಹಬ್ಬದಲ್ಲೋ ಎಲ್ಲಾ ಸೇರಿದಾಗ ಆಗದೆ ಇದ್ದವನು ಚಿಲ್ಲು ಹೊಡೆಯುವವನನ್ನು ಬೇರೆ ಕಡೆಯಿಂದ ಕರೆದುಕೊಂಡು ಬಂದು ಮೈ ಒಳಗೆ ಸೇರುವಹಾಗೆ ಹೊಡೆಸುತ್ತಾರೆ. ದೇಹದೊಳಕ್ಕೆ ಅವರೆಕಾಳು, ಕಡಲೆಕಾಳು, ಸೂಜಿ, ಗಾಜಿನಚೂರು ಇವುಗಳೂ ಸೇರಿಕೊಂಡು ಬಿಡುತ್ತವೆ. ಅವು ಕಣ್ಣಿಗೆ ಕಾಣ್ಸಲ್ಲ. ಆದರೆ ಅವನ್ನು ಕೈಯಿಂದ ಮುಟ್ಟಿ ನೋಡಬಹುದು. ಅದು ಮೈ ತುಂಬಾ ಹರಿದಾಡುತ್ತಿರುತ್ತದೆ. ಗಬ್ಕಾ ಗಬ್ಕಾ ಚುಚ್ತಾ ಇರುತ್ತದೆ. ಯಾವ ಔಷಧಿ ಹಾಕಿದರೂ ಹಿಡಿಯುವುದಿಲ್ಲ. ಚಿಲ್ಲನ ಔಷಧಿ ಕಂಡವನನ್ನು ಕರೆದು ತಂದು ಅದನ್ನು ಹಾಕಿ ತಲೆಗೆ ಕಟ್ಟಿ ಬುಂಡೆ ಕರೆದರೆ ತಲೆ ಮೂಲಕ ಹಾರಿ ಹೋಗುತ್ತದೆ. ಚಿಲ್ಲನ್ನು ಚರ್ಮದಿಂದ ತೆಗೆಯುವಾಗ ನೋವಾಗುವುದಿಲ್ಲ. 2–3 ದಿನದ ನಂತರ ನೋವು ಪ್ರಾರಂಭವಾಗುತ್ತದೆ. ಅದಕ್ಕೆ ಔಷಧಿ ಮಾಡುತ್ತಾರೆ.

ಈ ಮೇಲಿನ ಮೂರು ರೀತಿಯ ಕಾಯಿಲೆಗಳು ಜೀವನಕ್ಕೆ ಹಾನಿಕಾರಕವಲ್ಲ. ಚಿಲ್ಲನ್ನು ಒಡೆಯದೆ ಬಿಟ್ಟರೆ ಯಾವಾಗಲಾದರೂ ಅದು ಉಲ್ಬಣಗೊಳ್ಳಬಹುದು.

**4. ಮಾಟ್ಲ:** ವ್ಯಕ್ತಿಯ ಜೀವನಕ್ಕೆ ಮಾರಕವಾದ ಕಾಯಿಲೆ, ಕಾಯಿಲೆ ಬರುವ ರೀತಿ ಮತ್ತು ಅದನ್ನು ಹೊಡೆಯುವ ವಿಧಾನವನ್ನು ಹೆಗ್ಗಡದೇವನಕೋಟೆಯ ಮೊತ್ತ ಹಾಡಿಯ ದೊಡ್ಡ ತಮ್ಮಯ್ಯ ಎಂಬ ಮಾಟ್ಲ ಒಡೆಯುವವನನ್ನು ಭೇಟಿ ಮಾಡಿ ಅವನಿಂದ ಮಾಟ್ಲ ಒಡೆಯುವ ವಿಧಾನವನ್ನು ಕೇಳಿದರು. ಅದನ್ನು ಟೇಪ್ ರೆಕಾರ್ಡ್ ಮಾಡಿ ಅವನ ಮಾತುಗಳಿಂದ ಈ ಭಯಂಕರ ವಿಧಾನವನ್ನು ಅರಿಯಬಹುದು.

"ಯಾರಿಗಾದರೂ ಮಾಟ್ಲ ಮಾಡಿದ್ದರೆ ಬುಂಡೆ ಕರೆದು ಪತ್ತೆ ಹಚ್ಚುತ್ತೇವೆ. ನಮ್ಮ ಆದಿ ಅಯ್ಯ ಎಲ್ಲವನ್ನು ಹೇಳಿಕೊಡ್ತದೆ. ಅದರಂತೆ ಔಷಧಿ ಮಾಡ್ತೀವಿ ಒಳ್ಳೆದಾಗಗಂಟ, ಯಾವನಾದರೂ ವ್ಯಕ್ತಿಗೆ ಮಾಟ್ಲ ಮಾಡಿದ್ದರೆ ಅವನು ಸುಮ್ಮನಿರುವುದಿಲ್ಲ. ಮನೆಸುತ್ತಾ ಓಡಾಡುತ್ತಾನೆ. ತೊಲೆ ಹಿಡಿದೋ, ಮರ ಹಿಡಿದೋ ನೆಗೆದಾಡುತ್ತಾನೆ. ಊಟ ಕೊಟ್ಟರೆ ಮಾಡೋದಿಲ್ಲ. ಮೈ,ಕೈ ಎಲ್ಲಾ ಉರಿ ಎನ್ನುತ್ತಾನೆ. ಅಂತೋರುನ್ನ ತೋರ್ಸಕ್ಕೆ ನನ್ನಂತೋರ್ನ ಕರ್ಕೊಂಡೋಯ್ತಾರೆ, ಹೆಸರುವಾಸಿಯಾದವನು ಮತ್ತು ಮಾಟ್ಲ ಒಡೆಯುವವನು. ಈತ ಬುಂಡೆ ಕರೀತಾನೆ, ಬುಂಡೇನ ಕೇಳ್ತಾನೆ, ಅದು ಈತನಿಗೆ ಹೇಳ್ತದಂತೆ. ಮಾಟ್ಲ ಹೆಂಗೆ ಮಾಡ್ತಾರಪ್ಪ ಅಂದ್ರೆ ನಾಗರಹಾವು ಹಲ್ಲು, ದುಂಬ, ಮರದಚಕ್ಕ ತರ್ತಾರೆ, ಗೋಸಂಬಿ, ತಗೋ ಬಂದು ತಲೆಕೆಳಗೆ ನೇತಾಕ್ತಾರೆ. ಅದಕ್ಕೆ ಬೆಂಕಿ ಹೊಗೆ ಕೊಡ್ತಾರಂತೆ. ಅದರ ಕೆಳಗೆ ಪಾತ್ರೆ ಇಡ್ತಾರೆ. ಆ ಪಾತ್ರೆಗೆ ಅದರ ಚರಬಿ ಬೀಳುತ್ತದೆ. ಅದಕ್ಕೆ ಮಂಡಲದ ಹಾವಿನ ಬುರುಡೆ ಎಲ್ಲವನ್ನು ಸೇರಿಸ್ತಾರೆ. ಅದಕ್ಕೆ ಪರಂಗಿಕಾಯಿ, ಮೊಟ್ಟೆ, ಎಲ್ಲಾನು ಒಳಗೆ ಬಿದುರುಕೊಳವೆ ಒಳಗೆ ತುಂಬೆ ಮಣೆ(ಮಣ್ಣಿನ ಮಡಕೆ) ಒಳಗೆ ತುಂಬುತ್ತಾರೆ. ಅದನ್ನು ಮಾಟ್ಲ ಮಾಡಬೇಕಾಗಿರುವವನ ಮನೆ ಮುಂದೆ ರಾತ್ರಿ ಬಂದು ಒಂದು ಗುಂಡಿ ತೆಗೆದು ಅಲ್ಲಿ ಹೂಳ್ತಾರೆ. ಮುಸುಕು ತೆಗೆದರೆ ಅದು ಮೂಗು ಹಾಕಕ್ಕಾಗದಂತಹ ಗಬ್ಬು ಹೊಡಿತದೆ. ಆಗ ಅವನ ಸ್ಥಿತಿ ನೋಡಿ ಔಷಧಿ ಕೊಡ್ತೀವಿ. ಮತ್ತೆ ಬುಂಡೆ ಕರೀತಾರಂತೆ. ನಮ್ಮ ಔಷಧಿಯನ್ನು ಮೈಗೆ ಹಚ್ಚುತ್ತಾರೆ ಮತ್ತು ಕುಡಿಯಲಿಕ್ಕೆ ಕೊಡುತ್ತಾರಂತೆ. ಆಗಲ್ಲ ಅಂತ ಕಂಡುಬಂದರೆ ಮತ್ತೆ ಬುಂಡೆ ಕರೀತಾರಂತೆ.

ಕಳೆದ ವರ್ಷ ಈತನ ತಂಗಿ ಮೈದುನನಿಗೆ ಮಾಡಿದ್ರು ಅದನ್ನು ತೆಗೆದರಂತೆ. ತೆಗೆಯದೆ ಹೋಗಿದ್ರೆ ಒಂದು ವಾರದೊಳಗೆ ಸತ್ತುಹೋಗ ಚಾನ್ಸ್ ಇತ್ತಂತೆ. ಬುಂಡೆ ಕರೆದನಂತೆ. ಅದು ಬೇರೆ ಹಾಡಿಯ ಒಂದು ಪಾರ್ಟಿ ಮೇಲೆ ಹೇಳ್ದಂಗೆ ಮಾಡಿ ಇವನ ಹೆಸರು ಹೇಳಿ ಮನೆ ಒಳಗೆ ಮಾಟ್ಲದ ಸಾಮಾನು ಮಡಗವರೆ ಅಂತ ಆಯ್ತು. ನಾದಿನಿ ಮಾಟ್ಲ ಬಡಿಲೇಬೇಕು ಅಂದ್ಲಂತೆ. ಅದಕ್ಕಾಗಿ ಅವನಿಗೆ ಮೊದ್ಲು ಔಸ್ಧಸವರಿ, ಹೊಟ್ಟೆಗೆ ಔಸ್ಧ ಕೊಟ್ಟರಂತೆ, ಆಮೇಲೆ 7 ತೆಂಗಿನಕಾಯಿ, 7 ಮೊಳೆ, 7 ಇಂಟಿಕಾಯಿ, 7 ಬೇವಿನಸೊಪ್ಪು ಒಂದು ತಗಡು ಇದನ್ನೆಲ್ಲ ತಂದು ಮಂತ್ರಿಸಬೇಕು ಯಂತ್ರದ ಮೇಲೆ ಚಿತ್ರವನ್ನು ನೆಲದ ಮೇಲೆ ಬರೆದು ರಂಗ

ಕಳಿಯುತ್ತಾರೆ. ರಂಗೋಲೆಪುಡಿ, ಇಟ್ಟಿಗೆಪುಡಿ, ನದಿಯ ಆ ಕರೆ ಮಣ್ಣು, ಈ ಕೆರೆ ಮಣ್ಣು ತುಂಬಬೇಕು. ಕೆಂಪನ್ನ, ಬಿಳಿ ಅನ್ನ, ಮಸಿ ಅನ್ನ, ಇವೆಲ್ಲವನ್ನು ಚಿತ್ರಕ್ಕೆ ಪೂಜೆ ಮಾಡಬೇಕು ಎಡೆ ಇಕ್ಕಬೇಕು.

**ಆಗ ಹೇಳೋ ಮಂತ್ರ**

ಯಲಗಟ್ಬೊಡೆದು
ತೊಲೆಗಟ್ಬೊಡೆದು
ಅಂತರಗಟ್ಬೊಡೆದು
ಆಕಾಶಕಟ್ಬೊಡೆದು
ಭೂಲೋಕದ ಕಟ್ಬೊಡೆದು
ಮಾಯದ ಕಟ್ಬೊಡೆದು
ಬಸರೀರ ಕಟ್ಬೊಡೆದು
ಬಾಣ್ತೀರ ಕಟ್ಬೊಡೆದು
ನಮ್ಮವೈರಿ ಕಟ್ಬೊಡೆದು
ಅವರು ತುಂಬಿದ ಅರಿಕಟ್ಬೊಡೆದು

ಹೀಗೆ ಸುಮಾರು ಅರ್ಧಗಂಟೆ ಮಂತ್ರಗಳನ್ನು ಹೇಳಿಸಿ ಕಾಯಿಲೆಯ ಮನುಷ್ಯನ ಹತ್ತಿರವೂ ಕೆಲವು ಸಮಯ ಹೇಳಿಸಿ ಮಾಟ್ಲವನ್ನು ಹೊಡೆಯುತ್ತಾರೆ. ದೊಡ್ಡ ತಿಮ್ಮಯ್ಯನು ಮಾಟ್ಲವನ್ನು ಔಷಧಿ ಮೂಲಕ, ಮಂತ್ರದ ಮೂಲಕ ಸುಮಾರು 5 ಜನಕ್ಕೆ ವಾಸಿ ಮಾಡಿದ್ದಾರಂತೆ. ಈ ಮಾಟ್ಲ ಒಡೆಯಬೇಕಾದರೆ ಬಹಳ ಶಕ್ತಿ ಬೇಕಂತೆ. ಇಲ್ಲದಿದ್ದರೆ ಒಡೆಯುವಾಗಲೇ ಎದಿರೇಟು ಕೊಟ್ಟು ಮಾಟ್ಲವೇ ಒಡೆಯುವವರನ್ನು ಸಾಯಿಸುತ್ತದಂತೆ.

**5. ಜೇಟಿ:** ಯಾರಿಗಾದರೂ ಒಬ್ಬರಿಗೊಬ್ಬರಿಗೆ ಆಗಲ್ಲ. ಆಗ ಅವನು ಮಲಗಿದ್ದಾಗ ಅವನ ತಲೆಕೂದಲೋ ಅಥವಾ ಅವನ ಉಟ್ಟಬಟ್ಟೆಯ ದಾರವನ್ನೋ ತಗಾಂಡು ಹೋಗಿ ಅದನ್ನು ಒಂದು ಹೆಬ್ಬೆಟ್ಟು ಗಾತ್ರದ ಗೊಂಬೆಗಳ ಮಾಡಿ ಅದಕ್ಕೆ ಒಳೆಹಾಕಿ, ಒಂದು ಮದ್ದು ತುಂಬಿ, ಒಂದು ಚೀಲದಲ್ಲೋ ಯಾತ್ರಲ್ಲೋ ಮರೆಮಾಡಿ ತಂದು ಪೂಜೆ ಮಾಡಿ ಮದ್ದ ತಿನ್ನಿಸಿಬಿಡುತ್ತಾರೆ. ಆಗ ಅವನಿಗೆ ಏನು ಬೇಕಾದರೂ ಮಾಡಬಹುದು. ಅವನು ಎಲ್ಲವನ್ನು ಮರೆತು ಸುಮ್ಮನೆ ಕಾಡೆಲ್ಲ ಬರೀ ಸುತ್ತುವ ಹಾಗೆ ಮಾಡಬಹುದು. ನಿದ್ದೇನೆ ಬರದ ಹಾಗೆ ಮಾಡಬಹುದಂತೆ. ಬೇಕಾದ ಕೆಲಸ ಹೇಳಿ ಅವನ ಹತ್ತಿರ ಮಾಡಿಸಬಹುದಂತೆ. ಜೇಟಿ ಮಾಡಲು ಹಾಕುವ ಪದಾರ್ಥಗಳೆಂದರೆ ಗೋಸುಂಬೆ, ಹೆಂಟೆಗೊದ್ದೆ, ಆಮೆ, ಗಪ್ಪೆ ಇದರಲ್ಲಿ ಮಾಡಿದ ಮದ್ದನ್ನು

ಆಗದವನಿಗೆ ಕೊಡುತ್ತಾರೆ. ಇದನ್ನು ಒಡೆಯುವವರು ಯಾರೂ ಇಲ್ಲ. ಈ ಮದ್ದು ಕೊಟ್ಟರೆ 2-3 ದಿನದಲ್ಲೇ ಸತ್ತು ಹೋಗುತ್ತಾರಂತೆ.

**ಗಾಳಿ ಕರೆಯುವುದು:** ಈ ಮೇಲಿನ ಶಕ್ತಿಯನ್ನು ಪಡೆಯುವ ಶಕ್ತಿ ಎಂದರೆ ಬುಂಡೆ. ಈ ಬುಂಡೆಯನ್ನು ಸೋರೆ ಬುರುಡೆಯಿಂದ ಮಾಡಿಕೊಳ್ಳುತ್ತಾನೆ. ಬಲಿತ ಸೋರೆಬುರುಡೆಯ ನೆತ್ತಿಯನ್ನು ಸಣ್ಣ ವೃತ್ತಾಕಾರವಾಗಿ ಕೊರೆದು ಅದರೊಳಗಿನ ತಿರುಳನ್ನು ಒಣಗಿಸಿ ಹೊರತೆಗೆದು ಖಾಲಿ ಮಾಡುತ್ತಾನೆ. ಹೀಗೆ ಖಾಲಿ ಮಾಡಿದ ಬುಂಡೆಗೆ ಅಮಾವಾಸ್ಯೆ ಅಥವಾ ಪೂರ್ಣಮಿಯಂದು ಪೂಜೆ ಮಾಡಿ ಗುಲಗಂಜಿಗಳನ್ನು ಒಳಕ್ಕೆ ತುಂಬುತ್ತಾನೆ. ತುಂಬಿ ಆದಿ ಅಯ್ಯನನ್ನು ಕರೆದು ಅದರೊಳಕ್ಕೆ ಬಂಧಿಸಿಟ್ಟು ಅದರ ರಂಧ್ರವನ್ನು ಹಲಸಿನ ಅಥವಾ ಆಲದ ಮರದ ಅಂಟಿನಿಂದ ಮುಚ್ಚಿ ಅದರ ಸುತ್ತ ಗುಳಗಂಜಿಯನ್ನು ವೃತ್ತಾಕಾರವಾಗಿ ಅಂಟಿಸುತ್ತಾನೆ. ಆ ಬುಂಡೆ ವಡಕಲಾಗಬಾರದು, ಬಿರುಕು ಬಿಟ್ಟಿರಬಾರದು ಮತ್ತು ಕೆಟ್ಟ ಶಬ್ದ ಮಾಡಬಾರದು ಹಾಗೆ ನೋಡಿಕೊಳ್ಳುತ್ತಾನೆ. ಇದನ್ನು ಅತ್ಯಂತ ಗೌರವ ಆದರ್ಶಗಳಿಂದ ನೋಡಿಕೊಳ್ಳುತ್ತಾನೆ.

**ಕಾಡುಗೊಲ್ಲರ ಸಂಪ್ರದಾಯ**

ಕಾಡುಗೊಲ್ಲರ ಜೀವನದಲ್ಲಿ ಮಾಟಕ್ಕೆ ಹೆಚ್ಚಿನ ಮಹತ್ವವಿಲ್ಲ, ಆದರೆ ಅವರಿಗೆ ಮಾಟದ ಶಕ್ತಿಯಲ್ಲಿ ನಂಬಿಕೆಯುಂಟು. ತಾವು ಸ್ವತಃ ಮಾಟ ಮಾಡದಿದ್ದರೂ ತಮಗೆ ಅಗತ್ಯವಾದ ಒಳ್ಳೆಯ ಮತ್ತು ಕೆಟ್ಟ ಉದ್ದೇಶಗಳಿಗಾಗಿ ಪರಿಣತ ಮಾಟಗಾರರಿಂದ ಮಾಟ ಮಾಡಿಸುತ್ತಾರೆ. ಇಂದಿಗೂ ಈ ಪದ್ಧತಿ ಪ್ರಚಲಿತವಾಗಿರುವುದು ಮಾತ್ರವಲ್ಲದೆ, ಅವರ ಪ್ರಮುಖ ಪುರಾಣವಾದ ಜುಂಜಪ್ಪನ ಏಳಿಗೆಯನ್ನು ಸಹಿಸದೆ ಅವನ ದನಗಳನ್ನು ಸಾಯಿಸಲು ಹುಲಿ ಕುಂಟೆ ಕೆರೆಯ ನೀರಿಗೆ ಮಾಟ ಮಾಡಿಸಬೇಕೆಂದು ಆಲೋಚಿಸಿ, ಮಾಟದಲ್ಲಿ ಪರಿಣತನಾಗಿದ್ದ ಮಾದಿಗರ ಪುಟ್ಟನ ಬಳಿಗೆ ಹೋಗಿ ತಮ್ಮ ಉದ್ದೇಶವನ್ನು ತಿಳಿಸಿದರು. ಅವನು ಅದಕ್ಕೆ ಒಪ್ಪಿಕೊಂಡ ಮೇಲೆ ಅವನಿಗೆ ಸೂಕ್ತವಾದ ಸಂಭಾವನೆಯನ್ನು, ಮಾಟ ಮಾಡಲು ಬೇಕಾಗುವ ಸಾಮಗ್ರಿಗಳನ್ನು ಕೊಟ್ಟು ಹೊರಟುಹೋದರು. ಮಂಗಳವಾರದ ದಿನ ಮಾದಿಗರ ಪುಟ್ಟ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡು, ದೊಡ್ಡ ಹುಲಿಕುಂಟೆ ಕೆರೆಯ ಮೂಡಲ ಕೋಡಿಗೆ ಹೋಗಿ ಅಲ್ಲಿ ಐದು ಎತ್ತುಗಳು ನಿಲ್ಲುವಷ್ಟು ವಿಶಾಲವಾದ ಜಾಗವನ್ನು ಕೆತ್ತಿ ಅದನ್ನು ದನದ ಸಗಣಿಯಿಂದ ಸಾರಿಸಿದ. ಅದರ ಮೇಲೆ ರಂಗೋಲಿಯಿಟ್ಟ. ರಾಗಿ ಹಿಟ್ಟಿನ ಪುಡಿಯನ್ನೂ, ಇದ್ದಿಲ ಪುಡಿಯನ್ನೂ ಒಂಬತ್ತು ಕಟ್ಟೆಯ ಮಣ್ಣಿನೊಡನೆ ಸೇರಿಸಿ, ಆ ಮಣ್ಣಿಗೆ ನೀರು ಹುಯ್ದು ಕಲಸಿ, ಮಿದ್ದು, ಅದರಿಂದ ಗೊಂಬೆಯೊಂದನ್ನು ತಯಾರಿಸಿದ. ಹೊಸ ಬಟ್ಟೆಯನ್ನು ಓಕಳಿಯ ನೀರಿನಲ್ಲಿ ಅದ್ದಿ ಅದನ್ನು ಆ ಗೊಂಬೆಗೆ ಹೊದಿಸಿದ. ಬಳೆ, ಬಿಚ್ಚೋಲೆಯನ್ನು ಅದರ ಕೈಗಳಿಗೆ ತೊಡಿಸಿದ. ಹಣೆಗೆ ಕುಂಕುಮ ಇಟ್ಟು ನಾಲ್ಕು ಮೂಲೆಗಳಿಗೂ ಒಂದೊಂದು ಹಣವನ್ನು ಇಟ್ಟು, ಬೊಂಬೆಯ

ಎದುರಿಗೆ ಒಂದು ಹಣವನ್ನು ಇಟ್ಟು, ನಾಲ್ಕು ಮೂಲೆಗಳಿಗೂ ಒಂದೊಂದು ದೀಪವನ್ನು ಹಚ್ಚಿ, ಬೊಂಬೆಗೆ ಜೀವ ಬಂದಿತೆಂದು ಭ್ರಮಿಸಿದ. ಆ ಬೊಂಬೆಗೆ ನೂರೊಂದು ನಿಂಬೆಕಾಯಿಗಳನ್ನು ಮಂತ್ರಿಸಿದ; ಮೂರು ಖಂಡುಗ ಅಕ್ಕಿಯ ಅನ್ನವನ್ನು ರಾಶಿ ಹಾಕಿದ; ನೂರೊಂದು ತೆಂಗಿನಕಾಯಿಗಳನ್ನು ಒಡೆದ; ಇದ್ದಿಲ ಪುಡಿಯಿಂದ ಒಂದು ಬಗೆಯ ಅನ್ನವನ್ನೂ ಎಣ್ಣೆಯಿಂದ ಒಂದು ಬಗೆ ಅನ್ನವನ್ನೂ ಕಲಸಿ ಬೊಂಬೆಗೆ ಎಡೆ ಹಾಕಿದ. ನೂರೊಂದು ಎರಿಬಿಕ್ಕೆ ಕಾಯಿಗಳನ್ನು ಮಂತ್ರಿಸಿ ನೀವಳಿಸಿ ಎಸೆದ. ಕರಿಯ ಹೋತವನ್ನು ಬೊಂಬೆಗೆ ಬಲಿ ಕೊಟ್ಟ. ಮಣ್ಣಿನ ಪ್ರತಿಮೆ ಕಿಲಕಿಲನೆ ನಕ್ಕಿತೆಂದು ಭ್ರಮಿಸಿ. "ಜುಂಜಪ್ಪನ ದನಗಳನ್ನು ಸಾಯಿಸ್ತೀಯಾ?" ಎಂದು ಕೇಳಿದ. "ಸಾಯಿಸ್ತೀನಿ" ಎಂದು ಆ ಬೊಂಬೆ ಹೇಳಿತೆಂದು ಭ್ರಮಿಸಿದ. ಅನಂತರ ಅವನೊಡನೆ ಅಲ್ಲಿಗೆ ಬಂದಿದ್ದ ಜುಂಜಪ್ಪನ ಸೋದರಮಾವಂದಿರು ತಮ್ಮ ಬಳಿಯಲ್ಲಿದ್ದ ಒಂದು ಬಡಕಲು ಹೋರಿ ಕರುವನ್ನು ಅವನಿಗೆ ಕೊಟ್ಟರು. ಅವನು ಅದಕ್ಕೆ ಮಂತ್ರ ಹಾಕಿ ಅದನ್ನು ಆ ಮೂಡಲಕೋಡಿಯಲ್ಲಿಯೇ ಗುಂಡಿ ತೆಗೆದು ತಲೆ ಮಾತ್ರ ಹೊರಗಿರುವಂತೆ ಮಾಡಿ ಹೂಳಿದ. ಮೊದಲೇ ತಯಾರಿಸಿದ್ದ ಐದು ಬಗೆಯ ಅನ್ನಕ್ಕೂ ಹೋತನ ರಕ್ತವನ್ನು ಬೆರೆಸಿ ಮೂಡಲ ಕೋಡಿಯಲ್ಲೆಲ್ಲಾ 'ಸರಗು ಹಾಕಿದ' ಜುಂಜಪ್ಪನ ಸೋದರಮಾವಂದಿರು ಮತ್ತು ಮಾದಿಗರ ಪುಟ್ಟ ಅಲ್ಲಿಂದ ಹೊರಟು ಹೋದರು. ಮಾರಣ್ಣ ಮತ್ತು ಮೈಲಣ್ಣ ಜುಂಜಪ್ಪನ ದನಗಳನ್ನು ಮೇಯಿಸಿಕೊಂಡು ನೀರು ಕುಡಿಸಲು ದೊಡ್ಡ ಹುಲಿಕುಂಟೆ ಕೆರೆಯ ಮೂಡಲ ಕೋಡಿಗೆ ಬಂದರು. ಅಲ್ಲಿ ಬಿದ್ದಿದ್ದ ತೆಂಗಿನಕಾಯಿ ಚೂರುಗಳನ್ನು ಆರಿಸಿಕೊಂಡು, ಯಾರೋ ಪೂಜೆ ಮಾಡಿ ಹೋಗಿರಬೇಕೆಂದು ಭಾವಿಸಿದ. ಆ ಮುಗ್ಧರು ಕೆರೆಯ ದಂಡೆಯಲ್ಲಿದ್ದ ತುಗ್ಗಲಿ ಮರದ ಕೆಳಗೆ ಕುಳಿತರು. ದನಗಳು ಮೂಡಲ ಕೋಡಿಗೆ ನೀರು ಕುಡಿಯಲು ಹೋಗುತ್ತಿದ್ದವು. ಆ ಸಂದರ್ಭಕ್ಕೆ ಸರಿಯಾಗಿ ಅಲ್ಲಿಗೆ ಬಂದ ಜುಂಜಪ್ಪನಿಗೆ ತನ್ನ ಸೋದರ ಮಾವಂದಿರು ತನ್ನ ದನಗಳಿಗೆ ಮಾಟ ಮಾಡಿಸಿರುವರೆಂದು ತಿಳಿದು, ತನ್ನ ತಮ್ಮಂದಿರು ತಿನ್ನಲೆಂದು ಇಟ್ಟುಕೊಂಡಿದ್ದ ತೆಂಗಿನಕಾಯಿ ಹೋಳುಗಳನ್ನು ಕಿತ್ತೆಸೆದು, ದನಗಳನ್ನು ಅವು ನೀರು ಕುಡಿಯದಂತೆ ಹಿಂತಿರುಗಿಸಿದ. ಅವನು ಗೌರಸಂದ್ರದ ಮಾರಕ್ಕನನ್ನು ಕರೆಸಿದ. ಅವಳು ವಜ್ರದ ಕಡೆಗೋಲನ್ನು ತಂದು, ಮುತ್ತಿನ ಹಿಡಿ ಹಗ್ಗದಿಂದ ಕೆರೆಯ ನೀರನ್ನು ಒಂದು ಸಲ ಕಡೆದಳು. ಮಾದಿಗರ ಪುಟ್ಟ ಮಾಟ ಮಾಡಿದ್ದರಿಂದ ರಕ್ತದಿಂದ ಹೆಪ್ಪುಗಟ್ಟಿದ್ದ ನೀರು ತಿಳಿಯಾಯಿತು. ಕೆರೆಯಲ್ಲಿ ಹೂಳಿದ್ದ ಬಡಕಲು ಹೋರಿಕರುವನ್ನು ಹೊರಕ್ಕೆ ತೆಗೆದು ಅದನ್ನು ಬದುಕಿಸಿದ. ಮಾದಿಗರ ಪುಟ್ಟ ಕೆರೆಯ ನೀರಿಗೆ ಮಾಡಿದ ಮಾಟದ ಪ್ರಭಾವ ಸಂಪೂರ್ಣವಾಗಿ ಹೊರಟುಹೋಯಿತು. ಜುಂಜಪ್ಪನ ದನಗಳು ಅನಂತರ ಕೆರೆಯ ನೀರನ್ನು ಕುಡಿದವು.

ಜುಂಜಪ್ಪನ ಪುರಾಣದಲ್ಲಿ ಮಳೆ ಬರದಂತೆ ಮಾಟ ಮಾಡಿಸಿದ ಪ್ರಸಂಗದ ಉಲ್ಲೇಖವಿದೆ. ಜುಂಜಪ್ಪನ ಮಾವಂದಿರು ಮರಡಿ ರಂಗಣ್ಣನ ಬಳಿಗೆ ಹೋಗಿ, ಅವನಿಗೆ ತಮ್ಮ ಉದ್ದೇಶವನ್ನು

ತಿಳಿಸಿ ಮಳೆ ಬರದಂತೆ ಮಾಟ ಮಾಡಬೇಕೆಂದು ಹೇಳಿ, ಮಾಟ ಮಾಡಲು ಬೇಕಾದ ವಸ್ತುಗಳನ್ನು, ಅವನಿಗೆ ಸೂಕ್ತವಾದ ಸಂಭಾವನೆಯನ್ನು ಕೊಟ್ಟ್ರು. ಅದರಂತೆಯೇ ಮರಡಿ ರಂಗಣ್ಣ ಒಂಬತ್ತು ಹೂಜಿಗಳನ್ನು ಒಂದು ಕಡೆ ಇಟ್ಟ, ಒಂದೊಂದು ಹೂಜಿಗೂ ಒಂದೊಂದು ನಿಂಬೆಹಣ್ಣು, ಒಂದೊಂದು ಕಲ್ಲುಹರಳು, ಒಂದೊಂದು ಕುರಿ ಪಿಚಕಿ, ಒಂದೊಂದು ವಿಭೂತಿಯ ಗಟ್ಟಿ, ಅಕ್ಕಸಾಲಿಗರ ಕುಲುಮೆಯ ಒಂದೊಂದು ಹಿಡಿ ಬೂದಿ ಇಷ್ಟನ್ನೂ ಹಾಕಿ, ಒಂದೊಂದು ಅಕ್ಕಿಯ ಕಾಳನ್ನು ಮಂತ್ರಿಸಿ ಒಂದೊಂದು ಹೂಜಿಗೆ ಹಾಕಿದ. ಒಂಬತ್ತು ಗುಂಡಿಗಳನ್ನು ತೆಗೆದು ಒಂದೊಂದು ಗುಂಡಿಯಲ್ಲಿ ಒಂದೊಂದು ಹೂಜಿಯನ್ನು ಹೂಳಿದ. ಈ ಮಾಟದ ಮೂಲಕ ಏಳು ವರ್ಷಗಳ ಕಾಲ ಮಳೆ ಬರದೆ ಎಟ್ಟಿಯ ಬರ, ಡೊಕ್ಕೆಯ ಬರ, ಸೋಗೆ ಬರ, ಕೆಂಧೂಲಿನ ಬರ ಬರುವಂತೆ ಮಾಡಿದ. ಅನಂತರ ಈ ವಿಷಯವನ್ನು ತಿಳಿದ ಜುಂಜಪ್ಪ ಮರಡಿ ರಂಗಣ್ಣನಿಗೆ ಸರಿಯಾಗಿ ಬುದ್ಧಿ ಕಲಿಸಿದ.

ಕಾಡುಗೊಲ್ಲರ ಪುರಾಣಗಳಲ್ಲಿ ಮಾಟದ ಪ್ರಸ್ತಾಪ ಬರುವುದು ಈ ಎರಡು ಸಂದರ್ಭಗಳಲ್ಲಿ ಮಾತ್ರ. ಕಾಡುಗೊಲ್ಲರಲ್ಲಿ ಮಾಟಕ್ಕೆ ವಿಶೇಷವಾದ ಮಹತ್ವವಿಲ್ಲ ಎಂಬುಧನ್ನು ಇದು ಸೂಚಿಸುತ್ತದೆ. ಅವರು ಹಿಂದೆ ದನ ಕಾಯುವುದನ್ನೇ ಪ್ರಧಾನ ವೃತ್ತಿಯನ್ನಾಗಿ ಮಾಡಿಕೊಂಡಿದ್ದ ಕಾಲದಲ್ಲಿ ಒಬ್ಬನ ದನಗಳನ್ನು ಹಾಳು ಮಾಡಲು ಮಾಟ ಮಾಡಿಸುತ್ತಿದ್ದರೆಂದು ಊಹಿಸಬಹುದು. ಆದರೆ ಇಂದು ಅವರು ದನಗಳನ್ನು ಹೆಚ್ಚಾಗಿ ಸಾಕುವುದಿಲ್ಲ. ಕುರಿಗಳನ್ನೇ ಹೆಚ್ಚಾಗಿ ಸಾಕುವುದರಿಂದ ಕುರಿಗಳಿಗೆ ಮಾಟ ಮಾಡಿಸುವ ಪದ್ಧತಿ ತಕ್ಕಮಟ್ಟಿಗೆ ಪ್ರಚಲಿತವಾಗಿದೆ. ಕಾಡುಗೊಲ್ಲರಲ್ಲಿಯೂ ಕೆಲವರು ಮಾಟ ಮಾಡುವುದನ್ನು ಕಲಿತಿದ್ದಾರೆ. ಅವರಲ್ಲಿ ಬಳಕೆಯಲ್ಲಿರುವ ಮಾಟದ ಕೆಲವು ಬಗೆಗಳನ್ನು ಕೆಳಗೆ ನಿರೂಪಿಸಲಾಗಿದೆ. ಈ ಬಗೆಗಳೂ ಸಹ ಕಾಡುಗೊಲ್ಲರಿಗೆ ವಿಶಿಷ್ಟವಾದುವೇನೂ ಅಲ್ಲ. ಆದರೂ ಸಹ ಈ ಬಗೆಗಳು ಅವರಲ್ಲಿ ಪ್ರಚಲಿತವಾಗಿವೆ ಎಂಬ ಕಾರಣದಿಂದ ಅವುಗಳನ್ನು ಉಲ್ಲೇಖಿಸಲಾಗಿದೆ.

**ವಿನಾಶಾತ್ಮಕ ಮಾಟ:** ಮಾಟಗಾರ ಕುಂಬಾರರ ಮನೆಯಿಂದ ಒಂದು ಚಿಕ್ಕ ಮಡಕೆಯನ್ನು ತರುತ್ತಾನೆ. ಅಕ್ಕಸಾಲಿಗರ ಮನೆಯಿಂದ ತಂದ ಒಂಬತ್ತು ತಾಮ್ರದ ಮೊಳೆಗಳನ್ನು ಅದರೊಳಕ್ಕೆ ಹಾಕುತ್ತಾನೆ. ಅದೇ ಮಡಕೆಗೆ ಒಂಬತ್ತು ನಿಂಬೆಹಣ್ಣು, ಒಂಬತ್ತು ಕಲ್ಲುಹರಳು, ಒಂಬತ್ತು ಕುರಿಪಿಚಕಿ, ಒಂಬತ್ತು ವಿಭೂತಿಯ ಗಟ್ಟಿಗಳು ಇವೆಲ್ಲವನ್ನೂ ಹಾಕುತ್ತಾನೆ. ಒಂದು ತಾಮ್ರದ ತಗಡಿನಲ್ಲಿ ಮಾಟಗಾರ ತಾನು ಮಾಟ ಮಾಡಬೇಕೆಂದು ಉದ್ದೇಶಿಸಿರುವ ವ್ಯಕ್ತಿಯ ಹೆಸರನ್ನು ಬರೆದು, ಅದನ್ನು ತಾಯತದಂತೆ ಮಡಿಸಿ, ಅದಕ್ಕೆ ದಾರಸುತ್ತಿ ಕುಡಿಕೆಗೆ ಹಾಕುತ್ತಾನೆ. ಒಂಬತ್ತು ಕಟ್ಟೆಯ ಮಣ್ಣನ್ನು ತಂದು ಅದರಿಂದ ಒಂದು ಚೋಟುದ್ದದ ಬೊಂಬೆಯನ್ನು ಮಾಡಿ, ಅದನ್ನು ಮಡಕೆಯೊಳಕ್ಕೆ ಹಾಕುತ್ತಾನೆ. ಹೆಂಗಸರು ಹೊರಗಾಗಿದ್ದ ಸಂದರ್ಭದಲ್ಲಿ ಅವರು ಉಟ್ಟಿದ್ದ ಹೊಲೆ ಬಟ್ಟೆಯ ಚೂರೊಂದನ್ನು ತಂದು ಅದನ್ನು ಮಡಕೆಯೊಳಕ್ಕೆ ಹಾಕುತ್ತಾನೆ.

ಈ ಹೊಲೆ ಬಟ್ಟೆಯಲ್ಲಿ ವಿಶೇಷವಾದ ಶಕ್ತಿ ಬರುವುದೆಂದೂ ಇದನ್ನು ಮಡಕೆಯಲ್ಲಿ ಹಾಕಿದರೆ ಹೊಲೆಯಿಂದ ದೂರವಿರಲು ಬಯಸುವ ಯಾವ ದೇವತೆಯೂ ಇದನ್ನು ಮುಟ್ಟಿ ಹಾಳುಮಾಡುವುದಿಲ್ಲ ಎಂದು ನಂಬುತ್ತಾನೆ. ಇಷ್ಟೆಲ್ಲಾ ಮಾಡಿದ ನಂತರ ಆ ಮಡಕೆಯನ್ನು ತೆಗೆದುಕೊಂಡು ಹೋಗಿ ಉದ್ದೇಶಿತ ವ್ಯಕ್ತಿ ಓಡಾಡುವ ಜಾಗದಲ್ಲಾಗಲಿ, ಅವನ ಮನೆಯ ಮುಂದುಗಡೆಯಾಗಲಿ ಹೂಳುತ್ತಾರೆ. ತಾಮ್ರದ ತಗಡಿನ ಮೇಲೆ ಎಷ್ಟು ದಿನ ವಾಯಿದೆಯನ್ನು ಬರೆದಿರುವುದೋ ಅಷ್ಟು ದಿನಗಳಲ್ಲಿ ಉದ್ದೇಶಿತ ವ್ಯಕ್ತಿ ಸಾಯುತ್ತಾನೆಂದು ನಂಬುತ್ತಾರೆ. ಹೀಗೆ ಮಾಟ ಮಾಡಿದ ನಂತರ ಮಾಟಕ್ಕೆ ಒಳಗಾದ ವ್ಯಕ್ತಿಗೆ ತನಗೆ ಯಾರೋ ಮಾಟ ಮಾಡಿದ್ದಾರೆಂಬುದರ ಸುಳಿವು ಸಿಕ್ಕುತ್ತದೆ. ಆಗ ಅವನು ತನ್ನ ಮನೆ ದೇವರನ್ನು ಪೂಜೆ ಮಾಡಿ ತಾನು ಮುಂದೇನು ಮಾಡಬೇಕೆಂದು ಕೇಳುತ್ತಾನೆ. ಆಗ ಆ ದೇವತೆ ಯಾವುದಾದರೂ ಒಂದು ಭೂತಪ್ಪನ ಹೆಸರನ್ನು ಸೂಚಿಸಿ ಆ ಭೂತಪ್ಪನ ಬಳಿಗೆ ಹೋಗಬೇಕೆಂದು ತಿಳಿಸುತ್ತದೆ. ಅದರಂತೆ ಅವನು ಭೂತಪ್ಪನನ್ನು ಪೂಜಿಸಿ, ಆ ಭೂತಪ್ಪನ ಪೂಜಾರಿಯಿಂದ ನೆಲದಲ್ಲಿ ಮಾಟಗಾರ ಹೂಳಿರುವ ಮಡಕೆಯನ್ನು ತೆಗೆಸುತ್ತಾನೆ. ಆಗ ಮಾಟದ ಪ್ರಭಾವ ಕಡಿದುಹೋಗಿ, ಮಾಟದ ಪ್ರಭಾವಕ್ಕೆ ಒಳಗಾಗಿದ್ದ ವ್ಯಕ್ತಿಗೆ ಬಿಡುಗಡೆ ದೊರೆಯುತ್ತದೆ ಎಂಬ ನಂಬಿಕೆಯಿದೆ.

ಮಾಟ ಮಾಡುವವನು ಬೆಕ್ಕಿನ ತಲೆಯನ್ನು ಕತ್ತರಿಸಿ ತನ್ನ ಬಳಿ ಇಟ್ಟುಕೊಂಡಿರುತ್ತಾನೆ. ಮಾಟ ಮಾಡುವಾಗ ಕುಂಬಾರರ ಮನೆಯಿಂದ ಒಂದು ಮಡಕೆಯನ್ನು ತಂದು ಅದಕ್ಕೆ ಮೂರು ವಿಭೂತಿ ಗಟ್ಟಿಗಳನ್ನು, ಮೂರು ತಾಮ್ರದ ಮೊಳೆಗಳನ್ನು, ಮೂರು ನಿಂಬೆಕಾಯಿಗಳನ್ನು, ಮೂರು ಅಕ್ಕಿಕಾಳುಗಳನ್ನು ಮಂತ್ರಿಸಿ ಹಾಕುತ್ತಾನೆ. ಬೆಕ್ಕಿನ ತಲೆಯನ್ನು ಆ ಮಡಕೆಯೊಳಕ್ಕೆ ಇಟ್ಟು, ಆ ಮಡಕೆಯನ್ನು ಯಾವ ವ್ಯಕ್ತಿಯನ್ನು ಉದ್ದೇಶಿಸಿ ಮಾಟ ಮಾಡಲಾಗಿದೆಯೋ ಆ ವ್ಯಕ್ತಿಯ ಮನೆಯ ಬಳಿಯಲ್ಲಾಗಲೀ, ಆ ವ್ಯಕ್ತಿ ಓಡಾಡುವ ಜಾಗದಲ್ಲಾಗಲೀ ಹೂಳುತ್ತಾನೆ. ಹೀಗೆ ಮಾಟ ಮಾಡಿದಾಗ ಆ ವ್ಯಕ್ತಿ ಎಂಟೇ ದಿನಗಳಲ್ಲಿ ಸಾಯುವನೆಂದು ನಂಬುತ್ತಾರೆ.

ಮೇಲೆ ವಿವರಿಸಿದ ಕ್ರಮದಲ್ಲಿಯೇ ಮಾಟಗಾರ ಎಲ್ಲವನ್ನೂ ಮಾಡಿ, ಮಡಕೆಗೆ ಒಂದು ಕಪ್ಪೆಯನ್ನು ಸಾಯಿಸಿ ಕುಡಿಕೆಗೆ ಹಾಕುತ್ತಾನೆ. ಕಪ್ಪೆ ಯಾವ ರೀತಿಯಲಿಲ ಹೊಟ್ಟೆ ಉಬ್ಬರಿಸಿಕೊಂಡು ಸಾಯುವುದೋ ಹಾಗೆಯೇ ಮಾಟಕ್ಕೆ ಒಳಗಾದವರು ಒಂದು ತಿಂಗಳೊಳಗೆ ಹೊಟ್ಟೆ ಉಬ್ಬರಿಸಿಕೊಂಡು ಸಾಯುತ್ತಾರೆ ಎಂದು ನಂಬುತ್ತಾರೆ.

ಮಾಟ ಮಾಡುವವನು ಅಕ್ಕಿಯ ಕಾಳುಗಳನ್ನು ಮಂತ್ರಿಸಿ ಅದನ್ನು ಕುರಿಗಳಾಗಲಿ, ಮೇಕೆಗಳಾಗಲಿ, ದನಗಳಾಗಲಿ ರೊಪ್ಪದಲ್ಲಿಲ್ಲದ ಸಂದರ್ಭದಲ್ಲಿ ಅವುಗಳ ರೊಪ್ಪಕ್ಕೆ ಹಾಕಿದರೆ, ಅಲ್ಲಿ ಎಷ್ಟು ಅಕ್ಕಿಯ ಕಾಳುಗಳು ಬೀಳುವುವೋ ಅಷ್ಟು ಕುರಿಗಳು, ಮೇಕೆಗಳು ಅಥವಾ ದನಗಳು ಸಾಯುವುವೆಂದು ನಂಬುತ್ತಾರೆ.

ಮಾಟ ಮಾಡುವವನು ಒಂದು ಕಟ್ಟು ವೀಳೆಯದೆಲೆಯನ್ನು ಅಂಗೈಯಲ್ಲಿ ಇಟ್ಟುಕೊಂಡು, ಅದನ್ನು ಮಂತ್ರಿಸಿ, ಮತ್ತೊಂದು ಕೈಯಿಂದ ಜೋರಾಗಿ ತಟ್ಟಿದರೆ ಆ ಕಟ್ಟಿನಲ್ಲಿ ಎಷ್ಟು ವೀಳೆಯದೆಲೆಗಳು ಹರಿದಿರುವುದೋ ಅಷ್ಟು ಕುರಿಗಳು ಸಾಯುವುದೆಂದು ನಂಬುತ್ತಾರೆ.

**ರಕ್ಷಣಾ ಮಾಟ:** ಮಾಟ ಮಾಡುವವನು ಒಂದು ನಿಂಬೆಕಾಯಿ, ಒಂದು ಕರಿಯ ಕೋಳಿ, ಒಂದು ತೆಂಗಿನಕಾಯಿ, ಒಂದು ನಡೇದ ಮುಳ್ಳು, ಒಂದು ಕಿತ್ತಲೆ ಮುಳ್ಳು, ಒಂದು ನಿಂಬೆಮುಳ್ಳು ಇವಿಷ್ಟನ್ನೂ ಮಂತ್ರಿಸಿ ಹುತ್ತದ ಮೇಲಿಡುತ್ತಾನೆ. ಹುತ್ತದ ಮೇಲೆ ತಂಗೇಡಿ ಗಿಡದ ಮೂರು ಕೊಂಬೆಗಳನ್ನಿಟ್ಟು, ಅದಕ್ಕೆ ಐದು ಎಳೆ ನೂಲು ಸುತ್ತಿ ಅದರ ಎದುರಿನಲ್ಲಿ ಕರಿ ಅನ್ನ, ಬಿಳಿ ಅನ್ನ ಮತ್ತು ಕೆಂಪು ಅನ್ನವನ್ನು ಇಡುತ್ತಾನೆ. ಹುತ್ತಕ್ಕೆ ಮೂರು ಬಗೆಯ ಹೂವುಗಳನ್ನು ಪೂಜೆ ಮಾಡಿ ಕೋಳಿಯ ಕತ್ತು ಕುಯ್ದು ರಕ್ತವನ್ನು ಹುತ್ತದ ಮೇಲೆ ಚೆಲ್ಲಿ ಕಾಯೊಡೆದು, ಊದುಗಡ್ಡಿ ಕಟ್ಟಿ ಅನಂತರ ಕುರಿಗಳನ್ನೆಲ್ಲ ಈ ಹುತ್ತದ ಮೇಲೆ ಹಾರಿಹೋಗುವಂತೆ ನುಗ್ಗಿಸುತ್ತಾನೆ. ತಮ್ಮ ಕುರಿಗಳಿಗೆ ಯಾರಾದರೂ ಮಾಟ ಮಾಡಿದ್ದರೆ ಅದನ್ನು ಹೋಗಲಾಡಿಸುವುದಕ್ಕೋಸ್ಕರ ಈ ಮಾಟವನ್ನು ಮಾಡುತ್ತಾರೆ. ಅದು ಮಾಟಕ್ಕೆ ಪ್ರತಿಯಾಗಿ ಮಾಡುವ ರಕ್ಷಣಾ ಮಾಟ(protect magic). ಇದನ್ನು ಪ್ರತಿಮಾಟ(counter magic) ಎಂದೂ ಕರೆಯುತ್ತಾರೆ.

**ಉತ್ಪಾದಕ ಮಾಟ:** ಮಾಟ ಮಾಡುವುದು ಕೇವಲ ಕೆಟ್ಟ ಉದ್ದೇಶದಿಂದ ಮಾತ್ರವಲ್ಲ, ಒಳ್ಳೆಯ ಉದ್ದೇಶಗಳಿಗೂ ಕೂಡ ಮಾಟ ಮಾಡುವುದುಂಟು. ಒಳ್ಳೆಯ ಉದ್ದೇಶಗಳಿಗಾಗಿ ಮಾಡುವ ಮಾಟದ ಒಂದು ಬಗೆಯನ್ನು ಕಾಡುಗೊಲ್ಲರಲ್ಲಿಯೂ ಕಾಣಬಹುದು. ಇದೂ ಕೂಡ ಕುರಿಗಳಿಗೆ ಸಂಬಂಧಪಡುತ್ತದೆ. ಮಹಾನವಮಿ ಅಥವಾ ದೀಪಾವಳಿಯ ಸಂದರ್ಭದಲ್ಲಿ ಕುರಿಗಳನ್ನು ಸಾಕಿರುವ ಪ್ರತಿಯೊಬ್ಬ ಕಾಡುಗೊಲ್ಲನೂ ಆ ಸಂದರ್ಭದಲ್ಲಿ ಹುಟ್ಟಿದ ಅಥವಾ ಹುಟ್ಟಿ ಕೆಲವು ತಿಂಗಳು ಕಳೆದಿರುವ ಕುರಿಮರಿಗಳ ಬಾಲದ ತುದಿಯನ್ನು ಮತ್ತು ಕಿವಿಯ ತುದಿಯನ್ನು ಕುಯ್ದು ಅವನ್ನು ಒಂದು ಕಂಬಳಿಯೊಳಗೆ ಹಾಕಿಕೊಳ್ಳುತ್ತಾನೆ. ಮೂರು ಬೊಗಸೆಗಳಷ್ಟು ಕುರಿ ಪಿಚಕಿಯನ್ನು ಅದೇ ಕರಿಯ ಕಂಬಳಿಯೊಳಕ್ಕೆ ಹಾಕುತ್ತಾನೆ. ಅನಂತರ ಹೆಣ್ಣುಮಕ್ಕಳ ಬಳಿಗೆ ಹೋಗಿ "ಕಂಬಳಿಗೆ ಬೆಳೆಬೀಜ ಹಾಕಿರಮ್ಮ" ಎಂದು ಹೇಳಿ ಅವರಿಂದ ತಲಾ ಮೂರು ಮೂರು ಬೊಗಸೆಗಳಷ್ಟು ಕುರಿ ಪಿಚಕಿಯನ್ನು ಹಾಕಿಸಿಕೊಳ್ಳುತ್ತಾನೆ. ಅನಂತರ ಹೆಣ್ಣು ಮರಿಯನ್ನು ಈಯ್ದಿರುವ ಒಂದು ಕಿರಯ ಹಾಲನ್ನು ತಾನು ಕುರಿ ಪಿಚಕಿ ಹಾಕಿಸಿಕೊಂಡಿದ್ದ ಕಂಬಳಿಗೆ ಕರೆದುಕೊಂಡು ಆ ಕಂಬಳಿಯನ್ನು ಮುಚ್ಚಿಕೊಂಡು ಹೋಗಿ, ಯಾವುದಾದರೂ ಒಂದು ಹುತ್ತದ ಕೋಮೆಯ ಬಳಿಗೆ ತೆಗೆದುಕೊಂಡು ಹೋಗಿ, ಅಲ್ಲಿ ಕೋಮೆಯೊಳಕ್ಕೆ ಕಂಬಳಿಯನ್ನು ಬಗ್ಗಿಸಿ, ಅದರಲ್ಲಿರುವ ಕಿವಿ, ಬಾಲ, ಬೆಳೆಬೀಜ, ಹಾಲು ಕೋಮೆಯೊಳಕ್ಕೆ ಬೀಳುವಂತೆ ಸುರಿಯುತ್ತಾನೆ. ಹುತ್ತದ ಕೋಮೆಗೆ ನಮಸ್ಕಾರ ಮಾಡಿ ಮನೆಗೆ ಹಿಂತಿರುಗಿ ಬರುತ್ತಾನೆ. ತನ್ನ ಕುರಿಗಳು ಸುರಕ್ಷಿತವಾಗಿರಲಿ, ಕುರಿಗಳ ಸಂಖ್ಯೆ(ಅದರಲ್ಲಿಯೂ ಹೆಣ್ಣುಕುರಿಗಳ ಸಂಖ್ಯೆ) ಹೆಚ್ಚಾಗಲಿ

ಎಂಬ ಉದ್ದೇಶದಿಂದ ಈ ಮಾಟವನ್ನು ಮಾಡುತ್ತಾರೆ. ಕುರಿಗಳ ಫಲಶಕ್ತಿಯನ್ನು(fertility) ಹೆಚ್ಚಿಸುವ ಉದ್ದೇಶದಿಂದ ಈ ಮಾಟ ಮಾಡುವುದರಿಂದ ಈ ಬಗೆಯ ಮಾಟವನ್ನು ಉತ್ಪಾದಕ ಮಾಟ ಎಂದು ಕರೆಯಬಹುದು.

**ವೈದ್ಯ:** ಮಾಟಕ್ಕೆ ಮತ್ತು ವೈದ್ಯಕ್ಕೆ ಸಾಮಾನ್ಯವಾಗಿ ಆದಿವಾಸಿ ಸಮಾಜಗಳಲ್ಲಿ ಮತ್ತು ಅವಿದ್ಯಾವಂತ ಸಮಾಜಗಳಲ್ಲಿ ಸಂಬಂಧವಿರುತ್ತದೆ. ಕಾಯಿಲೆಗಳು ಬರಲು ಕೆಲವು ಅಲೌಕಿಕ ಶಕ್ತಿಗಳು ಕಾರಣ ಎಂಬ ನಂಬಿಕೆ ಬಲವಾಗಿ ಬೇರೂರಿವುದು ಇದಕ್ಕೆ ಮುಖ್ಯವಾದ ಕಾರಣ. ಕೆಲವು ಸಲ ದೇಹದ ಕಾರ್ಯನಿರ್ವಹಣೆಯಲ್ಲಿ ವ್ಯತ್ಯಾಸ ಉಂಟಾದಾಗ ಕಾಯಿಲೆಗಳು ಬರುತ್ತವೆ ಎಂಬುಧನ್ನು ಅರ್ಥ ಮಾಡಿಕೊಂಡು ಅದಕ್ಕೆ ಸೂಕ್ತವಾದ ಚಿಕಿತ್ಸೆಯನ್ನು ಮಾಡಿದಾಗಲೂ ಆ ಕಾಯಿಲೆಯನ್ನು ಮಾಟದ ಕ್ರಮದಿಂದ ಹೋಗಲಾಡಿಸಲು ಪ್ರಯತ್ನಿಸುತ್ತಾರೆ. ಮಾಟದ ಕ್ರಮವನ್ನು ಅನುಸರಿಸದೆ ಔಷಧಿಯಿಂದಲೇ ಕಾಯಿಲೆಗಳನ್ನು ವಾಸಿ ಮಾಡಲು ಕಾಡುಗೊಲ್ಲರಲ್ಲಿ ಬಳಕೆಯಲ್ಲಿರುವ ಕ್ರಮಗಳನ್ನು ಇಲ್ಲಿ ಪ್ರಸ್ತಾಪಿಸುವುದಿಲ್ಲ. ಆದರೆ ಮಾಟದ ಕ್ರಮ ಮತ್ತು ಔಷಧಿಯ ಕ್ರಮ ಎರಡರಿಂದಲೂ ಕಾಯಿಲೆಗೆ ಚಿಕಿತ್ಸೆ ಮಾಡುವ ಎರಡು ಉದಾಹರಣೆಗಳನ್ನು ಕೊಡಲಾಗಿದೆ.

**ಕರೇಗಾಟು:** ಕುರಿಗಳಿಗೆ ಮತ್ತು ಮೇಕೆಗಳಿಗೆ ಗದ್ದ ಊದಿಕೊಂಡು ಮೂಗಿನ ಎರಡು ಹೊಳ್ಳೆಗಳಿಂದಲೂ ಹಸಿರು ಬಣ್ಣದ ಸಿಂಬಳ ಒಂದೇ ಸಮನೆ ಸುರಿಯುತ್ತಿದ್ದರೆ ಅದು ಕರೇಗಾಟು ರೋಗ ಎಂದು ಗುರುತು ಹಿಡಿಯುತ್ತಾರೆ. ಈ ಕಾಯಿಲೆಯನ್ನು ಹೋಗಲಾಡಿಸಲು ಔಷಧಿಯನ್ನು ಕ್ರಮವಾಗಿ ಬಳಸುವಂತೆಯೇ ಮಾಟದ ಕ್ರಮವನ್ನೂ ಬಳಸುತ್ತಾರೆ.

**ಔಷಧಿಯ ಕ್ರಮ:** ಧೂಪ ಕಣಗಿಲೆ ಗಿಡದ ಮೂರು ಎಲೆ, ದೊಡ್ಡಕಾಯಿ ಗಿಡದಲ್ಲಿ ಪೂರ್ವದಿಕ್ಕಿಗೆ ಹಬ್ಬಿರುವ ಬಳ್ಳಿಯಲ್ಲಿರುವ ಮೂರು ಎಲೆ, ಬಿಳಿ ಎಕ್ಕದ ಬೇರು, ಒಂದು ಹಿಡಿ ಬಿಳಿಯ ಗುಲಗಂಜಿ ಸೊಪ್ಪು, ಒಂದು ಹಿಡಿ ಕರಿ ಗುಲಗಂಜಿಯ ಸೊಪಪು, ಒಂದು ಹಿಡಿ ದಾಸವಾಳದ ಸೊಪ್ಪು, ಒಂದು ಮೊಲದ ಕಿವಿಗೆಡ್ಡೆ, ಒಂದು ಹಿಡಿ ಮೇಟಳ್ಳಿ ಸೊಪ್ಪು, ಒಂದು ಹಿಡಿ ಹಾಲುಬಳ್ಳಿ ಸೊಪ್ಪು, ಒಂಬತ್ತು ನಿಂಬೆಕಾಯಿ, ಮೂರು ತುಂಡು ಹಸಿಯ ಅರಸಿನ ಇವೆಲ್ಲವನ್ನೂ ಒಟ್ಟಿಗೆ ಸೇರಿಸಿ ಒರಳಿನಲ್ಲಿ ಹಾಕಿ ಕುಟ್ಟಬೇಕು. ಕೋಣಗರುವನ್ನು ಈಯ್ದಿರುವ ಎಮ್ಮೆಯ ಹಾಲನ್ನು ಕರೆಯಬೇಕು. ಮೇಲೆ ಹೇಳಿದ ವಸ್ತುಗಳನ್ನು ಕುಟ್ಟಿ ಒಂದು ಮಡಕೆಗೆ ಹಾಕಿ ಅದಕ್ಕೆ ಎಮ್ಮೆಯ ಹಾಲನ್ನು ಹಾಕಬೇಕು. ಇನ್ನೂ ಎರಡು ಹೊತ್ತು ಎಮ್ಮೆಯ ಹಾಲು ಕರೆದು ಮಡಕೆಗೆ ಹಾಕಿ ಅದರಲ್ಲಿರುವ ಮಿಶ್ರಣವನ್ನು ಹಾಲಿನಲ್ಲಿ ಕಲೆಸಿ, ಅದನ್ನು ಕುರಿಯ ಅಥವಾ ಮೇಕೆಯ ರೊಪ್ಪದಲ್ಲಿ ಚೆಲ್ಲಿದರೆ ಅದರ ವಾಸನೆಯನ್ನು ಕುರಿಗಳಾಗಲಿ ಮೇಕೆಗಳಾಗಲಿ ಸೇವಿಸುತ್ತವೆ. ಎರಡು ಮೂರು ಸಲ ಹೀಗೆಯೇ ಮಾಡಿದರೆ ಕುರಿಗಳಿಗಾಗಲಿ ಮೇಕೆಗಳಿಗಾಗಲಿ ಉಂಟಾಗಿದ್ದ ಕರೇಗಾಟು ರೋಗ ವಾಸಿಯಾಗುತ್ತದೆ ಎಂಬ ನಂಬಿಕೆಯಿದೆ.

**ಮಾಟದ ಕ್ರಮ:** ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ಒಂದು ಹಳ್ಳದಲ್ಲಿ ಮೂರು ಚಿಲುಮೆಗಳನ್ನು ತೆಗೆಯಬೇಕು. ಈ ಚಿಲುಮೆಗಳಲ್ಲಿ ಬಂದ ನೀರಿಗೆ ಪೂಜೆ ಮಾಡಿ, ಆ ಮೂರು ಚಿಲುಮೆಗಳ ನಡುವೆ ಚೆನ್ನಾಗಿ ಬೆಳಗಿದ ಒಂದು ತಾಮ್ರದ ಬಿಂದಿಗೆಯನ್ನು ಇಡಬೇಕು. ಒಂದು ತಾಮ್ರದ ಚೆಂಬನ್ನು ಚೆನ್ನಾಗಿ ಬೆಳಗಿ ಒಂದೊಂದು ಚಿಲುಮೆಯಿಂದಲೂ ಕ್ರಮವಾಗಿ ಒಂದೊಂದು ಚೊಂಬು ನೀರನ್ನು ತುಂಬಿ ಬಿಂದಿಗೆಗೆ ಹಾಕಬೇಕು. ಬಿಂದಿಗೆಯ ನೀರಿಗೂ ಗಂಗೆಪೂಜೆ ಮಾಡಬೇಕು. ಸತ್ತವರನ್ನು ಹೂಳಿದ ಸಮಾಧಿಯ ಮೇಲೆ ಬೆಳೆದಿರುವ ಬಿಲ್ವಪತ್ರೆ ಮರದ ಬಳಿಗೆ ಒಬ್ಬ ಗೃಹಸ್ಥ ಮತ್ತು ಒಬ್ಬ ಮದುವೆಯಾಗದ ಹುಡುಗ ಇಬ್ಬರೂ ಮಧ್ಯರಾತ್ರಿಯಲ್ಲಿ ಹೋಗಬೇಕು. ಅವರು ಹೋಗುವುದನ್ನು ಯಾರೂ ಕೂಡ ನೋಡಬಾರದು. ದಾರಿಯಲ್ಲಿ ಹೋಗುವಾಗ ಇಬ್ಬರೂ ಪರಸ್ಪರ ಮಾತನಾಡಬಹುದು. ಆದರೆ ಮರದ ಬಳಿಗೆ ಹೋದ ಮೇಲೆ ಯಾವ ಕಾರಣದಿಂದಲೂ ಪರಸ್ಪರ ಮಾತನಾಡಕೂಡದು. ಗೃಹಸ್ಥ ಆ ಬಿಲ್ವಪತ್ರೆ ಮರಕ್ಕೆ ಪೂಜೆ ಮಾಡಿದ ನಂತರ ಮದುವೆಯಾಗದ ಹುಡುಗ ಸಂಪೂರ್ಣ ಬೆತ್ತಲೆಯಾಗಿ ಮರವನ್ನು ಹತ್ತಬೇಕು. ಹತ್ತಿದ ತಕ್ಷಣ ಕೈಗೆ ಸಿಕ್ಕಿದ ಕೊಂಬೆಯಿಂದ ಒಂದು ಹಿಡಿ ಪತ್ರೆಯನ್ನು ಕೀಳಬೇಕು. ಇನ್ನೊಂದು ಹೆಜ್ಜೆ ಮೇಲೆ ಹತ್ತಿ ಒಂದು ಹಿಡಿ ಪತ್ರೆಯನ್ನು ಕೀಳಬೇಕು, ಇನ್ನೂ ಒಂದು ಹೆಜ್ಜೆ ಮೇಲಕ್ಕೆ ಹತ್ತಿ ಒಂದು ಹಿಡಿ ಪತ್ರೆಯನ್ನು ಕೀಳಬೇಕು. ಅನಂತರ ಒಂದೊಂದು ಹೆಜ್ಜೆಯಂತೆ ಮೂರು ಹೆಜ್ಜೆ ಕೆಳಗಿಳಿದು ಮೂರು ಹಿಡಿ ಪತ್ರೆಯನ್ನು ಕೀಳಬೇಕು. ಒಟ್ಟು ಆರು ಹಿಡಿ ಪತ್ರೆಯನ್ನು ಕಿತ್ತು ಮರದಿಂದ ಕೆಳಕ್ಕೆ ಇಳಿಯಬೇಕು. ಕೆಳಗಿಳಿದ ಹುಡುಗ ಬಟ್ಟೆ ಹಾಕಿಕೊಂಡ ಮೇಲೆ ಇಬ್ಬರೂ ಬಿಂದಿಗೆಯಿಟ್ಟಿದ್ದ ಚಿಲುಮೆಗಳ ಬಳಿಗೆ ಬಂದು, ಬಿಂದಿಗೆಯನ್ನು ತೆಗೆದುಕೊಂಡು, ಒಂಬತ್ತು ನಿಂಬೆಯ ಹಣ್ಣುಗಳನ್ನೂ, ಒಂಬತ್ತು ಬಿಳಿ ಕಣಗಿಲೆ ಹೂವುಗಳನ್ನೂ ಮತ್ತು ಆರು ಹಿಡಿ ಬಿಲ್ವಪತ್ರೆಯನ್ನೂ ತೆಗೆದುಕೊಂಡು ಒಂದು ಕರಿಯ ರೊಪ್ಪದ ಹುದಿಯ ಬಳಿಯಲ್ಲಿ ಒಂದು ಕಂಬಳಿಯನ್ನು ಹಾಸಿ ಅದರ ಮೇಲೆ ಅವನ್ನೆಲ್ಲಾ ಇಟ್ಟು, ಒಂಬತ್ತು ನಿಂಬೆಯ ಹಣ್ಣು, ಒಂಬತ್ತು ಬಿಳಿ ಕಣಗಿಲೆ ಹೂವು ಮತ್ತು ಆರು ಹಿಡಿ ಬಿಲ್ವಪತ್ರೆಯನ್ನು ಚೆನ್ನಾಗಿ ಹೊಸಗಿ ಬಿಂದಿಗೆಯೊಳಕ್ಕೆ ಹಾಕಿ, ಆ ಬಿಂದಿಗೆಗೆ ಪುನಃ ಪೂಜೆ ಮಾಡಿ ಯಾವ ಕುರಿಗೆ ಅಥವಾ ಮೇಕೆಗೆ ಕರೇಗಾಬು ರೋಗ ಬಂದಿರುವುದೋ ಅದರ ಮೇಲೆ ಚೆಲ್ಲಬೇಕು. ಈ ರೀತಿ ಮೂರು ಹೊತ್ತು ಮಾಡಬೇಕು. ಹೀಗೆ ಮಾಡಿದರೆ ಕರೇಗಾಟು ರೋಗ ವಾಸಿಯಾಗುವುದೆಂದು ನಂಬುತ್ತಾರೆ.

ಒಂದು ಕುರಿಗೆ ಕರೇಗಾಟು ರೋಗ ಬಂದಾಗ ಮೇಲಿನ ಕ್ರಮವನ್ನು ಅನುಸರಿಸಿದರೆ ಅದಕ್ಕೆ ಬಂದಿದ್ದ ರೋಗ ವಾಸಿಯಾಗಿ ಅದು ಮತ್ತೊಂದು ಕುರಿಗೆ ವರ್ಗಾವಣೆಯಾಗುತ್ತದೆ ಎಂದು ನಂಬುವುದರಿಂದ ಇನ್ನೊಂದು ಕುರಿಗೂ ಹೀಗೆಯೇ ಮಾಡುತ್ತಾರೆ. ರೋಗ ಕುರಿಯಿಂದ

ಕುರಿಗೆ, ರೊಪ್ಪದಿಂದ ರೊಪ್ಪಕ್ಕೆ, ಹಟ್ಟಿಯಿಂದ ಹಟ್ಟಿಗೆ ವರ್ಗಾವಣೆಯಾಗುವುದೆಂದು ನಂಬುವುದರಿಂದ ಈ ಕ್ರಮವನ್ನು ಮುಂದುವರಿಸಿಕೊಂಡು ಕರೇಗಾಟು ರೋಗದ ಮಾರಿಯನ್ನು ಹಟ್ಟಿಯಿಂದ ಹೊರಕ್ಕೆ ಸಾಗಿಸಿರುವುದಾಗಿ ನಂಬುತ್ತಾರೆ.

**ಸಿಡುಬಿನ ರೋಗ: ಔಷಧಿಯ ಕ್ರಮ** : ಕುರಿಗಳಿಗೆ ಸಿಡುಬಿನ ರೋಗ ಬಂದಾಗ ಯಾವುದಾದರೂ ಒಂದು ರೋಗದ ಕುರಿಯನ್ನು ಸಾಯಿಸಿ, ಅದರ ಧರ್ಮವನ್ನು ತೆಗೆದು, ಚರ್ಮದ ಕೆಳಭಾಗದಲ್ಲಿರುವ ಸಿಡುಬಿನ ಗಂಟುಗಳನ್ನು ಕತ್ತರಿಸಿ ತೆಗೆಯುತ್ತಾರೆ. ಆ ಗಂಟುಗಳನ್ನು ಚೆನ್ನಾಗಿ ಅರೆದು ದ್ರವರೂಪದಲ್ಲಿ ಶೇಖರಿಸಿ, ಸಿಡುಬು ರೋಗ ಬಂದಿರುವ ಪ್ರತಿಯೊಂದು ಕುರಿಯ ಕಿವಿಯನ್ನು ತೂತು ಮಾಡಿ, ಅದರೊಳಕ್ಕೆ ಈ ದ್ರವವನ್ನು ಬಿಡುತ್ತಾರೆ. ಇದರಿಂದ ಸಿಡುಬಿನ ರೋಗ ಸತ್ತ ವಿಷಕ್ರಿಮಿಗಳನ್ನೇ ಸಿಡುಬುರೋಗ ಬಂದಿರುವ ಕುರಿಗಳ ರಕ್ತಕ್ಕೆ ಸೇರಿಸಿದಂತಾಗುವುದರಿಂದ ಈ ರೋಗ ಬಂದಿರುವ ಕುರಿಗಳಲ್ಲಿ ರೋಗ ಪ್ರತಿರೋಧಕ ಶಕ್ತಿ ಹೆಚ್ಚಾಗಿ, ಅವುಗಳಿಗೆ ಬಂದಿರುವ ರೋಗ ವಾಸಿಯಾಗುತ್ತದೆ ಎಂದು ನಂಬುತ್ತಾರೆ.

**ಮಾಟದ ಕ್ರಮ:** ಒಂದು ಸೇರು ರಾಗಿಹಿಟ್ಟಿನ ಅಂಬಲಿಯನ್ನು ಮೂವರು ಕನ್ಯೆಯರು ಕುರಿಯ ರೊಪ್ಪದಲ್ಲಿ ಕಾಯಿಸಿ ಸಿದ್ಧ ಮಾಡುತ್ತಾರೆ. ಈ ಮೂವರು ಕನ್ಯೆಯರೇ ರೊಪ್ಪದ ಒಳಗಿನಿಂದ ಕುರಿಗಳು ಹೊರಕ್ಕೆ ಬರುವ ಜಾಗದಲ್ಲಿ ರಾಗಿಹಿಟ್ಟಿನಿಂದ ರಂಗೋಲಿಯನ್ನು ಇಡುತ್ತಾರೆ. ಎರಡು ತುದಿಗಳಿಗೆ ಕಬ್ಬಿಣದ ಬಳೆ ಹಾಕಿರುವ ಮೂರು ಒನಕೆಗಳನ್ನು ಸುಣ್ಣ ಮತ್ತು ಕೆಮ್ಮಣ್ಣಿನಿಂದ ಪಟ್ಟೆಯನ್ನು ಬಳಿದು ಆ ಮೂರು ಒನಕೆಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಮಲಗಿಸುತ್ತಾರೆ. ಒಂದೊಂದು ಒನಕೆಯ ಮೇಲೆ ಒಬ್ಬೊಬ್ಬ ಕನ್ಯೆ ಕುಳಿತುಕೊಳ್ಳುತ್ತಾಳೆ. ಕುರಿ ರೊಪ್ಪದ ಯಜಮಾನ ಆ ಮೂವರೂ ಕನ್ಯೆಯರ ಬೊಗಸೆಗೆ ರಾಗಿ ಅಂಬಲಿಯನ್ನು ಹಾಕಿ, ಒನಕೆಗಳಿಗೆ ಕಾಯಿ ಒಡೆದು ಪೂಜೆ ಮಾಡುತ್ತಾನೆ. ಅನಂತರ ಅಂಬಲಿಯನ್ನು ಕಾಯಿಸಿದ್ದ ಮಡಕೆಯನ್ನು ಹೊತ್ತುಕೊಂಡು "ಕೂಗಲೇ' ಎಂದು ಕೂಗುತ್ತಾ ಹಟ್ಟಿಯಿಂದ ಹೊರಕ್ಕೆ ಓಡುತ್ತಾನೆ. ಆಗ ಆ ಮೂವರು ಕನ್ಯೆಯರೂ ಬೊಗಸೆಯಲ್ಲಿದ್ದ ಅಂಬಲಿಯನ್ನು ಚೆಲ್ಲಿ, ಒಂದೊಂದು ಒನಕೆಯನ್ನು ಹೆಗಲ ಮೇಲಿಟ್ಟುಕೊಂಡು "ಓಡಲೇ" ಎಂದು ಕೂಗುತ್ತಾ ಓಡುತ್ತಾರೆ. ಕುರಿ ರೊಪ್ಪದ ಯಜಮಾನ ತಾನು ಹೊತ್ತುಕೊಂಡಿದ್ದ ಮಡಕೆಯನ್ನು ಹಟ್ಟಿಯ ಗಡಿಯ ಆಚೆ ಇಡುತ್ತಾನೆ. ಆ ಮೂವರು ಕನ್ಯೆಯರು ತಮ್ಮ ಹೆಗಲ ಮೇಲಿದ್ದ ಒನಕೆಯಿಂದ ಒಂದೊಂದು ಏಟು ಹಾಕಿ ಅದನ್ನು ಒಡೆದು ಹಾಕುತ್ತಾರೆ. ಅನಂತರ ಈ ಕುರಿ ರೊಪ್ಪದ ಯಜಮಾನ ಮತ್ತು ಮೂವರು ಕನ್ಯೆಯರು ಒನಕೆಯನ್ನು ತೊಳೆದುಕೊಂಡು ಹಟ್ಟಿಗೆ ಹಿಂತಿರುಗಿ ಬರುತ್ತಾರೆ. ಸಿಡುಬು ಮಾರಿಯನ್ನು ಹಟ್ಟಿಯಿಂದ ಸಾಗುಹಾಕಿ ಬಂದವೆಂದು ನಂಬುತ್ತಾರೆ. ಒಂದು ಹಟ್ಟಿಯಿಂದ ಸಾಗುಹಾಕಿದ್ದ ಸಿಡುಬಿನ ಮಾರಿಯನ್ನು ತಮ್ಮ ಹಟ್ಟಿಯಿಂದ ಸಾಗುಹಾಕುವುದಾಗಿ

ನಂಬುತ್ತಾರೆ. ಹೀಗೆ ಹಟ್ಟಿಯಿಂದ ಹಟ್ಟಿಗೆ ಸಿಡುಬು ಮಾರಿಯನ್ನು ಸಾಗುಹಾಕುವ ಕ್ರಮ ಇಂದಿಗೂ ಕಾಡುಗೊಲ್ಲರಲ್ಲಿ ಬಳಕೆಯಲ್ಲಿದೆ.

**ಕೆಟ್ಟ ಕಣ್ಣು:** ಕೆಲವು ಜನರ ಕಣ್ಣಿನ ದೃಷ್ಟಿ ಒಳ್ಳೆಯದಲ್ಲ. ಅವರ ದೃಷ್ಟಿ ಹಾನಿಕಾರವಾದುದು. ಅಂತಹ ವ್ಯಕ್ತಿಗಳ ದೃಷ್ಟಿ ಬಿದ್ದರೆ ಎಳೆಯ ಮಕ್ಕಳಿಗೆ, ಬಸುರಿಯರಿಗೆ, ಬಾಣಂತಿಯರಿಗೆ ವಾಂತಿಯಾಗುತ್ತದೆ, ಹೊಟ್ಟೆನೋವು ಬರುತ್ತದೆ. ಹಾಲು ಕೊಡುತ್ತಿರುವ ಹಸುಗಳ, ಎಮ್ಮೆಗಳ ಕೆಚ್ಚಲಿನ ಮೇಲೆ ಅಂತಹ ವ್ಯಕ್ತಿಗಳ ದೃಷ್ಟಿ ಬಿದ್ದರೆ ಹಾಲಿನ ಬದಲು ರಕ್ತ ಬರುತ್ತದೆ. ಈ ಬಗೆಯ ನಂಬಿಕೆಗಳನ್ನು ದಿನನಿತ್ಯದ ಜೀವನದಲ್ಲಿ ಗುರುತಿಸಬಹುದು. ಕೆಟ್ಟ ಕಣ್ಣಿನ ಪ್ರಭಾವವನ್ನು ಹೋಗಲಾಡಿಸಲು ಮೂರು ಸಾರಿ ಉಗುಳುವುದು, ನೆಟ್ಟಗೆ ಮುರಿಯುವುದು ಮೊದಲಾದ ವಿಧಾನಗಳನ್ನು ಅನುಸರಿಸುತ್ತಾರೆ. ಕೆಲವರು ಕೆಟ್ಟಕಣ್ಣಿಗೆ ವಿಶೇಷವಾಗಿ ಹೆದರುತ್ತಾರೆ. ಕೆಲವರು ಸ್ವಲ್ಪಮಟ್ಟಿಗೆ ಹೆದರುತ್ತಾರೆ, ಕೆಟ್ಟಕಣ್ಣಿಗೆ ತಾವು ಹೆದರುವುದಿಲ್ಲವೆಂದು ಕೆಲವರು ಹೊರಗೆ ತೋರಿಸಿಕೊಂಡರೂ ಒಳಗೊಳಗೇ ಹೆದರಿ, ಬಗೆಬಗೆಯ ವಿಧಾನಗಳಿಂದ ಇದರ ಪ್ರಭಾವವನ್ನು ಕಳೆದುಕೊಳ್ಳಲು ಪ್ರಯತ್ನಿಸುತ್ತಾರೆ. ಕೆಟ್ಟಕಣ್ಣಿಗೆ ಸಂಬಂಧಿಸಿದ ನಂಬಿಕೆಗಳು ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದಲ್ಲಿ ಮಾತ್ರವಲ್ಲ, ಪ್ರಪಂಚದ ಬಹುಪಾಲು ದೇಶಗಳಲ್ಲಿ ಪ್ರಚಲಿತವಾಗಿವೆ.

ಕಾಡುಗೊಲ್ಲರಲ್ಲಿ ದೃಷ್ಟಿದೋಷಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳೇನೂ ದೊರೆಯುವುದಿಲ್ಲ. ಇತರ ಜನರಲ್ಲಿ ಬಳಕೆಯಲ್ಲಿರುವ ದೃಷ್ಟಿ ದೋಷದ ಪರಿಹಾರ ಕ್ರಮಗಳು ಕಾಡುಗೊಲ್ಲರಲ್ಲಿಯೂ ಬಳಕೆಯಲ್ಲಿವೆ. ಅವರಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಕೆಲವು ಕ್ರಮಗಳನ್ನು ಕೆಳಗೆ ಉಲ್ಲೇಖಿಸಲಾಗಿದೆ:

1. ಒಂದು ಕಂಚಿನ ತಟ್ಟೆಗೆ ನೀರು ಹಾಕಿ ಮೂರು ಗುಡಿಸಿಲುಗಳಿಂದ ಒಂದಿಷ್ಟು ಮಣ್ಣು ಮತ್ತು ಸೋಗೆಗರಿಯ ಚೂರುಗಳನ್ನು ತರಬೇಕು. ಒಂದು ಮಡಕೆಯ ಮೇಲೆ ಉದ್ದುದ್ದವಾಗಿ ಮತ್ತು ಅಡ್ಡಡ್ಡವಾಗಿ ಸುಣ್ಣದ ಗೆರೆಯನ್ನು ಬರೆಯಬೇಕು. ರಾಗಿ ಮುದ್ದೆಯನ್ನಾಗಲಿ, ಅನ್ನದ ಮುದ್ದೆಯನ್ನಾಗಲಿ, ಸಗಣಿ ಮುದ್ದೆಯನ್ನಾಗಲಿ, ಉಂಡೆ ಮಾಡಿ, ಒಂದೇ ಅಳತೆಯ ಮೂರು ಹಂಚಿಕಡ್ಡಿಗಳನ್ನು ಒಲೆಯ ಗುಪ್ಪೆಗಳ ಮಾದರಿಯಲ್ಲಿ ಮುದ್ದೆಗೆ ಚುಚ್ಚಬೇಕು. ಬಿಳಿಯ ಬಟ್ಟೆಯನ್ನು ಹರಳೆಣ್ಣೆ ಅಥವಾ ಹೊಂಗೆ ಎಣ್ಣೆಯಲ್ಲಿ ನೆನೆಸಿ ಮುದ್ದೆಯ ಮೇಲೆ ನೆಟ್ಟಿರುವ ಕಡ್ಡಿಗಳ ಮೇಲೆ ಇಡಬೇಕು. ತಟ್ಟೆಯ ಒಳಗೆ ಇರುವ ನೀರಿನೊಳಕ್ಕೆ ಎರಡು ಮೆಣಸಿನಕಾಯಿಗಳನ್ನು ಎರಡು ಉಪ್ಪಿನ ಹರಳುಗಳನ್ನೂ ನೀವಳಿಸಿ ಹಾಕಬೇಕು. ಖಾಲಿಯಾಗಿರುವ ಮಡಕೆಯನ್ನು ದೃಷ್ಟಿ ದೋಷವಾಗಿರುವ ವ್ಯಕ್ತಿಗೆ ನಿವಾಳಿಸಿ ಮುದ್ದೆಯನ್ನು ಕಡ್ಡಿಗಳ ಮೇಲೆ ಹಾಕಿರುವ ಬಟ್ಟೆಯ ನಾಲ್ಕು ತುದಿಗಳಿಗೂ ಬೆಂಕಿ ಹಚ್ಚಬೇಕು. ಅದು ಉರಿಯಲು ಆರಂಭವಾದ ತಕ್ಷಣ ಅದರ ಮೇಲೆ ಮಡಕೆಯನ್ನು ಬೋರಲು ಹಾಕಬೇಕು.

ಆಗ ದೃಷ್ಟಿದೋಷದ ಪ್ರಭಾವದಿಂದ ಉಂಟಾಗಿದ್ದ ಹೊಟ್ಟೆನೋವು, ಹೊಟ್ಟೆ ಉಬ್ಬರ ಕಡಿಮೆಯಾಗುವುದೆಂದು ನಂಬುತ್ತಾರೆ. ಈ ವಿಧಾನ ಕಾಡುಗೊಲ್ಲರಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ.

2. ಮಗುವಿಗೆ ದೃಷ್ಟಿ ದೋಷವಾದಾಗ ತಾಯಿ ತನ್ನ ಮಗುವನ್ನು ಎತ್ತಿಕೊಂಡು ಪೂರ್ವಾಭಿಮುಖವಾಗಿ ಕೂರುತ್ತಾಳೆ. ಇನ್ನೊಬ್ಬಳು ಹೆಂಗಸು ಮಂಗಾರೆ ಕಳ್ಳೆ, ಮೂರು ಕಣ್ಣಿನ ಚಿಪ್ಪು ಈ ಎರಡನ್ನೂ ತಂದು ಮಗುವಿಗೆ ಮೂರು ಸಲ ನಿವಾಳಿಸಿ ಅವನ್ನು ಕೆಂಡದಲ್ಲಿ ಸುಟ್ಟು ಆ ಬೂದಿಯನ್ನು ನೀರಿನಲ್ಲಿ ಕದರುತ್ತಾಳೆ. ಆ ನೀರಿಗೆ ಅರಿಶಿನ, ಸುಣ್ಣ ಎರಡನ್ನೂ ಕದರಿ, ಆ ನೀರನ್ನು ದಾರಿಯಲ್ಲಿ ಚೆಲ್ಲುತ್ತಾಳೆ. ದೃಷ್ಟಿದೋಷ ಪರಿಹಾರವಾಯಿತೆಂದು ನಂಬುತ್ತಾಳೆ.

3. ಒಂದು ಬಾವಿಯಿಂದ ಮೂರು ಕಪ್ಪೆಗಳನ್ನು ಅಥವಾ ಒಂದು ಕೆರೆಯಿಂದ ಮೂರು ಮೀನುಗಳನ್ನು ತರಬೇಕು. ಒಂದು ಹಿಡಿ ಅಕ್ಕಿ, ನಾಲ್ಕೈದು ಕಡ್ಡಿಗಳು, ಒಂದು ಹಿಡಿ ಉಪ್ಪು, ಮೂರು ನಾಲ್ಕು ಮೆಣಸಿನ ಕಾಯಿಗಳು, ಮೂರು ನಾಲ್ಕು ಇದ್ದಿಲು ಚೂರುಗಳು ಇಷ್ಟನ್ನು ಒಂದು ಬಿಳಿಯ ಬಟ್ಟೆಯಲ್ಲಿ ಕಟ್ಟಬೇಕು. ಒಂದು ಬಟ್ಟೆಯ ಗಂಟನ್ನು ದೃಷ್ಟಿ ದೋಷವಾಗಿರುವ ವ್ಯಕ್ತಿಗೆ ನಿವಾಳಿಸಿ ಆ ಗುಂಡಿಗೆ ಹಾಕಬೇಕು. ಮೂರು ಮೀನುಗಳನ್ನಾಗಲಿ, ಮೂರು ಕಪ್ಪೆಗಳನ್ನಾಗಲಿ ಸಾಯಿಸಿ ಗುಂಡಿಯೊಳಕ್ಕೆ ಹಾಕಿ ಅದರ ಮೇಲೆ ಮಣ್ಣು ಮುಚ್ಚಬೇಕು. ಗುಂಡಿಯ ಮೇಲೆ ದೃಷ್ಟಿದೋಷಕ್ಕೆ ಒಳಗಾದ ವ್ಯಕ್ತಿಯನ್ನು ನಿಲ್ಲಿಸಬೇಕು. ಮಾಳಿಗೆ ಮನೆಯ ಮೇಲೆ ಅಥವಾ ಗುಡಿಸಿಲಿನ ಮೇಲೆ ಒಬ್ಬ ವ್ಯಕ್ತಿ ಹತ್ತಿ, ಅಲ್ಲಿಂದ ನೀರು ಸುರಿಯಬೇಕು. ಆ ನೀರು ಕೆಳಗೆ ನಿಂತಿದ್ದವನ ಮೇಲೆ ಬೀಳುತ್ತದೆ. ಹೀಗೆ ಮಾಡಿದರೆ ದೃಷ್ಟಿ ದೋಷವಾಗಿರುವ ವ್ಯಕ್ತಿ ಸರಿಹೋಗುತ್ತಾನೆ ಎಂದು ನಂಬಲಾಗುತ್ತದೆ.

**ಸೋಲಿಗರು**

**ಮಂತ್ರಧಾರ್ಮಿಕ ವೈದ್ಯ:** ಆದಿಮಾನವನಿಗೆ ತನ್ನ ರೋಗವನ್ನು ಗುಣಪಡಿಸಿಕೊಳ್ಳುವ ಸಲುವಾಗಿ ಧರ್ಮವನ್ನು ಮೊರೆಹೊಕ್ಕಂತೆಯೇ, ಮಂತ್ರ ವಿದ್ಯೆಯನ್ನೂ ಬಳಸಿಕೊಂಡ. ಮಂತ್ರವಿದ್ಯೆಯು ವೈಯಕ್ತಿಕವಾಗಿ ಹಾಗೂ ಸಾರ್ವಜನಿಕವಾಗಿ ಕೆಟ್ಟದ್ದನ್ನು ಮಾಡುವಂತೆಯೇ ಒಳ್ಳೆಯದನ್ನು ಮಾಡುವಂತಹದಾಗಿದೆ. ರೋಗವನ್ನು ಉಂಟುಮಾಡುವ ಹಾಗೂ ಅದನ್ನು ಇಲ್ಲವಾಗಿಸುವ ಎರಡು ಶಕ್ತಿಗಳೂ ಮಂತ್ರವಿದ್ಯೆಗಿದೆ. ಸಮಾನತತ್ವ ಮಂತ್ರಿವಿದ್ಯೆ(Home opathic Magic)ಗೂ ಜನಪದ ವೈದ್ಯಕ್ಕೂ ಹತ್ತಿರದ ಸಂಬಂಧವಿದೆ. Another beneficient use of Home opathic magic is to heal or prevent sickness ಎಂದು ಜೇಮ್ಸ್ ಜೆ. ಫ್ರೇಜರ್ ಹೇಳಿದ್ದಾರೆ. ಸೋಲಿಗರಲ್ಲಿ ಬಸುರಿ ಹೆಂಗಸಿನ ಸುಖಪ್ರಸವ ಆಗದಿದ್ದರೆ ಈ ಕೆಳಗಿನ ಮಂತ್ರವನ್ನು ಹೇಳಿ

ಆಕೆಗೆ ಕುಡಿಯಲು ಜನಪದ ವೈದ್ಯೆಯೊಬ್ಬಳು ಕಷಾಯವನ್ನು ನೀಡಿದರೆ ಸುಖ ಪ್ರಸವವಾಗುವುದು ಎಂದು ಅವರು ನಂಬುವರು. ಆ ಮಂತ್ರ ಹೀಗಿದೆ:

ಗುರುವಾಡಿಗೆ
ಗುರು ಶುರುಪಾದ ಗುರುವಾಡಿಗೆ
ಕಳದು ಕಳಮಾಡಿ
ಚಿನ್ನದ ಮೇಟಿ ಮಾಡಿ
ಗುಡ್ಡದನ್ನು ಗುಡ್ಡದಲ್ಲಿ ಇರಲಿ
ಬೆಟ್ಟದನ್ನು ಬೆಟ್ಟದಲ್ಲಿ ಇರಲಿ
ಕೂಶು ಮಾಸು ಜನನವಾಗಿ
ಕೂಶಿನವರವ್ವ ಸುಖವಾಗಿ ಬಾಳು ಗುರುವಾಡಿಗೆ

ಇದೇ ರೀತಿಯಲ್ಲಿಯೇ ಯಾರಿಗಾದರೂ ಕಾಡಿನಲ್ಲಿ ಹಾವು ಕಚ್ಚಿದರೆ ಅವನಿಗೆ ವಿಷವೇರಿ ಸಾಯುವ ಮುನ್ನ ಗಿಡಮೂಲಿಕೆಯಿಂದ ಔಷಧವನ್ನು ತಯಾರಿಸಿ ಇದೇ ರೀತಿಯಲ್ಲಿಯೇ ಇನ್ನೊಂದು ಮಂತ್ರವನ್ನು ಪಠಿಸಿದರೆ ವಿಷವಿಳಿದು ರೋಗಿ ಬದುಕುವನೆಂದು ನಂಬುವರು.

ಗುರುವಾಡಿಗೆ
ಗುರು ಶುರುಪಾದಕೆ ಗುರುವಾಡಿಗೆ
ಕಕ್ಕೆ ಕಾಳಿಂಗ ನಾಗ
ಎಕ್ಕದ ಎಳನಾಗ
ಶುಂಠಿಗ ಬಳೆಮುರುಗ
ನಾಲ್ವತ್ತು ಕೋಟ
ನಾಕು ಸಹಸ್ರ ಪಾವು
ನಾನು ಒಡದು ಮಂತ್ರುಸುದಾಗ್ಗೆ
ಕಡಿಂದ ಕಡಿಗೆ
ಈಶುರದ ಉಪ್ಪಾಯಿತು
ಪಾಮಮ್ಮ ಗುರಿವಿನ ವಾಡಿಗೆ
ಗುರುವಿನ ಶುರುಪಾದ ಗುರುವಾಡಿಗೆ

ಇದೇ ರೀತಿಯಲ್ಲಿ ಹಾವು ಕಚ್ಚಿದ್ದಕ್ಕೆ ಮಂತ್ರ ಹೇಳುವುದು ಭಾರತದ ಅನೇಕ ಬುಡಕಟ್ಟುಗಳಲ್ಲಿ ಬಳಕೆಯಲ್ಲಿ ಇದೆ. ಹೀಗೆ ಮಂತ್ರ ಹೇಳುವುದರಿಂದ ಹಾವಿನ ವಿಷ ಮನುಷ್ಯನಿಂದ ಇಳಿದು ಹಾವು ಕಚ್ಚಿದವನು ಬದುಕುತ್ತಾನೆ ಎಂಬ ನಂಬಿಕೆ ಅವರಲ್ಲಿ ಬೆಳೆದುಬಂದಿದೆ.

ಸೋಲಿಗರಲ್ಲಿ ಯಾರಾದರೂ ಸೋಂಕಿಗೆ ಬಲಿಯಾಗಿದ್ದರೆ ಗಿಡಮೂಲಿಕೆ ಬಲ್ಲ ವ್ಯಕ್ತಿ ಕಾಡಿನಲ್ಲಿ ದೊರೆಯುವ ಸೋಕೆಸೊಪ್ಪಿನ ಜೊತೆಗೆ ಬೆಳ್ಳುಳ್ಳಿ ಮೆಣಸನ್ನು ಅರೆದು ಅದನ್ನು ರೋಗಿಯ ನೆತ್ತಿಗೆ ಹಾಕಿ ಜೊತೆಗೆ ಮೂಗಿಗೆ ಮೂಸಿಸಿ ಉಳಿದ ಸ್ವಲ್ಪವನ್ನು ಒಂದು ಬಟ್ಟೆಗೆ ಹಾಕಿ ಎಡತೋಳಿಗೆ ಕಟ್ಟುವರು. ಹೀಗೆ ವ್ಯಕ್ತಿಯ ಕೈನಲ್ಲಿದ್ದ ಔಷಧಿ ತುಂಬಿದ ಅರಿವೆಯನ್ನು ಗಿಡಕ್ಕೆ ವರ್ಗಾಯಿಸುವುದರ ಉದ್ದೇಶವೆಂದರೆ ರೋಗವನ್ನು ರೋಗಿಯಿಂದ ಗಿಡಕ್ಕೆ ವರ್ಗಾಯಿಸುವುದು. ರೋಗವನ್ನು ರೋಗಿಯಿಂದ ಬೇರೊಬ್ಬನಿಗೆ, ಪ್ರಾಣಿಗೆ, ಸಸ್ಯಕ್ಕೆ, ಅಚೇತನ ವಸ್ತುವಿಗೆ ವರ್ಗಾಯಿಸಬಹುದೆಂದು ಆದಿವಾಸಿ ಜನರು ಸಂಪೂರ್ಣವಾಗಿ ನಂಬಿದ್ದರು. "In primitive as well as folk medicine one of the commonest methods of ridding a person of disease is through transference of the disease either by direct transfer or by way of an animal, a plant or an object" ಎಂದು ಡಾನ್ ಯೋಡರ್ ಅವರು ಹೇಳಿದ್ದಾರೆ. ಜೇಮ್ಸ್ ಜೆ. ಫ್ರೇಜರ್ ಇಂತಹ ಹಲವಾರು ನಿದರ್ಶನಗಳನ್ನು ತನ್ನ "ಗೋಲ್ಡನ್ ಬೋ"ನಲ್ಲಿ ತಿಳಿಸುತ್ತಾನೆ. "ಭಾರತದ ಆದಿವಾಸಿ ಸಮಾಜ ಒಂದರಲ್ಲಿ ಜಾಂಡೀಸ್ ರೋಗ ಆದವನು ದೊಡ್ಡಜಾತಿಯ ಪ್ಲವರ್ ಹಕ್ಕಿಯನ್ನು ತೀಕ್ಷ್ಣವಾಗಿ ನೋಡಿದರೆ, ಆ ಹಕ್ಕಿ ಅವನನ್ನು ದಿಟ್ಟಿಸಿದರೆ, ಅವನ ಜಾಂಡೀಸ್ ಕಾಯಿಲೆಯು ಅವನಿಂದ ಈ ಹಕ್ಕಿಗೆ ವರ್ಗಾವಣೆ ಆಗುತ್ತದೆ ಎಂದು ನಂಬುತ್ತಿದ್ದರು." ಈ ಬಗೆಯ ಹಲವಾರು ರೀತಿಯ ವೈದ್ಯಗಳನ್ನು ಸೋಲಿಗರಲ್ಲಿ ಕಾಣಲು ಸಾಧ್ಯವಿದೆ. ಯಾರಿಗಾದರೂ ದೃಷ್ಟಿದೋಷವಿದ್ದರೆ ಮೆಣಸಿನಕಾಯಿ, ಉಪ್ಪು ನಿವಾಳಿಸಿ ಒಲೆಗೆ ಹಾಕುತ್ತಾರೆ ಹಾಗೂ ಪೊರಕೆ ಕಡ್ಡಿಯನ್ನು ಮುಖಕ್ಕೆ ನಿವಾಳಿಸಿ ಮೂಲೆಯಲ್ಲಿಟ್ಟು ಬೆಂಕಿ ಹಚ್ಚುತ್ತಾರೆ. ಕಡ್ಡಿ ಉರಿಯುವಾಗ ತುಂಬಾ ಚಟಪಟ ಎಂದು ಶಬ್ದ ಮಾಡಿದರೆ ಮಗುವಿಗೆ ಬಹಳವಾಗಿ ದೃಷ್ಟಿಯಾಗಿದೆ ಎಂದು ನೆಟಿಕೆ ಮುರಿಯುತ್ತಾರೆ. ಆ ನಂತರ ಉರಿದ ಬೂದಿಯನ್ನು ಮಗುವಿನ ಹಣೆಗೆ ದೃಷ್ಟಿಬೊಟ್ಟು ಇಡುತ್ತಾರೆ.

ತುಂಬಾ ಕ್ಲಿಷ್ಟವಾದ ಕಾಯಿಲೆಗಳಾದಾಗ ದೇವರಲ್ಲಿ ಬೇಡುವುದು, ಕಣಿ ಕೇಳುವುದು, ಗುಂಜಿಶಾಸ್ತ್ರ ಮಾಡಿಸುವುದು, ಬುಂಡೆಕೆರೆಯುವುದು ಇತ್ಯಾದಿ ವಿಧಾನಗಳಿಂದ ಪರಿಹರಿಸಿಕೊಳ್ಳುವರು. ಇದೊಂದು ರೀತಿಯ ಮನೋಚಿಕಿತ್ಸೆ(Psychotherapy) ಎಂದೇ ಹೇಳಬಹುದಾಗಿದೆ.

**ಸೀಮಾಪದ್ಧತಿಯ ಭಾಗವಾಗಿ 'ಕುಂಬರಿ' ಆದಿಮ ಬೇಸಾಯ ಸಂಸ್ಕೃತಿ**

ಬುಡಕಟ್ಟುಗಳ ಸೀಮಾಪದ್ಧತಿಯ ವ್ಯವಸ್ಥೆಯ ಯಾವುದೇ ಪ್ರಕ್ರಿಯೆಗಳಲ್ಲಿ ಆದಿವಾಸಿಗಳು ಎಲ್ಲವನ್ನು ಸಮಷ್ಟಿಯಾಗೇ ತೆಗೆದುಕೊಳ್ಳುವ ಅಂಶ ಬಹಳ ಪ್ರಮುಖವಾದದ್ದಾಗಿದೆ. ಆದಿವಾಸಿಗಳಲ್ಲಿನ ಎಲ್ಲಾ ಆಚರಣೆ, ಉಪಾಸನೆ, ಬೇಟೆ, ತೀರ್ಮಾನ ಯಾವುದೇ ಇರಲಿ ಅದು ಸಮುದಾಯದ ಸಮಗ್ರತೆಯನ್ನು ಒಳಗೊಂಡೇ ವ್ಯಕ್ತಗೊಳ್ಳುತ್ತಿರುತ್ತದೆ. ಹಾಗೆಯೇ ಕುಂಬರಿ ಬೇಸಾಯವೂ ಕೂಡ ಸಾಮೂಹಿಕವಾಗಿ ಕೈಗೊಳ್ಳುವ ಅತ್ಯಂತ ಪ್ರಾಚೀನವಾದ ಕೃಷಿಪದ್ಧತಿಯಾಗಿದೆ.

ಬಹುಶಃ ಮಾನವ ಬೇಟೆ ಮತ್ತು ಆಹಾರ ಸಂಗ್ರಹಣೆಯಿಂದ ವ್ಯವಸಾಯದ ವ್ಯವಸ್ಥೆಗೆ ಪ್ರಥಮವಾಗಿ ಪಾದಾರ್ಪಣೆ ಮಾಡಿ ಇಟ್ಟ ಮೊದಲ ಹೆಜ್ಜೆಯೇ ಸಹಜ, ಸರಳ ಕೃಷಿಪದ್ಧತಿ 'ಕುಂಬರಿ ಬೇಸಾಯ'ವಾಗಿರಬಹುದು.

**ಬುಡಕಟ್ಟು ಪಾರಂಪರಿಕ ಕೃಷಿ ವಿಜ್ಞಾನ**

ಆಧುನಿಕ ಕೃಷಿವಿಜ್ಞಾನದ ಮೂಲ ಸೆಲೆ ಉಗಮವಾಗಿದ್ದೆ ಬುಡಕಟ್ಟು ಪಾರಂಪರಿಕ ಕೃಷಿ ಜ್ಞಾನದ ಮೂಲಕ. ಕೃಷಿಯ ಮೂಲ ಬೇರುಗಳ ಎಳೆಗಳನ್ನು ಹುಡುಕಲು ಬುಡಕಟ್ಟುಗಳ ಸಾಂಪ್ರದಾಯಿಕವಾದ ಕೃಷಿಗಳನ್ನು ಅರಿಯಬೇಕಾಗುತ್ತದೆ. ನಾಗರಿಕ ಸಮಾಜದ ಆಧುನಿಕ ಕೃಷಿಗೂ, ಬುಡಕಟ್ಟು ಸಮುದಾಯಗಳ ಸಾಂಪ್ರದಾಯಕವಾದ ಪಾರಂಪರಿಕ ಕೃಷಿಗಳಿಗೂ ಅದರ ಮೂಲ ಆಶಯದಲ್ಲಿ ವ್ಯತ್ಯಾಸಗಳಿವೆ. ಬುಡಕಟ್ಟು ಸಮುದಾಯಗಳಲ್ಲಿ ಅರಣ್ಯ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಇಲ್ಲಿ ಕಾಡು ಮತ್ತು ಸಮುದಾಯಗಳ ಸಂಬಂಧ ಅವಿಚ್ಛಿನ್ನವಾದದ್ದು. ಕಾಡು ಮತ್ತು ಸಮುದಾಯಗಳ ಬದುಕಿನ ಭಾಗವಾಗಿಯೇ ಪರಿಗಣಿಸಲ್ಪಟ್ಟಿದ್ದು, ಕಾಡನ್ನೆಂದೂ ಸಮುದಾಯಗಳು ಕೇವಲ ಸಂಪನ್ಮೂಲ ಒದಗಿಸುವ, ಮಳೆ ಸುರಿಸುವ ಆದಾಯವನ್ನೀಯುವ ಭೂಭಾಗಗಳನ್ನಾಗಿ ಯಾವತ್ತೂ ಪರಿಗಣಿಸಿಲ್ಲ. ಬುಡಕಟ್ಟು ಸಮುದಾಯಗಳ ಸಂಸ್ಕೃತಿ ಮತ್ತು ಆಧ್ಯಾತ್ಮಿಕ ಜಗತ್ತನ್ನು ಕಾಡು ರೂಪಿಸುತ್ತಲೇ ಬಂದಿವೆಯಾದ್ದರಿಂದ ಸಮುದಾಯಗಳು ಯಾವತ್ತೂ ಅರಣ್ಯವನ್ನು ಉಪಯೋಗವಾದಿ ದೃಷ್ಟಿಕೋನದಿಂದ ನೋಡುವ ಪರಿಪಾಟ ಬೆಳೆಸಿಕೊಳ್ಳಲಿಲ್ಲ. ಹಾಗಾಗಿ ಕಾಡು ಒಂದು 'ಆಸ್ತಿ'ಯಾಗಿ ಪರಿಗಣಿಸಲ್ಪಡಲಿಲ್ಲ. ಸಮುದಾಯಗಳ ಸಾಮಾಜಿಕ ಸಂಸ್ಥೆಗಳಾದ ಬೇಟೆ, ಪಶುಪಾಲನೆ ಮತ್ತು ಆದಿಮ ಕೃಷಿ ಹಂತಗಳಲ್ಲಿ ಅರಣ್ಯ ಬಳಕೆಯಾಗುವ ಮೂಲಕ ತಮ್ಮ ಬದುಕಿನ ಆರ್ಥಿಕತೆಯನ್ನು ರೂಪಿಸಿಕೊಳ್ಳುವಲ್ಲಿ ಕಾಡು ಉಪಯುಕ್ತ ಪಾತ್ರವನ್ನು ವಹಿಸುತ್ತಲೇ ಬಂದಿದೆ. ಮನುಷ್ಯ ಆದಿಮಾನವ ಸಮಾಜದಿಂದ ವಿಕಸಿತನಾಗಿ ತನ್ನ ಆಹಾರದ ನಿರಂತರತೆಯಾಗಿ ಭದ್ರತೆಗಾಗಿ ಆದಿಮ ಕೃಷಿಪದ್ಧತಿಗಾಗಿ ರೂಡಿಸಿಕೊಂಡಿದ್ದ ಸಾಂಪ್ರದಾಯಿಕ 'ಕುಮ್ರಿ' ಬೇಸಾಯ ಇಂದಿಗೂ ಅದು ಇಂದಿನ ಆದಿವಾಸಿಗಳಿಗೂ ಪ್ರಸ್ತುತವಾಗಿದೆ. ಈ ಬೇಸಾಯ ಪದ್ಧತಿಯಲ್ಲೆಲ್ಲಾ ಕಾಡಿನ ಸತ್ವವನ್ನು ಹೀರಿ ಬಂಜೆಗೊಳಿಸುವ ಯಾವುದೇ ಅಂಶಗಳಲ್ಲಿ ಬದಲಾಗಿ ಮಣ್ಣಿನ ಸಾವಯವತೆಯನ್ನು ಅರಣ್ಯದ ಜೊತೆ ಜೊತೆಗೆ ಸಂರಕ್ಷಿಸಿಕೊಳ್ಳುವಂತಹ ಪದ್ಧತಿಯಾಗಿಯೇ ಆಧುನಿಕ ಕೃಷಿ ಜ್ಞಾನಕ್ಕೂ ಒಂದು ಮಾದರಿಯಾಗೇ ಉಳಿದಿದೆ. ಈ ಕಾರಣದಿಂದ ಬುಡಕಟ್ಟು ಸಮುದಾಯಗಳಿಗೆ ಕಾಡು ಭೋಗಿಸಲ್ಪಡುವ ಆಸ್ತಿಯಾಗಲಿಲ್ಲ. ಆದ್ದರಿಂದ ಕಾಡಿನ ಮೇಲಿನ ಖಾಸಗಿ ಒಡೆತನವು ಈ ಸಮುದಾಯಗಳಿಗೆ ಸಾಧ್ಯವಾಗಲಿಲ್ಲ. ಆಧುನಿಕ ಪರ್ವ ಕಾಲಘಟ್ಟದವರೆಗೆ ಭಾರತದಲ್ಲಿ ಈ ಸ್ಥಿತಿ ಮುಂದುವರಿದುಕೊಂಡು ಬಂದಿತು. ಆದರೆ ವಸಾಹತು ಆಡಳಿತ ಯಾವತ್ತು ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿತೋ ಅಂದಿನಿಂದ ಅರಣ್ಯವು ಆಸ್ತಿಯಾಗಿ ರೂಪುಗೊಂಡಿತು. ಮಾರುಕಟ್ಟೆಯಲ್ಲಿ ಬಿಕರಿಯಾಗುವ

'ವಸ್ತು'ವಾಗಿ ಅರಣ್ಯ ಪರಿಭಾವಿಸಲ್ಪಟ್ಟಿತು. ಆಳ್ವಿಕೆಯಲ್ಲಿ ಸಮುದಾಯಗಳ ಬದುಕಿನ ಭಾಗವಾಗಿದ್ದ ಅರಣ್ಯವು ಸರಕಾರದ ಬಂಡವಾಳಶಾಹಿಗಳ ಖಾಸಗಿ ಆಸ್ತಿಯಾಗಿ ಬದಲಾಯಿತು. ಇದರ ಜೊತೆಗೆ ಸಮುದಾಯ ಮತ್ತು ಅರಣ್ಯಗಳ ನಡುವೆ ಇದ್ದ ಪಾರಂಪರಿಕ ಸಂಬಂಧಗಳಿಗೂ ಈ ಹಂತದಲ್ಲಿ ಸಂಚಕಾರ ಬಂದೊದಗಿತು. ಕಾಡು ಕಂಪನಿ ಆಡಳಿತದ ಸಂದರ್ಭದಲ್ಲಿ ಉಪಭೋಗಕ್ಕೆ ಒಳಗಾಗತೊಡಗಿತು. ಕಾಡು ಹೀಗೆ ಕಂಪನಿಗಳ ಆಡಳಿತದ ವಿಸ್ತರಣೆಗೆ ಬಳಕೆಯಾಗ ತೊಡಗಿದ ಮೇಲೆ ಸಮುದಾಯ ಮತ್ತು ಅರಣ್ಯಗಳ ನಡುವಿನ ಪಾರಂಪರಿಕ ಸಂಬಂಧವು ಕ್ರಮೇಣ ನಶಿಸತೊಡಗಿತು. ಅದರಲ್ಲಿ ಅರಣ್ಯಗಳಲ್ಲಿ ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯ ನೀತಿಗಳಿಂದ ಅತಂತ್ರ ಸ್ಥಿತಿಗೆ ತಳ್ಳಟ್ಟರು. ಕಾಡನ್ನು ಸರ್ವಸ್ವವೆಂದು ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯ ನೀತಿಗಳಿಂದಾಗಿ ತಮ್ಮ ವಾಸದ ನೆಲೆಗಳಲ್ಲಿಯೇ ಅನ್ಯರಾಗುವ ಬಿಕ್ಕಟ್ಟನ್ನು ಎದುರಿಸಬೇಕಾಗಿ ಬಂತು.

ವಸಾಹತು ಮತ್ತು ಬುಡಕಟಟುಗಳ ಈ ಕಾರಣಕ್ಕೆ ನಡೆಸಿದ ಸಂಘರ್ಷದಲ್ಲಿ ಬುಡಕಟ್ಟುಗಳನ್ನು ಹತ್ತಿಕ್ಕುವ ಭಾಗವಾಗಿ ವಸಾಹತು ಸೈನ್ಯದ ಕಾರ್ಯಾಚರಣೆಗಳನ್ನು ನ್ಯಾಯಬದ್ಧಗೊಳಿಸಲು ಅರಣ್ಯ ಕಾಯ್ದೆಗಳನ್ನು ರೂಢಿಗೆ ತಂದಿತು. ಅಂದಿನಿಂದ ಸಮುದಾಯ ಮತ್ತು ಅರಣ್ಯಗಳ ನಡುವೆ ಶತಶತಮಾನಗಳಿಂದ ರೂಢಿಯಲ್ಲಿದ್ದ ಅವಿನಾಭಾವ ಸಂಬಂಧಗಳಾಗಿ ಕೊನೆಗೊಂಡಿತು. ಕಾಡು ವಸಾಹತು ಆಡಳಿತದ ಖಾಸಗಿ ಆಸ್ತಿಯಾಯಿತು. ಈ ಆಸ್ತಿಯನ್ನು ಸಂರಕ್ಷಿಸುತ್ತೇವೆಂದು ಹೇಳಿ ಆಡಳಿತ ಹೊರಟಿತು. ಆದರೆ ಯಾರಿಂದ ಅರಣ್ಯವನ್ನು ರಕ್ಷಿಸಲಾಗುತ್ತದೆ ಎಂಬುಧು ಅಗೋಚರ ಸಂಗತಿಯೇ ಆಗಿತ್ತು. ಅರಣ್ಯ ಯಾರದ್ದು? ಯಾರು ಅದನ್ನು ಬಳಸಬೇಕು? ಕಾಡಲ್ಲಿ ಯಾರಿರಬೇಕು? ಯಾರಿರಬಾರದು? ಎಂಬೆಲ್ಲಾ ಸಂಗತಿಗಳು ಈ ಅರಣ್ಯನೀತಿಗಳಿಂದ ಸೃಷ್ಟಿಗೊಂಡಿತು. ಈವತ್ತಿನ ಸಂರಕ್ಷಿತ ಅರಣ್ಯ, ಅಭಯಾರಣ್ಯ, ವನ್ಯಮೃಗ ಸಂರಕ್ಷಣೆ, ರಾಷ್ಟ್ರೀಯ ಉದ್ಯಾನವನ, ಹುಲಿ ಸಂರಕ್ಷಿತ ಪ್ರದೇಶ ಇತ್ಯಾದಿಗಳು ಹುಟ್ಟಿಕೊಂಡವು ಸ್ವಾತಂತ್ರ್ಯ ಬಂದ ಇಷ್ಟು ವರ್ಷ ಕಳೆದರೂ ಬ್ರಿಟಿಷ್ ಸರ್ಕಾರದ ಅರಣ್ಯ ನೀತಿಯು ಯಥಾವತ್ತು ನಕಲಾಗಿಯೇ ಉಳಿದುಕೊಂಡಿದೆ. ಇದರ ಮುಂದುವರಿದ ಭಾಗವೇ ಆಧುನಿಕ ಕೃಷಿಯಾಗಿರುವುದರಿಂದ ಆದಿವಾಸಿಗಳ ಪಾರಂಪರಿಕ ಕೃಷಿ ಜ್ಞಾನಕ್ಕೂ ಈವತ್ತಿನ ಪದ್ಧತಿಗೂ ಅಜಗಜಾಂತರ ವ್ಯತ್ಯಾಸವನ್ನು ನಾವು ಕಾಣಬಹುದಾಗಿದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಹೊರತದ ಬುಡಕಟ್ಟು ಅಧ್ಯಯನ ಸಂಪುಟ ಮೂರು ಸಂಚಿಕೆ ಎರಡರಲ್ಲಿ ಇದೇ ವಿಚಾರ ಕುರಿತು ಪ್ರಕಟವಾಗಿದ್ದ ಲೇಖನವನ್ನು ಯಥಾಪ್ರಕಾರ ಇಲ್ಲಿ ಹಂಚಿಕೊಳ್ಳುತ್ತಿದ್ದೇನೆ.

ಅತಿ ಪುರಾತನವೆನ್ನಲಾದ, ಬುಡಕಟ್ಟು ಜನರ ಸಂಸ್ಕೃತಿಯ ಪ್ರತೀಕವಾಗಿದ್ದ, ನೈಸರ್ಗಿಕ ಸಂಪ್ರದಾಯಬದ್ಧ 'ಕುಂಬರಿ ಬೇಸಾಯ' ಪದ್ಧತಿ ಇಂದು ಅವನತಿಯ ಅಂಚಿನಲ್ಲಿದೆ. 1986ರಲ್ಲಿ

ಸರ್ಕಾರ ತಂದ ಆದೇಶ ಸಂಖ್ಯೆ: GO74.B3/8/GFL/72-73 ಅರಣ್ಯ ಇಲಾಖೆಯ ಬೇಜವಾಬ್ದಾರಿ ತನದಿಂದಾಗಿ ಜೋಯಿಡಾ ತಾಲ್ಲೂಕಿನ ದಟ್ಟ ಕಾಡಿನೊಳಗಿನ ಬುಡಕಟ್ಟು ಜನಗಳ 8 ಸಾವಿರ ಎಕರೆ ಕಳೆದುಕೊಂಡ ಸಾವಿರಾರು ಜನರು ಬೀದಿಗೆ ಬಿದ್ದಿದ್ದಾರೆ. ನಿರ್ವಾಹವಿಲ್ಲದೆ ಕೂಲಿಗಾಗಿ ಗೋವಾ ರಾಜ್ಯಕ್ಕೆ ಗುಳೆಯದ್ದು ವಲಸೆ ಹೋಗಿರುವವರ ಸಂಸ್ಕೃತಿ ಮತ್ತು ಬದುಕು ದುಸ್ತರವಾಗಿದೆ.

ವಾಣಿಜ್ಯ ಬೆಳೆಗಳನ್ನು ಬೆಳೆಸುತ್ತಿರುವ ಪೈಪೋಟಿಯ ಇಂದಿನ ದೊಡ್ಡ ಅಲೆಯಲ್ಲಿ ಸಂಪೂರ್ಣವಾಗಿ ನಶಿಸಿ ಹೋಗುತ್ತಿರುವ ರಾಗಿ, ನವಣೆ, ಸಜ್ಜೆ, ಆರ್ಕ ಮತ್ತು ಕಂದಮೂಲಗಳೆಂಬ ಆಹಾರಧಾನ್ಯ ಮತ್ತು ಪದಾರ್ಥಗಳನ್ನು ಇನ್ನೂ ಜೀವಂತವಾಗಿರಿಸಿಕೊಂಡಿದ್ದ ಕುಂಬರಿ ಬೇಸಾಯದ ಮೂಲ ಸೆಲೆಯಾಗಿದ್ದ ಜಮೀನನ್ನು ಅರಣ್ಯ ಇಲಾಖೆ ಮತ್ತು ಸರಕಾರ ಕಾನೂನು ಕಾಯ್ದೆಗಳಡಿಯಲ್ಲಿ ಹೊಸಕಿ ಹಾಕಿದೆ. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನಲ್ಲಿ ನಡೆಸಿಕೊಂಡು ಬರುತ್ತಿರುವ ಈ ವಿಶಿಷ್ಟ ಸಹಜಕೃಷಿಯನ್ನು ಆಜುಬಾಜಿನ ಗೋವಾ, ಶಿವಮೊಗ್ಗದ ಕುಣಬಿ ಮತ್ತು ಮೈಸೂರು ಪ್ರದೇಶದ ಜೇನುಕುರುಬ, ಬೆಟ್ಟಕುರುಬ, ಸೋಲಿಗ ಬುಡಕಟ್ಟಿನವರಲ್ಲಿ ಕಾಣಬಹುದಾಗಿತ್ತು.

ಜೋಯಿಡಾ ತಾಲ್ಲೂಕಿನಲ್ಲಿ ಶೇಕಡ 70ರಷ್ಟು ಕುಣಬಿಗಳು ಹಾಗೂ ಶೇಕಡ 30 ರಷ್ಟು ಹಿಂದೂ ಮರಾಠ, ದೇವಳಿ ಮತ್ತು ಅನಬರ ಸಮುದಾಯದವರು ಈ ಕುಂಬರಿ ಬೇಸಾಯ ಮಾಡುತ್ತಿದ್ದು ಅವರ ಬದುಕಿನ ಮೂಲ ಉತ್ಪನ್ನ ಕಳೆದುಕೊಂಡದ್ದರಿಂದ ವಂಚಿತ ರೈತರು ಬಡತನದ ಬೇಗೆಯಲ್ಲಿ ನರಳುತ್ತಿದ್ದಾರೆ. ಆಧುನಿಕತೆ ಮತ್ತು ನಾಗರಿಕತೆಗಳ ಅಲೆಗಳಲ್ಲಿ ಕೊಚ್ಚಿ ಹೋಗಿರುವ ಅನೇಕ ಸಂಸ್ಕೃತಿಗಳಲ್ಲಿ ಇನ್ನೂ ಉಸಿರಾಡುತ್ತಿದ್ದ ಕುಂಬರಿ ಬೇಸಾಯದ ಸಂಸ್ಕೃತಿ, ಸರಕಾರದ ನಿರ್ಲಕ್ಷ್ಯ ಕಾಯದೆಗಳಿಂದಾಗಿ ಕುಂಬರಿ ಸಂಸ್ಕೃತಿಯನ್ನು ತನ್ನ ಕೊನೆಕೊಂಡಿಯನ್ನು ಕಳಚಿಕೊಂಡು ನಾಶವಾಗಿ ಇತಿಹಾಸದ ಪುಟ ಸೇರುವುದರಲ್ಲಿತ್ತು.

**ಕುಂಬರಿ ಬೇಸಾಯ! ಏನಿದರ ವೈಶಿಷ್ಟ್ಯ?**

ಪಾರಂಪರಿಕವಾಗಿ ಬುಡಕಟ್ಟು ಸಮುದಾಯಗಳು ನಡೆಸಿಕೊಂಡು ಬರುತ್ತಿರುವ ಸಾಂಪ್ರದಾಯಿಕ ಬೇಸಾಯ ಅತಿ ಪುರಾತನವಾದ್ದು. ಕಾಡಿನ ಬೆಟ್ಟಗಳ ಇಳಿಜಾರಿನ ಪ್ರದೇಶಗಳಲ್ಲಿ ನೆಲವನ್ನು ಉಳದೇ, ಯಾವುದೇ ತರಹದ ನೇಗಿಲಿನಂತಹ ಸಲಕರಣೆಯನ್ನು ಭೂಮಿಯ ಎದೆಗೆ ಚುಚ್ಚದೇ ನೇರವಾಗಿ ರಾಗಿ, ನವಣೆ, ಸಜ್ಜೆಗಳನ್ನು ಮಳೆಗಾಲದಲ್ಲಿ ಚೆಲ್ಲಿ ಬೇರೆ ವಿಧದ ಇತರ ಕಳೆಗಳೊಂದಿಗೆ ಸಹಜವಾಗಿ ನೈಸರ್ಗಿಕವಾಗಿ ಬೆಳೆಯುವ ವಿಶಿಷ್ಟ ಸಾಂಪ್ರದಾಯಿಕ ಬೇಸಾಯವೇ 'ಕುಂಬರಿ ಬೇಸಾಯ'!.

ದವಸಧಾನ್ಯಗಳನ್ನಲ್ಲದೆ ಕಂದ ಮೂಲಗಳಾದ ಜಾಡ್‌ಕಣಂಗ್, ಕಾಟೆಕಣಂಗ್, ನಾಗರಕೋನ್ ಹಾಗೂ ದನಕರುಗಳಿಗೆ ಮೇವನ್ನು ಸ್ವಲ್ಪ ಭಾಗಗಳಲ್ಲಿ ಬೆಳೆಸಿಕೊಳ್ಳುವ ಈ ಕೃಷಿಪದ್ಧತಿ ಬುಡಕಟ್ಟು ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಹದು. ಅನಾದಿಕಾಲದಿಂದಲೂ ನಡೆಸಿಕೊಂಡು ಬಂದಿರುವ ಈ ಕೃಷಿಯನ್ನು ಪೂರ್ವಜರು ಬೆಟ್ಟದ ಇಳಿಜಾರಿನ ಭಾಗದ ಕಾಡನ್ನು ಸಮ ಮಾಡಿ ಸುಟ್ಟು ದವಸಗಳನ್ನು ಚೆಲ್ಲುತ್ತಿದ್ದರು. ಒಮ್ಮೆ ಇವರು ನಿರ್ದಿಷ್ಟ ಜಾಗದಲ್ಲಿ ಒಂದು ಬೆಳೆ ಪಡೆದರೆ ಅದೇ ಜಾಗದಲ್ಲಿ 3ರಿಂದ 5 ವರ್ಷಗಳವರೆಗೂ ಅಲ್ಲಿ ಕೃಷಿ ಮಾಡುವುದಿಲ್ಲ. ಬದಲಾಗಿ ಪಕ್ಕದ ನಿರ್ದಿಷ್ಟ ಜಾಗದಲ್ಲಿ ಬೆಳೆ ತೆಗೆಯುತ್ತಾರೆ. ನಂತರ ಮೊದಲಿನ ಜಾಗದಲ್ಲಿ ಬೆಳೆದ ಗಿಡಗಂಟೆಗಳಿಗೆ ಪುನಃ ಬೆಂಕಿಕೊಟ್ಟು ಸಮಮಾಡಿ ಪುನಃ ಜಾಗ ಹದಮಾಡಿಕೊಳ್ಳುತ್ತಾರೆ. ಹೀಗಾಗಿ ಇದನ್ನು Shifting Cultivation Zoom ಅಥವಾ cultivation ಎಂದೂ ಕರೆಯುತ್ತಾರೆ. ಈ ರೀತಿ ಮಾಡುವುದರಿಂದ ಯಾವುದೇ ಗೊಬ್ಬರ ಬಳಸದೇ ನೆಲವನ್ನು ತನ್ನಷ್ಟಕ್ಕೆ ನೈಸರ್ಗಿಕವಾಗಿ ಫಲವತ್ತುಗೊಳಿಸುವ ಸಹಜ ಕೃಷಿಯ ರೀತಿಯಿದು. 'ಸಹಜ ಕೃಷಿಯ ಹರಿಕಾರ ಜಪಾನಿನ ಪುಕೋವೋಕೊ ಪ್ರಕ್ರಿಯೆಯನ್ನು (concept) ಜ್ಞಾಪಿಸುವ' ಈ ಬೇಸಾಯ ಪದ್ಧತಿ ಅನಾದಿಕಾಲದ ಉತ್ತಮ ತಂತ್ರಜ್ಞಾನವನ್ನು ಹೊಂದಿರುವಂತಹದು.

ಇಲ್ಲಿ ಬೆಳೆಯುವ ದವಸಧಾನ್ಯಗಳು ಮಾರುಕಟ್ಟೆಯಲ್ಲಿ ಲಭ್ಯವಾಗುತ್ತಿಲ್ಲ. ಕರ್ನಾಟಕದ ದಕ್ಷಿಣ ಭಾಗಗಳಲ್ಲೇ ಹೆಚ್ಚು ಬೆಳೆಯುವ ರಾಗಿ ದಾವಣಗೆರೆ ಭಾಗದಿಂದ ಉತ್ತರದ ಕಡೆಗೆ ಕಂಡುಬರುವುದಿಲ್ಲ. ಅಲ್ಲಿಂದ ಸುಮಾರು 300-400 ಕಿ.ಮೀ. ನಂತರ ಬುಡಕಟ್ಟುಗಳಲ್ಲಿ(ಜೋಯಿಡಾ) ಬೆಳೆಯುವ ರಾಗಿ Finger millet (Eleusine Coracana), ಸ್ವಚ್ಛ Tallmillet(Setrala Italica), ನವಣೆ Hog millet (panicum milacecum) ತಳಿಗಳು ವಿಭಿನ್ನವಾದವುಗಳು. ಈಗ ಇವು ಅವನತಿಯ ಅಂಚಿನಲ್ಲಿವೆ.

ಈ ಬೇಸಾಯವನ್ನು ಜನ ರೂಢಿಸಿಕೊಂಡಿರುವುದರ ಹಿನ್ನೆಲೆಗೆ ಭೌಗೋಳಿಕ ಕಾರಣಗಳೂ ಇವೆ. ಮೊದಲನೆಯದಾಗಿ ಸದಾ ಮಳೆಯಾಗುವ ದಟ್ಟಕಾಡಿನ ಭಾಗವಾದ ಡಿಗ್ಗಿ, ದೂದಮೊಳೆ, ಬಜಾರ್‌ಕಣಂಗ್ ಸಿಸ್ಸೈ, ಸಿರೋಳಿ, ಮಾಯಿರೇ, ಬೊಂಡೇಲಿ ಕಡೆಗಳಲ್ಲಿ ನೀರು ರಭಸವಾಗಿ ಹರಿಯುವುದರಿಂದ ನೆಲಮಟ್ಟದಲ್ಲಿ ಭತ್ತ ಬೆಳೆಯಲಾಗುವುದಿಲ್ಲ. ಜನ ಅಲ್ಲಿ ಕೃಷಿ ಮಾಡಲಿಲ್ಲ. ಸಹಜವಾಗಿ ಅಲ್ಲಿ ರೆವಿನ್ಯೂ ಜಾಗ ಕಡಿಮೆ. ಈ ಕಾರಣದಿಂದ ಜನ ಬೆಟ್ಟದ ಇಳಿಜಾರಿನಲ್ಲಿ ಅನಿವಾರ್ಯವಾಗಿ ಈ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡು ಬಂದಿರಬಹುದು. ತಮ್ಮ ಸ್ವಂತ ಬಳಕೆಗೋಸ್ಕರ ಈ ಕೃಷಿಯನ್ನು ಅವಲಂಬಿಸಿರುವುದು ಕಂಡುಬರುತ್ತದೆ.

**ಜೋಯಿಡಾ ತಾಲ್ಲೂಕಿನಲ್ಲಿ ಅಸ್ತಿತ್ವದಲ್ಲಿದ್ದ ಕುಮ್ರಿ ಬೇಸಾಯ ಪದ್ಧತಿ**

**ಕುಂಡಲ ಭಾಗ:** ಕುರಾವಲಿ, ಕಾರಸಿಂಗಳ, ಕೆಲೂಲಿ, ಗಟ್ಬಾವ್, ಲಾಂಡೆ, ಲಜಾಲಾವಳಿ.

**ಕಾರ್ಟೋಳಿ ಭಾಗ:** ಮೂಡಿಯೇ, ಕಸಂಬೆ, ವಾಗೇಲಿ, ಸಿರೋಳೀ, ಸಿಸ್ಸೈ, ಖನಗಾವ್

**ಅಣಸಿ ಭಾಗ:** ಮದಗಾವ್, ಬಾರಾಡಿ, ಬಾಡ್‌ಪೋಲಿ, ಪಾಟ್ನೆ, ಗಾಳ್, ಅಂಬಾಳ್, ಕುಂಗಾಳ್, ನುಜ್ಜಿ ಬಿಡೋಲಿ ಪಾಟ್ನೆ.

**ಡಿಗ್ಗಿ ಭಾಗ:** ದೂದಮೊಳೆ, ಬಜಾರ್‌ಕಣಂಗ್, ಅಸೂಳಿ, ಬೊಂಡೇಲಿ, ಬಳಬಳೆ, ವಿರಲ್, ಸುಲಾವಳಿ, ಕರಂಜಿ, ಮಾಯಿರೆ, ತೇರಾಳಿ.

**ಅಖೇತಿ ಭಾಗ:** ಮೇಡಾ, ಅನಮೋಡ್, ಕುಂಬಾರಡ, ವರ್ಲೇವಾಡಿ, ಪಾಲ್ದಾ, ಕರಂಬಳ, ತಿನೇಘಾಟ್, ವಾಟ್ಲ, ವಿರಂಜೋಲ್, ತಿನೆಗಾಲಿ, ದೇವಳಿ(ಟಿ), ಕಾತ್ತೆಲೆಗಾಳಿ, ರಂಗಾರೂಕ್, ಲೋಗಾರವಾಡ, ಸಾವಳೆವಾಡ, ಏರಲೆವಾಡ, ಪಾಯಸವಾಡಿ, ವಾಡಕರವಾಡ, ಮಾರಸಂಗಳ.

**ಜಗಲ್‌ಪೇಟೆ ಭಾಗ:** ದುರಗಟ್ಟಿ, ಇಳೆಯದಾಬೆ, ಚಾಂದವಾಡಿ, ಕಾಪುರ, ಅಸು, ಗೋಡಸೇತ್, ಬೋರೆಗಾಳಿ.

**ಜೋಯಿಡಾ ಭಾಗ:** ಪಾಂಜೇಲಿ, ಕರಂಜೋಯಿಡಾ, ಜೋಯಿಡಾ

**ಕುಂಬಾರವಾಡ ಭಾಗ:** ತೆಲೂಲಿ, ಡೇರಿಯೇ, ಕಾಟೇಲಿ, ಕೊಂದರ್, ಮೈನಾಳ್, ಕಳಸಾಯಿ

**ರಾಮನಗರ ಭಾಗ:** ಕುಂಬೇಲಿ, ವಿರಲ್, ಸೆರೆವಾಡ, ಪೋಟೋಳಿ, ಸಾತೋಡಿ ಈ ಭಾಗಗಳಲ್ಲಿ ಈ ಬೇಸಾಯ ಪದ್ಧತಿ ರೂಢಿಯಲ್ಲಿತ್ತು.

**ಕುಂಬರಿ ಒಡೆತನ ಯಾರದು?**

ಕುಂಬರಿ ಬೇಸಾಯ ಮಾಡುತ್ತಾ ಬಂದಿರುವ ರೈತರ ಅಭಿಪ್ರಾಯವನ್ನು ಕೇಳಿದಾಗ ಜನ ಅನಾದಿಕಾಲದಿಂದಲೂ ಈ ಕೃಷಿ ನಡೆಸಿಕೊಂಡು ಬರುತ್ತಿದ್ದಾರೆ. ಬ್ರಿಟಿಷರ ಕಾಲದಲ್ಲಿ ಈ ಜಮೀನುಗಳ ಸಲುವಾಗಿ 1801ರಲ್ಲಿ (Lease rent) ತಿರ್ವೆ ತುಂಬಿಕೊಳ್ಳುವುದರ ಮೂಲಕ ಕುಂಬರಿ ಜಾಗ ದಾಖಲೆಗಳಿಗೆ ಒಳಪಟ್ಟಿತು. ಅಂದೇ ಬ್ರಿಟಿಷರು ಸರ್ವೆ ಮಾಡಿ ಜಮೀನಿನ ಸುತ್ತಲೂ ಬಂದಾರ ಕಲ್ಲುಗಳನ್ನು ನೆಟ್ಟಿದ್ದಾರೆಂದು ಈಗಲೂ ತಮ್ಮ ಜಮೀನುಗಳಲ್ಲಿ ಜನ ತೋರಿಸುತ್ತಾರೆ.

ಕುಂಬರಿ ಬೇಸಾಯದ ಮತ್ತೊಂದು ವೈಶಿಷ್ಟ್ಯವೆಂದರೆ ರೈತರು ಇದನ್ನು ಸಾಮೂಹಿಕವಾಗಿ ಬೇಸಾಯ ಮಾಡಿ ಬಂದ ಫಲವನ್ನು ಹಳ್ಳಿಯ ಎಲ್ಲರೂ ಹಂಚಿ ಕೊಳ್ಳುತ್ತಿದ್ದದ್ದು. ಹೀಗಾಗಿ ಬ್ರಿಟಿಷರು ದಾಖಲೆಗಳನ್ನು ಸರಳಗೊಳಿಸುವ ಸಲುವಾಗಿಯೋ ಏನೋ ಜಮೀನಿನ ದಾಖಲೆಗಳನ್ನು ಹಳ್ಳಿಯ ಪ್ರಮುಖ ನಾಯಕನ ಹೆಸರಿಗೆ ಬರೆದಿದ್ದಾರೆ. ಅದರಂತೆ ಹಳ್ಳಿಯ ಮುಖ್ಯಸ್ಥನ ಹೆಸರಲ್ಲಿ ತೆರಿಗೆಯನ್ನು ಪ್ರತಿ ವರ್ಷ ಕಟ್ಟಿಸಿಕೊಳ್ಳುತ್ತಾ ಬಂದಿದ್ದಾರೆ. ಬ್ರಿಟಿಷ್ ಕಾಲದಿಂದ ನಂತರ ಭಾರತ ಸರಕಾರ ಆಡಳಿತ ಬಂದಾಗಿನಿಂದಲೂ ತೆರಿಗೆ ಕಟ್ಟುತ್ತಲೇ ಬಂದಿದ್ದಾರೆ. ತೆರಿಗೆ ತುಂಬಿದ ಪಾವತಿಗಳು ಈಗಲೂ ದಾಖಲೆಗಳಾಗಿ ಜನರಲ್ಲಿಯೇ ಉಳಿದಿವೆ. ಹೀಗಾಗಿ ಹಳ್ಳಿಯ

ನೂರಾರು ಎಕರೆ ಜಮೀನು ಹಳ್ಳಿಯ ಒಬ್ಬ ಮುಖ್ಯಸ್ಥನ ಹೆಸರಿಗೆ ಬ್ರಿಟಿಷ್ ಕಾಲದಿಂದಲೂ ದಾಖಲಾಗಿ ಉಳಿದುಕೊಂಡು ಬಂದಿದೆ.

ಹೀಗೆ ಒಂದು ಅಂದಾಜಿನ ಪ್ರಕಾರ ಇಡೀ ಜೋಯಿಡಾ ತಾಲ್ಲೂಕಿನಲ್ಲಿ ಸುಮಾರು 8 ಸಾವಿರ ಎಕರೆ ಜಮೀನು ಕುಂಬರಿ ಬೇಸಾಯಕ್ಕೊಳಪಟ್ಟಿದೆ. ಇದರಲ್ಲಿ ಕುಂಡಳ ಗ್ರಾಮದ್ದೇ ಮೇಲುಗೈ ಅಲ್ಲಿ 800 ಎಕರೆ ಕುಂಬರಿ ಇದೆ. ಹಾಗೆ ಅಣಸಿಯ ಭಾಗದಲ್ಲಿ 400 ಎಕರೆ ವಿರಂಜೋಲ್ ಭಾಗದಲ್ಲಿ 300 ಎಕರೆ, ಪಾಲ್ಡಿ ಭಾಗದಲ್ಲಿ 500 ಎಕರೆ, ಅನಮೋಡ್ ಭಾಗದಲ್ಲಿ 100, ಮೂಡಿಯೇ 50, ದೂದಮೊಳೆ 80, ದಿಗ್ಗಿ 100 ಹೀಗೆ ಪ್ರತಿಹಳ್ಳಿಗೆ ಕನಿಷ್ಠ 50ರಿಂದ 60 ಎಕರೆಯಂತೆ ಒಟ್ಟು 8 ಸಾವಿರ ಎಕರೆ ಜಾಗದಲ್ಲಿ ಜೋಯಿಡಾ ರೈತರು ಕುಂಬರಿ ಬೇಸಾಯ ನಡೆಸಿಕೊಂಡು ಬರುತ್ತಿದ್ದರು.

ಇದರಲ್ಲಿ ವಿರಂಜೋಲ್ ಹಳ್ಳಿಯನ್ನು ಉದಾಹರಣೆಗೆ ತೆಗೆದುಕೊಂಡರೆ ಅಲ್ಲಿ ಒಟ್ಟು 41 ಕುಟುಂಬಗಳಿವೆ. ಆದರೆ ಹಳ್ಳಿಯಲ್ಲಿ ಒಟ್ಟು ರೆವಿನ್ಯೂ ಜಮೀನು 29 ಎಕರೆ ಮಾತ್ರವಿದೆ. ಅಷ್ಟರಲ್ಲಿ ಒಂದು ಹಳ್ಳಿಯ 41 ಕುಟುಂಬಗಳೂ ಬೆಳೆದು ಬದುಕಬೇಕು ಹೇಗೆ? ಈ ಕಾರಣದಿಂದಾಗಿಯೇ ಬ್ರಿಟಿಷ್ ಸರಕಾರ ಅವರು ನಡೆಸಿಕೊಂಡು ಬರುತ್ತಿದ್ದ 300 ಎಕರೆ ಕುಂಬರಿ ಜಾಗವನ್ನು ಬೆಳೆಯಲು ಅನುಮತಿ ಕೊಟ್ಟು ಅದಕ್ಕೆ ತೆರಿಗೆ ತುಂಬಿಸಿಕೊಳ್ಳುತ್ತಾ ಬಂದರು.

**ಕುಂಬರಿ ಬಗ್ಗೆ ಕಾಯ್ದೆ ಕಾನೂನುಗಳು ಏನು ಹೇಳುತ್ತವೆ**

ಕಾನೂನು ಕಾಯ್ದೆ ಲೆಕ್ಕ ಪತ್ರಗಳೇನಿವೆ ಎಂದು ಕುಂಬರಿ ವಂಚಿತ ರೈತರಲ್ಲಿ ಸಂದರ್ಶಿಸಿದಾಗ, ಅವರುಗಳ ಅಭಿಪ್ರಾಯದ ಪ್ರಕಾರ 1889ರಲ್ಲೇ ಬ್ರಿಟಿಷ್ ಸರಕಾರ ಕುಂಬರಿ ಬೇಸಾಯ ಮಾಡುತ್ತಿರುವ ರೈತರಿಂದ ತೆರಿಗೆ ವಸೂಲಿ ಮಾಡುವ ಸಲುವಾಗಿ Lease Rent ತಿರ್ವೆ ಹಣವನ್ನು ಪಾವತಿಸಿಕೊಳ್ಳುವುದರ ಮೂಲಕ ಕಾನೂನಿನ ಪರಿಧಿಯೊಳಗೆ ಕುಂಬರಿ ಬೇಸಾಯದ ಅಸ್ತಿತ್ವವನ್ನು ಸ್ಥಿರಗೊಳಿಸಿತು.

ಬ್ರಿಟಿಷ್ ಕಾಲದಿಂದಲೂ ಉತ್ತರ ಕರ್ನಾಟಕದ ಹಲವು ಭಾಗ ಮುಂಬೈ ಆಡಳಿತಕ್ಕೆ ಒಳಪಟ್ಟಿದ್ದರಿಂದ ಆಗಿನ ಎಲ್ಲಾ ದಾಖಲೆಗಳು ಹಳೆಯ ಮರಾಠಿ ಮೋಡಿ ಲಿಪಿಯಲ್ಲಿವೆ. ಈ ಕಾರಣ ಕರ್ನಾಟಕದ ಈಗಿನ ಅಧಿಕಾರಿಗಳಿಗೆ ಕುಂಬರಿ ಬಗ್ಗೆ ಇರುವ ಸ್ಪಷ್ಟ ದಾಖಲೆಗಳ ಬಗ್ಗೆ ಅರಿವಿಲ್ಲ. ಮೇಲೆ ತಿಳಿಸಿದಂತೆ ಕುಂಬರಿ ಬೇಸಾಯ ಸಾಮೂಹಿಕವಾಗಿದ್ದು ಅದರ ಒಡೆತನ ಹಳ್ಳಿಯ ನಾಯಕನ ಹೆಸರಲ್ಲಿ ಮಾತ್ರವಿತ್ತು. ಉದಾ: 1981–82ರಲ್ಲಿ ಅಖೇತಿಯ ನಾಗು ಲಕ್ಷ್ಮಣ್ ತಮ್ಮ 21 ಎಕರೆ ಕುಂಬರಿ ಜಮೀನಿಗೆ ರೂ.5.25 ತಿರ್ವೆ ಹಣವನ್ನು ಮೇಡಾ ಲಕ್ಷ್ಮಣ್ ತನ್ನ 57 ಎಕರೆ ಕುಂಬರಿಗೆ ರೂ.7.25 ಪೈಸೆಯನ್ನು, ಕರಂಬಳ ಹಳ್ಳಿಯ ವಸನು ಲಕ್ಷ್ಮಣ್ ತನ್ನ 57 ಎಕರೆ ಕುಂಬರಿಗೆ ರೂ.7.25 ಪೈಸೆಯನ್ನು,

ಹಳ್ಳಿಯ ಸುಕಟೋ ರಾಮು ತಮ್ಮ 50 ಎಕರೆ ಕುಂಬರಿ ಜಮೀನಿಗೆ ರೂ.2.50 ಪೈಸೆಯನ್ನು ಹಳಿಯಾಳದ ಅರಣ್ಯ ಇಲಾಖೆಗೆ ತುಂಬಿರುವುದು ಕಛೇರಿ ಕಡತದಲ್ಲಿ ದಾಖಲಾಗಿದೆ.

ಇದರ ಪ್ರಕಾರ ಒಂದು ಎಕರೆ ಅಂದಾಜು 25 ಪೈಸೆಯಂತೆ 1986ರವರೆಗೂ ರೈತರು ಹಣ ತುಂಬುತ್ತಾ ಬರುತ್ತಿದ್ದರು. ಆದರೆ ಇದ್ದಕ್ಕಿದ್ದಂತೆ "1986 ನಂತರ ಅರಣ್ಯ ಇಲಾಖೆ ರೈತರಿಗೆ ಇನ್ನು ಮೇಲೆ ಕುಂಬರಿ ಹಣ ಪಾವತಿಸಬೇಡಿ ಮತ್ತು ಕುಂಬರಿ ಬೇಸಾಯ ಮಾಡಬೇಡಿ ಎಂದು ಬಾಯಿ ಮಾತಿನಲ್ಲಿ ನಿರ್ಬಂಧ ಹಾಕಿತ್ತು." ಅಮಾಯಕ ಮುಗ್ಧ ಜನ ಹೌದೇನೋ ಎಂದು ಆಕಾಶಕ್ಕೆ ಕೈ ಚೆಲ್ಲಿ ಕುಳಿತರು. ಜೀವನ ನಡೆಸಲಾಗದವರು ಗೋವಾ ರಾಜ್ಯಕ್ಕೆ ಕೂಲಿಗಾಗಿ ವಲಸೆ ಹೋದರು.

ಈ ಬಗ್ಗೆ "ಹಳಿಯಾಳದ ಡಿಎಫ್‌ಓ ಶ್ರೀ ಮಾಲ್ಕೇಡ್ ಅವರನ್ನು ಸಂದರ್ಶಿಸಿದಾಗ ಅವರು 1986 ರಲ್ಲಿ ಸರ್ಕಾರ ಹೊಸ ಆದೇಶ ಹೊರಡಿಸಿದೆ. ಅದರ ಸಂಖ್ಯೆ : GO74.B3/ 8/GFL/72-73 ದಿನಾಂಕ 25-06-1974. ಇದು 1986ರಲ್ಲಿ ಪ್ರಕಟಣೆಗೊಮಡು ಕಾರ್ಯಗತಗೊಳಿಸಿದೆ. ಈ ಆದೇಶದ ಪ್ರಕಾರ ಕುಂಬರಿ ರೈತ ಎಕರೆಗೆ ರೂ.250-00 ಕಟ್ಟಬೇಕಂತೆ. ಅದೂ ಅಲ್ಲದೆ ಈ ಆದೇಶದ ನಿರ್ಣಯ 74ರಲ್ಲೇ ತೆಗೆದುಕೊಂಡಿರುವುದರಿಂದ 1986ರವರೆಗಿನ 12 ವರ್ಷದ ಬಾಕಿಯನ್ನು ಎಕರೆಗೆ ರೂ.250-00 ಕಟ್ಟಿ ತೀರಿಸಬೇಕಂತೆ. ವ್ಹಾ ಇದೆಂತಹ ಆದೇಶ? ಯಾವ ತರಹದ ನ್ಯಾಯ? ಇಲ್ಲಿ ಗಂಭಿರವಾಗಿ ಪರಿಶೀಲಿಸಿ, ಇಲ್ಲಿಯವರೆಗೂ ರೈತ ಬ್ರಿಟಿಷ್ ಕಾಲದಿಂದಲೂ (789) 1 ಎಕರೆಗೆ 1 ಪೈಸೆಯಿಂದ 25 ಪೈಸೆವರೆವಿಗೆ ಕ್ರಮಬದ್ಧ ನಿಗದಿತ ತೆರಿಗೆ ಏರಿಕೆಯ ಹಣವನ್ನು 1986ರ ಒಂದು ಶತಮಾನದವರೆಗೂ ಕಟ್ಟುತ್ತಾ ಬಂದಿದ್ದಾನೆ. ಇದ್ದಕ್ಕಿದ್ದಂತೆ, ಏಕಾಏಕಿ 25 ಪೈಸೆಯಿಂದ ಎಕರೆಗೆ ರೂ.250-00 ಅಂದರೆ ಒಂದು ಸಾವಿರಪಟ್ಟು ಹೆಚ್ಚಿನ ತೆರಿಗೆ?? ಜೊತೆಗೆ 12 ವರ್ಷಗಳ ಬಾಕಿ? 2002 ಇಸವಿ ಮುಂದಿನ ತಿಂಗಳಿಗೆ 18 ವರ್ಷಗಳ ಬಾಕಿ ಹೊರೆ?... ಇದ್ಯಾವ ಸೀಮೆಯ ನ್ಯಾಯ? ಒಮ್ಮೆಲೆ ಸಾವಿರಟನ್‌ಗಟ್ಟಲೆ ಭಾರ ತಲೆಮೇಲೆ ಕುಕ್ಕಿದರೆ ಬಡರೈತ ಎಲ್ಲಿ ದರೋಡೆ ಮಾಡಿ ಹಣ ತರಬಲ್ಲ. ಈಗ ಕುಂಡಳ ಗ್ರಾಮದಲ್ಲಿ ಉದಾಹರಣೆಗೆ 800 ಎಕರೆ ಕುಂಬರಿ ಇದೆ. ಈ ಹಿಂದೆ ಅಲ್ಲಿಯ ಜನ (1986ರವರೆಗೆ) ವರ್ಷಕ್ಕೆ ರೂ.20.00 ತೆರಿಗೆಯನ್ನು ಮಾತ್ರ ಪಾವತಿಸುತ್ತಾ ಬಂದಿದ್ದರು. ಈಗ ಏಕಾಏಕಿ ವರ್ಷಕ್ಕೆ (250 x 800=2,00,000-00) 2 ಲಕ್ಷ ತುಂಬಬೇಕು. ಅಲ್ಲದೆ 12 ವರ್ಷದ ಬಾಕಿ ಎಂದಲ್ಲಿ (12 x 250 x 800=24,00,000-00) 24 ಲಕ್ಷ ಒಟ್ಟಿಗೆ ತುಂಬಬೇಕು. ಈಗಲಾದರೂ ಇಲಾಖೆ ಕುಂಬರಿ ಜಾಗ ನಿಮ್ಮದೇ ಬಾಕಿ ಕಟ್ಟಿ ಜಾಗ ಸ್ವಾಧೀನಪಡಿಸಿಕೊಳ್ಳಿ ಎಂದಲ್ಲಿ ಜನ ಸಂತೋಷಗೊಳ್ಳುವ ಹಾಗಿಲ್ಲ. ನೇಣು ಹಾಕಿಕೊಳ್ಳುವಷ್ಟು ಪ್ರಾಣ ಸಂಕಟ. ಕಾರಣ 18 ವರ್ಷದ ಬಾಕಿ (18 x 250 x 800=2,40,00,000-00) 2 ಕೋಟಿ 40 ಲಕ್ಷ ತುಂಬಬೇಕು. ಅಬ್ಬಾ! ನಮ್ಮ ಬುಡಕಟ್ಟು ಬಡರೈತರು ಕೋಟಿ ರೂ.ಗಳ

ಬಗ್ಗೆ ಯೋಚಿಸುವುದಿರಲಿ, ಕೇಳಿಸಿಕೊಂಡಿಲ್ಲವೇನೋ? ಎಲ್ಲಿಂದ ತರುವುದು? ಎಷ್ಟು ತಲೆಗಳ ಹೊಡೆಯಬೇಕು? ಎಷ್ಟು ಬ್ಯಾಂಕುಗಳನ್ನು ದೋಚಬೇಕು?

ಇಷ್ಟು ಸಾಕು, ಎಲ್ಲವೂ ಇಲ್ಲಿ ಸ್ಪಷ್ಟವಾಗೇ ಇದೆ. ಅಸಂಬದ್ಧ ಸರಕಾರದ ಆದೇಶದ ಹಿನ್ನೆಲೆ ಬಗ್ಗೆ ಪ್ರಶ್ನೆಯೇ ಬೇಡ. ಸರಕಾರಕ್ಕೆ ಕುಂಬರಿ ಜಮೀನನ್ನು ಕಿತ್ತುಕೊಳ್ಳಬೇಕಿತ್ತಷ್ಟೆ. ಕಾನೂನುಬದ್ಧವಾಗಿ ಸಾಧ್ಯವಾಗದ ಮಾತು. ಕಾರಣ 1889 ರಿಂದ ಜನರು ಬೇಸಾಯ ಮಾಡಿಕೊಂಡು ಬಂದಿದ್ದಾರೆ ಮತ್ತು ಸರಕಾರಕ್ಕೆ ಹಿಂದಿನಿಂದಲೂ ತೆರಿಗೆ ತುಂಬಿದ ಪಾವತಿ ದಾಖಲೆಗಳಿವೆ. 1978ರ ಸುಪ್ರೀಂ ಕೋರ್ಟ್ ಆದೇಶ ಗಣನೆಗೆ ತೆಗೆದುಕೊಂಡರೂ ಸಾಕು ಪೂರ್ಣ 8000 ಎಕರೆ ಕುಂಬರಿ ಜಮೀನು ನ್ಯಾಯಬದ್ಧವಾಗಿ ಜೋಯಿಡಾ ಬಡರೈತರ ಕೈ ಸೇರುತ್ತದೆ. ಹೀಗೆ ಹಣದ ಹೊರೆಯನ್ನು ಒಟ್ಟಿಗೆ ಹೇರಿದಾಗ ರೈತ ನಿರ್ವಾಹವಿಲ್ಲದೆ ಅಸಹಾಯಕನಾಗಿ ಕುಂಬರಿ ಜಾಗದ ಸಹವಾಸ ಬಿಡುತ್ತಾನೆ.

**ಅವನತಿಯತ್ತ ಕುಂಬರಿ ಬೇಸಾಯ, ಸಾಯುತ್ತಿರುವ ಬುಡಕಟ್ಟು ಸಂಸ್ಕೃತಿ, ಒಕ್ಕಲೆದ್ದ ರೈತರು**

ಪುರಾತನ ಬೇಸಾಯವಾಗಿದ್ದ, ಬುಡಕಟ್ಟು ಸಂಸ್ಕೃತಿಯ ಪ್ರತೀಕವಾಗಿದ್ದ ಕುಂಬರಿ ಬೇಸಾಯ ಕಾನೂನು ಕಾಯ್ದೆ. ಬೇಜವಾಬ್ದಾರಿಗಳಡಿಯಲ್ಲಿ ಸಿಲುಕಿ ಅವನತಿಯಾಗುತ್ತಿದೆ. ಕುಂಬರಿ ಜಾಗೆಯಲ್ಲಿ ಬೆಳೆಯುತ್ತಿದ್ದ ರಾಗಿ, ನವಣೆ, ಸಜ್ಜಿ, ಕಂದಮೂಲಗಳಂತಹ ವಿಶಿಷ್ಟ ತಳಿಗಳು ಭೂಮಿಯಿಂದಲೇ ಮಾಯವಾಗುವಂತಹ ಪರಿಸ್ಥಿತಿ ಬರುತ್ತಿದೆ. ಇದೆಲ್ಲದರ ಮಧ್ಯ ಕುಂಬರಿ ಜಮೀನು ಕಳೆದುಕೊಂಡ ಜನ ನಿರ್ಗತಿಕರಾಗಿ ಜೀವನ ನಡೆಸಲು ನಿರ್ವಾಹವಿಲ್ಲದೆ ಪಕ್ಕದ ಗೋವೆಗೆ ಇಡೀ ಹಳ್ಳಿಗಳ ಜನ ಗುಳೆ ಹೋಗುತ್ತಿದ್ದಾರೆ. ಕುಂಡಲ, ಲಾಂಡೆ, ಕುರಾವಲಿ, ಕೆಲೂಲಿ, ಬೊಂಡೇಲಿ, ಪಾಲ್ಡ, ವಿರಂಜೋಲ್ ಮುಂತಾದ ಕಡೆಯ ಹಳ್ಳಿಯ ಜನ ಕೂಲಿಗಾಗಿ ವಲಸೆ ಹೋಗಿದ್ದಾರೆ.

ನಾಗರಿಕತೆಯ ಸೋಂಕಿಲ್ಲದೇ ಬುಡಕಟ್ಟು ಸೊಗಡನ್ನುಳಿಸಿಕೊಂಡಿದ್ದ ಜೋಯಿಡಾ ಗಿರಿಜನ ಸಂಸ್ಕೃತಿ ಗೋವಾದ ಆಧುನಿಕತೆ, ವಿದೇಶೀಕರಣಗಳ ಹಿಡಿತಕ್ಕೆ ಸಿಕ್ಕು ಸಾಯುತ್ತಿದೆ. ಕಾಡ ಅವಲಂಬನೆ, ಕೃಷಿ ಹಾಡು, ಕುಣಿತಗಳನ್ನೊಳಗೊಂಡ ಜನಪದವನ್ನು ಜೀವಾಳವಾಗಿಸಿಕೊಂಡು ನೆಮ್ಮದಿ ಬದುಕು ಸಾಗಿಸಿಕೊಂಡಿದ್ದ ಜನಗಳಿಗೆ ಬೇಸಾಯದ ಕೆಲಸ ಬಿಟ್ಟು ಬೇರೇನೂ ಬರುವುದಿಲ್ಲ. ಗೋವಾಕ್ಕೆ ವಲಸೆ ಹೋಗಿರುವ ಕುಣಬಿ, ದೇವಳಿಗಳು ಕೂಡ ಅಲ್ಲಿಯ ಜಮೀನ್ದಾರರುಗಳ ಹೊಲಗದ್ದೆ ತೋಟಗಳಲ್ಲಿ ಜೀತದಾಳಾಗಿ ದುಡಿಯುತ್ತಿದ್ದಾರೆ. ಕುಣಬಿ ಸಂಸ್ಕೃತಿಯಲ್ಲಿ ಮದ್ಯ ವರ್ಜ್ಯ. ಕುರಿಕೋಳಿ ಸಾಕುವಂತಿಲ್ಲ ಮತ್ತು ಸಾಕಿದ್ದನ್ನು ತಿನ್ನುವುದಿಲ್ಲ ಎಂದೂ ಕಳ್ಳತನ ಮಾಡದ, ಮೋಸ ಮಾಡದ ಅಮಾಯಕ ಕುಣಬಿಗಳ ನಡವಳಿಕೆಗಳು ಗೋವಾದ ಪ್ರಭಾವದಿಂದ ಬದಲಾಗುತ್ತಿದೆ.

ಇಷ್ಟೆಲ್ಲಾ ಆದರೂ ಪರವಾಗಿರಲಿಲ್ಲವೇನೊ ಮೋಸ, ವಂಚನೆಗಳನ್ನರಿಯದ ಬಹಳಷ್ಟು ಕುಣಬಿ ಹೆಣ್ಣುಮಕ್ಕಳು ಗೋವಾದ ಜಮೀನ್ದಾರರ ಕಾಮಪಿಪಾಸೆಗೆ ಬಲಿಯಾಗಿದ್ದಾರೆ. ಕಳೆದೆರಡು ತಿಂಗಳ ಹಿಂದೆ ಅಪಕರ್ಣಿ ಗ್ರಾಮದ ಸರಳಾ ತೋಲಿಯೋ ಗಾವುಡಾ(19) ಎಂಬ ಕುಣಬಿ ಯುವತಿ ಗೋವಾದ ಪೊಂಡಾದ ಪರ್ವಾಗುಡಿಯಲ್ಲಿ ನೇಣು ಹಾಕಿಕೊಂಡು ಸತ್ತಳೆಂದು ಹೆಣ ತಂದು ಇಲ್ಲಿಗೆ ಒಗೆದು ಹೋದರು. ಆಕೆಗೆ 2 ತಿಂಗಳಾಗಿತ್ತು. ಅಮಾಯಕ ಜನ ಪೊಲೀಸ್ ಕೇಸ್ ಕೂಡ ದಾಖಲಿಸಲು ಹೆದರಿ ಅಂತ್ಯ ಸಂಸ್ಕಾರ ಮಾಡಿ ಮುಗಿಸಿದರು. ಹೀಗೆ ಹಿಂದೆಯೂ ಕಳಸಾಯಿ ಗ್ರಾಮದ ಜಾನು ಎಂಬುವನ ಮಗಳು ಲೈಂಗಿಕ ಕಿರುಕುಳಕ್ಕೊಳಗಾಗಿ ಸತ್ತಿದ್ದು ಪ್ರಕರಣ ದಾಖಲಾಗದೇ ಮುಚ್ಚಿ ಹೋಗಿದ್ದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹೀಗೆ ಅರಿವಿಗೆ ಬಂದವುಗಳು, ಅರಿವಿಗೆ ಬರದ ಎಷ್ಟೋ ಹೆಣ್ಣು ಮಕ್ಕಳು ಲೈಂಗಿಕ ತೃಷೆಗೆ ಬಲಿಪಶುಗಳಾಗಿ ದಿಕ್ಕಿಲ್ಲದ ಹೆಣಗಳಾಗಿ ಹೋಗಿದ್ದಾರೆ. ಕುಂಬರಿ ಜಾಗ ಇದ್ದಿದ್ದರೆ ಈ ಯುವತಿಯರು ಗೋವಾಗೆ ಹೋಗುತ್ತಿರಲಿಲ್ಲವೇನೋ... ಹೀಗೆ ಸಾಯುತ್ತಿರಲಿಲ್ಲವೇನೋ.

ಮಳೆಯಾಗದೇ ಪ್ರಕೃತಿಯ ವಿಕೋಪದಿಂದಾಗಿ ಬರಕ್ಕೆ ಬಲಿಯಾದ ವಿಜಾಪುರ, ಬೀದರ, ಗುಲ್ಬರ್ಗಾದ ಎಷ್ಟೋ ಮಹಿಳೆಯರು ಗೋವಾದ ಕೆಂಪು ಪ್ರದೇಶಗಳಲ್ಲಿ ದೇಹ ಮಾರಿ ಜೀವನ ನಡೆಸುತ್ತಿರುವುದು ಕರ್ನಾಟಕ ಇತಿಹಾಸಕ್ಕೆ ಇಟ್ಟಿರುವ ಕಪ್ಪು ಚುಕ್ಕೆ. ಜೋಯಿಡಾ ಹಾಗಲ್ಲ. ದಟ್ಟವಾದ ಕಾಡು, ಬೇಕಾದಷ್ಟು ಮಳೆ, ಸಮೃದ್ಧ ಸಂಸ್ಕೃತಿ, ಕಾದಂಬರಿ ಜಾಗದ ದವಸ ಧಾನ್ಯಗಳಿಂದ ಸುಖವಾಗಿದ್ದ ಜನರ ಕುಂಬರಿ ಕಿತ್ತುಕೊಂಡ ಅರಣ್ಯ ಇಲಾಖೆ ಬುಡಕಟ್ಟು ಜನಗಳನ್ನು ಬಲವಂತವಾಗಿ ಗೋವಾಕ್ಕೆ ತಳ್ಳುವಂತೆ ಮಾಡಿದೆ. ಕರ್ನಾಟಕದ ಜೋಯಿಡಾ ಬುಡಕಟ್ಟು ಸಂಸ್ಕೃತಿ ಇತಿಹಾಸಕ್ಕೆ ಅರಣ್ಯ ಇಲಾಖೆ ಇಟ್ಟ ಮತ್ತೊಂದು ಮಸಿ.

**ಕುಣಬಿಯರ ಬೇಟೆ ಆಡುವ ಪದ್ಧತಿ**

ಕಾಡಿನ ವಾಸಿಗಳಾದ ಬುಡಕಟ್ಟು ಕುಣಬಿಗಳು ತಮ್ಮ ಆಹಾರಕ್ಕಾಗಿ ಮಾಂಸವನ್ನು ಬಳಕೆ ಮಾಡಿಕೊಂಡು ಬರುತ್ತಿದ್ದಾರೆ. ತಮ್ಮ ಆಹಾರಕ್ಕಾಗಿ ಬೇಟೆ ಆಡಲಾಗುತ್ತಿತ್ತು. ಬುಡಕಟ್ಟು ಕುಣಬಿಗಳು ಬೇಟೆ ಆಡುವುದನ್ನೇ ಉದ್ಯೋಗವಾಗಿ ಮಾಡದೇ ತಮ್ಮ ಸಾಂಪ್ರದಾಯಿಕ ಪದ್ಧತಿಯಲ್ಲಿ ಬೇಟೆ ಆಡುತ್ತಿದ್ದರು. ಕೊಂಕಣಿ ಭಾಷೆಯಲ್ಲಿ ಬೇಟೆ ಆಡುವುದನ್ನು "ಭೂವಂಡಿ" ಎಂದು ಕರೆಯಲಾಗುತ್ತದೆ. ಭೂವಂಡಿಯಲ್ಲಿ ಬೇರೆ ಬೇರೆ ವಿಧಗಳಿವೆ. ಭುಯಚಿ ಭೂವಂಡಿ, ಗರವೈಯ ಭೂವಂಡಿ, ಶಿವರಾಚಿ ಭೂವಂಡಿ, ಖುಟಯೆ ಭೂವಂಡಿ, ಪರಮೇಶ್ವರ ಭೂವಂಡಿ, ಚಾಲು ಭೂಂವಂಡಿ, ಮುಟಾಭೂವಂಡಿ, ವಾಲಚಿ ಭೂವಂಡಿ, ಸುಣ್ಯಾ ಭೂವಂಡಿ.

ಬೇಟೆ ಆಡುವ ಪದ್ಧತಿ ಪೂರ್ವದಲ್ಲಿ ಬಲೆ ಹಾಕಿಕೊಂಡು ಬೇಟೆ ಆಡಿದರೆ ದಿನಕಳೆದಂತೆ ಬಂದೂಕುಗಳ ಉಪಯೋಗವಾಗುತ್ತಿತ್ತು. ಭೂವಂಡಿ ಸಂದರ್ಭದಲ್ಲಿ ಮೊದಲು 'ಧಾಡ'

ಅಂದರೆ ಪ್ರಾಣಿಗಳನ್ನು ಹೆದರಿಸಿ ಓಡಿಸಿದಾಗ ಓಡಿಹೋಗುವ ದಾರಿ. ಈ ಧಾಡ ಮೇಲೆ ಬಲೆಯನ್ನು ಎಳೆಯಲಾಗುತ್ತಿತ್ತು. ಓಡಿದ ಪ್ರಾಣಿ ಬಲೆಯ ಒಳಗೆ ಬೀಳುತ್ತಿತ್ತು. ನಂತರ ಇದನ್ನು ತಿನ್ನಲಾಗುತ್ತಿತ್ತು. ಈಗ ಯಾವಾಗ ಬಂದೂಕಿನಿಂದ ಬೇಟೆ ಆಡಲು ಪ್ರಾರಂಭಿಸಸಿದರೋ ಆವಾಗ ಬಂದೂಕು ಹೊಂದಿದವರು ಮುಂದೆ ಹೋಗಿ "ದಾಡಿ" ಹಿಡಿದು ಕುಳಿತುಕೊಳ್ಳುತ್ತಾರೆ. ನಂತರ ಹಿಂದೆ ಕಡೆಯಿಂದ ಹತ್ತಾರು ಜನರು ಬೊಬ್ಬೆ ಹಾಕಿ, ಕೂಗಿಟ್ಟು ಮರ ಕುಟುಕುತ್ತಾ ಮುಂದೆ ಹೋಗುತ್ತಾರೆ. ಕಾಡುಪ್ರಾಣಿಗಳು 'ದಾಡ'ಗೆ ಹೋದಾಗ ಬಂದೂಕಿನಿಂದ ಗುರುತು ಹಾಕಿಸಿ ಬೇಟೆ ಆಡಲಾಗುತ್ತಿತ್ತು. ಇದನ್ನು "ಭೂವಂಡಿ" ಅಂತ ಕರೆಯಲಾಗುತ್ತದೆ. ಯಾವ ಯಾವ ಸಂದರ್ಭದಲ್ಲಿ ಯಾವ ದೇವರ ಹೆಸರಿನಲ್ಲಿ ಭೂವಂಡಿ ಮಾಡುವಾಗ ಯವ ಕಾಡುಪ್ರಾಣಿಗಳನ್ನು ಬೇಟೆ ಆಡಬೇಕೆಂದು ನಿರ್ಬಂದವು ಇದೆ. ಭೂವಂಡಿ ಮುಟಾ ಭೂವಂಡಿಗೆ ಕಡ ಜಿಂಕೆ, ಮಾತ್ರ ಬೇಟೆ ಆಡಬೇಕು. ಈ ಬೇಟೆ ಆಡಿದ ಪ್ರಾಣಿಯನ್ನು ಹೊತ್ತುಕೊಂಡು ಭುಯಿತ್ ದೇವರ ಕಡೆ ತಂದು ದೇವರಿಗೆ ಹೇಳಿಕೆ ಮಾಡಿಕೊಂಡು ಕಾಯಿ ಹೊಡೆದು ಅಲ್ಲಿಯೇ ಎಲ್ಲರಿಗೆ ಸಮಾನವಾದ ಪಾಲು ಮಾಡಲಾಗುತ್ತದೆ. ನಂತರ ಬೇಟೆ ಆಡಿದ ಪ್ರಾಣಿಯ ತಲೆ, ಒಂದು ಕಾಲು, ಹೀವುಗಳನ್ನು ಕುಲದೇವರ ಕಡೆ ತಕ್ಕೊಂಡು ಹೋಗಿ ಅಲ್ಲಿ ಪೂಜೆ ಮಾಡಿದ ನಂತರ ಆ ಕಾಡುಪ್ರಾಣಿ ಮಾಂಸವನ್ನು ಎಲ್ಲರಿಗೂ ಪಾಲು ಮಾಡಲಾಗುತ್ತದೆ ಮತ್ತು ನೆಂಟರಿಸ್ಟರನ್ನು(ಸಯಿರೊ)ಕರೆಯಿಸಿ ಕುಲದೇವರಿಗೆ ಮಾಂಸ ಇಟ್ಟ ನಂತರ ನೆಂಟರಿಗೆ ಬಡಿಸಿ ಎಲ್ಲರೂ ತಿನ್ನುತ್ತಾರೆ. ಅದಕ್ಕೂ ಪೂರ್ವದಲ್ಲಿ ಬೇಟೆ ಆಡಿದ ಮಾಂಸವನ್ನು ಬೆಂಕಿಯಲ್ಲಿ ಸುಟ್ಟಿಕೊಂಡು ಕುಲದೇವರಿಗೆ ಇಟ್ಟು ಸೀಮೆ ದೇವರಿಗೆ ಇಡಲಾಗಿ ಅದನ್ನು ನಂತರ ತಿನ್ನಲಾಗುತ್ತದೆ.[14]

**ಖುಟಯೆ ಭೂವಂಡಿ ಶಿವರಾ ಭೂವಂಡಿ :** ಈ ಭೂವಂಡಿಗಳಿಗೆ ಯಾವುದೇ ಪ್ರಾಣಿಯ ಬೇಟೆ ಆಡಿದರೆ ಅದನ್ನು "ಭೂಯಿತ್" ತರಲಾಗುವುದಿಲ್ಲ. ಎಲ್ಲಿ ಶಿಕಾರಿ ಮಾಡಲಾಗುತ್ತೊ ಅಲ್ಲಿ ದೇವರಿಗೆ ಇಟ್ಟು ತಿನ್ನಬಹುದಾಗಿದೆ. ಈ ಭೂವಂಡಿಗೆ ಕಡ, ಜಿಂಕೆ, ಕುರಿ, ಹಂದಿ, ಬರ್ಕ(ಪಿಸೈ) ಮೊಲ, ಯಾವ ಪ್ರಾಣಿಯನ್ನಾದರೂ ಬೇಟೆ ಆಡಿದರೆ ಅದನ್ನು ಎಲ್ಲಿ ಬೇಕಾದರೂ ತಿನ್ನಬಹುದಾಗಿದೆ. ಆದರೆ ಇದಕ್ಕೂ ಒಂದು ಪದ್ಧತಿ ಇದೆ. ತಮ್ಮ ಗ್ರಾಮದ ಸೀಮೆಯ ಒಳಗೆ ತಂದು ತಿನ್ನಬೇಕಾಗುತ್ತದೆ. ಬೇರೆಯವರ ಗ್ರಾಮದಲ್ಲಿ ಬೇಟೆ ಆಡಿದರೂ ತಮ್ಮ ಸೀಮೆಯ ಒಳಗೆ ತಂದು ಅದನ್ನು ಕತ್ತರಿಸಬೇಕಾಗುತ್ತದೆ. ಬೇರೆಯವರ ಸೀಮೆಯಲ್ಲಿ ಬೇಟೆ ಆಡಿದ ಪ್ರಾಣಿ ಹೋಗಿ ಬಿಟ್ಟರೆ ಅದನ್ನು ಹೊತ್ತು ತಂದು ತಮ್ಮ ಗ್ರಾಮದ ಸೀಮೆಗಳಿಗೆ ದೇವಕಾರ್ಯ ಸರಿ ಆಗುವುದಿಲ್ಲವೆಂಬ ಬಲವಾದ ನಂಬಿಕೆ ಇದೆ.

**ವಾಲಚಿ ಭೂವಂಡಿ :** ಇದು ಬಲೆ ಹಾಕಿ ಮಾಡುವ ಬೇಟೆ ಪದ್ಧತಿಗೆ ವಾಲಚಿ ಭೂವಂಡಿ ಎಂದು ಕರೆಯಲಾಗುತ್ತದೆ. ಈ ವಾಲಚಿ ಭೂವಂಡಿ ಮನುಷ್ಯ ಕಾಡುಪ್ರಾಣಿಯಾದಾಗಿನಿಂದಲೂ

ನಡೆದುಕೊಂಡು ಬಂದಿರಬಹುದಾಗಿದೆ. ಗೋಳ, ಖುಂಬಿ, ಬೇರು, ಬೇಕಾರ, ಮಾಡೊ, ಕೇವುಣ, ಧಾಮಣ ಈ ಎಲ್ಲಾ ಮರಗಳ ಮೇಲಿನ ತೊಗಟೆ(ಛಾಯೆ ಕೊಂಕಣಿ ಭಾಷೆಯಲ್ಲಿ) ತೆಗೆದು ಅದನ್ನು ಒಣಗಿಸಿ ದಾರ ಎಳದು ಇದರಿಂದ ಬಲೆಗಳನ್ನು ಹೆಣಿಯಲಾಗುತ್ತಿತ್ತು. ಈ ಹೆಣೆದ ಬಲೆಯನ್ನು ಎಲ್ಲೆಲ್ಲಿ ಧಾರ ಇರುತ್ತದೆ ಅಲ್ಲಿ ಹಾಕಿ ಪ್ರಾಣಿಗಳನ್ನು ಓಡಿಸುತ್ತಿದ್ದಾಗ ಕಾಡುಪ್ರಾಣಿಗಳ ಜೊತೆಗೆ ಬೀಳುತ್ತಿತ್ತು. ಈ ರೀತಿ ವಾಲಚಿ ಭೂವಂಡಿ ಹೆಸರಿನಲ್ಲಿ ಬೇಟೆ ಆಡಲಾಗುತ್ತಿತ್ತು.

**ಶಿವರಾವ ಭೂವಂಡಿ:** ಇದು ಕೂಡ ಅಷ್ಟೇ ಪ್ರಮುಖವಾದ ಬೇಟೆಯಾಗಿದೆ. ಶಿವರಾಚಿ ಭೂವಂಡಿ ಇದರ ಅರ್ಥ. ಕಾಡುನಾಯಿಗಳು ಬೇಟೆ ಆಡಿಕೊಂಡು ಗ್ರಾಮಕ್ಕೆ ಬೇಟೆ ಬರುವುದು ಅದನ್ನು ನಂತರ ತಿನ್ನುವುದು ಎಂದರ್ಥ. ಅನೇಕ ಸಂದರ್ಭಗಳಲ್ಲಿ ಕಾಡಿಗೆ ಬೇಟೆ ಆಡಲು ಹೋಗಬೇಕಾದ ಸಂದರ್ಭವು ಅಗತ್ಯವಿಲ್ಲ. ಮಹಾಲಯ, ದಸರಾ, ಸಂದರ್ಭಗಳಲ್ಲಿ ಶಿವರಾಚಿ ಭೂವಂಡಿ ಸರಿ ಇದ್ದರೆ ಈ ಕಾಡುನಾಯಿಗಳು ಕಡ, ಹಂದಿ, ಕುರಿ ಇಂತಹ ದೊಡ್ಡ ಪ್ರಾಣಿಗಳನ್ನು ಓಡಿಸಿ ಗ್ರಾಮದೆಡೆಗೆ ಬರುವುದು ಮತ್ತು ಅದನ್ನು ನಂತರ ಜೊತೆ ಆಡುವುದು, ಈ ಬೇಟೆ ಸರಿ ಇದ್ದರೆ ಮಾತ್ರ ಕಾಡುನಾಯಿಗಳು ಊರಿಗೆ ಬೇಟೆ ತರುತ್ತದೆ. ಈ ಬೇಟೆಗೆ ಅಷ್ಟೇನೂ ಶಾಸ್ತ್ರ ಮಾಡುವುದಿಲ್ಲ. ಮಿರಾಶಿ ಬುದವಂತರೂ ಸೇರಿ ಹೇಳಿಕೆ ಮಾಡಿ ಅಲ್ಲಿಯೇ ಕತ್ತರಿಸಿ ತಿನ್ನಬಹುದಾಗಿದೆ. ಈ ಶಿವರಾ ಭೂವಂಡಿಯಿಂದ ಬೇಟೆ ಬಂದರೂ ಇದನ್ನು ಎಲ್ಲರಿಗೆ ಸಮಪಾಲು ಮಾಡಿ ತಿನ್ನಲಾಗುತ್ತದೆ.

**ಸುಣ್ಯಾ ಭೂವಂಡಿ:** ಕೂಡ ಅಷ್ಟೇ ಮುಖ್ಯವಾಗಿರುತ್ತದೆ. ನಾಯಿಗಳನ್ನು ಕಾಡಿಗೆ ಕರೆದು ಕೊಂಡು ಹೋಗಿ ಬೇಟೆ ಆಡುವುದೇ ಸುಣ್ಯಾ ಭೂವಂಡಿ ಆಗಿದೆ. ನಾಯಿಗಳು ಕಡ, ಜಿಂಕೆ, ಹಂದಿ, ಪಿಸ್ಯೆ, ಸೆರ್ಡಕ್, ಮೊಲ ಬೇಟೆ ಆಡುತ್ತವೆ. ಆದರೆ ಈ ಬೇಟೆ ಆಡಿದ ಪ್ರಾಣಿಗಳ ಮಾಂಸಕ್ಕೆ ಹೆಚ್ಚು ಶಾಸ್ತ್ರ ಇಲ್ಲದೇ ಇದ್ದರೂ ಸುಟ್ಟು ಮಾಂಸವನ್ನು ದೇವರಿಗೆ ಇಟ್ಟ ನಂತರ ಮೊದಲು ನಾಯಿಗೆ ಹಾಕಲಾಗುತ್ತದೆ. ನಂತರ ಮಿರಾಶಿ ಬುದವಂತರು ಇತರರಿಗೆ ಹಂಚಿ ತಿನ್ನುತ್ತಾರೆ. ನಾಯಿಗಳು ಬೇಟೆ ಆಡಿದ ಪ್ರಾಣಿಯ ಕೊಷ್ಟ (ಪಾಲು) ನಾಯಿಗಳ ಹೆಸರಿನಲ್ಲಿ ತೆಗೆಯಲಾಗುತ್ತಿದ್ದು ಅದನ್ನು ಬೇಯಿಸಿ ಅನ್ನದ ಜೊತೆಯಲ್ಲಿ ಮೊದಲು ನಾಯಿಗಳಿಗೆ ಹಾಕಿದ ನಂತರ ತಿನ್ನಲಾಗುತ್ತದೆ. ಈ ಸುಣ್ಯಾ ಭೂವಂಡಿಗೆ ಸೈರುಗಳ ಅಗತ್ಯ ಇರುವುದಿಲ್ಲ.

**ಸೆಳ್ಯಾಚಿ ಭೂವಂಡಿ:** ಇದು ಬಹಳ ಮುಖ್ಯವಾದದ್ದು. ಸೆಳ್ಯಾಚಿ ಭೂವಂಡಿ ಅಂದರೆ ಮೊದಲನೇ ದಿನ ಯಾವುದಾದರೂ ಪ್ರಾಣಿ ಬೇಟೆ ಆಡಿದ ನಂತರ ಮಾರನೆಯ ಒಂದು ದಿನ ಸೆಳ್ಯಾಚಿ ಭೂವಂಡಿ ಎಂದು ಬೇಟೆ ಆಡುವ ಪದ್ಧತಿ ಇದೆ. ಈ ಸೆಳ್ಯಾಚಿ ಭೂವಂಡಿಗೆ ಏನಾದರೂ ಶಿಕಾರಿ ಮಾಡಿದರೆ ಅಥವಾ ಬೇಟೆ ಆಡಿದರೆ ಮತ್ತೆ ಮಾರನೇ ದಿನ ಸೆಳ್ಯಾಚಿ ಭೂವಂಡಿ

ಮಾಡುವಂತಿಲ್ಲ. ಇದರ ಅರ್ಥ ಬುಡಕಟ್ಟು ಕುಣಬಿಗಳು ಬೇಟೆ ನಿರಂತರವಾಗಿ ಸಿಕ್ಕರೂ ಬೇಟೆ ಮಾಡುವಂತಿಲ್ಲ ಎಂದರ್ಥ. ಎಷ್ಟು ಬೇಕೋ ಅಷ್ಟೇ ಪ್ರಮಾಣದಲ್ಲಿ ಬೇಟೆ ಆಡುತ್ತಿದ್ದರು ಎಂದು ಇದನ್ನು ಅರ್ಥೈಸಲಾಗುತ್ತದೆ.

ಕುಣಬಿಗಳು ಕಾಡುಪ್ರಾಣಿಗಳ ಬೇಟೆ ಆಡುವುದರಿಂದ ಕಾಡುಪ್ರಾಣಿಗಳ ಸಂತತಿ ಕಡಿಮೆ ಆಗುವುದಿಲ್ಲ. ಪ್ರಕೃತಿಯ ಮೇಲೂ ಸಮತೋಲನ ಕಾಪಾಡಬೇಕಾಗಿದೆ. ಹುಲಿಯ ಆಹಾರವು ಮಾಂಸವಾಗಿದೆ. ಹುಲಿ ಕೂಡ ಒಂದು ಕಾಡುಪ್ರಾಣಿ. ಬುಡಕಟ್ಟುಗಳು ಕೂಡ ಕಾಡನ್ನು ಅವಲಂಬಿಸಿರುವ ಪ್ರಾಣಿಗಳೇ.

**ಗರವೈ ಭೂವಂಡಿ:** ಅಂದರೆ ಈ ಬೇಟೆ ಆಡುವ ಪದ್ಧತಿ ಕುಲದೇವರಿಗೆ ಸಂಬಂಧಿಸಿದ್ದಾಗಿದೆ. ಕುಲದೇವರ ಹೆಸರಿನಲ್ಲಿ ಭೂವಂಡಿ ಮಾಡಿದಾಗ ಅದನ್ನು ಭೂಮಿತ್ ದೇವರ ಕಡೆ ತೆಗೆದುಕೊಂಡು ಹೋಗುವುದಿಲ್ಲ. ಉದಾಹರಣೆಗೆ ಭತ್ತದ ಗದ್ದೆಯಲ್ಲಿ ಹಂದಿ ಜೊತೆ ಬೇಟೆ ಆಡಿದಾಗ ಅದನ್ನು ನೇರವಾಗಿ ಮನೆಕಡೆ ಅದರ ತಲೆ, ಕಾಲು, ಹೀವ (Liver), ಹಾರ್ಟ್ ಕಣಿಜ ತಂದು ಕುಲದೇವರ ಮುಂದೆ ಇಟ್ಟು ಪೂಜೆ ಮಾಡಿ ನಂತರ ಅದನ್ನು ಸುಟ್ಟ ದೇವರಿಗೆ ಇಡಲಾಗುತ್ತದೆ ಮತ್ತು ಈ ಮಾಂಸವನ್ನು ದೇವರ ಕೆಲಸ ಮಾಡುವ ಎಲೆಯ ಮೇಲೆ ಬೇಯಿಸಿ ಸೈರೊ ಕರೆಯಿಸಿ ತಿನ್ನಲಾಗುತ್ತದೆ. ಇಲ್ಲಿ ಭೂಯಾಚಿ ಭೂವಂಡಿ ಮತ್ತು ಗರವೈ ಭೂವಂಡಿ ವ್ಯತ್ಯಾಸ ಕಾಣಬಹುದಾಗಿದೆ. ಭೂಯಾಚಿ ಭೂವಂಡಿಗೆ ಕಾಡುಪ್ರಾಣಿಗಳ ಬೇಟೆ ಆಡಿದರೆ ಅದನ್ನು ಭೂಮಿತ್ ಜನ್ಮಿ ದೇವರ ಸ್ಥಳದಲ್ಲಿ ತಂದು ಪಾತಾಳಿ ಹಾಕಬೇಕಾಗಿರುತ್ತದೆ. ಪಾತರಳಿ ಅಂದರೆ ಬಾಳೆ ಎಲೆ ಹಾಕಿಕೊಂಡು ಅದರ ಮೇಲೆ ಪ್ರಾಣಿಯ ಮಾಂಸ ಸಣ್ಣಸಣ್ಣ ತುಂಡುಗಳನ್ನು ಮಾಡಿ ಪಾಲು ಮಾಡುವುದು. ಚಾಚಾಮಣಿ ಅಂದರೆ ಕಾಡು ಪ್ರಾಣಿಗಳ ಎಲಬುಗಳನ್ನು ತುಂಡು ಮಾಡುವುದು ಎಂದರ್ಥ. ಚಾಚಾವಣಿಕ ಘಾವ ಮಾರಚೆಲ್ಲೊ ಅಂದರೆ ಪಾತಾಳಿ ಮೇಲಿದ್ದ ಮಾಂಸವನ್ನು ಪಾಲು ಮಾಡಿದ ನಂತರ ಕೊನೆಯಲ್ಲಿ ಚಾಚಾಮಣಿ ತುಂಡಿಗೆ ಇದೇ ಪಾತಳಿಯ ಬಾಳೆ ಎಲೆಯನ್ನು ಸುತ್ತಿಕೊಂಡು ಸಣ್ಣ ಸಣ್ಣ ತುಂಡುಗಳನ್ನು ಮಾಡಿ ದೇವರ ಮನೆಗೆ ಕೊಂಡೊಯ್ಯುವ ಕೊಷ್ಟ(ಅಂದರೆ ಪಾಲು)ಗೆ ಇದನ್ನು ಹಾಕಲಾಗುತ್ತದೆ ಈ ಚಾಚಾಮಣಿ ದೇವರ ಮನೆಯಲ್ಲಿನ ಮಾಂಸದ ಅಡುಗೆಯಲ್ಲಿ ಹಾಕಲಾಗುತ್ತದೆ. ಈ ರೀತಿಯಾಗಿ ಯಾವತ್ತು ಕಾಡು ಪ್ರಾಣಿಗಳ ಬೇಟೆ ಆಡಿದರೆ ಇಂತಹ ಆಚರಣೆ ಮಾಡಲಾಗುತ್ತದೆ. ಕೇವಲ ಭೂವಂಡಿಗೆ ಅಷ್ಟೇ ಅಲ್ಲ. ಸಣ್ಣ ಪುಟ್ಟ ಶಿಕಾರಿ ಮಾಡಿದಾಗಲೂ ಚಾಚಾವಣಿ ಮಾಡಲಾಗುತ್ತದೆ. ಪಾತಾಳಿಗೆ ಎಲೆಯನ್ನು ತಿರುಗಿಸಿ ಹಾಕಲಾಗುತ್ತದೆ. ಅಂದರೆ ಬಾಳೆ ಎಲೆ ಊಟಮಾಡುವ ಕಡೆ ಅಲ್ಲಿ ಭೂವಂಡಿಗೆ ಗ್ರಾಮದ ಹೊರಗಿನಿಂದ ಹೋದರೆ ಅವರು ಪ್ರಾಣಿಯನ್ನು ಹೊಡೆದರೆ(ಬೇಟೆ) ಈ ಮೂಲದೇವರ ಹೆಸರಿನಲ್ಲಿ ದೇವಕಾರ್ಯ ಮಾಡಲಾಗುತ್ತದೆ. ಕೆಲವು ಸಂದರ್ಭದಲ್ಲಿ ಬೇಟೆ ಆಡಲಿಕ್ಕೆ ಹೋಗುವ ಪೂರ್ವದಲ್ಲಿ ಜನ್ಮಿ ಮತ್ತು ಇತರೆ ಗಡಿದೇವರಿಗೆ ಹೇಳಿಕೆ

ಮಾಡುವಾಗ ಕಾಟೊ ಖುಟೊ ಮಾಡುವ್ ಸೊರೊಸ್ ಆಯಿಲ್ಲೆ ಹೇವಾಳೆಕರನ್ನು ವಾಗಾ ಮುಖಾಕ್ ಚಾಮೆ ಕುಲಪಾಕರುನ ದಾನ ಹೊನ್ ಸಾಧನ ಕೆಲ್ಲೊ ದೇವತಾರ ಪುಡೆಯೆವಾ ಜಾಯೊ' ಎಂದು ಬುದವಂತ ಮಿರಾಶಿಗಳು ಹೇಳಿಕೆ ಮಾಡಿಕೊಳ್ಳುವುದು. ಇದರಿಂದ ಬೇಟೆಗೆ ಭೂವಂಡಿಗೆ ಹೋಗುವ ಜನರಿಗೆ ತೊಂದರೆ ಆಗಬಾರದು ಮತ್ತು ಬೇಟೆ ಆಗಬೇಕೆಂದು ಬೇಡಿಕೊಳ್ಳುವ ಸಂಪ್ರದಾಯ ಇದೆ. ಬೇಟೆ ಆಡಲು ಹೋಗುವಾಗ ಅಂದರೆ ಭೂವಂಡಿಗೆ ಹೋಗುವಾಗ ಮುಂದೆ ದಾಡಿಗೆ ಹೋಗುವವರಿಗೆ "ಧಾಡಕಾರವೆಂತಲೂ ಹಿಂದೆ ಕಡೆಯಿಂದ ಕಾಡಿಗೆ ನುಗ್ಗುವವರಿಗೆ "ಮಾಗೇಲಿ" ಅಂತಲೂ ಕುಣಬಿಗಳು ಕರೆಯುತ್ತಾರೆ. ಮಾಗೇಲಿಗಳು ದೊಡ್ಡ ಪ್ರಾಣಿಗಳನ್ನು ಬೇಟೆ ಆಡಿದರೆ ಅದನ್ನು ಮರದ ಕೋಲಿಗೆ ಕಟ್ಟಿ ಅಥವಾ ಪಿಂಗಿ ಕಟ್ಟಿ ಏಳೆಂಟು ಜನರು ಹೊತ್ತು ತರುತ್ತಾರೆ. ಪಿಂಗಿ ಹಾಕುವುದೆಂದರೆ ಒಂದು ಉದ್ದ ಕೋಲಿಗೆ ಬೇಟೆ ಕಟ್ಟಿಕೊಂಡು ಹಿಂದೆ–ಮುಂದೆ ಅಡವಾಗಿ ಕೊಲು ಕಟ್ಟಿ ನಾಲ್ಕು, ಆರು ಅಥವಾ ಎಂಟು ಜನರು ಹೊತ್ತು ತರುವುದು ಎಂದು ಅರ್ಥ. ಇವರಿಂದಲೂ ಬೇಟೆ ಹೊತ್ತು ತರಲಿಕ್ಕಾಗದೇ ಇದ್ದರೆ ಅಲ್ಲಿಯೇ ಕಟ್‌ಮಾಡಿ ತಂದು ಅದನ್ನು ದೇವರ ಸ್ಥಾನದಲ್ಲಿ ಭೂಮಿತ್ ತಂದು ಮತ್ತೆ ಅದೇ ಪ್ರಕಾರ ಜೋಡಣೆ ಮಾಡಿ ದೇವರ ಹೇಳಿಕೆ ಮಾಡುವ ಮತ್ತು ಇತರೆ ಕೆಲಸವನ್ನು ಮಾಡಲಾಗುತ್ತದೆ. ಬೆಟೆ ಖಟ್ ಮಾಡಿದ ಸ್ಥಳದಿಂದ ಚನ್ನಿ ಎಲೆಯನ್ನು ತರಲಾಗುತ್ತದೆ. ಚನ್ನಿ ಎಲೆ ಇಟ್ಟುಕೊಂಡು ಬೇಟೆಗೆ ಚೂರಿ ಹಾಕಲಾಗುತ್ತದೆ. ಹೀಗಾಗಿ ಬೇಟೆಯ ಸಂದರ್ಭದಲ್ಲಿ ಚನ್ನಿ ಎಲೆ ಕೂಡ ಪ್ರಾಮುಖ್ಯತೆ ಹೊಂದಿದೆ. ಪಾತಾಳಿ ಅಂದರೆ ಬೇಟೆಯಾಡಿದ ಪ್ರಾಣಿಯ ಮಾಂಸ ಮಾಡಿ ಕೊಷ್ಠ (ಪಾಲು)_ಹಾಕಲು ಬಾಳೆ ಎಲೆ ಹಾಕಲಾಗುತ್ತದೆ. ಈ ಬಾಳೆ ಎಲೆ ತಿರುಗಿಸಿ ಹಾಕಲಾಗುತ್ತದೆ. ಅಂದರೆ ನಾವು ಮೇಲೆ ಕಡೆಯಲ್ಲ ಊಟ ಬಡಿಸುತ್ತಿದ್ದಾರೆ ಪಾತಾಳಿ ಹಾಕುವಾಗಿ ಈ ಬಾಳೆ ಊಟ ಮಾಡುವ ಮೇಲ್ಭಾಗವನ್ನು ಕೆಳಗೆ ಹಾಕಲಾಗುತ್ತದೆ.

ಕಾಡುಪ್ರಾಣಿಗಳಂತೆ, ಪಕ್ಷಿಗಳ ಕೂಡ ಬೇಟೆ ಆಡಲಾಗುತ್ತದೆ. ಖವ್ವಣ, ಬೊಂಡಸ, ಪಿಟಕೊಳಿ, ಆಂಬೆಕಿಗೊಳಿ, ಕಾಳಪೀಟ, ಗುಮಾಡೆ, ಕುಟವಾ, ಜಿಳಂಬ, ಕೀರ, ಕೋಳಿ, ಹೆಂಡಾ ಕವಡೊ, ಗುಮಾತೆ, ಸುವಾಳ, ಬಿಟ್ಟು ಕುಟುಂಬರೊ ಸಾವುರಬಂಡೊ ಬೊಂಡೇ, ಚೆಕಂಡೊ ಭಂಜಳ, ಖವುಣ ಕೊವಡೊ, ಪಾತಾಗಿಲ್ಲ ಬಾಟಕೆ ಕುತ್ತರೆ ಈ ಪಕ್ಷಿಗಳನ್ನು ಬೇರೆ ಬೇರೆ ರೀತಿಯಲ್ಲಿ ಬೇಟೆ ಆಡಲಾಗುತ್ತಿತ್ತು. ಕುಟುವಾ, ಜೀಳಂಬ, ಕೀರ ಇವುಗಳಿಗೆ ಮೊದಲು ಭತ್ತ ಹಾಕಿ ತಿನ್ನಲು ಬರುವಂತೆ ಮಾಡಿ ನಂತರ ಪಕ್ಕದಲ್ಲಿ ಹುಲ್ಲಿನ ಫೂಡ್ ಮಾಡಿಕೊಂಡು ಅದರಲ್ಲಿ ಕುಳಿತು ಬಲೆ ಹಾಕಿ ಹಿಡಿಯಲಾಗುತ್ತಿತ್ತು.

ಪಕ್ಷಿಗಳ ಬೇಟೆಯನ್ನು ಪಾಕಾಟಿ ಹಾಕಿಯೂ ಮಾಡಲಾಗುತ್ತದೆ. ಪಾಕಾಟೆ ಅಂದರೆ ಕೆಳ, ಗೋಳ, ಪಣಸ, ಲಿಂಬುಡ, ಮರಗಳಿಂದ ಅಂಟನ್ನು ತೆಗೆದು ಅದನ್ನು ಕುದಿಸಿ ಸಣ್ಣ ಬಡಿಗೆ

ಹಚ್ಚಲಾಗುತ್ತದೆ. ಗಿಳಿ ಭತ್ತ ತಿನ್ನಲು ಬರುವಾಗ ಈ ಪಾಕಾಟಿ ಹಾಕಲಾಗುತ್ತದೆ. ಬೇಸಿಗೆ ಕಾಲದಲ್ಲಿ ಪಕ್ಷಿಗಳು ನೀರು ಕುಡಿದು ಸ್ನಾನಕ್ಕೆ ಅಲ್ಲಲ್ಲಿ ಬರುವಾಗ ಈ ಪಾಕಾಟಿ ಹಾಕಿ ಹಿಡಿಯಲಾಗುತ್ತದೆ. ಗೋಳ, ನಂದಗೋಳ, ಕೇಳ ಮರದ ಹಣ್ಣುಗಳನ್ನು ತಿನ್ನಲು ಬೇರೆ ಬೇರೆ ಜಾತಿಯ ಪಕ್ಷಿಗಳು ಬರುತ್ತಿದ್ದು ಇಲ್ಲಿಯೇ ಪಾಕಾಟಿ ಹಾಕಿ ಪಕ್ಷಿಗಳನ್ನು ಹಿಡಿಯಲಾಗುತ್ತಿತ್ತು. ದಾವುಣ ಹಾಕಿಕೊಂಡು ಕೂಡ ಬೊಂಡುಸ ಕುಟುಂಬರೊ ಖಮನ್‌ಗಳನ್ನು ಹಿಡಿಯಲಾಗುತ್ತಿತ್ತು. ದಾವುಣ ಅಂದರೆ ಬೆತ್ತವನ್ನು ತ್ರಿಕೋನಾಕಾರದಲ್ಲಿ ಸುತ್ತಿ ಅದಕ್ಕೆ ಕಾಡಿನ ಹಣ್ಣು ಹಂಪಲುಗಳನ್ನು ಕಟ್ಟಿ ಮರದ ಮೇಲೆ ಕಟ್ಟಿದಾಗ ಅದಕ್ಕೆ ಹಾಕಿದ 'ತಾರಾಚೆ ಪಾಸಗೆ' ಪಕ್ಷಿಗಳು ತಾಗುತ್ತದೆ. ಇದು ಕೂಡ ಒಂದು ಪದ್ಧತಿಯಾಗಿತ್ತು. ಗೋಲಾಣಿ ಘಾಟೊಗಳಿಂದ ಕಲ್ಲನ್ನು ಹೊಡೆದು ಪಕ್ಷಿಗಳ ಬೇಟೆ ಮಾಡುವುದು ಈ ಹಿಂದೆ ಬುಡಕಟ್ಟು ಕುಣಬಿಗಳು ಮಾಡುತ್ತಿದ್ದರು. ಮೊಲ–ಹಂದಿ–ಮುಳ್ಳಂದಿಗಳಿಗೆ ಗಾಳ ಹಾಕುವುದು(ಪಾಸೊಘಾಲಚೆಮೊ), ಮೊಲದ ಬೇಟೆಗಾಗಿ ಹೆಚ್ಚು ಪಾಸಿಕ್ ಹಾಕಲಾಗುತಿತ್ತು ಮುಳ್ಳುಹಂದಿಗೆ ಉರುಳು(ಪಾಸೊ) ಹಾಕಿ ಹಿಡಿಯಲಾಗುತ್ತಿತ್ತು. ಮುಳ್ಳು ಹಂದಿ ಬಿಲದಲ್ಲಿ ಇರುವುದನ್ನು ನೋಡಿ ಬೆಂಕಿ ಹಾಕಿ ಬೇಟೆ ಆಡಲಾಗುತ್ತಿತ್ತು ಬಿಲ ಅಂದರೆ ಕೊಂಕಣಿ ಭಾಷೆಯಲ್ಲಿ ಖುಟೊ ಎಂದು ಅರ್ಥ.

### ಮೀನಿನ ಬೇಟೆ

ಕಾಡುಪ್ರಾಣಿಗಳಂತೆ ಪಕ್ಷಿಗಳಂತೆ ಕುಣಬಿಗಳು ಮೀನಿನ ಬೇಟೆಯನ್ನು ಆಡುತ್ತಿದ್ದರು. ಅತಿ ಮುಖ್ಯವಾಗಿ ಮಳೆಗಾಲ ಪ್ರಾರಂಭವಾಗುತ್ತಿದ್ದಾಗ ಸಿಹಿನೀರಿಗೆ ಮೀನುಗಳು ಸತತವಾಗಿ ಮೇಲೆ ಬರುತ್ತಿದ್ದಾಗ ಹೊಜರ್ ಹಾಕಿಕೊಂಡು ಮೀನು ಹಿಡಿಯಲಾಗುತ್ತಿತ್ತು. ಹೊಜರ್ ಅಂದರೆ ನೀರು ಮೇಲಿನಿಂದ ಬೀಳುವಂತೆ ಮಾಡಿ ಅದರ ಕೆಳಗೆ ಘೋಯಣ ಅಂದರೆ ಮೀನು ಬೀಳಲು ಭತ್ತದ ಹುಲ್ಲು ಹಾಕಿ ಮಾಡಲಾದ ಸಾಧನ ಇಡಲಾಗುತ್ತದೆ. ಮೇಲೆ ಏರಲು ಮೀನುಗಳು ಹಾರಿದೊಡನೆ ಈ ಘೊಯೆಣ ಒಳಗೆ ಬೀಳುತ್ತಿತ್ತು. ಈ ಹೊಜರ್‌ಗೆ ಮೊಳಯೆ, ಪಿತ್ತೊಳ, ಚಿಕವೊ, ಸಾಂಗಟ ಮೀನುಗಳು ಬೀಳುತ್ತಿತ್ತು.

ಮಾಣ ಹಾಕುವುದು ಅಂದರೆ ಮುಡಿ ಗಾಳೆ, ರಿಟೆ, ಹುಬ್ಬಾಟೊ, ಗವಾಂಡೊ, ರಾಮೊ ಹೀಗೆ ಬೇರೆ ಜಾತಿಯ ಮರದ ಸೊಪ್ಪುಗಳನ್ನು ನೀರಿಗೆ ಹಾಕಿ ನೀರು ಕಡಿಮೆಯಾದ ಸಂದರ್ಭದಲ್ಲಿ ಬೇಟೆ ಆಡಲಾಗುತ್ತದೆ. ಈ ಗಿಡದ ಸೊಪ್ಪು ನೀರಿಗೆ ಹಾಕಿ ಮೀನು ಹಿಡಿಯವುದರಿಂದ ಜೀವಕ್ಕೆ ಅಪಾಯ ಇಲ್ಲ. ಪ್ರಮುಖ ಹೊಂಡಗಳಿಗೆ ಮಾಣ ಹಾಕುವಾಗ ಶಿವನ–ಗಡಿ ದೇವರಿಗೆ ಬಲಿ ಕೊಡಲಾಗುತ್ತದೆ. ಬಲೆ ಹಾಕಿಕೊಂಡು ಇತ್ತೀಚೆಗೆ ಮೀನಿನ ಬೇಟೆ ಆಡಲಾಗುತ್ತದೆ.

ಮೀನಿನ ಬೇಟೆ ಸಂದರ್ಭದಲ್ಲಿ ಗಡಿದೇವರಿಗೆ ಕೋಳಿಬಲಿ ನೀಡಲಾಗುತ್ತದೆ. ಪ್ರಮುಖ ಹೊಂಡಗಳಿಗೆ ಮಾಣ ಹಾಕುವಾಗ ಗಡಿದೇವರಿಗೆ ಬಲಿ ನೀಡಲಾಗುತ್ತದೆ. ಏಡಿಯನ್ನು ಕೂಡ ಕುಣಬಿಗಳು ಆಹಾರಕ್ಕೆ ಬಳಕೆ ಮಾಡಿಕೊಂಡು ಬಂದಿದ್ದಾರೆ. ಏಡಿಯನ್ನು ಹಿಡಿಯಲು ಕೂಡ ಒಂದೊಂದು ವಿಧಾನ ಇದೆ. ಮಳೆಗಾಲ ಪ್ರಾರಂಭವಾಗುತ್ತಿದ್ದಂತೆ ಹಳ್ಳಕೊಳ್ಳಗಳಿಗೆ ಹೊಸ ನೀರು ಹರಿಯುತ್ತಿದ್ದಾಗ ಏಡಿಗಳು ಸತತವಾಗಿ ಹೊರಗೆ ಬರುತ್ತವೆ. ಈ ಸಂದರ್ಭದಲ್ಲಿ ಏಡಿಗಳನ್ನು ಹಿಡಿಯಲಾಗುತ್ತಿತ್ತು. ನಂತರ ಕಟ್ಟೆ ಕಟ್ಟೆ ನೀರಿಗೆ ಹಾಕಲಾಗುತ್ತಿತ್ತು. ಅದನ್ನು ತಿನ್ನಲು ಬಂದಾಗ ಹಿಡಿಯಲಾಗುತ್ತದೆ. 'ಘೊರೊಟ' ಅಂದರೆ ಎರೆಹುಳು ಅಥವಾ ಕಪ್ಪೆಯನ್ನು ಒಂದು ಬಡಿಗೆ ಕಟ್ಟಿಕೊಂಡು ಅದನ್ನು ಬಿಲದಲ್ಲಿ ತೂರಿಸಿದಲ್ಲಿ ಇದರ ವಾಸನೆಗೆ ಏಡಿಗಳು ಹೊರಗೆ ಬಂದಾಗ ಹಿಡಿಯಲಾಗುತ್ತಿತ್ತು. ರಾತ್ರಿಯ ವೇಳೆಯಲ್ಲಿ ಬೆಳಕಿಗೆ ಏಡಿಹುಳು ಹೊರಗೆ ಬಂದಾಗ ಹಿಡಿಯಲಾಗುತ್ತಿತ್ತು. 'ಪಾಸಾಣಿ' ಹಾಕಿ ಏಡಿ ಹಿಡಿಯಲಾಗುತ್ತದೆ.

ಕುಣಬಿಗಳು ಮಧ್ಯಾಹ್ನ ರಾತ್ರಿ ಊಟದ ಸಮಯದಲ್ಲಿ ಕಡಿ ಮಾಡಲಾಗುತ್ತದೆ. ಮುಳೀಕಡಿ, ಬಿಕಣಾ ಕಡಿ, ಮಾಶ್ಯಾಚಿಕಡಿ, ಶ್ಯಾಗೊತಿಕಡಿ(ಸಾರು), ಅಂಬ್ಯಾಚಿ ಕಡಿ, ಸೋಲಾಚಿ ಕಡಿ, ತೊರಾಚಿ ಕಡಿ, ಫಣಸಚಾಕೊ ಪಣಸ ವಲ್ಯಾ ಭಾಜಿ, ಕಿಲ್ಲಾಕಡಿ, ತೆರೊ ಆಳು, ಚಿಂಚಕಡಿ, ಆಂಬಾಡ್ಯಾ ಕಡಿ, ಮೆಡ್ಡುಕಾಕಡಿ ಭಿಯುಲಾಕಡಿ. ತೊಗರಿಬೇಳೆ, ಹೆಸರು, ವಟಾಣೆಗಳನ್ನು ಕಡಿ ಮಾಡಲು ಹಬ್ಬದ ಸಂದರ್ಭಗಳಲ್ಲಿ ಅಷ್ಟೆ ಬಳಕೆ ಮಾಡಲಾಗುತ್ತದೆ. ಬೆಳಗ್ಗಿನ ರೊಟ್ಟಿಯನ್ನು ಜೇನುತುಪ್ಪ, ಹಾಲು ಮತ್ತು ಕಡಿಯಿಂದಲೂ ತಿನ್ನಲಾಗುತ್ತದೆ. ಪ್ರಮುಖ ಕೊಂಡಗಳಿಗೆ ಮಾಣ ಹಾಕುವಾಗ ಆ ಭಾಗದ ಗಡಿದೇವರಿಗೆ ಬಲಿ ಕೊಡುವ ಪದ್ಧತಿ ಇದೆ. ಮಾಡ್ಡಿಕ್, ಹುಡಾಳಿ ಬಿಂಟೆಪಾರ್ ಕೊಂಡಗಳು ಕಾನೇರಿ ನದಿಯ ಪ್ರಮುಖ ಕೊಂಡಾಗಳಾಗಿದೆ. ಈ ಕೊಂಡಗಳಿಗೆ ಮಾಣ ಹಾಕುವಾಗ ಸೀಮೆ ದೇವರಿಗೆ ಬಲಿ ನೀಡಲಾಗುತ್ತದೆ. ಈ ಪದ್ಧತಿ ಇಂದಿಗೂ ಜಾರಿಯಲ್ಲಿದೆ. ಕೋಳಿ ಬಲಿ ನೀಡದೇ ಇದ್ದರೆ ಮಾಣ ಹಾಕಿದರೂ ಮೀನು ಹಿಡಿಯಲು ಅದು ಸಿಗುವುದಿಲ್ಲ, ಮೀನು ಸಿಗಬೇಕೆಂದು ಹೇಳಿ ಗಡಿದೇವರಿಗೆ ಬಲಿ ನೀಡಲಾಗುತ್ತದೆ. ಹೇಳಿಕೆ ಮಾಡಲಾಗುತ್ತದೆ. ಹರಿಯುವ ಝುರಿಗೂ ತಳೆ ಅಂದರೆ ಕೆರೆಗೂ ಕೂಡ ಒಂದೊಂದು ನಾಸ ಇರುತ್ತದೆ. ಈ ನಾಸಗಳಿಗೂ ಹೇಳಿಕೆ ಮಾಡಿ ನಿಲ್ಲಿಸಬೇಕಾಗುತ್ತದೆ. ನಾಸಗಳು ವಾಸಿಸುವ ಸ್ಥಳಗಳನ್ನು ನಾಸಾಪೇಡ ಅಂತ ಕರೆಯಲಾಗುತ್ತದೆ. ಹರಿಯುವ ಝುರಿಗೂ ನಾಸ ಇರುತ್ತಿದ್ದು ಇದನ್ನು ಝುಳಾನಾಸ್ ಅಂತಲೂ ಕರೆಯಲಾಗುತ್ತದೆ.

**ಸಮಾರೋಪ**

ಪ್ರಸ್ತುತ ಅಧ್ಯಾಯದಲ್ಲಿ ಸೀಮಾಪದ್ಧತಿಯ ಬಗ್ಗೆ ವಿವರಸಲಾಗಿದೆ. ಸೀಮಾಪದ್ಧತಿ ಎಂದರೇನು? ಅದರ ಹುಟ್ಟು, ಸ್ವರೂಪ ಮತ್ತು ವಿಕಾಸ ಹಾಗೂ ಅದರ ಮಹತ್ವಗಳ ಬಗ್ಗೆ

ವಿವರಣೆ ನೀಡಲಾಗಿದೆ. ವಿದೇಶಗಳಲ್ಲಿರುವ ಆದಿವಾಸಿಗಳಲ್ಲಿ ಇರಬಹುದಾದ ಸೀಮಾಪದ್ಧತಿಯ ಸಾಧ್ಯತೆಗಳ ಕುರಿತು ಇ-ಲೈಬ್ರರಿ ಮತ್ತು ಅಂತರ್ಜಾಲಗಳಿಂದ ಮಾಹಿತಿ ಪಡೆಯಲಾಗಿದೆ. ಅಧ್ಯಯನದ ವಿಷಯ ಕುರಿತು 20 ವರ್ಷಗಳ ಕಾಲ ಬುಡಕಟ್ಟು ಒಡನಾಟದಲ್ಲಿ ಕಂಡುಕೊಂಡ ಅನುಭವ, ಪ್ರಶ್ನಾವಳಿ ಮತ್ತು ಸಂದರ್ಶನಗಳ ಆಧಾರವಾಗಿಟ್ಟಕೊಂಡು ಈ ಅಧ್ಯಯನದಲ್ಲಿ ವಿವರಣೆ ನೀಡಲಾಗಿದೆ.

**ಅಡಿ ಟಿಪ್ಪಣಿಗಳು**

1. Indigenous and Traditional peoples and protected by Javier Beltran and Adrian Philips, Principles, Guidelines and case studies by IUC world commission on protected areas. Best practice protected area guidelines series No.4 by-IUCN-The world conservation union, P185, 2000.

2. John C. Russell, Peggy A. Adams-RussellValues, Attitudes and Beliefs Toward National Forest System Lands: Arizona Tribal Peoples USDA Forest Service Region 3, Southwestern Region 333 Broadway SE, Albuquerque, NM 87102, April 19, 2006.

3. Ibid P 73

4. Jennifer Brick, The Political Economy of Customary Village Organizations in Rural Afghanistan, Department of Political Science, University of Wisconsin – Madison, USA , P156, 2008.

5. Javier Beltrán, Adrian Phillips, Edited: Indigenous and Traditional Peoples and Protected Areas, Principles, Guidelines and Case Studies, Cardiff University, P178 2002.

6. Indigenous and Traditional peoples and protected by Javier Beltran and Adrian Philips, Principles, Guidelines and case studies by IUC world commission on protected areas. Best practice protected area guidelines series No.4 by-IUCN-The world conservation union, P 201, 2000

7. Appa, G., and G. Patel, 1996. Unrecognized, Unnecessary and Unjust Displacement: case study from Gujrat, India. In McDowell, C. Understanding Impoverishment: The Consequences of Development Induces Displacement. Providence / Oxford: Berghahn.

8. World Intellectual Property Organization: Customary Law, Traditional Knowledge and Intellectual Property : Outline of the issues.

9. Birgitte Feiring, Indigenous peoples' rights to lands, territories, and resources.

10. ಮಾಹಿತಿ: ಶ್ರೀ ಚಂದ್ರಕಾಂತ ಮಹಾದೇವ ಗಾವಡಾ

11. ಮಾಹಿತಿ: ಶ್ರೀಮತಿ ಸುಮಿತ್ರಾ ಬುಧೊ ವೆಳಿಪ್(ಸುಶಿಲ್ ಮಾವಸಿ)

12. ಕಿಕ್ಕೇರಿ ನಾರಾಯಣ, ಜೇನುಕುರುಬ ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ. ಟಾಟ ಎಜುಕೇಷನ್ ಟ್ರಸ್ಟ್, ಪು, 81–90, 2011.

## ಅಧ್ಯಾಯ: ಐದು

# ಅರಣ್ಯ ಕಾಯಿದೆಗಳು ಹಾಗೂ ಸೀಮಾಪದ್ಧತಿ

**ಪೀಠಿಕೆ**

ಬುಡಕಟ್ಟುಗಳ ಬದುಕಿನ ಮೂಲ ಸೆಲೆಯೆ ಕಾಡು. ಸಾವಿರ ವರ್ಷಗಳಿಂದ ಕಾಡಿಗೆ ಅವಲಂಬಿತವಾಗಿ, ಕಾಡಿನ ಜೀವವೈವಿಧ್ಯತೆಯ ಭಾಗವೇ ತಾವಾಗಿ ನೆಲೆ ಕಂಡುಕೊಂಡು ನೆಮ್ಮದಿಯ ಆದ್ಯಾತ್ಮಿಕ ಬದುಕನ್ನು ನಡೆಸುತ್ತಿದ್ದವರು ಆದಿವಾಸಿಗಳು. ಈ ಸಮುದಾಯಗಳ ಕಾಡಿನ ಸಂಪತ್ತಿನ ಹಿಡಿತ ಸಾಧಿಸಲು ಸರ್ಕಾರವನ್ನು ರಚಿಸಿಕೊಂಡು ಸಾಮ್ರಾಜ್ಯಶಾಹಿ ಆಡಳಿತವು ಅರಣ್ಯದ ಸಂಪನ್ಮೂಲಗಳ ಸ್ವತ್ತನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ ಪಿತೂರಿ ನಡೆಸಿದವು. ವಸಾಹತುಶಾಹಿ ಬ್ರಿಟಿಷರಿಂದಲೇ ಈ ಪರಿಯಾಗಿ ಶುರುವಾಗಿ, ಸ್ವಾತಂತ್ರ್ಯದ ನಂತರದ ಭಾರತ ಸರ್ಕಾರದ ಆಡಳಿತದವರೆವಿಗೂ ಕಾಡಿನ ಆದಿವಾಸಿಗಳ ವಿರುದ್ಧ ನಿರಂತರವಾದ ಅರಣ್ಯ ನಿಯಂತ್ರಣ ಕಾಯ್ದೆ, ನೀತಿ ಆದೇಶಗಳನ್ನು ತಂದು ಬುಡಕಟ್ಟುಗಳಿಗೆ ಕಾಡಿನೊಟ್ಟಿಗಿದ್ದ ಅವಿನಾಭಾವ ಸಂಬಂಧ, ಅವಲಂಬನೆ, ಮೂಲ ಅಸ್ತಿತ್ವವನ್ನು ಕಸಿದುಕೊಳ್ಳಲಾಯಿತು. ಹೀಗೆ ಸಾಮ್ರಾಜ್ಯಶಾಹಿ ಆಡಳಿತಗಳು ಸಕಾರವೆಂಬ ಮುಸುಕು ಹಾಕಿಕೊಂಡು ಕಾಡಿನ ಸಂಪನ್ಮೂಲಗಳ ಹಿಡಿತದಲ್ಲಿಟ್ಟುಕೊಳ್ಳುವ ಪಿತೂರಿಯಿಂದಾಗಿ ಆದಿವಾಸಿಗಳು ಕಾಡಿನ ತೆಕ್ಕೆಯಿಂದ ಹಂತ ಹಂತವಾಗಿ ಹೇಗೆ ಕಳಚಿಕೊಳ್ಳುತ್ತಾ ಬಂದರು, ಹೇಗೆ ಸ್ಥಳಾಂತರಗೊಂಡರು,[1] ಹೇಗೆ ಆದಿವಾಸಿಗಳ ಒಕ್ಕಲೆಬ್ಬಿಸಿ ಅಭಿವೃದ್ಧಿಯ ಹೆಸರಲ್ಲಿ ಅಣೆಕಟ್ಟುಗಳು, ಸೀ ಬರ್ಡ್‌ಗಳು, ಅಣುಸ್ಥಾವರಗಳು, ರೈಲುಮಾರ್ಗ, ಮೈನಿಂಗ್‌ಗಳು, ಪರಿಸರ ಪ್ರವಾಸೋದ್ಯಮಗಳು, ಹುಲಿಯೋಜನೆಗಳು, ವನ್ಯಜೀವಿಧಾಮ, ರಾಷ್ಟ್ರೀಯ ಉದ್ಯಾನವನ ಮುಂತಾದ ಯೋಜನೆಗಳು ಹಸಿರ ಜೈಲಿನಲ್ಲಿ ಬಂದಿಯಾದರು. ಇದೆಲ್ಲಾ ಕಾರಣಗಳಿಂದಾಗಿ ಹೇಗೆ ಬುಡಕಟ್ಟುಗಳು ತಮ್ಮ ಮೂಲ ಸಾಂಸ್ಕೃತಿಕ ಸೆಲೆ-ಸೀಮಾಪದ್ಧತಿಯ ಆಚರಣೆಗಳನ್ನು ಬಲವಂತವಾಗಿ ಕಳೆದುಕೊಂಡು ವಂಚಿತರಾಗಿ ಛಿದ್ರಗೊಂಡರು ಮತ್ತು ಅದರ ವ್ಯತಿರಿಕ್ತ ಪರಿಣಾಮಗಳ ಸಂಗತಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ವಸಾಹತುಶಾಹಿ ಆಡಳಿತದ ಆರಂಭದಲ್ಲಿ ಅರಣ್ಯನೀತಿ ಮತ್ತು ಭೂಹಿಡುವಳಿಗಳಿಗೆ ಸಂಬಂಧಿಸಿದಂತೆ ಅದು ರೂಪಿಸಿದ ಅಮಾನವೀಯ ಕಾನೂನುಗಳ ವಿರುದ್ಧ ಆದಿವಾಸಿಗಳು ಅನೇಕ ಹೋರಾಟಗಳಲ್ಲಿ ಪಾಲ್ಗೊಂಡಿದ್ದಾರೆ. ಅರಣ್ಯ ಮತ್ತು ಕೃಷಿಭೂಮಿಯ ಮೇಲೆ ಇರುವ ತಮ್ಮ ಪಾರಂಪರಿಕ ಅವಲಂಬನೆಯನ್ನು 'ನಾಗರಿಕ' ಜಗತ್ತಿಗೆ ಮನವರಿಕೆ ಮಾಡಿಸಲು ಆದಿವಾಸಿಗಳು ತಮ್ಮ ಭೂಹೋರಾಟಗಳ ಮೂಲಕ ಇನ್ನೂ ಪ್ರಯತ್ನಿಸುತ್ತಲೇ ಇದ್ದಾರೆ. ಅರಣ್ಯ ಮತ್ತು ಭೂಮಿಯ ಜೊತೆ ಹೊಂದಿರುವ ಅನನ್ಯ ಅನುಸಂಧಾನದಿಂದಾಗಿಯೇ ಭಾರತದ ಆದಿಮ ಸಮಾಜಗಳ ಸಂಸ್ಕೃತಿ ರೂಪಗೊಂಡಿದೆ. ಆದಿವಾಸಿಗಳಿಗೆ 'ಭೂಮಿ' ಕೇವಲ ಆರ್ಥಿಕ ಭದ್ರತೆಯನ್ನು ಒದಗಿಸುವ ಸಂಪನ್ಮೂಲ ಮಾತ್ರವಲ್ಲ, ಅವರ ಸ್ಮೃತಿ ಜಗತ್ತಿನಲ್ಲಿ ಬೆರೆತುಹೋದ ಒಂದು ದಿವ್ಯ ಮೋಹ. ಆದಿವಾಸಿಗಳು ಭೂಮಿಯ ಜೊತೆಗೆ ಒಂದು ಬಗೆಯ ಆಧ್ಯಾತ್ಮಿಕ ಸಂಬಂಧವನ್ನು ಏರ್ಪಡಿಸಿಕೊಂಡಿದ್ದಾರೆ. ನೇಗಿಲಿನಿಂದ ಉಳುಮೆ ಮಾಡಿದರೆ ಭೂಮಿಯ ಎದೆ ಸೀಳಿದಂತೆ ಎಂದು ಭಾವಿಸಿದ್ದರಿಂದಲೇ, ಆದಿಮ ಸಮಾಜಗಳು ಕುಮ್ರಿ ಬೇಸಾಯ ಕ್ರಮವನ್ನು ಅನುಸರಿಸುತ್ತಿದ್ದವು. ಈ ಕಾರಣಕ್ಕಾಗಿ ಆದಿವಾಸಿಗಳು ಪುಟ್ಟ ಉಪಕರಣಗಳಿಂದ ಲಘು ಕೃಷಿಯಲ್ಲಿ ತೊಡಗುತ್ತಿದ್ದರು. ಒಂದೇ ಕಡೆ ನಿರಂತರವಾಗಿ ಭೂಮಿಯನ್ನು ಉಳುಮೆ ಮಾಡಿದರೆ ಪರಿಸರ ಅಸಮತೋಲನ ವಾಗುವುದೆಂದು ಅರಣ್ಯದ ಹಲವು ಕಡೆ ಲಘು ಬೇಸಾಯದಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಈಗಲೂ ಆದಿವಾಸಿಗಳು ಕಾಡಲ್ಲಿಯ ಒಂದು ಮರ ಕಡಿಯುವುದೆಂದರೆ ಒಬ್ಬ ಮನುಷ್ಯ ನನ್ನು ಕೊಂದಂತೆಯೇ ಎಂದು ಭಾವಿಸುತ್ತಾರೆ. ಇಂದಿಗೂ ಬಿಳಿಗಿರಿರಂಗನ ಬೆಟ್ಟದ ಸೋಲಿಗರು ತಮ್ಮ ಜೊತೆಗಿದ್ದ ವ್ಯಕ್ತಿಯೊಬ್ಬ ಸತ್ತಾಗ ಅನುಭವಿಸುವ ದುಃಖವನ್ನು, ಮರವೊಂದನ್ನು ಕಡಿದಾಗಲೂ ಅನುಭವಿಸುತ್ತಾರೆ. ಹೀಗಾಗಿ ಅರಣ್ಯ ಮತ್ತು ಭೂಮಿಯ ಒಡೆತನವೆನ್ನುವುದು ಆದಿವಾಸಿಗಳಿಗೆ ಕಾನೂನು ಬದ್ಧವಲ್ಲ. ಈ ಎರಡರ ಜೊತೆಗಿನ ಅವರ ಸಂಬಂಧ ಪಾರಂಪರಿಕವಾದದ್ದು. ಈ ಬಗೆಯ ಅಮಾಯಕ ಸಂಬಂಧ ಆಧುನಿಕ ಜಗತ್ತಿನ 'ನಾಗರಿಕ ಆಕ್ರಮಣಕಾರರಿಗೆ ' ವರದಾನವಾಯ್ತು. ಕಾನೂನುಗಳು ಕೇಳುವ ಮೂರ್ತ ಸಾಕ್ಷಿಗಳು ಆದಿವಾಸಿಗಳ ಬಳಿ ಇಲ್ಲವಾಗಿ ಅವರ ಜಮೀನುಗಳು ವಶಪಡಿಸಿಕೊಳ್ಳಲ್ಪಟ್ಟವು. ದೇಶಕ್ಕೆ ಸ್ವಾತಂತ್ರ್ಯ ಬಂದು ಎಲ್ಲರೂ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಸ್ವಾವಲಂಬನೆ ಹೊಂದಲು ದಾಪುಗಾಲಿಟ್ಟರೆ, ಆದಿವಾಸಿಗಳು ತಮ್ಮ ಪಾರಂಪರಿಕ ಆರ್ಥಿಕ ಮೂಲಗಳನ್ನು ಕಳೆದುಕೊಂಡು ಅತಂತ್ರ ಪರಾವಲಂಬಿ ಸ್ಥಿತಿಯನ್ನು ತಲುಪಿದ್ದಾರೆ.

18 ಮತ್ತು 19ನೇ ಶತಮಾನದಲ್ಲಿ ಬ್ರಿಟಿಷರು ತಂದ ಅರಣ್ಯನೀತಿ ಮತ್ತು ಭೂಸುಧಾರಣೆಗಳು ವಸಾಹತು ಆಡಳಿತದ ಹಿತ ಕಾಯಲೆಂದೇ ರೂಪಿಸಲ್ಪಟ್ಟವು. ಈ ಕಾಯ್ದೆಗಳು ಭಾರತದ ಆದಿಮ ಕೃಷಿಕ ಸಮಾಜಗಳ ಭೂಮಿ ಮತ್ತು ಅರಣ್ಯಗಳ ಮೇಲಿನ ಪಾರಂಪರಿಕ ಅವಲಂಬನೆಯನ್ನು ನಾಶ ಮಾಡಿದವು. ಕಾನೂನುಬದ್ಧ ಒಡೆತನವನ್ನು ಮಾತ್ರ ಈ ಕಾಯ್ದೆಗಳು ಅನುಮೋದಿಸಿದವು.

ಆದಿವಾಸಿಗಳು ವಾಸಿಸುವ ಘಟ್ಟ ಪ್ರದೇಶಗಳಲ್ಲಿ ತಮ್ಮ ಕಾಫಿ ಮತ್ತು ಟೀ ಎಸ್ಟೇಟ್‌ಗಳನ್ನು ವಿಸ್ತರಿಸಲು ಪ್ಲಾಂಟರುಗಳು ಕಂಪನಿಯು ಸೈನ್ಯದ ಮೂಲಕ ಆದಿವಾಸಿಗಳಿಗೆ ಮುಖಾಮುಖಿಯಾದರು. ಅರಣ್ಯ ರಾಷ್ಟ್ರೀಕರಣಗೊಂಡಿದ್ದರಿಂದ, ಅದು ಸರ್ಕಾರದ 'ಸ್ವತ್ತಾ'ಗಿ ಪರಿಗಣಿಸಲ್ಪಟ್ಟಿತು. ರಾಷ್ಟ್ರದ ಹಿತದ ದೃಷ್ಟಿಯಿಂದ ಅರಣ್ಯವನ್ನು ಆದಿವಾಸಿಗಳು ಬಿಟ್ಟುಹೋಗಬೇಕೆಂದು ಅರಣ್ಯ ಕಾಯ್ದೆ ಆದಿವಾಸಿಗಳಿಗೆ ಅಜ್ಞಾಪಿಸಿತು. ಆದಿವಾಸಿಗಳು ಈ ಕಾಯ್ದೆಯನ್ನು ಆಗಿನಿಂದಲೇ ಪ್ರತಿಭಟಿಸುತ್ತಾ ಬಂದರು. ಅರಣ್ಯ ಮತ್ತು ಕೃಷಿ ಭೂಮಿಯ ಕುರಿತು ತಮ್ಮ ಪಾರಂಪರಿಕ ಅವಲಂಬನೆಯನ್ನು ಮುಂದುವರಿಸಿಕೊಂಡು ಹೋಗಲು ವಸಾಹತು ಆಡಳಿತದ ಕಾಲದಿಂದ ಇಲ್ಲಿಯವರೆಗೂ ಆದಿವಾಸಿಗಳು ಹೋರಾಟ ಮಾಡುತ್ತಲೇ ಬಂದಿದ್ದಾರೆ. ಕೇರಳದ ಮುತಂಗಾ ಅರಣ್ಯ ಪ್ರದೇಶದಲ್ಲಿ ನಡೆದದ್ದು ಇದೇ ಬಗೆಯ ಹೋರಾಟ.

ಮುತಂಗಾ ಅರಣ್ಯಪ್ರದೇಶ ಕೇರಳ ರಾಜ್ಯದ ವೈನಾಡು ಜಿಲ್ಲೆಯ ಪೂರ್ವಭಾಗಕ್ಕಿದೆ. ಕರ್ನಾಟಕದ ಮೈಸೂರು, ಚಾಮರಾಜನಗರ ಜಿಲ್ಲೆಗಳಿಗೆ ಹೊಂದಿಕೊಂಡಂತಹ ದಟ್ಟ ಕಾಡಿದು. ವೈನಾಡು ಜಿಲ್ಲೆಯ ಪೂರ್ವಭಾಗವು ಮೈಸೂರು ಜಿಲ್ಲೆಯ ಪಶ್ಚಿಮದ ಗಡಿ ಯುದ್ದಕ್ಕೂ ಹೊಂದಿಕೊಂಡಿದೆ. ಹೀಗಾಗಿ ವೈನಾಡಿನಲ್ಲಿರುವ ಬಹುತೇಕ ಆದಿವಾಸಿಗಳು ಕರ್ನಾಟಕದಿಂದ ವಲಸೆ ಹೋದವರೇ ಆಗಿದ್ದಾರೆ. ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ಮತ್ತು ಎನ್. ಬೇಗೂರು ಪ್ರದೇಶದಲ್ಲಿ ವಾಸವಾಗಿರುವ ಕಾಡುಕುರುಬ ಮತ್ತು ಜೇನುಕುರುಬರು ಮುತಂಗಾ ಅರಣ್ಯ ಪ್ರದೇಶದ ಹಲವು ಕಡೆ ನೆಲೆಸಿದ್ದಾರೆ. ಮುತಂಗಾ ಅರಣ್ಯಪ್ರದೇಶದಲ್ಲಿನ ಮುಖ್ಯ ಆದಿವಾಸಿಗಳೆಂದರೆ.[2]

1. ಕಟ್ಟು ನಾಯಕನ್(Kattu naikan)(ಇವರು ಕರ್ನಾಟಕದ ಜೇನುಕುರುಬರು), 2. ಫಣಿಯನ್, 3. ಅಡಿಯನ್(Adiyan)(ಪಂಜರಿಯವರೆಂದು ಕೊಡಗು ಜಿಲ್ಲೆ ಯಲ್ಲಿ ಇವರನ್ನು ಕರೆಯಲಾಗುತ್ತದೆ.), 4. ಉರಲಿ ಕುರುಮನ್(ಬೆಟ್ಟಕುರುಬ), 5. ಕಾಡರ್, 6. ಕೊರಗ 7. ಕುರಿಚೆಯನ್.

'ಆಹಾರ ಸಂಗ್ರಹಣೆ, ಬೇಟೆ ಮತ್ತು ಕುಮ್ರಿ ಬೇಸಾಯ ಈ ಎಲ್ಲ ಆದಿವಾಸಿಗಳ ಆರ್ಥಿಕ ಮೂಲಗಳು. ಆದರೆ ವೈನಾಡಿನ ಬಹುತೇಕ ಆದಿವಾಸಿಗಳು ಈಗ ಜೀತ ಮಾಡುತ್ತಿದ್ದಾರೆ'[3] ಮೇಲಿನ ಆದಿವಾಸಿಗಳ ಜೊತೆ ಆ ಪ್ರದೇಶದಲ್ಲಿ ಕಲನಡಿ, ತಚನಾಡ್ ಮುಪ್ಪನ್, ವೈನಾಡ್ ಕಾಡರ್, ಪಥಿಯನ್, ವೃಂದಾವನ್ ಎಂಬ ಹಿಂದುಳಿದ ಕೃಷಿಕ ಸಮುದಾಯಗಳು ವಾಸಿಸುತ್ತಿವೆ.[4] ಕಟ್ಟುನಾಯಕನ್(ಜೇನುಕುರುಬ), ಕುರಿಚೆಯನ್, ಫಣಿಯನ್ ಇಲ್ಲಿನ ಬಹುಮುಖ್ಯ ಮತ್ತು ಬಹುಸಂಖ್ಯಾತ ಆದಿವಾಸಿ ಸಮುದಾಯಗಳು. ಕಟ್ಟುನಾಯಕನ್ ಸಮುದಾಯದವರು ಎಡಮೂಲ, ಮುಳ್ಳುಕೋಳಿ, ಚೇಲೂರು, ಸೋಮಡಿ, ತರ್ರಿಯೊಡೆ, ಅಂಬುತಿ ಎಂಬ ಸ್ಥಳಗಳಲ್ಲಿ ವಾಸ

ಮಾಡುತ್ತಿದ್ದಾರೆ. ಕುರಿಚೆಯನ್ ಎಂಬ ಸಮುದಾಯದವರು ಒಳ್ಳೆಯ ಗುರಿಕಾರರು, ಬಿಲ್ವಿದ್ಯೆಯಲ್ಲಿ ನಿಷ್ಣಾತರು.[5] ಇವರು ವೈನಾಡು, ಮಾನಂದವಾಡಿ, ವೈತಿರಿ, ಸುಲ್ತಾನ್ ಬತೇರಿ ತಾಲ್ಲೂಕುಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಇದೇ ಪ್ರದೇಶದಲ್ಲಿ ಪೊಲೀಸರಿಗೂ ಮತ್ತು ಆದಿವಾಸಿಗಳಿಗೆ ಘರ್ಷಣೆ ಏರ್ಪಟ್ಟಿದ್ದು. ಇನ್ನು ಇಲ್ಲಿರುವ ಇನ್ನೊಂದು ಬಹುಸಂಖ್ಯಾತ ಬುಡಕಟ್ಟೆಂದರೆ ಫಣಿಯನ್. 'ಇವರು ವೈನಾಡಿನ ಭೂರಹಿತ ಕೃಷಿ ಕೂಲಿಗಳು. ಇಲ್ಲಿನ ಭೂಮಾಲಿಕರು ತಮ್ಮ ಜಮೀನುಗಳಂತೆಯೇ ಫಣಿಯನ್ನರನ್ನು ತಮ್ಮ ಖಾಸಗಿ ಆಸ್ತಿಗಳೆಂದೇ ಪರಿಗಣಿಸಿರುವುದರಿಂದ, ಇವರು ಪಾರಂಪರಿಕವಾಗಿ ಜೀತ ಮಾಡುತ್ತಲೇ ಬಂದಿದ್ದಾರೆ'[6] ಕೇರಳದ ವೈನಾಡು ಜಿಲ್ಲೆಯ ಶೇ. 75ರಷ್ಟು ಭಾಗವನ್ನು ಕಾಡು ಆವರಿಸಿದೆ. ಈ ಕಾರಣಕ್ಕಾಗಿ ಕೇರಳದಲ್ಲಿ ಅತಿಹೆಚ್ಚು ಆದಿವಾಸಿ ಸಮುದಾಯಗಳು ಮುತಂಗಾ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಈ ಅರಣ್ಯಪ್ರದೇಶದ ಸುಮಾರು 40 ಸಾವಿರ ಆದಿವಾಸಿಗಳು ಪಾರಂಪರಿಕವಾಗಿ ತಾವು ಅವಲಂಬಿಸಿದ್ದ ಭೂಮಿಗಾಗಿ ಸತತವಾಗಿ ಹೋರಾಡುತ್ತಲೇ ಬಂದಿದ್ದಾರೆ.

## ಹೋರಾಟದ ಚಾರಿತ್ರಿಕ ಹಿನ್ನೆಲೆ

ಕೇರಳದಲ್ಲಿ 1975ರಲ್ಲಿ Tribal Land Actನ್ನು ಅಚ್ಯುತ ಮೆನನ್ ನಾಯಕತ್ವದ ಸಿಪಿಐ ನೇತೃತ್ವದ ಸಮ್ಮಿಶ್ರ ಸರ್ಕಾರ ರೂಪಿಸುತ್ತದೆ. ಈ ಆಕ್ಟ್ ಪ್ರಕಾರ 1960ರವರೆಗೆ ಯಾರು ಆದಿವಾಸಿಗಳ ಭೂಮಿಯನ್ನು ಕೊಂಡುಕೊಂಡಿರುತ್ತಾರೋ ಅದು ಕಾನೂನು ಬಾಹಿರವೆಂದು ಪರಿಗಣಿಸಲಾಯಿತು. ಆದರೆ ಆದಿವಾಸಿಗಳ ಭೂಮಿಯನ್ನು ಆಕ್ರಮಿಸಿಕೊಂಡಿದ್ದ ಪ್ರಭಾವಿ ಜನರಿಂದ ಈ ಕಾಯ್ದೆ ಜಾರಿಯಾಗಲೇ ಇಲ್ಲ. ನಂತರ ಇದೇ ಕಾಯ್ದೆಗೆ 1986ರಲ್ಲಿ ಒಂದು ತಿದ್ದುಪಡಿಯನ್ನು ತರಲಾಯ್ತು. ಆ ತಿದ್ದುಪಡಿ 1960ರಿಂದ 1982ರ ನಡುವೆ ಆದಿವಾಸಿಗಳ ಜೊತೆ ಮಾಡಿಕೊಂಡ ಭೂವ್ಯವಹಾರಗಳು ಮಾತ್ರ ಕಾನೂನುಬಾಹಿರವೆಂದು ಘೋಷಿಸಿತು. ಆಗಲೂ ಈ ಕಾಯ್ದೆ ಜಾರಿಯಾಗಲಿಲ್ಲ. 1993ರಲ್ಲಿ ಆದಿವಾಸಿಗಳು ಸರಕಾರದ ಈ ನಿರ್ಲಕ್ಷ್ಯವನ್ನು ಪ್ರತಿಭಟಿಸಿ ನ್ಯಾಯಾಲಯದ ಮೊರೆ ಹೋದರು. ಕೇರಳದ ಹೈಕೋರ್ಟು ಆರು ತಿಂಗಳೊಳಗೆ ಸದರಿ ಭೂಸುಧಾರಣಾ ಕಾಯ್ದೆಯನ್ನು ಜಾರಿಗೆ ತರಲೇಬೇಕೆಂದು ಸೂಚಿಸಿತು. ಆದರೆ ಸರಕಾರ 1996ರವರೆಗೂ, ಅಂದರೆ ಮೂರು ವರ್ಷ ಕಳೆದುಹೋದರೂ ಸದರಿ ಕಾಯ್ದೆಯನ್ನು ಜಾರಿಗೆ ತರದೇ ಹೋಯ್ತು. ಆಗ ಕೇರಳ ಹೈಕೋರ್ಟು ನ್ಯಾಯಾಂಗ ನಿಂದನೆಯ ಬೆದರಿಕೆ ಹಾಕಿದಾಗ, ಅದೇ ಕಾಯ್ದೆಗೆ ಇನ್ನೊಂದು ತರಾತುರಿಯ ತಿದ್ದುಪಡಿಯನ್ನು ತರಲಾಯಿತು. 1992ರಿಂದ ಈಚೆಗೆ ಬುಡಕಟ್ಟೇತರ ಜನ ಬುಡಕಟ್ಟುಗಳ ಜೊತೆ ನಡೆಸಿದ ಭೂವ್ಯವಹಾರಗಳು ನ್ಯಾಯಸಮ್ಮತ ವಲ್ಲವೆಂದು ತಿದ್ದುಪಡಿ ಮಾಡಲಾಯಿತು. ಈ ದೀರ್ಘ ಕಾಲದ ವಿಳಂಬದ ನಂತರ 1999ರಲ್ಲಿ ಈ ಕಾಯ್ದೆ ಜಾರಿಗೆ ಬಂದಿತು. ಈ ಕಾಯ್ದೆ ಜಾರಿಗೆ ಬಂದದ್ದು ಕೇವಲ

ಕಾಗದ ಪತ್ರಗಳಲ್ಲಿ ಮಾತ್ರ, ಕಾಯ್ದೆ ಜಾರಿಗೆ ಬಂದರೂ ಅಲ್ಲಿನ ಭೂಸಂಬಂಧಗಳ ಮೇಲೆ ಯಾವ ಪರಿಣಾಮವನ್ನೂ ಅದು ಬೀರಲಿಲ್ಲ. ರಾಷ್ಟ್ರೀಯ ಉದ್ಯಾನವೆಂದು ಮುತಂಗಾ ಅರಣ್ಯ ಪ್ರದೇಶವನ್ನು ಘೋಷಿಸುವದಕ್ಕೂ ಮುನ್ನ ಆದಿವಾಸಿಗಳ ಕೃಷಿ ಭೂಮಿಯನ್ನು ಅಲ್ಲಿನ ಮೇಲ್ವರ್ಗಗಳು ಆಕ್ರಮಿಸಿಕೊಂಡಿದ್ದವು. ಇನ್ನು ರಾಷ್ಟ್ರೀಯ ಉದ್ಯಾನವಾಗಿ ಮುತಂಗಾ ಅರಣ್ಯಪ್ರದೇಶ ಘೋಷಿಣೆಯಾದ ಮೇಲೆ, ಇದ್ದಕ್ಕಿದ್ದಂತೆ ಆದಿವಾಸಿಗಳನ್ನು ಅರಣ್ಯದಿಂದಲೂ ಹೊರಹಾಕಲಾಗಿದೆ. ಅಲ್ಲಿಂದ ಸತತವಾಗಿ ಆದಿವಾಸಿಗಳು ಕೃಷಿ ಭೂಮಿಗಾಗಿ ಹೋರಾಡುತ್ತಲೇ ಬಂದಿದ್ದಾರೆ. 1999ರಲ್ಲಿ ಭೂಸುಧಾರಣಾ ಕಾಯ್ದೆ ಜಾರಿಗೆ ಬಂದರೂ ಇಲ್ಲಿನ ಆದಿವಾಸಿಗಳಿಗೆ ಭೂಮಿ ಸಿಗಲಿಲ್ಲ.

2001 ಆಗಸ್ಟ್‌ನಲ್ಲಿ ಜಾನು ನೇತೃತ್ವದಲ್ಲಿ ಸಾವಿರಾರು ಆದಿವಾಸಿಗಳು ವೈನಾಡಿನಿಂದ ತಿರುವನಂತರಪುರದವರೆಗೆ ಪಾದಯಾತ್ರೆ ಮಾಡಿ, ವಿಧಾನಸೌಧದ ಸಚಿವಾಲಯದ ಸುತ್ತ ಪುಟ್ಟ ಗುಡಿಸಿಲುಗಳನ್ನು ಕಟ್ಟಿಕೊಂಡು ಧರಣಿ ಮಾಡಲಾರಂಭಿಸಿದರು. 48 ದಿನಗಳ ವರೆಗೆ ಧರಣಿ ಮುಂದುವರಿಯಿತು. ಮುಖ್ಯಮಂತ್ರಿ ಆಂಟನಿ, ಜಾನು ಮತ್ತು ಇತರೆ ಆದಿವಾಸಿ ನಾಯಕರ ಜೊತೆ ಮಾತನಾಡಿ, 40,000 ಭೂರಹಿತ ಆದಿವಾಸಿಗಳಿಗೆ ತಲಾ 5 ಎಕರೆ ಭೂಮಿಯನ್ನು ಕೊಡಲಾಗುವುದೆಂದು ವಾಗ್ದಾನ ಮಾಡಿದರು. ಆದಿವಾಸಿ ನಾಯಕರು ಮತ್ತು ಮುಖ್ಯಮಂತ್ರಿಗಳ ನಡುವೆ ನಡೆದ ಮಾತುಕತೆಯ ಸಂದರ್ಭದಲ್ಲಿ 2002 ಜನವರಿಯಿಂದ ಜಮೀನುಗಳನ್ನು ಹಂಚುವ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದೆಂದು ಮುಖ್ಯಮಂತ್ರಿಗಳು ಭರವಸೆ ಕೊಟ್ಟ ಮೇಲೆಯೇ ಆದಿವಾಸಿಗಳು ಧರಣಿ ನಿಲ್ಲಿಸಿ ತಮ್ಮ ಊರುಗಳಿಗೆ ಹಿಂದಿರುಗಿದರು.

2002ರ ಜನವರಿಯಿಂದ 2003ರ ಜನವರಿಯವರೆಗೆ ಕೇರಳದ ಸರ್ಕಾರ ಕೇವಲ 850 ಆದಿವಾಸಿ ಕುಟುಂಬಗಳಿಗೆ ಹಂಚಿದ್ದು ಬರೀ 1748 ಎಕರೆ ಭೂಮಿಯನ್ನು ಮಾತ್ರ. ಕೇರಳದ Tribal Resettlement Mission 1,10,000 ಎಕರೆ ಭೂಮಿಯು, ಆದಿವಾಸಿಗಳಿಗೆ ಹಂಚಲು ಲಭ್ಯವಿದೆ ಎಂದು ತಿಳಿಸಿದೆ. ಆದರೆ ಸರ್ಕಾರ ಮಾತ್ರ 2,300 ಎಕರೆ ಭೂಮಿಯನ್ನು ಮಾತ್ರ ಹಂಚಲು ಸಾಧ್ಯ ಎಂದು ಹೇಳಿಕೊಂಡಿದೆ. Tribal Resettlement Mission ಆದಿವಾಸಿಗಳಿಗೆ ಹಂಚಲು ಶಿಫಾರಸು ಮಾಡಿದ್ದ 1,10,000 ಎಕರೆ ಭೂಮಿಯನ್ನು ಸರ್ಕಾರ ಆದಿವಾಸಿಗಳಿಗೆ ಹಂಚಲು ನಿರಾಕರಿಸಿತು. ಇದಕ್ಕಾಗಿ ಸರ್ಕಾರ ಕೊಡುವ ಕಾರಣ, ಅಭಯಾರಣ್ಯಗಳನ್ನು ಕೇಂದ್ರ ಸರ್ಕಾರದ ಅನುಮತಿಯಿಲ್ಲದೆ, ಕೇವಲ ಅರಣ್ಯೀಕರಣಕ್ಕೆ ಬಿಟ್ಟು ಬೇರೆ ಯಾವ ಉದ್ದೇಶಗಳಿಗೂ ರಾಜ್ಯ ಸರ್ಕಾರ ಬಳಸುವಂತಿಲ್ಲ. ಹೀಗಾಗಿ ಕಣ್ಣೂರು ಪ್ರದೇಶದ 7000 ಎಕರೆ ಕೇಂದ್ರ ಸರ್ಕಾರಿ ಸ್ವಾಮ್ಯದ ಅರಣ್ಯಭೂಮಿಯನ್ನು ಕೊಂಡುಕೊಳ್ಳುವ ಪ್ರಯತ್ನ ಜಾರಿಯಲ್ಲಿದೆ ಎಂದು ರಾಜ್ಯ ಸರ್ಕಾರ ಹೇಳಿಕೊಂಡಿತು.[7]

ಈ ಮಧ್ಯೆ 2003 ಜನವರಿಯಲ್ಲಿ ಕೇರಳ ಸರ್ಕಾರ ಜಾಗತಿಕ ಬಂಡವಾಳ ಸಮಾವೇಶ ಮಾಡಿ, ರಾಜ್ಯದಲ್ಲಿ ಬಂಡವಾಳ ಹೂಡುವ ವಿದೇಶಿ ಕಂಪನಿಗಳಿಗೆ ಅಗತ್ಯ ಜಮೀನನ್ನು ಸರ್ಕಾರ ನೀಡಲು ಸಿದ್ಧವಿದೆ ಎಂದು ಹೇಳಿಕೆ ನೀಡಿತು. ಅಲ್ಲದೆ ಈಗಾಗಲೆ ಗ್ವಾಲಿಯರ್‌ನ ಗ್ರಾಸಿಮ್ ಜವಳಿ ಉದ್ಯಮಕ್ಕೆ ಕೇರಳ ಸರ್ಕಾರ ನೀಲಗಿರಿ ಬೆಳೆಯಲು ಮತ್ತು ಕಾರ್ಖಾನೆ ಕಟ್ಟಲು ಮುತಂಗಾ ಅರಣ್ಯಪ್ರದೇಶದ ಸಾವಿರಾರು ಎಕರೆ ಭೂಮಿಯನ್ನು ನೀಡಿದೆ. ವಿದೇಶಿ ಕಂಪನಿಗಳಿಗೆ ಸರ್ಕಾರ ಭೂಮಿಯನ್ನು ನೀಡಲು ಸಿದ್ಧವಿದೆ ಎಂಬ ಹೇಳಿಕೆ ಸಹಜವಾಗಿಯೇ ಆದಿವಾಸಿಗಳನ್ನು ಕೆರಳಿಸಿದೆ. ಶತಮಾನಗಳಿದ ಭೂರಹಿತರಾಗಿ, ಪರಾವಲಂಬಿಗಳಾಗಿ ಬದುಕುತ್ತಿದ್ದು, ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲಾದರೂ ನಿಶ್ಚಿತ ಆದಾಯದ ಮೂಲ ಕಂಡುಕೊಳ್ಳಲು ಭೂಮಿ ದೊರಕಬಹುದೆಂದು ನಿರೀಕ್ಷಿಸುತ್ತಿದ್ದ ಆದಿವಾಸಿಗಳನ್ನು ಸರ್ಕಾರ ನಿರಾಶೆಯ ಕೂಪಕ್ಕೆ ತಳ್ಳಿದೆ. ಅಲ್ಲದೆ ಸತತ 28 ವರ್ಷಗಳ ಕಾಲ ಕಾಯ್ದೆ ರೂಪಿಸುವ, ಸ್ಥಳೀಯ ಭೂಮಾಲೀಕರ ಮತ್ತು ಪ್ರಭಾವಿ ರಾಜಕಾರಣಗಳ ಒತ್ತಡದಿಂದಾಗಿ ಅದೇ ಕಾಯ್ದೆಗೆ ಮತ್ತೆ ಮತ್ತೆ ತಿದ್ದುಪಡಿಗಳನ್ನು ತರುವ ಸರ್ಕಾರದ ಜೀವವಿರೋಧಿ ನಿಲುವು ಆದಿವಾಸಿಗಳ ಸಹನೆಯನ್ನು ಪರೀಕ್ಷಿಸುತ್ತಲೇ ಬಂದಿದೆ.

ಈ ಎಲ್ಲದರ ನಡುವೆ ಅರಣ್ಯಭೂಮಿಯನ್ನು ಆದಿವಾಸಿಗಳಿಗೆ ಹಂಚುವ ಸರ್ಕಾರದ ನಿರ್ಣಯವನ್ನು ವಿರೋಧಿಸಿದ್ದು, ಅದೇ ಸರ್ಕಾರದ ಅರಣ್ಯ ಇಲಾಖೆ. ಇದಲ್ಲದೆ ಕೇರಳದ ಪರಿಸರವಾದಿಗಳು, ಅದರಲ್ಲೂ 'ಪ್ರಕೃತಿ ಸಂರಕ್ಷಣಾ ಸಮಿತಿ' ಅರಣ್ಯವನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸುವುದರಿಂದ ಪರಿಸರದ ಮೇಲೆ ತೀವ್ರ ಪರಿಣಾಮಗಳಾಗುವ ಸಾಧ್ಯತೆ ಇದೆ ಎಂದು ಆದಿವಾಸಿಗಳ ವಿರುದ್ಧ ಪರೋಕ್ಷ ಹೋರಾಟಕ್ಕಿಳಿಯಿತು. ಆದಿವಾಸಿಗಳ ಹೋರಾಟ ಈ ಹಂತದಲ್ಲಿ ಒಂದು ನಿರ್ಣಾಯಕ ಘಟ್ಟ ತಲುಪಿತ್ತು. ಹತಾಶೆ ಮತ್ತು ಅಸಹಾಯಕತೆಗಳು ಸಹಜವಾಗಿಯೇ ಒಂದು 'ಉಗ್ರ' ನಿರ್ಣಯವನ್ನು ತೆಗೆದುಕೊಳ್ಳಲು ಆದಿವಾಸಿ ನಾಯಕರನ್ನು ಪ್ರೇರೇಪಿಸಿತು. ಜನವರಿ 4 ರಂದು ಮುತಂಗಾ ಅರಣ್ಯ ಪ್ರದೇಶವನ್ನು ಜಾನು ನೇತೃತ್ವದಲ್ಲಿ ಆದಿವಾಸಿಗಳು ಪ್ರವೇಶಿಸಿ ಆದಿವಾಸಿ ಸ್ವಯಂ ಆಡಳಿತವನ್ನು ಘೋಷಿಸಿಕೊಂಡರು. ಸತತ 28 ವರ್ಷಗಳ ಕಾಲ ಆದಿವಾಸಿಗಳ ಭೂಹೋರಾಟವನ್ನು ಜೀವಂತವಾಗಿಟ್ಟುಕೊಂಡು ಬಂದ 'ಆದಿವಾಸಿ ಗೋತ್ರ ಮಹಾಸಭಾ'ಕ್ಕೆ ಜಾನು ಮತ್ತು ಗೀತಾನಂದನ್ ಎಂಬುವರು ಹೊಸ ಉತ್ಸಾಹವನ್ನೇ ತಂದಿದ್ದರು. ಅರಣ್ಯವನ್ನು 'ಅತಿಕ್ರಮಿಸಿದ' ಆದಿವಾಸಿಗಳನ್ನು ಮುತಂಗಾ ಅಭಯಾರಣ್ಯದಿಂದ ಹೊರಹಾಕಲು ಆಂಟನಿ ಸರ್ಕಾರ ಪೊಲೀಸರನ್ನು ಕಳಿಸಿತು. ಮುತಂಗಾ ಅರಣ್ಯ ಪ್ರದೇಶಕ್ಕೆ ಪೊಲೀಸರು ಬರುತ್ತಿದ್ದಂತೆಯೇ ಆದಿವಾಸಿಗಳು 40 ಜನ ಪೊಲೀಸರನ್ನು ಒತ್ತೆಯಾಳುಗಳನ್ನಾಗಿಸಿಕೊಂಡರು. ಜಿಲ್ಲಾಧಿಕಾರಿಯ ಸೂಚನೆಯಂತೆ ಆದಿವಾಸಿಗಳ ಜೊತೆ

ಸಂಧಾನ ನಡೆಸಿದ ಕೆಲವು ವ್ಯಕ್ತಿಗಳು ಒತ್ತೆಯಾಳಾಗಿದ್ದ 40 ಜನರಲ್ಲಿ ಕೆಲವರನ್ನು ಬಿಡಿಸಿಕೊಂಡು ಬಂದರು. ಇನ್ನು ಕೆಲವು ಜನ ಪೊಲೀಸರು ಆದಿವಾಸಿಗಳ ಬಳಿಯೇ ಉಳಿದರು.

ಫೆಬ್ರವರಿ 22ರಂದು ಸರ್ಕಾರ 500 ಜನ ಪೊಲೀಸರ ದೊಡ್ಡ ತುಕಡಿಯನ್ನೇ ಮುತಂಗಾ ಅಭಯಾರಣ್ಯಕ್ಕೆ ನುಗ್ಗಿಸಿತು. ಯಾವ ಸಂಧಾನದ ಮಾತುಕತೆಯೂ ನಡೆಯದೆ ಪೊಲೀಸರು ಅಭಯಾರಣ್ಯದಲ್ಲಿ ತಮ್ಮ ಪಾಡಿಗಿದ್ದ ಆದಿವಾಸಿಗಳ ಮೇಲೆ ಗೋಲಿಬಾರ್ ಮಾಡಿದ್ದಾರೆ. ಅದಕ್ಕೆ ಪ್ರತಿಯಾಗಿ ಆದಿವಾಸಿಗಳು ತಮ್ಮ ಬಿಲ್ಲುಬಾಣಗಳಂತಹ ಸಾಂಪ್ರದಾಯಿಕ ಆಯುಧಗಳ ಮೂಲಕ ಪೊಲೀಸರಿಗೆ ಎದುರು ಬಿದ್ದಿದ್ದಾರೆ. ಈ ಮುಖಾಮುಖಿಯಲ್ಲಿ ಜೋಗಿ ಎಂಬ ಆದಿವಾಸಿ ಯುವಕ ಮತ್ತು ಪೊಲೀಸ್‌ಪೇದೆಯೊಬ್ಬರು ಸಾವನ್ನಪ್ಪಿದ್ದರು. ಆದರೆ ಆದಿವಾಸಿಗಳಲ್ಲಿ ಸತ್ತವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದೆ. ಸರಿಸುಮಾರು 16 ಜನ ಆದಿವಾಸಿಗಳು ಪೊಲೀಸರ ಗೋಲಿಬಾರ್‌ನಲ್ಲಿ ಸತ್ತಿರಬಹುದೆಂದು ಅಂದಾಜು ಮಾಡಲಾಗಿದೆ. ನಂತರದ್ದು ಪೊಲೀಸರದೇ ಕಾರುಬಾರು. ಪುಲಿತೂಕ್ಕಿ ಮತ್ತು ತೆಣ್ಣೂರು ಎಂಬ ಆದಿವಾಸಿ ನೆಲೆಗಳಿಗೆ ನುಗ್ಗಿ ಅಲ್ಲಿನ ವೃದ್ಧರ, ಮಕ್ಕಳು ಮತ್ತು ಮಹಿಳೆಯರಿಗೆ ಪೊಲೀಸರು ಹಿಂಸೆ ಕೊಟ್ಟಿದ್ದಾರೆ. ಸಿಕ್ಕವರನ್ನೆಲ್ಲ ಬಂಧಿಸಿ ಇನ್ನಿಲ್ಲದ ಬೆದರಿಕೆ ಹುಟ್ಟಿಸಿದ್ದಾರೆ. ಪೊಲೀಸರು ಆದಿವಾಸಿಗಳನ್ನು ತಪ್ಪುದಾರಿಗೆ ಎಳೆದಿರುವ ಮತ್ತು ಪೊಲೀಸ್ ಪೇದೆಯೊಬ್ಬನ ಸಾವಿಗೆ ಕಾರಣರಾಗಿದ್ದಾರೆಂದು ಜಾನು ಮತ್ತು ಗೀತಾನಂದನ್ ಅವರನ್ನು ಕ್ರಿಮಿನಲ್ ಮೊಕದ್ದಮೆಯಡಿ ಬಂಧಿಸಿದ್ದಾರೆ.

ಬಿಜೆಪಿ ಪಕ್ಷ ಈ ಘಟನೆಯನ್ನು ಮತೀಯಗೊಳಿಸಲು ಯತ್ನಿಸಿದೆ. ಆದಿವಾಸಿಗಳ ಜಮೀನುಗಳನ್ನು ಚರ್ಚ್‌ಗಳು ವಶಪಡಿಸಿಕೊಂಡಿವೆ. ಆದಿವಾಸಿಗಳ ಹೋರಾಟವೇನಿದ್ದರೂ ಚರ್ಚ್‌ಗಳ ವಿರುದ್ಧ ಎಂದು ಹೋರಾಟದ ದಿಕ್ಕನ್ನು ಬದಲಿಸಲು ಮತ್ತು ಪ್ರಜಾತಾಂತ್ರಿಕ ಹೋರಾಟಗಳನ್ನು ಜನಾಂಗಿಕ ಕಲಹಗಳನ್ನಾಗಿಸುವ ತಮ್ಮ ಸಹಜ ಹುಟ್ಟುಗುಣವನ್ನು ಮತೀಯವಾದಿಗಳು ಪ್ರದರ್ಶಿಸಿದ್ದಾರೆ. ಅಲ್ಲದೆ 'ವನವಾಸಿ ಕಲ್ಯಾಣ ಆಶ್ರಮ' ಎಂಬ ಸಂಸ್ಥೆಯನ್ನು ದಿಢೀರನೆ ಹುಟ್ಟುಹಾಕಿ, ಮಾನಂದವಾಡಿಯ ಸಮೀಪ ವಾಲ್ಲಿಯೂಕ್ಕುವು ಎಂಬಲ್ಲಿ ಆರ್.ಎಸ್.ಎಸ್. ಮುಖ್ಯಸ್ಥ ಸುದರ್ಶನ್ ಅವರನ್ನು ಕರೆಯಿಸಿ ಆದಿವಾಸಿಗಳ 'ಉದ್ಧಾರ'ದ ಕುರಿತು ಭಾಷಣ ಮಾಡಿಸಿದ್ದಾರೆ. ಅಲ್ಲದೆ ಜಾನು, ಕ್ರಿಶ್ಚಿಯನ್ ಮಿಷನರಿಗಳಿಂದ ಮತ್ತು ವಿದೇಶದ ಕೆಲವು ಸಂಸ್ಥೆಗಳಿಂದ ಹಣ ಪಡೆಯುತ್ತಿದ್ದಾರೆ ಎಂದು ಸಹ ಆರೋಪಿಸಿ, ಸಕಲ ಆದಿವಾಸಿಗಳು ತಮ್ಮ ಮತೀಯ ಘೋಷಣೆಯ ಕಡೆ ಗಮನ ಹರಿಸುವಂತೆ ಈ ಕೋಮುವಾದಿಗಳು ಯತ್ನಿಸಿದ್ದಾರೆ.

ಇಲ್ಲಿ ಸಹಜವಾಗಿಯೇ ಈ ಘಟನೆಗೆ ಸಂಬಂಧಿಸಿದಂತೆ ಹಲವು ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. 1975ರಲ್ಲಿಯೇ ಅಚ್ಯುತಮೆನನ್ ಸರ್ಕಾರ ರೂಪಿಸಿದ Tribal Land Actನ್ನು ಯಾವ ಕಾರಣಗಳಿಗಾಗಿ ಅನುಷ್ಠಾನಗೊಳಿಸಲಾಗಲಿಲ್ಲ? ಈ ಕಾಯ್ದೆಯನ್ನು ಅನುಷ್ಠಾನಗೊಳಿಸಲು

ಆದಿವಾಸಿಗಳಿಂದ ಒತ್ತಡ ಬಂದಾಗಲೆಲ್ಲ ಸದಾ ಕಾಯ್ದೆಗೆ ಪದೇಪದೇ ತಿದ್ದುಪಡಿ ತರಲಾಯ್ತು ಯಾವ ಹಿತಾಸಕ್ತಿಯನ್ನು ಕಾಯಲೆಂದು ಈ ತಿದ್ದುಪಡಿಗಳನ್ನು ತರಲಾಯಿತು? ಆದಿವಾಸಿಗಳು ವಾಸಿಸುವ ಪ್ರದೇಶಗಳನ್ನು ಬಿಟ್ಟು ಉಳಿದ ಅರಣ್ಯಪ್ರದೇಶಗಳನ್ನು ಬೇಕಾದರೆ ರಾಷ್ಟ್ರೀಯ ಉದ್ಯಾನ ಅಥವಾ ಅಭಯಾರಣ್ಯಗಳೆಂದು ಘೋಷಿಸಬಹುದೆಂಬ ರಾಯ್‌ಬರ್ಮನ್ ಆಯೋಗದ ಶಿಫಾರಸ್ಸುಗಳನ್ನು ಉಪೇಕ್ಷಿಸಿ, ಆದಿವಾಸಿಗಳನ್ನ ಮುತಂಗಾ ಅರಣ್ಯಪ್ರದೇಶದಿಂದ ಹೊರಹಾಕಿ ಯಾವ ಕಾರಣಗಳಿಗಾಗಿ ಈ ಅರಣ್ಯವನ್ನು ಅಭಯಾರಣ್ಯವೆಂದು ಘೋಷಿಸಲಾಯ್ತು? ಅಭಯಾರಣ್ಯವೆಂದು ಘೋಷಿಸಿದ ಮೇಲೆ ಗ್ರಾಸಿಮ್‌ನಂತಹ ಜವಳಿ ಉದ್ಯಮಕ್ಕೆ ಯಾವ ಕಾನೂನಿನ ಪ್ರಕಾರ ಅಲ್ಲಿ ಸಾವಿರಾರು ಎಕರೆ ಜಮೀನನ್ನು ಬಿಟ್ಟುಕೊಡಲಾಯಿತು? ಸಾವಿರಾರು ವರ್ಷಗಳಿಂದ ಅರಣ್ಯವನ್ನೇ ನಂಬಿಕೊಂಡು ಬಂದ ಈ ಮಣ್ಣಿನ ಆದಿಮ ಸಮುದಾಯಗಳನ್ನು ನಿರ್ಲಕ್ಷಿಸಿ, ಬಂಡವಾಳ ಹೂಡಲು ಬರುವ ವಿದೇಶಿ ಕಂಪನಿಗಳಿಗೆ ಅರಣ್ಯಭೂಮಿಯನ್ನು ಬಿಟ್ಟುಕೊಡುತ್ತೇವೆಂದು ಘೋಷಿಸಿರುವ ಸರ್ಕಾರಕ್ಕೆ ತಾನೇ ರೂಪಿಸಿದ ಅರಣ್ಯ ಕಾಯ್ದೆ ಮರೆತುಹೋಯಿತೇ? ಸತತ 28 ವರ್ಷಗಳ ಕಾಲ, ಪ್ರಜಾಸತ್ತಾತ್ಮಕ ಚೌಕಟ್ಟಿನಲ್ಲಿ ಶಾಂತಿಯುತ ವಾಗಿಯೇ ತಮ್ಮ ಬೇಡಿಕೆಗಳ ಈಡೇರಿಕೆಗೆ ಸರ್ಕಾರವನ್ನು ಎಚ್ಚರಿಸುತ್ತಾ ಬಂದ ಆದಿವಾಸಿಗಳ ಸಹನೆ ಮತ್ತು ತಾಳ್ಮೆಗೆ ಒಂದು ಮಿತಿ ಇದೆ ಎಂದು ಸರ್ಕಾರ ಯೋಚಿಸಲಿಲ್ಲವೇ? ಅಥವಾ ಕೆಳಜಾತಿಗಳು ಮತ್ತು ಆದಿವಾಸಿಗಳು ಭೂ ಒಡೆತನಕ್ಕೆ ಅನರ್ಹರು ಎಂದು ಹೇಳುವ ಭಾರತದ ಹಿಂದೂಧರ್ಮ ಪ್ರಣೀತ ಕಾನೂನನ್ನು ಈ ಸರ್ಕಾರ ಪಾಲಿಸುತ್ತಿದೆಯೇ? ಎಂಬೆಲ್ಲ ಪ್ರಶ್ನೆಗಳು ನಮ್ಮೆದುರು ನಿಲ್ಲುತ್ತವೆ.

1975ರಲ್ಲಿ ರೂಪಗೊಂಡ Tribal Land Actನ್ನು ಅನುಷ್ಠಾನಗೊಳಿಸಲು ಸಾಧ್ಯವೇ ಇರಲಿಲ್ಲ. ಈ ಕಾಯ್ದೆಯು ಸ್ವಾತಂತ್ರ್ಯ ಬಂದ ನಂತರ 1960ರವರೆಗೆ ಯಾರ್‍ಯಾರು ಆದಿವಾಸಿಗಳ ಜಮೀನುಗಳನ್ನು ಅವರಿಂದ ಕೊಂಡಿರುತ್ತಾರೋ, ಇಲ್ಲವೆ ಆಕ್ರಮಿಸಿಕೊಂಡಿರುತ್ತಾರೋ, ಅದೆಲ್ಲ ಅಕ್ರಮ ಎಂದು ಪರಿಗಣಿಸುತ್ತದೆ. ಹೀಗೆ ಆದಿವಾಸಿಗಳ ಜಮೀನುಗಳನ್ನು ಆಕ್ರಮಿಸಿಕೊಂಡ ಭೂಮಾಲೀಕರೇ ಸ್ವಾತಂತ್ರ್ಯನಂತರದ ಭಾರತದ ಆಡಳಿತ ವ್ಯವಸ್ಥೆಯಲ್ಲಿ ಆಯಕಟ್ಟಿನ ಸ್ಥಾನಗಳನ್ನು ಗಿಟ್ಟಿಸಿಕೊಂಡರು. ಇವರು ಸರ್ಕಾರಗಳನ್ನು ನಿಯಂತ್ರಿಸಿದ್ದಲ್ಲದೆ, ಜನತಂತ್ರ ವ್ಯವಸ್ಥೆಯನ್ನು ಪೋಷಿಸಬಲ್ಲ, ಆರ್ಥಿಕ ಮತ್ತು ಸಾಮಾಜಿಕ ಸಮಾನತೆಯನ್ನು ಸಾಧಿಸಬಲ್ಲ ಯಾವ ಗುರುತರ ಪ್ರಯತ್ನಗಳೂ ಯಶ ಕಾಣದಂತೆ ಈ ಯಜಮಾನವರ್ಗ ನೋಡಿಕೊಂಡಿತು. ಇನ್ನು ಭೂಸುಧಾರಣೆಯಂತಹ ಜನಪರ ಕಾಯ್ದೆಯನ್ನು ಹೇಗೆ ತಾನೇ ಈ ಆಳುವ ವರ್ಗ ಜಾರಿ ಮಾಡಲು ಸಾಧ್ಯ? ಇದೇ ಬಗೆಯ ಸನ್ನಿವೇಶ ಕರ್ನಾಟಕದಲ್ಲೂ ಎಪ್ಪತ್ತರ ದಶಕದಲ್ಲಿ ಏರ್ಪಟ್ಟಿತ್ತು. 1954ರಲ್ಲಿ ರಚಿಸಲ್ಪಟ್ಟ ಮೈಸೂರು ಟೆನೆನ್ಸಿ ಆಕ್ಟ್ ಭೂಮಾಲೀಕರಿಗೆ ಅನೇಕ ರಿಯಾಯಿತಿಗಳನ್ನು ನೀಡಿತ್ತು. ಇನ್ನು ಕಾಗೋಡು ಚಳುವಳಿಯ ನಂತರ ಭೂಸುಧಾರಣೆಗಾಗಿ

1957ರಲ್ಲಿ ನೇಮಿಸಿದ್ದ ಜತ್ತಿ ಕಮಿಟಿಯು ತನ್ನ ವರದಿ ಸಲ್ಲಿಸಿದ ಮೇಲೆ ಈ ಕಾಯ್ದೆಯನ್ನು 1961 ರಲ್ಲಿಯೇ ಜಾರಿ ಮಾಡಬೇಕಿತ್ತು. ಆದರೆ ಜಾರಿಯಾದದ್ದು 1965ರಲ್ಲಿ. ಎಂಟು ವರ್ಷಗಳ ನಂತರ ಈ ಕಾಯ್ದೆ ಅನುಷ್ಠಾನಗೊಳ್ಳುವ ಹೊತ್ತಿಗೆ ಅದರ ಎಲ್ಲ ದೌರ್ಬಲ್ಯಗಳನ್ನು ಭೂಮಾಲೀಕರ ಸದುಪಯೋಗಪಡಿಸಿಕೊಂಡರು. ಭೂರಹಿತರಿಗೆ, ಗೇಣಿದಾರರಿಗೆ ಈ ಕಾಯ್ದೆಯಿಂದ ಯಾವ ಪ್ರಯೋಜನವಾಗಲಿಲ್ಲ. 1974ರಲ್ಲಿ ಉಳುವವನೇ ಭೂಮಿಯ ಒಡೆಯ ಎಂಬ ಘೋಷಣೆಯಡಿ ಯಲ್ಲಿ ಜಾರಿಗೊಂಡ ಭೂಸುಧಾರಣಾ ಕಾಯ್ದೆಯು ಭೂಮಾಲೀಕರ ಮೇಲೆ ಯಾವ ಪರಿಣಾಮವನ್ನು ಉಂಟುಮಾಡಲಿಲ್ಲ. 1954ರ ಮೈಸೂರು ಟೆನೆನ್ಸಿ ಆಕ್ಟ್ ಮತ್ತು 1965ರ ಭೂಸುಧಾರಣಾ ಕಾಯ್ದೆಯಿಂದ ಎಚ್ಚೆತ್ತುಗೊಂಡಿದ್ದ ಭೂಮಾಲೀಕರು 1974ರ ಭೂಸುಧಾರಣಾ ಕಾಯ್ದೆಯು ಎಲ್ಲೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳದಂತೆ ನೋಡಿಕೊಂಡರು. ಹೀಗೆ ಭೂಸುಧಾರಣಾ ಕಾಯ್ದೆಗಳು ರೂಪಗೊಳ್ಳುವ ಮತ್ತು ಅನುಷ್ಠಾನಗೊಳ್ಳುವ ಎಲ್ಲ ಹಂತಗಳಲ್ಲಿ, ಬಂಡವಾಳಶಾಹಿಗಳ ಮತ್ತು ಭೂಮಾಲೀಕರ ಮಧ್ಯಪ್ರವೇಶದಿಂದಾಗಿ ಅವು ಪರಿಣಾಮಕಾರಿಯಾಗುವ ಸಾಧ್ಯತೆಗಳೇ ಇಲ್ಲವಾದವು. ಕೇರಳದ Tribal Land Act ಸಹ ಇದಕ್ಕೆ ಹೊರತಾಗೇನೂ ಇಲ್ಲ. ಅದು ಶ್ರೀಮಂತ ಭೂಮಾಲೀಕರ ಪರವಾಗಿ, ಬಂಡವಾಳಶಾಹಿಗಳ ಪರವಾಗಿಯೇ, ರಚನೆಯ ಮತ್ತು ಅನುಷ್ಠಾನದ ಹಂತಗಳಲ್ಲಿ ಹಲವು ಮಾರ್ಪಾಡುಗಳಿಗೆ ಒಳಗಾಯಿತು. ಹೀಗಾಗಿ ಭಾರತದಲ್ಲಿ ರೂಪಗೊಂಡ ಬಹುತೇಕ ಎಲ್ಲ ಭೂಸುಧಾರಣಾ ಕಾಯ್ದೆಗಳು ಗುಪ್ತವಾಗಿ ಭೂಮಾಲೀಕರ ಪರವಾಗಿದ್ದುಕೊಂಡೇ ಅನೇಕ ದೌರ್ಬಲ್ಯಗಳೊಡನೆ ಅನುಷ್ಠಾನಗೊಂಡವು. ಪರಿಣಾಮದಲ್ಲಿ ಯಾವತ್ತೂ ಅವು ಕ್ರಾಂತಿಕಾರಿ ಬದಲಾವಣೆಯನ್ನು ತರಲು ವಿಫಲವಾದವು. ಈ ದೇಶದಲ್ಲಿನ ಭೂಹಿಡುವಳಿಯ ಅಸಮಾನ ವ್ಯವಸ್ಥೆಯನ್ನು ತೊಡೆದುಹಾಕುವ ಕಾಯ್ದೆಯೊಂದು ರೂಪಗೊಂಡರೆ ಸಾಲದು, ಅದನ್ನು ಕಟ್ಟುನಿಟ್ಟಾಗಿ ಜಾರಿ ಮಾಡುವ ಶ್ರಮಜೀವಿಗಳ ಪರವಾದ ಆಡಳಿತ ವ್ಯವಸ್ಥೆಯೂ ರೂಪಗೊಳ್ಳಬೇಕಿದೆ.

ಇನ್ನು ಅರಣ್ಯ ಕಾಯ್ದೆ ಯಾವತ್ತೂ ಆದಿವಾಸಿಗಳ ಪರವಾಗಿರಲಿಲ್ಲ. ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ ಮತ್ತು ರಕ್ಷಿತ ಅರಣ್ಯ ಎಂಬ ಹೆಸರಿನಲ್ಲಿ ರೂಪಗೊಂಡ ಕಾನೂನುಗಳು ಬಂಡವಾಳಶಾಹಿಗಳ ಮತ್ತು ಭೂಮಾಲೀಕರ ಹಿತ ಕಾಯುವುದಕ್ಕಾಗಿಯೇ ಅನುಷ್ಠಾನಗೊಂಡವು. ಈ ಬಗೆಯ ಕಾಯ್ದೆಗಳು ವಸಾಹತು ಆಡಳಿತದಲ್ಲಿ ರೂಪಗೊಂಡ ಕಾಯ್ದೆಗಳ ಯಥಾವತ್ತು ನಕಲಾಗಿಯೇ ಇವೆ. ನಿಸರ್ಗ ಮತ್ತು ಮಾನವ ಸಂಪನ್ಮೂಲಗಳ ಕುರಿತು ಕಿಂಚಿತ್ತೂ ಗೌರವವಿಲ್ಲದ ಯುರೋಪಿನ ಉಪಯೋಗವಾದಿ ಸಿದ್ಧಾಂತದಿಂದ ರೂಪಗೊಂಡ ಅರಣ್ಯನೀತಿಯೇ ಮುಂದೆ, ಸ್ವಾತಂತ್ರ್ಯ ಭಾರತದ ಅರಣ್ಯನೀತಿಯಾಗಿ ಮುಂದುವರಿಯಿತು. ಈಗಲೂ ಈ ದೇಶದ ಅರಣ್ಯ ಕಾಯ್ದೆಗಳಲ್ಲಿ ವಸಾಹತುಶಾಹಿಯ ನೇರ ಪ್ರಭಾವವಿರುವುದು ಸ್ಪಷ್ಟವಾಗಿ ಕಾಣುತ್ತದೆ.

## ವಸಾಹತುಶಾಹಿ ಅರಣ್ಯನೀತಿ ಮತ್ತು ಸೀಮಾಪದ್ಧತಿ

ವಸಾಹತು ಆಡಳಿತ ಮಾತ್ರ ಅರಣ್ಯ ಮತ್ತು ಆದಿವಾಸಿಗಳ ವಿಷಯದಲ್ಲಿ ನಿರ್ದಯವಾಗಿತ್ತು. ಬ್ರಿಟಿಷ್ ಆಡಳಿತ 1865ರಲ್ಲಿ ರೂಪಿಸಿದ ಅರಣ್ಯನೀತಿಯೇ ವಸಾಹತುಶಾಹಿಗಳು ಅರಣ್ಯ ಮತ್ತು ಆದಿವಾಸಿಗಳ ಕುರಿತು ಹೇಗೆ ಯೋಚಿಸುತ್ತಿದ್ದರು ಎಂಬುಧನ್ನು ಎತ್ತಿ ತೋರಿಸುತ್ತದೆ. ಲ್ಯಾಟಿನ್ ಅಮೆರಿಕ ಮತ್ತು ಆಫ್ರಿಕಾದ ದೇಶಗಳಲ್ಲಿ ವಸಾಹತುಶಾಹಿಗಳು ಯಾವ ಬಗೆಯಲ್ಲಿ ನಿಸರ್ಗವನ್ನು ಮತ್ತು ಮಾನವ ಸಂಪನ್ಮೂಲಗಳನ್ನು ಕೊಳ್ಳೆ ಹೊಡೆದು ತಮ್ಮ ಸಾಮ್ರಾಜ್ಯಗಳನ್ನು ಕಟ್ಟಿಕೊಂಡರೋ, ಅದಕ್ಕಿಂತ ಹೀನಾಯವಾಗಿ ಭಾರತದಲ್ಲಿ ನಡೆದುಕೊಂಡರು. ಯುರೋಪಿನ ಸಹಜ ಭೋಗದ ಲಾಲಸೆಯಲ್ಲಿ ಜಗತ್ತಿನ ಎಲ್ಲ ಅಮಾಯಕ ಸಂಪತ್ತನ್ನು ಕೊಳ್ಳೆ ಹೊಡೆದ ವಸಾಹತುಶಾಹಿಗಳಿಗೆ ಭಾರತದಂತಹ ವಿಚಿತ್ರ ಸಮಾಜಗಳಿರುವ ದೇಶ ಸುಲಭದ ತುತ್ತೇ ಆಗಿತ್ತು. ಆದರೆ ವಸಾಹತುಶಾಹಿಗಳಿಗೆ ಸಹಜವಾಗಿಯೇ ಇಲ್ಲಿನ ದುಡಿವವರ್ಗಗಳ ಪ್ರತಿರೋಧದ ಭಯ ಇದ್ದೇ ಇತ್ತು.

ಸೈನ್ಯದ ಬಲ ನಡೆಯದಿದ್ದ ಕಡೆ ಬ್ರಿಟಿಷರು ಅಮಾನವೀಯ ಕಾನೂನುಗಳನ್ನು ಹೇರಿ ತಮ್ಮ ಆಡಳಿತವನ್ನು ಸುಗಮಗೊಳಿಸಿಕೊಳ್ಳುತ್ತಿದ್ದರು. ಭಾರತದಲ್ಲಿ ಅರಣ್ಯ, ಆದಿವಾಸಿಗಳಿಗೆ ಮತ್ತು ದುಡಿವ ಕೆಳಜಾತಿ ವರ್ಗಗಳಿಗೆ ರಚಿಸಿದ ಕಾನೂನುಗಳು ಇದೇ ನೆಲೆಯಲ್ಲಿ ರೂಪಗೊಂಡವು. ತಮ್ಮ ಕಾಫಿ ಎಸ್ಟೇಟುಗಳನ್ನು ಬೆಳೆಸಲು, ರೈಲು ಮಾರ್ಗ ಹಾಕಲು, ಎಲ್ಲಕ್ಕಿಂತ ಮುಖ್ಯವಾಗಿ ಗೆರಿಲ್ಲಾ ಮಾದರಿಯ ಯುದ್ಧದಲ್ಲಿ ವಸಾಹತು ಆಡಳಿತವನ್ನು ಇನ್ನಿಲ್ಲದಂತೆ ಸೋಲಿಸಿಬಿಟ್ಟಿದ್ದ ಆದಿವಾಸಿಗಳನ್ನು ಮಟ್ಟ ಹಾಕಲು ಕಂಪನಿ ಆಡಳಿತ ತಮಗೆ ಅನುಕೂಲವಾದ ಅರಣ್ಯನೀತಿಯನ್ನು ಜಾರಿಗೆ ತರಲೇಬೇಕಿತ್ತು. ಅರಣ್ಯ ಯಾರದು? ಯಾರು ಅದನ್ನು ಬಳಸಬೇಕು? ಅರಣ್ಯದಲ್ಲಿ ಯಾರಿರಬೇಕು? ಯಾರಿರಬಾರದು? ಎಂಬೆಲ್ಲ ಸಂಗತಿಗಳು ಈ ಅರಣ್ಯನೀತಿಯಿಂದ ಸ್ಪಷ್ಟಗೊಂಡವು. ಈವತ್ತಿನ ಸಂರಕ್ಷಿತ ಅರಣ್ಯ, ಅಭಯಾರಣ್ಯ, ವನ್ಯ ಮೃಗ ಸಂರಕ್ಷಣೆ, ರಾಷ್ಟ್ರೀಯ ಉದ್ಯಾನವನ ಎಂಬ ಆಧುನಿಕ ಕಲ್ಪನೆಗಳೆಲ್ಲ ಈ ಪುರಾತನ ಕಾಯ್ದೆಯಲ್ಲಿಯೇ ತಮ್ಮ ಬೇರುಗಳನ್ನು ಬಿಟ್ಟುಕೊಂಡಿವೆ. ಭಾರತಕ್ಕೆ ಸ್ವಾತಂತ್ರ್ಯ ಬಂದು 56 ವರ್ಷ ಕಳೆದರೂ ಇಲ್ಲಿನ ಅರಣ್ಯನೀತಿ, ಬ್ರಿಟಿಷ್ ಸರ್ಕಾರದ ಅರಣ್ಯನೀತಿಯ ಯಥಾವತ್ತು ನಕಲಾಗಿಯೇ ಉಳಿದುಕೊಂಡಿದೆ. ವಸಾಹತು ಆಡಳಿತದ ಸಂದರ್ಭದಲ್ಲಿ ಕಂಪನಿ ಸರ್ಕಾರ ಮೊದಲ ಬಾರಿಗೆ The Madras Forest Act 1865 ಎಂಬ ಕಾಯ್ದೆಯನ್ನು ಜಾರಿಗೆ ತರುತ್ತದೆ. ಅನಂತರ ಕಾಲಕಾಲಕ್ಕೆ ಬ್ರಿಟಿಷರು ಈ ಕೆಳಗಿನಂತೆ ಅರಣ್ಯನೀತಿಯನ್ನು ಪುನರೂಪಿಸುತ್ತಲೇ ಬಂದಿದ್ದಾರೆ.

1. The Indian Forest Act 1878
2. The Forest Act 1890

3. The Amanding Act 1891

4. The Indian Forest (Amending) Act 1901

5. The Indian Forest (Amending) Act 1911

6. The Repealing and Amending Act 1914

7. The Indian Forest Amendment Act 1918

8. The Devolution Act 1920

(Report of Committee on Forest and Tribals in India - 1982 p - 54)[8]

ವಸಾಹತುಶಾಹಿ ಯಾವತ್ತೂ ಮನುಷ್ಯನ ಹಿತಾಸಕ್ತಿಗಿಂತ, ತನ್ನ ಭೋಗಜೀವನದ ಕುರಿತು ಯೋಚಿಸಿದ್ದೇ ಹೆಚ್ಚು. ವಸಾಹತುಶಾಹಿ ತಾನು ಉದ್ಧಾರವಾಗಲು ಮೂರನೇ ಜಗತ್ತಿನ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಬಳಸಿಕೊಳ್ಳಲೇಬೇಕಿತ್ತು. ತನ್ನ ಹುನ್ನಾರಗಳಿಗೆ ಬಲಿಯಾದ ದೇಶದ ಜನರನ್ನು ಪ್ರಾಣಿಗಳಂತೆ ನಡೆಸಿಕೊಂಡು ಜೀತಕ್ಕೆ ಹಚ್ಚಿತು. ಮನುಷ್ಯನನ್ನು ಪ್ರಾಣಿಗಳಿಗಿಂತ ಹೀನಾಯವಾಗಿ ಮಾರಾಟ ಮಾಡಿತು. ಮೂರನೇ ಜಗತ್ತೆಂಬ ಸೋತುಹೋದ ಭೂಪ್ರದೇಶಗಳಲ್ಲಿ ಮಾನವ ಹಕ್ಕುಗಳು ಮತ್ತು ನಿಸರ್ಗ ಧೂಳಿಪಟವಾಗಿ ಹೋದವು. ತೋಳ್ಬಲ ಪ್ರಯೋಗವಾಗದ ಕಡೆಯಲ್ಲೆಲ್ಲ, ಅಮಾನವೀಯ ಕಾನೂನುಗಳು ಇವರ ಆಡಳಿತದ ನೆರವಿಗಾಗಿಯೇ ರೂಪಿಸಲ್ಪಡು ತ್ತಿದ್ದವು. ಅಂತಹ ಅನೇಕ ಕಾಯ್ದೆಗಳಲ್ಲಿ ಅರಣ್ಯ ಕಾಯ್ದೆಯೂ ಒಂದು. ವಸಾಹತು ಆಡಳಿತ ಅರಣ್ಯ ಕಾಯ್ದೆಯನ್ನು ಮುಖ್ಯವಾಗಿ ಎರಡು ಕಾರಣಗಳಿಗಾಗಿ ರೂಪಿಸಿತು.

1. ಭಾರತ, ಆಫ್ರಿಕಾ, ಲ್ಯಾಟಿನ್ ಅಮೆರಿಕದಂತಹ ದೇಶಗಳಲ್ಲಿನ ಅರಣ್ಯಗಳ ವೈವಿಧ್ಯಮಯ ಸಂಪತ್ತನ್ನು ಕೊಳ್ಳೆ ಹೊಡೆಯಲು.

2. ಈ ಅರಣ್ಯದಲ್ಲಿನ ಆದಿವಾಸಿಗಳನ್ನು ತಮ್ಮ ಆಡಳಿತದ ವ್ಯಾಪ್ತಿಗೆ ತಂದುಕೊಂಡು ಅವರನ್ನು ನಿಯಂತ್ರಿಸುತ್ತ ಅವರನ್ನು ಶ್ರಮದಾಯಕ ದುಡಿಮೆಗಳಿಗೆ ಹಚ್ಚಲು.

ವಸಾಹತು ಆಡಳಿತ ಭಾರತದಲ್ಲಿ ಜಾರಿಗೊಳಿಸಿದ ಅರಣ್ಯನೀತಿಯನ್ನು ಗಮನಿಸಿದರೆ ಸಾಕು, ಈ ಎರಡು ಪ್ರಮುಖ ಉದ್ದೇಶಗಳು ಕಣ್ಣಿಗೆ ಹೊಡೆದಂತೆ ಎದ್ದುಕಾಣುತ್ತವೆ. ದುರಾಸೆಯ ಉದ್ದೇಶಗಳನ್ನೇ ಇಟ್ಟುಕೊಂಡು ಜಗತ್ತಿನ ಎಲ್ಲ ಕಡೆ ಜಲಮಾರ್ಗಗಳನ್ನು ಶೋಧಿಸಲೆಂದು ನೀರಿನಲ್ಲಿ ಈಜುಬಿದ್ದ ಯುರೋಪಿನ ದೇಶಗಳಿಗೆ ಕಣ್ಣೆದುರಿಗಿದ್ದುದು, ಮೂರನೇ ಜಗತ್ತಿನ ಅಪಾರ ವೈವಿಧ್ಯದ ನಿಸರ್ಗ ಮತ್ತು ಅಮಾಯಕ ಆದಿಮ ಕೃಷಿಕ ಸಮಾಜಗಳು.

ಹೀಗಾಗಿ ಭಾರತದಲ್ಲಿ ಬ್ರಿಟಿಷರು ಜಾರಿಗೆ ತಂದ ಅರಣ್ಯನೀತಿ ವಸಾಹತು ಆಡಳಿತದ ಉದ್ದೇಶಗಳ ಈಡೇರಿಕೆಗೆ ನೂರಕ್ಕೆ ನೂರು ಪೂರಕವಾಗಿತ್ತು. ಹೆಸರಿಗೆ ಮಾತ್ರ ಪರಿಸರ ಕಾಳಜಿ

ಮತ್ತು ರಾಷ್ಟ್ರದ ಹಿತಾಸಕ್ತಿ ಎಂಬ ಮಾಯದ ಪರದೆಯನ್ನು ತಮ್ಮ ಅಮಾನವೀಯ ಹುನ್ನಾರಗಳಿಗೆ ಕಂಪನಿ ಸರ್ಕಾರ ಹೊದಿಸುತ್ತಿತ್ತು. ರಾಷ್ಟ್ರೀಯ ಉದ್ಯಾನ, ಸಂರಕ್ಷಿತ ಅರಣ್ಯ, ಅಭಯಾರಣ್ಯ ಎಂಬ ಪರಿಕಲ್ಪನೆಗಳೇ ಅನೇಕ ವೈರುಧ್ಯಗಳನ್ನು ತಮ್ಮಲ್ಲಿಟ್ಟುಕೊಂಡಿವೆ. ಈ ಎಲ್ಲ ಪರಿಕಲ್ಪನೆಗಳ ಹಿಂದೆ ಅತ್ಯಂತ ಸ್ಪಷ್ಟವಾಗಿ ವಸಾಹತುಶಾಹಿಗಳ ದುರುದ್ದೇಶಗಳು ಎದ್ದು ಕಾಣುತ್ತವೆ. ರಾಷ್ಟ್ರೀಯ ಉದ್ಯಾನ ಮತ್ತು ಅಭಯಾರಣ್ಯಗಳನ್ನು ರೂಪಿಸಲು ಇವರ ಕೊಟ್ಟ ಕಾರಣಗಳು ಎರಡು.

1. ಅರಣ್ಯಗಳು ಭೂಮಿಯ ವಾತಾವರಣವನ್ನು ಕಾಪಾಡುತ್ತವೆ ಅದಕ್ಕಾಗಿ ಅವುಗಳನ್ನು ಕಾಪಾಡಬೇಕು.

2. ವನ್ಯಮೃಗಗಳು ನಾಶವಾಗುತ್ತಿವೆ. ಅವುಗಳ ತಳಿ ಅಭಿವೃದ್ಧಿಪಡಿಸುವುದರ ಜೊತೆಗೆ ಅವುಗಳನ್ನು ಸಂರಕ್ಷಿಸುವ ಹೊಣೆ ಸರ್ಕಾರದ್ದು.

ಹೀಗೆಂದ ಸರ್ಕಾರ, ರಾಷ್ಟ್ರೀಯ ಉದ್ಯಾನಗಳ ಹೃದಯ ಭಾಗದಲ್ಲಿ ಗಣಿಗಾರಿಕೆಗೆ ಮತ್ತು ಬೃಹತ್ ಡ್ಯಾಂಗಳನ್ನು ಕಟ್ಟಲು ಸಾವಿರಾರು ಎಕರೆ ಪ್ರದೇಶವನ್ನು ಯಾರಿಗೂ ಹೇಳದೇ ಕೇಳದೆ ಬಲಿ ಕೊಟ್ಟಿರುವ ಅನೇಕ ಉದಾಹರಣೆಗಳು ನಮ್ಮೆಲ್ಲರ ಕಣ್ಣೆದುರಿಗೆ ನಡೆದುಹೋಗಿವೆ. ಸಂರಕ್ಷಿತ ಅರಣ್ಯಗಳಲ್ಲಿ ಬಂಡವಾಳಶಾಹಿಗಳು ಹೋಟೆಲ್ ಉದ್ಯಮವನ್ನು ಸ್ಥಾಪಿಸಲು ಭೂಮಿ ಕೇಳಿದಾಕ್ಷಣ ಬಿಟ್ಟುಕೊಡುವ ಧಾರಾಳ ಗುಣವನ್ನು ನಮ್ಮ ಸರ್ಕಾರಗಳು ಪ್ರದರ್ಶಿಸಿವೆ. ಯಾವುದಾದರೂ ಉದ್ಯಮಿ ಅರಣ್ಯದ ಮಧ್ಯೆ ಕಾರ್ಖಾನೆ ಸ್ಥಾಪಿಸಲೆಂದು ಉದ್ದೇಶಿಸಿ ಬಿಟ್ಟರೆ ಅವನಿಗೆ ಸಕಲ ಸೌಕರ್ಯವನ್ನು ನೀಡಲು ಸರ್ಕಾರ ಗಳು ಮುಂದಾದ ಘಟನೆಗಳು ಜರುಗಿಹೋಗಿವೆ.

ಇನ್ನು ಅಭಯಾರಣ್ಯಗಳಲ್ಲಿನ ವನ್ಯಮೃಗಗಳು ಸರ್ಕಸ್ಸಲ್ಲಿ ಪ್ರದರ್ಶಿಸಲ್ಪಡುವ ಪಂಜರದ ಪ್ರಾಣಿಗಳಿಗಿಂತಲೂ ಒಂದು ಕೈ ಹೆಚ್ಚಾಗಿಯೇ ಪ್ರದರ್ಶಿಸಲ್ಪಡುತ್ತಿವೆ. ಸರ್ಕಾರ ಈ ಅಭಯಾರಣ್ಯಗಳಿಂದ ಪ್ರವಾಸೋದ್ಯಮವನ್ನು ಉತ್ತೇಜನಗೊಳಿಸುವ ಮಾತಾಡುತ್ತಿದೆ. ಅಂದರೆ ಸರ್ಕಾರ ಯಾವ ಉದ್ದೇಶಗಳನ್ನಿಟ್ಟುಕೊಂಡು ಅರಣ್ಯಗಳನ್ನು, ರಾಷ್ಟ್ರೀಯ ಉದ್ಯಾನ ಮತ್ತು ಅಭಯಾರಣ್ಯಗಳೆಂದು ಪರಿಗಣಿಸಿತೋ ಆ ಉದ್ದೇಶಗಳು ಕೇವಲ ಆದರ್ಶದ ಮಟ್ಟದಲ್ಲಿಯೇ ಇದ್ದು ವಾಸ್ತವದಲ್ಲಿ ಅವು ಅನುಷ್ಠಾನಗೊಳ್ಳುತ್ತಿಲ್ಲ. ಬಂಡವಾಳಶಾಹಿಗಳು ಮತ್ತು ಸಾಮ್ರಾಜ್ಯಶಾಹಿಗಳು ಅರಣ್ಯವನ್ನು ಬಯಸಿದಾಕ್ಷಣ ತನ್ನ ಆದರ್ಶಗಳನ್ನು ಸಡಿಲಿಸಿಕೊಳ್ಳುವ ಅರಣ್ಯನೀತಿ ಯಾರ ಹಿತಾಸಕ್ತಿಗಳಿಗಾಗಿ ರೂಪಗೊಂಡಿದೆ ಎಂಬುದು ಮೇಲುನೋಟಕ್ಕೇ ಗೊತ್ತಾಗುತ್ತದೆ. ಇಂತಹ ವಸಾಹತು ಅರಣ್ಯನೀತಿಯೇ ಸ್ವಾತಂತ್ರ್ಯನಂತರ ಭಾರತದ ಅರಣ್ಯನೀತಿಯಾಗಿ ಮುಂದುವರಿಯಿತು. ಕಂಪನಿ ಆಡಳಿತ ಭೌತಿಕವಾಗಿ ಭಾರತವನ್ನು ಬಿಟ್ಟುತೊಲಗಿದರೂ, ತನ್ನ ಮಾಜಿ ವಸಾಹತುಗಳ

ಅಂತಸ್ಥ ಜಗತ್ತಿನಲ್ಲಿ ತನ್ನೆಲ್ಲ ವಿರೂಪಗಳನ್ನು ಕಾಲಕಾಲಕ್ಕೆ ಜೀವಂತವಾಗಿಡುತ್ತಲೇ ಬಂದಿತು. ಈ ಅರಣ್ಯನೀತಿಯನ್ನು ನವೀಕರಿಸಲು ಭಾರತ ಸರ್ಕಾರ ಹಲವು ಆಯೋಗಗಳನ್ನು ನೇಮಿಸಿ, ಹಲವು ಪರಿಣತರಿಂದ ತಜ್ಞ ವರದಿಗಳನ್ನು ಬರೆಯಿಸಿದ್ದರೂ ಸಹ, ತಜ್ಞರ ಶಿಫಾರಸ್ಸುಗಳನ್ನು ಇಲ್ಲಿಯವರೆಗೂ ಜಾರಿಗೆ ತರಲಾಗಿಲ್ಲ. ಜಾರಿಗೆ ತಂದಿದ್ದರೂ ಸಹ ಅದು ಕೇವಲ ಕಾಗದ ಪತ್ರಗಳಲ್ಲಿ ಮಾತ್ರ.

ಆದಿವಾಸಿಗಳ ಅಸ್ತಿತ್ವದ ಕುರಿತು ಹಲವು ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮತ್ತು ರಾಜಕಾರಣಿಗಳು ವಿವಿಧ ರೀತಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಆದಿವಾಸಿಗಳು ಅರಣ್ಯದಲ್ಲಿರಬೇಕೆ? ಬೇಡವೇ? ಅರಣ್ಯದ ಉಪ ಉತ್ಪನ್ನಗಳನ್ನು ಯಾರು ಸಂಗ್ರಹಿಸಬೇಕು? ಅರಣ್ಯ ಮತ್ತು ಆದಿವಾಸಿಗಳ ಸಂಬಂಧದ ಸ್ವರೂಪವೇನು? ಆದಿವಾಸಿಗಳ ಅಭಿವೃದ್ಧಿಯನ್ನು ಸಾಧಿಸುವ ಬಗೆ ಯಾವುದು? ಆದಿವಾಸಿಗಳು ಅರಣ್ಯದಲ್ಲಿರಬೇಕೆ ಅಥವಾ ಅರಣ್ಯದ ಆಚೆಗೆ 'ಮುಖ್ಯಪ್ರವಾಹ'ಕ್ಕೆ ಸೇರಬೇಕೆ? ಅಕಸ್ಮಾತ್ ಅವರು 'ಮುಖ್ಯಪ್ರವಾಹ'ಕ್ಕೆ ಬಂದುಬಿಟ್ಟರೆ ಅವರ ಸಂಸ್ಕೃತಿಯ ಗತಿ ಏನು? ಎಂಬ ಈ ಎಲ್ಲ ಪ್ರಶ್ನೆಗಳ ಸಂಕೀರ್ಣ ವರ್ತುಲದಲ್ಲಿ, ಆದಿವಾಸಿಗಳ ಅಭಿಪ್ರಾಯಗಳೇ ಗೈರುಹಾಜರಾಗಿಬಿಟ್ಟಿವೆ. ಆದಿವಾಸಿಗಳು ತಮ್ಮ ಅಸ್ತಿತ್ವದ ಕುರಿತು ಏನನ್ನು ಯೋಚಿಸುತ್ತಿದ್ದಾರೆ ಎಂಬ ಪ್ರಶ್ನೆಯನ್ನು ಯಾರೂ ಅಷ್ಟಾಗಿ ಕೇಳಿಕೊಂಡಿಲ್ಲವೆಂದೇ ಕಾಣುತ್ತದೆ. ಸರ್ಕಾರದ ಯೋಜನೆಗಳು ಮತ್ತು ಆಯೋಗಗಳು ಅವರನ್ನು 'ಉದ್ಧಾರ' ಮಾಡಲೆಂದೇ ರೂಪಗೊಳ್ಳುತ್ತವೆ. ಆದರೆ ತಮ್ಮ ಉದ್ಧಾರದ ಕುರಿತು 'ಅವರ' ಕಲ್ಪನೆಗಳೇನು? ಎಂಬುಧೂ ಬಹುಮುಖ್ಯ ಪ್ರಶ್ನೆಯಾಗಬೇಕು. ಆದರೆ 'ಅಭಿವೃದ್ಧಿ' ಮತ್ತು 'ರಾಷ್ಟ್ರದ ಹಿತಾಸಕ್ತಿ' ಎನ್ನುವ ಸ್ಲೋಗನ್ನುಗಳು ಮಾತ್ರ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಇಲ್ಲಿ ಎರ್ರಾಬಿರ್ರಿ ದಾಪುಗಾಲಿಡುತ್ತಿವೆ. ಕಾಲಿಗೆ ಸಿಕ್ಕ ಅಮಾಯಕರು ಈ ಇಬ್ಬಾಯಿಯ ಖಡ್ಗಕ್ಕೆ ಬಲಿಯಾಗುತ್ತಲೇ ಇದ್ದಾರೆ. ಇದಕ್ಕೆ ಒಂದು ಲೇಟೆಸ್ಟ್ ಉದಾಹರಣೆ ಸರ್ದಾರ್ ಸರೋವರ ಅಣೆಕಟ್ಟು.

ಅರಣ್ಯಗಳನ್ನು ಅನೇಕ ಕಾರಣಗಳಿಗಾಗಿ ರಕ್ಷಿಸಬೇಕೆಂಬ ಉದ್ದೇಶದಿಂದ ಸರ್ಕಾರ ಒಂದು ಇಲಾಖೆಯನ್ನೇ ರೂಪಿಸಿದೆ. ಗೃಹ ಮತ್ತು ರಕ್ಷಣಾ ಸಚಿವಾಲಯದಷ್ಟೇ ಪ್ರಬಲವಾದ ಇಲಾಖೆಯಾಗಿ ಅರಣ್ಯ ಇಲಾಖೆ ಪರಿಗಣಿಸಲ್ಪಟ್ಟಿದೆ. ಈ ಮೊದಲೇ ಹೇಳಿದಂತೆ ಅರಣ್ಯ ಇಲಾಖೆಗೆ ಸಂಬಂಧಪಟ್ಟ ಕಾಯ್ದೆ ಕಾನೂನುಗಳು ವಸಾಹತು ಆಡಳಿತ ರಚಿಸಿದ ಅರಣ್ಯನೀತಿಗೆ ಪೂರಕವಾಗಿಯೇ ಇವೆ. ಸ್ವಾತಂತ್ರ್ಯನಂತರ ಭಾರತ ಸರ್ಕಾರ ವಸಾಹತುಶಾಹಿ ಕಾನೂನುಗಳನ್ನೇ ಸ್ವಲ್ಪ ಬದಲಿಸಿ ಜಾರಿಗೆ ತಂದಿತು. ಅದರಲ್ಲೂ ಕಂಪನಿ ಆಡಳಿತ ಅರಣ್ಯದಲ್ಲಿಯ ಬುಡಕಟ್ಟು ಸಮುದಾಯಗಳ ಕುರಿತು ಹೆಚ್ಚಾಗಿ ಬಿಗಿ ನಿಲುವನ್ನೇ ತಾಳಿತ್ತು. ಈ ಆದಿವಾಸಿಗಳನ್ನು ವ್ಯವಸ್ಥಿತವಾಗಿ ಅವರ ವಾಸಸ್ಥಾನಗಳಿಂದ ಹೊರಹಾಕಬೇಕಿತ್ತು. ವಸಾಹತು ಆಡಳಿತಕ್ಕೆ ಪ್ರಬಲ ಪ್ರತಿರೋಧ ಒಡ್ಡುತ್ತಿದ್ದ ಆದಿವಾಸಿಗಳ ಆತ್ಮವಿಶ್ವಾಸ ನಾಶವಾಗಿ, ಅವರ ಸಾಂಘಿಕ ಬದುಕು

ವಿಘಟಿತವಾಗಬೇಕೆಂಬುದೇ ಕಂಪನಿ ಆಡಳಿತದ ಉದ್ದೇಶವಾಗಿತ್ತು. ವಿಶ್ವಭಾರತಿ ವಿಶ್ವವಿದ್ಯಾಲಯದ ಪ್ರಖ್ಯಾತ ಮಾನವಶಾಸ್ತ್ರಜ್ಞ ರಾಯ್‌ಬರ್ಮನ್ ಹೀಗೆ ಹೇಳುತ್ತಾರೆ. "ಅರಣ್ಯದಲ್ಲಿ ವಾಸಿಸುವ ಬಹುತೇಕ ಜನ ಆದಿವಾಸಿ ಸಮುದಾಯಗಳಿಗೆ ಸೇರಿದವರಾಗಿದ್ದಾರೆ. ಇವರು ಕೇವಲ ಅರಣ್ಯವಾಸಿಗಳು ಮಾತ್ರವಲ್ಲ, ಆ ಅರಣ್ಯದ ಜೊತೆಜೊತೆಯಲ್ಲೇ ತಮ್ಮ ಬದುಕುಗಳನ್ನು ರೂಪಿಸಿಕೊಳ್ಳುತ್ತಾ, ಇನ್ನೊಂದೆಡೆ ಅರಣ್ಯದ ಸ್ನಿಗ್ಧ ಪರಿಸರವನ್ನು ಕಾಪಾಡುತ್ತಾ, ಕಾಡುಗಳ್ಳರಿಂದ, ಕಾಳ್ಗಿಚ್ಚುಗಳಿಂದ ಅರಣ್ಯದ ಬೆಲೆ ಬಾಳುವ ಸಂಪತ್ತನ್ನು ಕಾಯ್ದುಕೊಂಡು ಬಂದಿದ್ದಾರೆ. ಅರಣ್ಯ ಮತ್ತು ಆದಿವಾಸಿಗಳ ಈ ಸಹಬಾಳ್ವೆಗೆ ಕುತ್ತು ಬಂದದ್ದು ವಸಾಹತು ಆಡಳಿತದ ಸಂದರ್ಭದಲ್ಲಿ. ವಸಾಹತು ಆಡಳಿತದ ಸಂದರ್ಭದಲ್ಲಿ ಅರಣ್ಯ, ಕಂಪನಿಯ ಆದಾಯವನ್ನು ಹೆಚ್ಚಿಸುವ ಒಂದು ಆರ್ಥಿಕ ಮೂಲವಾಗಿ ಮಾತ್ರ ಪರಿಗಣಿಸಲ್ಪಟ್ಟಿತು. ಈ ಭೂಗೋಳದ ವಾತಾವರಣವನ್ನು ಸಮತೋಲನಗೊಳಿಸುವ ಮತ್ತು ಮನುಷ್ಯನ ಬದುಕನ್ನು ಹಸನು ಮಾಡುವ ಒಂದು ಜೈವಿಕ ಪ್ರಕ್ರಿಯೆಯೆಂದು ಅರಣ್ಯವನ್ನು ವಸಾಹತು ಆಡಳಿತ ಪರಿಗಣಿಸಲೇ ಇಲ್ಲ"[9]

**ಬುಡಕಟ್ಟುಗಳ ಸೀಮಾಪದ್ಧತಿಯ ಮೇಲೆ ದುಷ್ಪರಿಣಾಮ ಬೀರಿದ ಅರಣ್ಯ ಕಾಯ್ದೆಗಳು**

ಭೂನಿಯಂತ್ರಣ ಕಾಯ್ದೆ–1792(Land regulation Act -1792)ರಲ್ಲಿ ವಾರನ್ ಹೇಸ್ಟಿಂಗ್, ಈಸ್ಟ್ ಇಂಡಿಯಾ ಕಂಪನಿಯು ತಾನು ಬ್ರಿಟಿಷ್ ಸರ್ಕಾರ ರೂಪಿಸುವಾಗ ಸರ್ಕಾರಕ್ಕೆ ಕಂದಾಯ ಕ್ರೋಡೀಕರಿಸುವ ಪಿತೂರಿಯ ಭಾಗವಾಗಿ ಈ ಕಾಯ್ದೆಯನ್ನು ಭಾರತದ ಮೇಲೆ ಹೇರಲಾಯಿತು. ಇದರ ಪ್ರಕಾರ ಯಾರು ಈಗಾಗಲೇ ಕೃಷಿಗಾಗಿ ಜಮೀನು ಬಳಸಿದ್ದಾರೋ ಅದನ್ನು ದಾಖಲೆಯ ಮೂಲಕ ದೃಢೀಕರಿಸಿ ಕಂದಾಯ ಕಟ್ಟಿ ಹಾಗೂ ಯಾವ ಭೂಭಾಗದಲ್ಲಿ ಸಾಗುವಳಿ ಮಾಡಿಲ್ಲವೋ ಅಷ್ಟು ಪ್ರದೇಶ ಬ್ರಿಟಿಷ್ ಸರ್ಕಾರಕ್ಕೆ ಸೇರಿದ್ದೆಂದು ವಾರ್‍ನ್ ಹೇಸ್ಟಿಂಗ್ ಆದೇಶ ಹೊರಡಿಸಿದ. ಈ ಕಾಯ್ದೆಗೆ ಬುಡಕಟ್ಟುಗಳಲ್ಲಿನ ಸೀಮಾಪದ್ಧತಿಯ ಆದಿವಾಸಿಗಳ ಕಾಡಿನ ಸಾಂಸ್ಕೃತಿಕ ಸೀಮಾವಲಯಗಳ ಬಗ್ಗೆ ಮಾಹಿತಿ ಇಲ್ಲದ ಕಾರಣ ಆಡಳಿತದಲ್ಲಿ ಇವುಗಳು ದಾಖಲಾಗದೇ ನಿಯಂತ್ರಣಕ್ಕೊಳಪಡಲಿಲ್ಲ. ಅವು ಕೇವಲ ಅರಣ್ಯ ಮತ್ತು ಸರ್ಕಾರದ ಪ್ರದೇಶಗಳಾಗೇ ಉಳಿದುಬಿಟ್ಟವು.[10]

1820ರ–ವಿಕೇಂದ್ರೀಕರಣ ಕಾಯ್ದೆ Devolution Act

1830ರ–ಮೊದಲು ಭಾರತೀಯ ಅರಣ್ಯ ಕಾಯ್ದೆ First Indian Forest Act

1852ರ– ಸಾಮ್ರಾಜ್ಯಶಾಹಿ ಅರಣ್ಯ ಕಾಯ್ದೆ Imperial Forest Act

1865ರ–ಮದ್ರಾಸ್ ಅರಣ್ಯ ಕಾಯ್ದೆ Madras Forest Act

ವಸಾಹತು ಆಡಳಿತ ಅರಣ್ಯ ಮತ್ತು ಆದಿವಾಸಿಗಳ ವಿಚಾರದಲ್ಲಿ ನಿರ್ದಯವಾದ ಕಾನೂನುಗಳನ್ನು ಹೊರತಂದಿತು. ಈ ಅರಣ್ಯ ಕಾಯ್ದೆಗಳನ್ನು ಆಡಳಿತ ಹೊರತರುವಲ್ಲಿ ಕೆಲವು ಹಿಡೆನ್ ಅಜೆಂಡಗಳಿದ್ದವು.

–ಕಾಡಿನ ಸಂಪನ್ಮೂಲಗಳ ಬಗ್ಗೆ ನಿಯಂತ್ರಣ ಸಾಧಿಸುವುದು.

–ಕಾಡಿನ ಸಂಪನ್ಮೂಲಗಳಿಗೆ ಅವಲಂಬಿತರಾದ ಸಮುದಾಯಗಳನ್ನು ಪಾರಂಭಿಕ ಹಂತದಲ್ಲೇ ತಡೆಯುವುದು.

–ವಸಾಹತುಗಳಿಗೆ ಆದಿವಾಸಿಗಳನ್ನು ನಿಯಂತ್ರಣದೊಳಗಿಟ್ಟುಕೊಳ್ಳಲು ಅವರ ವಿಶಿಷ್ಟ ಹೊಂದಿಕೊಳ್ಳದ ಸ್ವಭಾವ ಮತ್ತು ಗೆರಿಲ್ಲಾ ಮಾದರಿಯಲ್ಲಿ ಹೋರಾಡಿ ಕಾಡಿನಲ್ಲಿ ಮರೆಯಾಗುವ ಅವರ ಚಾಣಾಕ್ಷತನಕ್ಕೆ ಕಾಡು ಕೇಂದ್ರವಾಗಿತ್ತು.

–ಅವರ ಸೈನ್ಯ ಬಲಪ್ರಯೋಗ ಕಾಡಿನಲ್ಲಿ ನಡೆಯುತ್ತಿರಲಿಲ್ಲ.

–ಅರಣ್ಯ ಕಾಯ್ದೆಗಳು, ಅರಣ್ಯ ರಕ್ಷಣೆಯ ಉದ್ದೇಶವಾಗಿರದೆ, ಅರಣ್ಯದ ಸಂಪತ್ತುಗಳು ನಮ್ಮ ಹತೋಟಿಯ ನಿಯಂತ್ರಣದಲ್ಲಿದ್ದರೆ ಕಾಡಿನ ಸಂಪನ್ಮೂಲಗಳನ್ನು ದೋಚಿ ಭೋಗಜೀವನ ನಡೆಸಬಹುದು.

–ಅಲ್ಲದೆ ಪ್ರಪಂಚದ ತಮ್ಮ ಮೂಲ ನೆಲೆಗಳಿಗೆ ಮೂರನೇ ಜಗತ್ತಿನ ನೈಸರ್ಗಿಕ ಸಂಪನ್ಮೂಲಗಳನ್ನು ಸಾಗಿಸಿ ಕೊಳ್ಳೆ ಹೊಡೆಯುವ ಹುನ್ನಾರ ಮತ್ತು ಪಿತೂರಿಯ ಭಾಗವಾಗಿ ಅರಣ್ಯ ಕಾಯ್ದೆಗಳನ್ನು ಶಸ್ತ್ರಾಸ್ತ್ರಗಳಂತೆ ಹರಿಬಿಟ್ಟರು.

–ಅರಣ್ಯದಲ್ಲಿನ ಆದಿವಾಸಿಗಳಿಗೂ ಕಾಡಿಗೂ ನಂಟು ಕಡಿದರೆ, ಅದರಿಂದ ಅವಲಂಬಿತರಾದ ಆದಿವಾಸಿಗಳು ನೆಲೆ ಮತ್ತು ಬದುಕಿನ ಮೂಲ ಸೆಲೆ ಕಳೆದುಕೊಂಡು ನಿರ್ಗತಿಕರಾಗುತ್ತಾರೆ. ವಿಧಿಯಿಲ್ಲದವರನ್ನು ತಮ್ಮ ಆಡಳಿತ ವ್ಯಾಪ್ತಿಗೆ ತಂದುಕೊಂಡು ತಾವು ಕೊಳ್ಳೆ ಹೊಡೆಯಲಿರುವ ಸಂಪತ್ತುಗಳ ಶ್ರಮದಾಯಕ ದುಡಿಮೆಗಳಿಗೆ ಜೀತಕ್ಕೆ ಹಚ್ಚಿ ಮಾನವ ಸಂಪನ್ಮೂಲಗಳನ್ನು ಬಳಸಿಕೊಳ್ಳುವ ಪಿತೂರಿ ಇತ್ತು.

ಯಾವ ಮಾನವ ಹಿತಾಸಕ್ತಿಯಾಗಲೀ, ಕಾಡಿನ ಮತ್ತು ಪರಿಸರಗಳ ಕಾಳಜಿಯ ಮಹತ್ತರವಾದ ಯಾವ ಉದೇಶಗಳನ್ನಿಟ್ಟುಕೊಂಡು ವಸಾಹತುಗಳು ಮೇಲೆ ತಿಳಿಸಿರುವ ಕಾಯ್ದೆಗಳನ್ನು ಅನುಷ್ಠಾನಗೊಳಿಸಲಿಲ್ಲ. ಬದಲಾಗಿ ತಮ್ಮ ಉದ್ದೇಶದ ಹಿತಾಸಕ್ತಿಯ ಈಡೇರಿಕೆ ಮತ್ತು ಅಪಾರ ನೈಸರ್ಗಿಕ ಸಂಪತ್ತನ್ನು ಕೊಳ್ಳೆ ಹೊಡೆಯಲು ಕಾಡು ಪರಿಸರ ಮತ್ತು ರಾಷ್ಟ್ರದ ಹಿತಾಸಕ್ತಿಗಳ ಸೋಗಿನ ಮಾಯದ ಪರದೆ ಹೊದ್ದು ತಮ್ಮ ಅಮಾನವೀಯ ದುರುದ್ದೇಶಗಳಿಗೆ

ಬಳಸಿಕೊಳ್ಳುವ ಹುನ್ನಾರದ ಭಾಗವೇ ಈ ಅರಣ್ಯ ಕಾಯ್ದೆಗಳಾಗಿದ್ದವೆಂಬುಧು ಮನದಟ್ಟಾಗಿದೆ.

**1915–ರಾಷ್ಟ್ರೀಯ ಉದ್ಯಾನವನ ಕಾಯ್ದೆ**

ರಾಷ್ಟ್ರೀಯ ಉದ್ಯಾನವನದ ಪರಿಕಲ್ಪನೆ ಯುರೋಪಿಯನ್ನರ ಮೂಸೆಯ ಆಸೆ. ಅದು ಅರಣ್ಯ ಕಳೆದುಕೊಂಡವರು ಕೃತಕವಾಗಿ ಅದನ್ನು ಸೃಷ್ಟಿಸಿ ಆನಂದ ಪಡುವುದು ಒಂದು ಭಾವ ರಾಷ್ಟ್ರೀಯ ಉದ್ಯಾನವನ. ಸಹಜವಾದ ಕಾಡು ಕಳೆದುಕೊಂಡವರು ಕೃತಕವಾಗಿ ಅದನ್ನು ಪಡೆದುಕೊಳ್ಳುವ ಒಂದು ಮಾನಸಿಕ ಸ್ಥಿತಿಯ ಭಾಗವಾಗಿ ಮೂಡಿ ಬಂದಿರುವುದೇ ರಾಷ್ಟ್ರೀಯ ಉದ್ಯಾನವನದ ಕಲ್ಪನೆ. ಈಗಾಗಲೇ ಎರಡನೇ ಅಧ್ಯಾಯದಲ್ಲಿ ವಿಶ್ಲೇಷಿಸಿರುವಂತೆ ಇದರ ರೂಪುರೇಶೆಗಳು ನಿರ್ಮಾಣವಾಗುವುದು IUCN ನಲ್ಲಿ ಇಡೀ ಪ್ರಪಂಚದ ಅರಣ್ಯಗಳು ಹೇಗಿರಬೇಕು ಹೇಗಿರಬಾರದೆಂಬ ವಿನ್ಯಾಸವನ್ನು ಕಾಯ್ದೆಗಳ ಮೂಲಕ ನಿಯಂತ್ರಿಸುವವರು ಮತ್ತು ನಿರ್ದೇಶಿಸುವವರೂ ಅವರೇ. IUCN ಒಕ್ಕೂಟದ ಅಣತಿಯಂತೆ ರಾಷ್ಟ್ರೀಯ ಉದ್ಯಾನವನದ ಪ್ರತಿಯೊಂದು ನಡೆ ಇರುತ್ತದೆ. ಕಾರಣ, 1915ರಲ್ಲಿ ಭಾರತಕ್ಕೆ ರಾಷ್ಟ್ರೀಯ ಉದ್ಯಾನವನ ಪಾದಾರ್ಪಣೆ ಮಾಡಲು ಆಗ ಬಂಗಾಲದಲ್ಲಿ ಬ್ರಿಟಿಷ್ ಆಡಳಿತಗಾರರಾಗಿದ್ದ **ಎಡ್ವರ್ಡ್ ಜಿಮ್ ಕಾರ್ಬೆಟ್**. ಈತ ಒಬ್ಬ ಅದ್ಭುತ ಬೇಟೆಗಾರ, ನ್ಯಾಚುರಲಿಸ್ಟ್ ಮತ್ತು ಕಥೆಗಾರ, ಬರಹಗಾರ. ಬೇಟೆಯಾಡುತ್ತಾ ಆಡುತ್ತಾ ಮಾನವನನ್ನು ತಿನ್ನುತ್ತಿದ್ದ(Man eater) ಹುಲಿ ಮತ್ತು ಚಿರತೆಗಳನ್ನು ಬೇಟೆಯಾಡುವ ಮೂಲಕ ಜನಮನ್ನಣೆ ಗಳಿಸಿದ ನಂತರ ವನ್ಯಜೀವಿಗಳ ಬಗ್ಗೆ ಒಲವು ಮೂಡಿ ವನ್ಯಜೀವಿ ಮತ್ತು ಅರಣ್ಯ ಸಂರಕ್ಷಣೆಯಲ್ಲಿ ತೊಡಗಿಸಿಕೊಂಡ. ಈತನ ಕಾರಣದಿಂದಾಗಿ ಭಾರತದಲ್ಲಿ ಮೊದಲು 1936ರಲ್ಲಿ ವನ್ಯಜೀವಿಧಾಮ(Sanctury) ಮತ್ತು ಹೆಲಿನ್ಯಾಷನಲ್ ಪಾರ್ಕ್(Hailey National Park)ನ್ನು ಉತ್ತರಕಾಂಡ ರಾಜ್ಯದ, ರಾಮನಗರ ಜಿಲ್ಲೆಯಲ್ಲಿ ಸ್ಥಾಪಿಸಲು ಈತ ಕಾರಣನಾದ. ತದನಂತರ ಆತನ ಮರಣದ ನಂತರ ಆತನ ನೆನಪಿಗಾಗಿ 1957 ರಲ್ಲಿ ಇದೇ ವನ್ಯಜೀವಿದಾಮ ಮತ್ತು ಹೆಲೆರಾಷ್ಟ್ರೀಯ ಉದ್ಯಾನವನಗಳ ಹೆಸರು ಬದಲಾಯಿಸಿ ಕಾರ್ಬೆಟ್ ಸ್ಮರಣಾರ್ಥಕ್ಕಾಗಿ **Jem(ಜಿಮ್) Carbett(ಕಾರ್ಬೆಟ್)**[11] ರಾಷ್ಟ್ರೀಯ ಉದ್ಯಾನವನವೆಂದು ಮರು ನಾಮಕರಣ ಮಾಡಲಾಯಿತು. Maps guardian ರಾಷ್ಟ್ರೀಯ ಉದ್ಯಾನವನ ಮೂಲ ಉದ್ದೇಶ ಪರಿಸರದ ಸ್ಥಿರತೆ, ಸಂರಕ್ಷಣೆ ನೈಸರ್ಗಿಕ ಪರಂಪರೆಯ ಸಂರಕ್ಷಣೆ ಹಾಗೂ ಅದರ ಪುನಃ ಸ್ಥಾಪನೆಯಾಗಿದೆ. ಅರಣ್ಯದಲ್ಲಿನ ಹೇರಳ ವನ್ಯ ಮತ್ತು ಸಸ್ಯಜೀವಿ ಜೀವವೈವಿಧ್ಯತೆ, ಮಣ್ಣು, ನದಿ, ಕೊಳ, ಕೆರೆ, ಸರೋವರಗಳ ರಕ್ಷಣೆ ಇತ್ಯಾದಿಗಳಾಗಿವೆ. ಇದೇ ಉದ್ದೇಶ ಭಾರತದ ಅರಣ್ಯನೀತಿಯದೂ ಕೂಡ.

ವಿವೇಚನಾರಹಿತ ಮತ್ತು ಅಧ್ಯಯನ ರಹಿತವಾದ ಯಾವುದೇ ಆದೇಶಗಳು ಅರ್ಥಹೀನವಾಗಿರುತ್ತದೆನ್ನುವುದಕ್ಕೆ ಆಡಳಿತವರ್ಗದ ಅರಣ್ಯನೀತಿ ಮತ್ತು ಕಾಯ್ದೆಗಳೇ ಉದಾಹರಣೆ.

ಭೂಮಿಯ ಪರಿಸರದಲ್ಲಿನ ಜೀವವಿಕಾಸದ ಒಂದು ಭಾಗ ಮಾನವನಾದರೂ ಆತ ಕಾಡಿನಿಂದ ನಾಡಿಗೆ ನಾಗರಿಕನಾಗಿ ದಾಪುಗಾಲನ್ನಿಟ್ಟು ಮುಖ್ಯವಾಹಿನಿಗೆ ಬಂದ. ಆದರೆ ನಾಗರಿಕತೆಯ ಸೋಂಕಿಲ್ಲದೆ, ಮುಖ್ಯವಾಹಿನಿಗೆ ಬರದೇ ಕಾಡಿನ ಭಾಗವಾಗಿಯೇ ಉಳಿದ ಆದಿವಾಸಿಗಳು ಕಾಡಿನ ಪರಿಸರದ ಒಂದು ಭಾಗ ಮತ್ತು ಕಾಡಿನ ಜೀವ ವೈವಿಧ್ಯತೆಯ ಒಂದು ಭಾಗವಾಗಿಯೇ ಉಳಿದರು. ಅವರಿಂದ ಅವರಿಲ್ಲದ ಅರಣ್ಯದ (Symbiotic environmental eco systems) ಪರಿಸರ ವ್ಯವಸ್ಥೆಯಲ್ಲಿ ಸಹಜೀವನವಿದೆ. ಅದು ಕೂಡುಬಾಳ್ವೆ ಬುಡಕಟ್ಟುಗಳು. ಅದರ ಒಂದು ಭಾಗ ಅವರನ್ನು ಅಲ್ಲಿಂದ ಕದಲಿಸಿದರೆ ಪರಿಸರದ ಕೂಡ ಬಾಳ್ವೆಯ ಕೊಂಡಿ(Symbiotic eco system) ಕಳಚುತ್ತದೆಂಬ ನಿತ್ಯ ವಿವೇಚನೆ ಇಲ್ಲದ ಅರಿವುಗೇಡಿಗಳು ನೇಯ್ದ ದಾರ ಈ ಅರಣ್ಯನೀತಿಗಳಾಗಿವೆ.

ಜೆಮ್ ಕಾರ್ಬೆಟ್ ರಾಷ್ಟ್ರೀಯ ಉದ್ಯಾನವನದ ನಂತರ ಭಾರತದಲ್ಲೀಗ ಕ್ರಮವಾಗಿ 36 ರಾಷ್ಟ್ರೀಯ ಉದ್ಯಾನವನಗಳು ಕಾಲಕಾಲಕ್ಕೆ ತಲೆ ಎತ್ತಿ ನಿಂತಿವೆ. ಕರ್ನಾಟಕದಲ್ಲಿ ನಾಗರಹೊಳೆ, ಬಂಡೀಪುರ, ಮತ್ತು ದಾಂಡೇಲಿ ಅಣಸಿ(ಈಗ ಕಾಳಿ ಎಂದು ಹೆಸರು ಬದಲಾಗಿದೆ) ರಾಷ್ಟ್ರೀಯ ಉದ್ಯಾನಗಳು ತಲೆ ಎತ್ತಿ ನಿಂತಿವೆ.[12]

ರಾಷ್ಟ್ರೀಯ ಉದ್ಯಾನವನಗಳಲ್ಲಿ ಆದಿವಾಸಿಗಳ ನೆಲೆಗಳನ್ನು ಭಾರತಾದ್ಯಂತ ಕಿತ್ತೊಗೆಯಲಾಗಿದೆ. ಉದ್ಯಾನವನದ ವ್ಯಾಪ್ತಿಯಲ್ಲಿ ಅಷ್ಟೂ ಆದಿವಾಸಿಗಳನ್ನು ವ್ಯಾಪ್ತಿಯಿಂದ ಹೊರಕ್ಕೆ ಈಗಾಗಲೇ ಸ್ಥಳಾಂತರಿಸಲಾಗಿದೆ. ಆದರೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಬುಡಕಟ್ಟುಗಳ ಹಕ್ಕುಗಳಿಗೆ ಹೋರಾಡುತ್ತಿರುವ **ಗ್ರೀನ್ ಇಂಡಿಯಾ** ಸಂಸ್ಥೆಯು ಇತರ ಸ್ವಯಂ ಸೇವಾ ಸಂಸ್ಥೆಗಳೊಟ್ಟಿಗೆ ಹೋರಾಟ ಕೈಗೊಂಡ ಪ್ರಯುಕ್ತ 2003ರಲ್ಲಿ ಅಣಸಿ ವ್ಯಾಪ್ತಿಯ ರಾಷ್ಟ್ರೀಯ ಉದ್ಯಾನವನದ ಆದಿವಾಸಿಗಳ ಜೀವನ ಕಾಡಿಗೆ ಪೂರಕವಾದದ್ದು, ಇವರುಗಳಿಂದ ಕಾಡಿಗೆ ಹಾನಿ ಇಲ್ಲ, ಈ ಸಮುದಾಯಗಳನ್ನಿಟ್ಟುಕೊಂಡೇ ಉದ್ಯಾನವನ್ನು ನಡೆಸಬೇಕೆಂಬ ಆದೇಶದ ಪ್ರಕಟಣೆಯನ್ನು(2003 Notification) ಆಡಳಿತ ಹೊರಡಿಸಿರುವ ಪ್ರಯುಕ್ತ ಅಲ್ಲಿರುವ ಕುಣಬಿ ಆದಿವಾಸಿಗಳಿಗೆ ಸ್ಥಳಾಂತರದ ಬಾಧೆ ಆವರಿಸಿಕೊಳ್ಳಲಿಲ್ಲ. ಈಗಾಗಲೇ ಸೂಪಾ ಅಣೆಕಟ್ಟು ಜಲಾಶಯಕ್ಕಾಗಿ 47 ಹಳ್ಳಿಯ ಜನಗಳು ಸ್ಥಳಾಂತರಗೈದು ಅತಂತ್ರರಾಗಿದ್ದಾರೆ. ಅಣಸಿ ವ್ಯಾಪ್ತಿಯ ರಾಷ್ಟ್ರೀಯ ಉದ್ಯಾನವನದಿಂದ ಉಳಿದ ಆದಿವಾಸಿಗಳನ್ನು ಸ್ಥಳಾಂತರಿಸಿದ್ದಲ್ಲಿ 'ಕುಣಬಿ'ಗಳ ಸಂಪೂರ್ಣ ಸಂಸ್ಕೃತಿ ನಾಶವಾಗುತ್ತಿತ್ತು ಮತ್ತು ಪ್ರಸ್ತುತವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಗುತ್ತಿರಲಿಲ್ಲ.

## ಆದಿವಾಸಿಗಳ ಸ್ಥಳಾಂತರ ಮತ್ತು ಸೀಮಾಪದ್ಧತಿ

ಸೌರಮಂಡಳದ ಸುತ್ತ ಸುತ್ತುತ್ತಿರುವ ಭೂಮಂಡಳದೊಳಗಡೆ ಜೀವಿಗಳು ವಿಕಾಸವಾಗಿರುವ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯ. ಕೋಟ್ಯಂತರ ವರ್ಷಗಳಿಂದ ಭೂಮಿಯ ನಿರ್ದಿಷ್ಟ

ಪ್ರದೇಶದ ಪರಿಸರದ ವೈಪರೀತ್ಯ, ಹವಾಮಾನ ಮತ್ತು ವಾತಾವರಣದ ಬದಲಾವಣೆಗಳಿಗೆ ತಕ್ಕಂತೆ ಜೀವಿಗಳು ತಮ್ಮ ದೇಹರಚನೆ, ಆಹಾರದ ಕ್ರಮ, ಸ್ವಭಾವ ಮತ್ತು ಬಣ್ಣ ಹಾಗೂ ಸ್ವರೂಪಗಳನ್ನು ನಿಸರ್ಗವು ವೈವಿಧ್ಯಮಯವಾಗಿ ವಿಕಸಿತಗೊಳಿಸಿಕೊಂಡಿದೆ. ಹೀಗೆ ನಿರ್ದಿಷ್ಟ ಭೂಪ್ರದೇಶದ ಮೇಲಿನ ಬದಲಾವಣೆಗಳಿಗೆ ತಕ್ಕಂತೆ ಇತರ ಜೀವಗಳ ಜೊತೆ ಪರಸ್ಪರ ಅವಲಂಬನೆಗಳಿಂದ ಕೊಡುಕೊಳ್ಳುವಿಕೆಗಳಿಂದ ಜೀವನ ಕಟ್ಟಿಕೊಂಡ ಜೀವಿಗಳು ತಾವು ಬದುಕುತ್ತಿರುವ ನಿರ್ದಿಷ್ಟ ಪ್ರದೇಶದ ಪರಿಸರದ ಪ್ರತಿಯೊಂದು ಜೀವ ಮತ್ತು ನಿರ್ಜೀವ ವಸ್ತುಗಳ ಜೊತೆ ನಿಖರವಾದ ಸಂಬಂಧಗಳನ್ನಿಟ್ಟುಕೊಂಡು ರೂಪಿತವಾಗಿರುತ್ತವೆ. ಪರಿಸರದ ಈ ವಿಶಿಷ್ಟ ಸ್ಥಿತಿಯನ್ನು 'ಪರಿಸರ ವ್ಯವಸ್ಥೆ' (Eco System) ಎನ್ನುತ್ತೇವೆ. Eco system means A system that includes all living organizations(biotic factors) in an 'area' as well as its physical environment abiotic factors functioning together as a unit which made up of plants, animals micro organisms soil, rocks, minerals, water sources and the 'local atmosphere' interacting one another…")

ಇಂತಹ ಪರಿಸರದ ವ್ಯವಸ್ಥೆಯೊಳಗೆ ರೂಪಗೊಂಡ ಒಂದು ಜೀವಿಯನ್ನು ಮತ್ತೊಂದು ಪ್ರದೇಶಕ್ಕೆ ಸ್ಥಳಾಂತರ ಮಾಡಿದರೆ ಬದುಕದೇ ಸಾಯುತ್ತವೆ. ಆದರೆ ಶತಮಾನಗಳಿಂದ ತನ್ನದೇ ಪಾರಂಪರಿಕ ಜ್ಞಾನ, ಉಪಾಸನೆ, ಬೇಟೆ, ನಂಬಿಕೆ, ದೈವಗಳೊಟ್ಟಿಗೆ ಸಾಮಾಜಿಕ ಸಂಸ್ಕೃತಿಯನ್ನು ಕಟ್ಟಿಕೊಂಡು, ನಿರ್ದಿಷ್ಟ ಪ್ರದೇಶದ ವಲಯದಲ್ಲಿ ಬದುಕಿನ ಅಸ್ತಿತ್ವ ಪಡೆದುಕೊಂಡ ಒಂದು ಆದಿವಾಸಿ ಸಮುದಾಯವನ್ನು ಅದರ ಪರಿಸರದ ವ್ಯವಸ್ಥೆಯ ಪ್ರದೇಶ ಮೂಲ ನೆಲೆಯಿಂದ 'ರಾಷ್ಟ್ರದ ಅಭಿವೃದ್ಧಿ' ಹೆಸರಿನಲ್ಲಿ ಎತ್ತಿ ಆಚೆಗೆ ಎಸೆಯುವುದನ್ನು 'ಸ್ಥಳಾಂತರ' ಎಂದು ಕರೆಯಲಾಗುತ್ತದೆ.

ಜೀವವಿಕಾಸದ ಬೆಳವಣಿಗೆಯಲ್ಲಿ ಇತರ ಜೀವಿಗಳಿಗಿಂತ ತನ್ನ ಬುದ್ಧಿವಿಕಾಸದ ನಾಗಾಲೋಟದ ಬೆಳವಣಿಗೆಯಿಂದಾಗಿ ಮನುಷ್ಯ ಪ್ರಾಣಿಗಳಿಗಿಂತ ವಿಭಿನ್ನವಾದ, ಸಾಂಸ್ಕೃತಿಕವಾದ ಸಾಮಾಜಿಕ ಜೀವನ ಕಟ್ಟಿಕೊಂಡ. ಮುಂದುವರಿದು ಗುಂಪು, ಪಾಳೇಗಾರಿಕೆ, ರಾಜ್ಯ, ಸಾಮ್ರಾಜ್ಯಗಳನ್ನು ಕಟ್ಟಿಕೊಂಡು ಒಂದು ಪ್ರದೇಶಕ್ಕೆ ಸೀಮಿತವಾಗಿದ್ದ ಮನಸ್ಸು ಬೇರೆ ಬೇರೆ ಪ್ರದೇಶಗಳನ್ನು ತನ್ನ ದುರಾಸೆಯ ಹೊಟ್ಟೆ ಬಾಕತನದಿಂದಾಗಿ ಬೇರೊಂದು ದೇಶ ವಲಯಗಳನ್ನು ಆಕ್ರಮಿಸತೊಡಗಿದ. ರಾಜ್ಯ, ಸಾಮ್ರಾಜ್ಯಗಳು ಮಾರ್ಪಾಟಾಗಿ ದೇಶವಾಯಿತು. ದೇಶ ದೇಶಗಳ ಮಧ್ಯೆ ಗೆರೆ ಎಳೆದು ಪೈಪೋಟಿ ಬೆಳೆದು 'ರಾಷ್ಟ್ರೀಯ ಹಿತಾಸಕ್ತಿ' ಅಂಕುರಗೊಂಡಿತು. ಆಡಳಿತ, ಅಭಿವೃದ್ಧಿ, ಆರ್ಥಿಕಾಭಿವೃದ್ಧಿ, ಉದ್ಯೋಗಾವಕಾಶ, ರಾಷ್ಟ್ರಭಕ್ತಿ ಇವೆಲ್ಲವೂ ದೇಶ ಕಟ್ಟುವ 'ಪ್ರಗತಿ'ಯ ಕ್ಲೀಷೆಯಾಗಿ ಮಾರ್ಪಟ್ಟಿತು.

ಬದುಕಿಗಾಗಿ ಹಸಿವು, ನೆಮ್ಮದಿ ಮತ್ತು ಮೂಲಭೂತ ಸೌಕರ್ಯಗಳಿಗಾಗಿ ಕಾಡಿನ ಕಿರು ಉತ್ಪನ್ನಗಳಂತಹ ಸಂಪನ್ಮೂಲ ಬಳಕೆಗೆ ಮಾತ್ರ ಸೀಮಿತವಾಗಿದ್ದ ಆದಿವಾಸಿ ಸಂಸ್ಕೃತಿ ಬದುಕನ್ನು ಮೀರಿ ನಾಗರಿಕ ಆಧುನಿಕ ಸಂಸ್ಕೃತಿ ತಮ್ಮ ಎಲ್ಲೆ ಇಲ್ಲದ ದಾಹಕ್ಕಾಗಿ ಕಟ್ಟಿಕೊಂಡ ತನ್ನ ಸಾಮ್ರಾಜ್ಯದ ಆಸೆಗಳ ಪೂರೈಸಲು ಸುಂಕ, ತೀರ್ವೆ ಮತ್ತು ತೆರಿಗೆ ನೆಪದಲ್ಲಿ ಸುಲಿಗೆಗಳು ಶುರುವಾಯಿತು. ಇದರಿಂದ ಉಳ್ಳವರು, ಬಂಡವಾಳಶಾಹಿಗಳಾದರು, ಭೂಮಾಲೀಕ, ವ್ಯಾಪಾರಸ್ಥರು ಗಳಾದರು. ಇವರಿಂದ ವಂಚನೆ ಮತ್ತು ಶೋಷಣೆಗೊಳಗಾದವರು ದಾರಿದ್ರ್ಯದಲ್ಲುಳಿದರು. ಈ ಅಸಮಾನತೆಯ ಬಿರುಕು ದೊಡ್ಡದಾಗಿ ಆಳುವ ವರ್ಗ, ದುಡಿಯುವ ವರ್ಗ ಮತ್ತು ಕಾಡಿನಲ್ಲೇ ಉಳಿದ ಆದಿವಾಸಿ ವರ್ಗಗಳಾಗಿ ವಿಂಗಡಣೆಗಳಾದವು. ಆಳುವ ವರ್ಗದ ಬಂಡವಾಳ ಮತ್ತು ಅಭಿವೃದ್ಧಿಗಾಗಿ ಯೋಜನೆಗಳು ಜಾರಿಯಾದವು. ಅಭಿವೃದ್ಧಿ ಯೋಜನೆಗಳಿಗೆ ಸಂಪದ್ಭರಿತ ಕಾಡು, ನದಿ, ಕಣಿವೆ ಪ್ರದೇಶಗಳು ಅಭಿವೃದ್ಧಿಯ ಬಂಡವಾಳಕ್ಕೆ ದಾಳಗಳಾದವು. ಸಹಜವಾಗಿ ಆಧುನಿಕತೆಯ ಸೋಂಕಿಲ್ಲದೆ ಆದಿವಾಸಿ ಸಂಸ್ಕೃತಿಯ ನೆಮ್ಮದಿಯ ಆಧ್ಯಾತ್ಮಿಕ ಸಮಾಜ ಕಟ್ಟಿಕೊಂಡು ಕಾಡಿನಲ್ಲಿ ಶಾಂತಿಯಿಂದ ಜೀವನ ಸಾಗಿಸುತ್ತಿರುವ ಕಾಡಿನ ಬುಡಕಟ್ಟು ನೆಲೆಗಳು ಅಭಿವೃದ್ಧಿಯ ಕೆಂಗಣ್ಣಿಗೆ ಗುರಿಯಾದವು.

ಸಾಮ್ರಾಜ್ಯಶಾಹಿ ಆಡಳಿತ ಮತ್ತು ಬಂಡವಾಳಶಾಹಿಗಳಿಗೆ ಇತಿಹಾಸದ ಪ್ರಜ್ಞೆ ಜೀವಂತ ವಾಗಿರುವುದಿಲ್ಲ. ಶತಶತಮಾನಗಳಿಂದ ಕಟ್ಟಿಕೊಂಡ ಆದಿವಾಸಿಗಳ ಅಮೋಘವಾದ ಸಾಂಸ್ಕೃತಿಕ ಪರಂಪರೆ, ಅವರ ಪಾರಂಪರಿಕಜ್ಞಾನ, ಕಾಡಿನೊಳಗಿನ ಅವಿನಾಭಾವ ಸಂಬಂಧ, ನೆಮ್ಮದಿಯ ಸಾಮಾಜಿಕ ಮತ್ತು ಆಧ್ಯಾತ್ಮಿಕ ಜೀವನದ ಮಹತ್ವ ಮತ್ತು ಆ ಬದುಕಿನ ಅನನ್ಯತೆಗಳ ಕುರುಹುಗಳ ಬಗ್ಗೆ ಬಂಡವಾಳ ಶಾಹಿಗಳು ಮಾಹಿತಿಹೀನರಾಗಿರುತ್ತಾರೆ. ವಿವೇಚನೆ ಇಲ್ಲದಿರುವವರಿಗೆ ಕಾಳಜಿ ಎಲ್ಲಿಂದ? ಆದಿವಾಸಿಗಳ ಸಾಂಸ್ಕೃತಿಕ ವೈವಿಧ್ಯತೆಗಳಂತೆಯೇ, ಸಾವಿರಾರು ಕೋಟಿ ವರ್ಷಗಳಿಂದ ವಿಕಸಿತಗೊಂಡ ಒಂದು ಪ್ರದೇಶದ ಕಾಡಿನ ಜೀವಸಂಕುಲದ ಒಳಗಿನ ಪರಸ್ಪರ ಅವಲಂಬನೆ, ಜೀವವೈವಿಧ್ಯತೆ ಮತ್ತು ಅಗಾಧ ವನ್ಯ ಸಂಪತ್ತಿನ ಮಹತ್ವ ಹಾಗೂ ಸೂಕ್ಷ್ಮತೆಗಳರಿಯದ ಆಡಳಿತಶಾಹಿಗಳಿಗೆ, ನಿಸರ್ಗ ಸಾವಿರಾರು ಕೋಟಿ ವರ್ಷಗಳ ತಪಸ್ಸಿನಿಂದ ಸೃಷ್ಟಿಯಾಗಿರುವ ಕಾಡಾಗಲೀ, ಜೀವವೈವಿಧ್ಯತೆಗಳಾಗಲೀ ಆದಿವಾಸಿ ಬುಡಕಟ್ಟುಗಳ ಬದುಕಿನ ಮಹತ್ವ ಹಾಗೂ ಶ್ರೇಷ್ಠತೆಗಳ ಬಗ್ಗೆ ಅರಿವಿಲ್ಲ. ಇವೆಲ್ಲ ನಾಶಗೊಳಿಸಿದರೆ ಮುಂದಿನ ಭವಿಷ್ಯದಲ್ಲಿ ಆಗಬಹುದಾದ ಅನಾಹುತಗಳ ಬಗ್ಗೆ ಪ್ರಜ್ಞೆ ಇಲ್ಲದಂತಹ ಅಧಿಕಾರದ ಮಂಕು ಕವಿದು ಬಿಟ್ಟಿರುತ್ತದೆ.

ಭಾರತ ಸರ್ಕಾರವು ಕಾಡಿನ ರಕ್ಷಣೆ, ವನ್ಯಜೀವಿಗಳ ರಕ್ಷಣೆ, ಗಣಿಗಾರಿಕೆ, ರಾಷ್ಟ್ರೀಯ ಉದ್ಯಾನವನ, ಹುಲಿ ಸಂರಕ್ಷಿತ ಪ್ರದೇಶ, ಮಂಗಟೆ ಹಕ್ಕಿ ರಕ್ಷಿತ ಪ್ರದೇಶ (Hornbill reserve) ಸೀಬರ್ಡ್ಸ್ ನೌಕಾನೆಲೆ, ಕೈಗಾ ಅಣು ವಿದ್ಯುತ್ ಯೋಜನೆ, ಅಣೆಕಟ್ಟುಗಳ ನಿರ್ಮಾಣ,

ವಿದ್ಯುತ್ ಸ್ಥಾವರ ಮುಂತಾದ ಬೃಹತ್ ಅಭಿವೃದ್ಧಿಯ ಯೋಜನೆಗಳು ಮತ್ತು ಕಾಡಿನ ಸಂರಕ್ಷಣೆಯ ನೆಪ ಮಾಡಿ, ಶತಶತಮಾನಗಳಿಂದ ಕಾಡಿನೊಟ್ಟಿಗೆ ಕಾಡಿನ ಭಾಗವಾಗಿಯೇ, ಜೀವವೈವಿಧ್ಯತೆಯ ಭಾಗವಾಗಿಯೇ ಬೇರು ಬಿಟ್ಟು ಸುಂದರವಾದ ಪಾರಂಪರಿಕ ಸಂಸ್ಕೃತಿಯೊಂದಿಗೆ ಪರಿಸರದಲ್ಲಿ ಜೀವನ ನಡೆಸಿದ್ದ ಆದಿವಾಸಿಗಳ ಕಾಡು ಮತ್ತು ಆ ಪ್ರದೇಶದೊಟ್ಟಿಗಿನ ಅಷ್ಟು ಬೇರುಗಳನ್ನು ನಿರ್ದಯವಾಗಿ ಕಡಿದು, ಅವರು ಅದರೊಟ್ಟಿಗಿನ ಸಾಂಸ್ಕೃತಿಕ ಪರಿಸರ ಮತ್ತು ಭಾವನಾತ್ಮಕ ಸಂಬಂಧಗಳನ್ನು ಕಿತ್ತೊಗೆದು, ಅಮಾಯಕ ಮುಗ್ಧ ಸಮುದಾಯಗಳನ್ನು ಕಾಡಿನ ಪ್ರದೇಶದಿಂದ ಹೊರದಬ್ಬಲಾಗಿದೆ ಮತ್ತು ಹೊರದಬ್ಬಲಾಗುತ್ತಿದೆ. ಇದಕ್ಕೆ ಜ್ವಲಂತ ಉದಾಹರಣೆಯಾಗಿ ನರ್ಮದಾ ನದಿಗೆ ಅಡ್ಡಲಾಗಿ ಕಟ್ಟಲಾಗಿರುವ ಸರ್ದಾರ್ ಸರೋವರ ಅಣೆಕಟ್ಟು. ಇದಕ್ಕಾಗಿ ಲಕ್ಷಾಂತರ ಆದಿವಾಸಿಗಳನ್ನು ಅವರು ಸಾವಿರಾರು ವರ್ಷ ಬದುಕಿಬಾಳಿದ ಮೂಲನೆಲೆಯಿಂದ ನಿರ್ದಾಕ್ಷಿಣ್ಯವಾಗಿ ಹೊರದಬ್ಬಿ ನಿರ್ಗತಿಕರನ್ನಾಗಿ ಮಾಡುವ ಮೂಲಕ ದಾರಿದ್ರ್ಯದ ಕೂಪಕ್ಕೆ ತಳ್ಳಲಾಗಿದೆ.

ಆದಿವಾಸಿಗಳಿಗೆ ನಾಗರಿಕ ಜಗತ್ತಿನ ಪರಿಚಯವಿಲ್ಲ. ಅದರ ಶಿಕ್ಷಣ, ವಿದ್ವತ್ತು, ರಾಜಕೀಯ, ಮೋಸ, ವಂಚನೆ ತಟವಟಗಳು ಅರಿವಿಲ್ಲ. ಇವರು ರಾಜಕೀಯವಾಗಿ ಅಸಂಘಟಿತರು, ತಮ್ಮ ಮೇಲೆ ಜರುಗುತ್ತಿರುವ ಅನ್ಯಾಯ ತಮ್ಮ ನೆಲೆಯ ಮೇಲಿನ ಅಧಿಕಾರಗಳನ್ನು ಒಂದು ರಾಜಕೀಯ ಹಕ್ಕಾಗಿ ಪ್ರತಿಪಾದಿಸುವ ದಾರಿ ಗೊತ್ತಿಲ್ಲ. ಹೋರಾಟ, ಕಾಯ್ದೆ, ಕಾನೂನು ಅರಿಯರು. ಇವರು ಸ್ಥಳಾಂತರಕ್ಕೆ ಇರಬಹುದಾದ ಕಾನೂನಿನ ಇತಿಮಿತಿ ಹಾಗೂ ಪರಿಹಾರಗಳ ಬಗ್ಗೆ ಯಾವ ಮಾಹಿತಿಯೂ ಇಲ್ಲದ ಕಾರಣ, ಬಹಳ ಸುಲಭವಾಗಿ ಸ್ಥಳಾಂತರ ಜಾಲದ ವಂಚನೆಗೊಳಗಾಗಿ ನೆಲೆ ಕಳೆದುಕೊಳ್ಳುತ್ತಾರೆ.

ಅಭಿವೃದ್ಧಿ ಎನ್ನುವುದು ಅಸಹಾಯಕರಲ್ಲಿ ಅಸಮಾನತೆಯನ್ನು ಬಿತ್ತುವ ಒಂದು ತಂತ್ರ, ಒಂದು ಪ್ರದೇಶದಲ್ಲಿ ಶತಮಾನಗಳಿಂದ ಬದುಕಿದ ಜನರ ಕಾಡು ಮತ್ತು ಸಂಪನ್ಮೂಲಗಳನ್ನು 'ರಾಷ್ಟ್ರೀಯ ಹಿತಾಸಕ್ತಿಯ' ಹೆಸರಿನಲ್ಲಿ ಕಸಿದುಕೊಳ್ಳುವುದು, ಯಾರದೋ ಶ್ರಮದ ನೆಲೆಯನ್ನು ಇನ್ನಾರದೋ ಬಂಡವಾಳಗಾರರ ಹೂಡಿಕೆಯ ಪರವಾಗಿ ನಿಂತು ಖಾಸಗೀಕರಣಗೊಳಿಸುವುದು ಸರ್ಕಾರದ ಮಂತ್ರವಾಗಿದೆ. ಅತ್ತ ಅವರಿಗೆ ಸಿಗಬೇಕಾದ ಪರಿಹಾರ, ಪುನರ್ವಸತಿ ವ್ಯವಸ್ಥೆಯೂ ಕೂಡ ಹಕ್ಕನ್ನು ಪ್ರತಿಪಾದಿಸುವ ಮಾಹಿತಿ ಕೊರತೆಯಿಂದಾಗಿ, ಅಲ್ಲೂ ಆದಿವಾಸಿಗಳು ವಂಚಿತರಾಗಿ ಶೋಷಣೆಗೊಳಗಾಗಿದ್ದಾರೆ. ಆದಿವಾಸಿಗಳ ನೋವಿನ ಕೂಗು ಆಕ್ರಂದನಗಳು, ಆಡಳಿತದ ಜಾಣ ಕುರುಡು ಮತ್ತು ಕಿವುಡು ವರ್ತನೆಯಿಂದ ಆದಿವಾಸಿಗಳ ಅಳಲು ಅರಣ್ಯರೋದನವಾಗಿಯೇ ಉಳಿದಿದೆ.

- ಆರ್ಟಿಕಲ್ 19(1–ಅ) ಅಡಿಯಲ್ಲಿ ಯಾವುದೇ ಭಾಗದ ಗಡಿಗಳ ಹೊಣೆಗಾರಿಕೆ ಸಂವಿಧಾನ ಬದ್ಧವಾದದನ್ನು ಅರಿತು ಪ್ರತಿಭಟಿಸುವ ಜ್ಞಾನ ಆದಿವಾಸಿಗಳಿಗಿರುವುದಿಲ್ಲ.

- ಆರ್ಟಿಕಲ್-21ರ ಅಡಿಯಲ್ಲಿ ಸಂವಿಧಾನಾತ್ಮಕವಾಗಿ ತಮ್ಮ ನೆಲೆಯಲ್ಲಿ ಗೌರವಯುತವಾಗಿ ಜೀವಿಸುವ ಹಕ್ಕನ್ನು ಪ್ರಶ್ನಿಸುವ ಮಾಹಿತಿ ಇವರಿಗಿಲ್ಲ.
- ಸಮಾನತೆ ಮತ್ತು ರಕ್ಷಣೆಗೂ ಕಾನೂನಿನಲ್ಲಿ ಹಕ್ಕುಗಳಿವೆ ಎಂಬುಧು ಈ ಸಮುದಾಯಗಳಿಗೆ ತಿಳಿದಿಲ್ಲ.
- ಸ್ಥಳಾಂತರವು ಬಲವಂತದ ತೆರವು(Forced eviction)ಗೆ ಒಳಪಡುವ ಕಾರಣ ಕಾನೂನಿನ ಮೊರೆ ಹೋಗಬಹುದೆಂದು ಯಾರೂ ತಿಳಿಸಿರುವುದಿಲ್ಲ.
- ಭಾರತ ದೇಶವು ವಿಯೆನ್ನಾ ಘೋಷಣೆಯ ಕಾರ್ಯಕ್ರಮದಲ್ಲಿ ಭಾಗಿಯಾಗಿ(ILO convention 107-1975 Mahapatra-1999)ಯಾಗಿದ್ದರ ಪ್ರಕಾರ ಸ್ಥಳಾಂತರದ ವಿಷಯದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ, ಗೌರವಯುತ ಬದುಕು ಮತ್ತು ಸಂತೋಷದ ಹಕ್ಕುಗಳಿಗೆ ಚ್ಯುತಿ ಉಂಟಾಗಿದೆ ಎಂದು ತಮ್ಮ ಹಕ್ಕನ್ನು ಪ್ರತಿಪಾದಿಸಲು ಆದಿವಾಸಿಗಳಿಗೆ ಗೊತ್ತಿಲ್ಲ.
- ಅಭಿವೃದ್ಧಿಯ ಹೆಸರುಗಳಲ್ಲಿ ಸ್ಥಳಾಂತರ ಮಾಡುವಾಗ ಕಾಡಿನ ಪರಿಸರದ ವ್ಯವಸ್ಥೆ(Eco-system) ಜೀವವೈವಿಧ್ಯತೆ(Biodiversity), ಪ್ರಾಣಿ ಮತ್ತು ಸಸ್ಯಕುಲ ಸಂಪತ್ತು(Resources of flora and fauna), ಸಹಜೀವನ(Symbiotic life) ಮತ್ತು ತಳಿವೈವಿಧ್ಯತೆ(Genetic diversity) ಇವುಗಳ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಿ ಕಾಡಿನ ಪರಿಸರದ ಮತ್ತು ಸಂಪತ್ತಿಗೆ ಹಾನಿಯುಂಟಾಗುತ್ತದೆ. ಇದು ಅರಣ್ಯ ಇಲಾಖೆಯೇ ನಿರ್ಮಿಸಿರುವ ಅರಣ್ಯ ಕಾನೂನು ಕಾಯ್ದೆಗಳನ್ನು ಆಡಳಿತ ವರ್ಗವೇ ಉಲ್ಲಂಘಿಸಲಾಗುತ್ತಿದೆ ಎಂದು ಯಾರೂ ಪ್ರತಿಭಟಿಸುವುದಿಲ್ಲ.

ಸ್ಥಳಾಂತರಗಳಿಂದ ಕಾಡು ಮತ್ತು ಪರಿಸರ ಹಾಗೂ ಅದಕ್ಕಾಗಿ ಇದ್ದ ಸ್ಥಳಾವಕಾಶ(Space) ಕ್ಷೀಣಿಸುತ್ತದೆ ಅಥವಾ ನಾಶವಾಗುತ್ತಿದೆ ಎಂದು ಪರಿಸರವಾದಿಗಳು ಆದಿವಾಸಿಗಳ ಪರವಾಗಿ ಧ್ವನಿ ಎತ್ತುವುದಿಲ್ಲ.

## ಸ್ಥಳಾಂತರ ಮತ್ತು ಛಿದ್ರಗೊಂಡ ಆದಿವಾಸಿಗಳ ಬದುಕು

ಸೌರಮಂಡಳದ ಸುತ್ತ ಸುತ್ತುತ್ತಿರುವ ಭೂಮಂಡಳದೊಳಗಡೆ ಜೀವಿಗಳು ವಿಕಾಸವಾಗಿರುವ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯ. ಕೋಟ್ಯಂತರ ವರ್ಷಗಳಿಂದ ಭೂಮಿಯ ನಿರ್ದಿಷ್ಟ ಪ್ರದೇಶದ ಪರಿಸರದ ವೈಪರೀತ್ಯ, ಹವಾಮಾನ ಮತ್ತು ವಾತಾವರಣದ ಬದಲಾವಣೆಗಳಿಗೆ ತಕ್ಕಂತೆ ಜೀವಿಗಳು ತಮ್ಮ ದೇಹರಚನೆ, ಆಹಾರದ ಕ್ರಮ, ಸ್ವಭಾವ ಮತ್ತು ಬಣ್ಣ ಹಾಗೂ ಸ್ವರೂಪಗಳನ್ನು ನಿಸರ್ಗವು ವೈವಿಧ್ಯಮಯವಾಗಿ ವಿಕಸಿತಗೊಳಿಸಿಕೊಂಡಿದೆ. ಹೀಗೆ ನಿರ್ದಿಷ್ಟ ಭೂಪ್ರದೇಶದ ಮೇಲಿನ ಬದಲಾವಣೆಗಳಿಗೆ ತಕ್ಕಂತೆ ಇತರ ಜೀವಗಳ ಜೊತೆ ಪರಸ್ಪರ

ಅವಲಂಬನೆಗಳಿಂದ ಕೊಡುಕೊಳ್ಳುವಿಕೆಗಳಿಂದ ಜೀವನ ಕಟ್ಟಿಕೊಂಡ ಜೀವಿಗಳು ತಾವು ಬದುಕುತ್ತಿರುವ ನಿರ್ದಿಷ್ಟ ಪ್ರದೇಶದ ಪರಿಸರದ ಪ್ರತಿಯೊಂದು ಜೀವ ಮತ್ತು ನಿರ್ಜೀವ ವಸ್ತುಗಳ ಜೊತೆ ನಿಖರವಾದ ಸಂಬಂಧಗಳನ್ನಿಟ್ಟುಕೊಂಡು ರೂಪಿತವಾಗಿರುತ್ತವೆ. ಪರಿಸರದ ಈ ವಿಶಿಷ್ಟ ಸ್ಥಿತಿಯನ್ನು 'ಪರಿಸರ ವ್ಯವಸ್ಥೆ' (Eco System) ಎನ್ನುತ್ತೇವೆ. Eco system means A system that includes all living organizations(biotic factors) in an 'area' as well as its physical environment abiotic factors functioning together as a unit which made up of plants, animals micro organisms soil, rocks, minerals, water sources and the 'local atmosphere' interacting one another…..")[13]

ಇಂತಹ ಪರಿಸರದ ವ್ಯವಸ್ಥೆಯೊಳಗೆ ರೂಪಗೊಂಡ ಒಂದು ಜೀವಿಯನ್ನು ಮತ್ತೊಂದು ಪ್ರದೇಶಕ್ಕೆ ಸ್ಥಳಾಂತರ ಮಾಡಿದರೆ ಬದುಕದೇ ಸಾಯುತ್ತವೆ. ಆದರೆ ಶತಮಾನಗಳಿಂದ ತನ್ನದೇ ಪಾರಂಪರಿಕ ಜ್ಞಾನ, ಉಪಾಸನೆ, ಬೇಟೆ, ನಂಬಿಕೆ, ದೈವಗಳೊಟ್ಟಿಗೆ ಸಾಮಾಜಿಕ ಸಂಸ್ಕೃತಿಯನ್ನು ಕಟ್ಟಿಕೊಂಡು, ನಿರ್ದಿಷ್ಟ ಪ್ರದೇಶದ ವಲಯದಲ್ಲಿ ಬದುಕಿನ ಅಸ್ತಿತ್ವ ಪಡೆದುಕೊಂಡ ಒಂದು ಆದಿವಾಸಿ ಸಮುದಾಯವನ್ನು ಅದರ ಪರಿಸರದ ವ್ಯವಸ್ಥೆಯ ಪ್ರದೇಶ ಮೂಲ ನೆಲೆಯಿಂದ 'ರಾಷ್ಟ್ರದ ಅಭಿವೃದ್ಧಿ' ಹೆಸರಿನಲ್ಲಿ ಎತ್ತಿ ಆಚೆಗೆ ಎಸೆಯುವುದನ್ನು 'ಸ್ಥಳಾಂತರ' ಎಂದು ಕರೆಯಲಾಗುತ್ತದೆ.

ಜೀವವಿಕಾಸದ ಬೆಳವಣಿಗೆಯಲ್ಲಿ ಇತರ ಜೀವಿಗಳಿಗಿಂತ ತನ್ನ ಬುದ್ಧಿ ವಿಕಾಸದ ನಾಗಾಲೋಟದ ಬೆಳವಣಿಗೆಯಿಂದಾಗಿ ಮನುಷ್ಯ ಪ್ರಾಣಿಗಳಿಗಿಂತ ವಿಭಿನ್ನವಾದ, ಸಾಂಸ್ಕೃತಿಕವಾದ ಸಾಮಾಜಿಕ ಜೀವನ ಕಟ್ಟಿಕೊಂಡ. ಮುಂದುವರಿದು ಗುಂಪು, ಪಾಳೇಗಾರಿಕೆ, ರಾಜ್ಯ, ಸಾಮ್ರಾಜ್ಯಗಳನ್ನು ಕಟ್ಟಿಕೊಂಡು ಒಂದು ಪ್ರದೇಶಕ್ಕೆ ಸೀಮಿತವಾಗಿದ್ದ ಮನಸ್ಸು ಬೇರೆ ಬೇರೆ ಪ್ರದೇಶಗಳನ್ನು ತನ್ನ ದುರಾಸೆಯ ಹೊಟ್ಟೆ ಬಾಕತನದಿಂದಾಗಿ ಬೇರೊಂದು ದೇಶ ವಲಯಗಳನ್ನು ಆಕ್ರಮಿಸತೊಡಗಿದ. ರಾಜ್ಯ, ಸಾಮ್ರಾಜ್ಯಗಳು ಮಾರ್ಪಾಟಾಗಿ ದೇಶವಾಯಿತು. ದೇಶ ದೇಶಗಳ ಮಧ್ಯೆ ಗೆರೆ ಎಳೆದು ಪೈಪೋಟಿ ಬೆಳೆದು 'ರಾಷ್ಟ್ರೀಯ ಹಿತಾಸಕ್ತಿ' ಅಂಕುರಗೊಂಡಿತು. ಆಡಳಿತ, ಅಭಿವೃದ್ಧಿ, ಆರ್ಥಿಕಾಭಿವೃದ್ಧಿ, ಉದ್ಯೋಗವಕಾಶ, ರಾಷ್ಟ್ರಭಕ್ತಿ ಇವೆಲ್ಲವೂ ದೇಶ ಕಟ್ಟುವ 'ಪ್ರಗತಿ'ಯ ಕ್ಲೀಷೆಯಾಗಿ ಮಾರ್ಪಟ್ಟಿತು.

ಬದುಕಿಗಾಗಿ ಹಸಿವು, ನೆಮ್ಮದಿ ಮತ್ತು ಮೂಲಭೂತ ಸೌಕರ್ಯಗಳಿಗಾಗಿ ಕಾಡಿನ ಕಿರು ಉತ್ಪನ್ನಗಳಂತಹ ಸಂಪನ್ಮೂಲ ಬಳಕೆಗೆ ಮಾತ್ರ ಸೀಮಿತವಾಗಿದ್ದ ಆದಿವಾಸಿ ಸಂಸ್ಕೃತಿ ಬದುಕನ್ನು ಮೀರಿ ನಾಗರಿಕ ಆಧುನಿಕ ಸಂಸ್ಕೃತಿ ತಮ್ಮ ಎಲ್ಲೆ ಇಲ್ಲದ ದಾಹಕ್ಕಾಗಿ ಕಟ್ಟಿಕೊಂಡ ತನ್ನ ಸಾಮ್ರಾಜ್ಯದ ಆಸೆಗಳ ಪೂರೈಸಲು ಸುಂಕ, ತೀರ್ವೆ ಮತ್ತು ತೆರಿಗೆ ನೆಪದಲ್ಲಿ ಸುಲಿಗೆಗಳು

ಶುರುವಾಯಿತು. ಇದರಿಂದ ಉಳ್ಳವರು, ಬಂಡವಾಳಶಾಹಿಗಳಾದರು, ಭೂಮಾಲೀಕ, ವ್ಯಾಪಾರಸ್ಥರುಗಳಾದರು. ಇವರಿಂದ ವಂಚನೆ ಮತ್ತು ಶೋಷಣೆಗೊಳಗಾದವರು ದಾರಿದ್ರ್ಯದಲ್ಲುಳಿದರು. ಈ ಅಸಮಾನತೆಯ ಬಿರುಕು ದೊಡ್ಡದಾಗಿ ಆಳುವ ವರ್ಗ ದುಡಿಯುವ ವರ್ಗ ಮತ್ತು ಕಾಡಿನಲ್ಲೇ ಉಳಿದ ಆದಿವಾಸಿ ವರ್ಗಗಳಾಗಿ ವಿಂಗಡಣೆಗಳಾದವು. ಆಳುವ ವರ್ಗದ ಬಂಡವಾಳ ಮತ್ತು ಅಭಿವೃದ್ಧಿಗಾಗಿ ಯೋಜನೆಗಳು ಜಾರಿಯಾದವು. ಅಭಿವೃದ್ಧಿ ಯೋಜನೆಗಳಿಗೆ ಸಂಪದ್ಭರಿತ ಕಾಡು, ನದಿ, ಕಣಿವೆ ಪ್ರದೇಶಗಳು ಅಭಿವೃದ್ಧಿಯ ಬಂಡವಾಳಕ್ಕೆ ದಾಳಗಳಾದವು. ಸಹಜವಾಗಿ ಆಧುನಿಕತೆಯ ಸೋಂಕಿಲ್ಲದೆ ಆದಿವಾಸಿ ಸಂಸ್ಕೃತಿಯ ನೆಮ್ಮದಿಯ ಆಧ್ಯಾತ್ಮಿಕ ಸಮಾಜ ಕಟ್ಟಿಕೊಂಡು ಕಾಡಿನಲ್ಲಿ ಶಾಂತಿಯಿಂದ ಜೀವನ ಸಾಗಿಸುತ್ತಿರುವ ಕಾಡಿನ ಬುಡಕಟ್ಟು ನೆಲೆಗಳು ಅಭಿವೃದ್ಧಿಯ ಕೆಂಗಣ್ಣಿಗೆ ಗುರಿಯಾದವು.

ಶತಮಾನಗಳಿಂದ ಕಟ್ಟಿಕೊಂಡ ಆದಿವಾಸಿಗಳ ಅಮೋಘವಾದ ಸಾಂಸ್ಕೃತಿಕ ಪರಂಪರೆ, ಅವರ ಪಾರಂಪರಿಕ ಜ್ಞಾನ, ಕಾಡಿನೊಳಗಿನ ಅವಿನಾಭಾವ ಸಂಬಂಧ, ನೆಮ್ಮದಿಯ ಸಾಮಾಜಿಕ ಮತ್ತು ಆಧ್ಯಾತ್ಮಿಕ ಜೀವನದ ಮಹತ್ವ ಮತ್ತು ಆ ಬದುಕಿನ ಅನನ್ಯತೆಗಳ ಕುರುಹುಗಳ ಬಗ್ಗೆ ಬಂಡವಾಳ ಶಾಹಿಗಳು ಮಾಹಿತಿ ಹೀನರಾಗಿರುತ್ತಾರೆ. ವಿವೇಚನೆ ಇಲ್ಲದಿರುವವರಿಗೆ ಕಾಳಜಿ ಎಲ್ಲಿಂದ? ಆದಿವಾಸಿಗಳ ಸಾಂಸ್ಕೃತಿಕ ವೈವಿಧ್ಯತೆಗಳಂತೆಯೇ, ಸಾವಿರಾರು ಕೋಟಿ ವರ್ಷಗಳಿಂದ ವಿಕಸಿತಗೊಂಡ ಒಂದು ಪ್ರದೇಶದ ಕಾಡಿನ ಜೀವಸಂಕುಲದ ಒಳಗಿನ ಪರಸ್ಪರ ಅವಲಂಬನೆ, ಜೀವವೈವಿಧ್ಯತೆ ಮತ್ತು ಅಗಾಧ ವನ್ಯಸಂಪತ್ತಿನ ಮಹತ್ವ ಹಾಗೂ ಸೂಕ್ಷ್ಮತೆಗಳರಿಯದ ಆಡಳಿತ ಶಾಹಿಗಳಿಗೆ, ನಿಸರ್ಗ ಸಾವಿರಾರು ಕೋಟಿ ವರ್ಷಗಳ ತಪಸ್ಸಿನಿಂದ ಸೃಷ್ಟಿಯಾಗಿರುವ ಕಾಡಾಗಲೀ, ಜೀವವೈವಿಧ್ಯತೆಗಳಾಗಲೀ ಆದಿವಾಸಿ ಬುಡಕಟ್ಟುಗಳ ಬದುಕಿನ ಮಹತ್ವ ಹಾಗೂ ಶ್ರೇಷ್ಠತೆಗಳ ಬಗ್ಗೆ ಅರಿವಿಲ್ಲ. ಇವೆಲ್ಲ ನಾಶಗೊಳಿಸಿದರೆ ಮುಂದಿನ ಭವಿಷ್ಯದಲ್ಲಿ ಆಗಬಹುದಾದ ಅನಾಹುತಗಳ ಬಗ್ಗೆ ಪ್ರಜ್ಞೆ ಇಲ್ಲದಂತಹ ಅಧಿಕಾರದ ಮಂಕು ಕವಿದುಬಿಟ್ಟಿರುತ್ತದೆ.

ಭಾರತ ಸರ್ಕಾರವು ಕಾಡಿನ ರಕ್ಷಣೆ, ವನ್ಯಜೀವಿಗಳ ರಕ್ಷಣೆ, ಗಣಿಗಾರಿಕೆ, ರಾಷ್ಟ್ರೀಯ ಉದ್ಯಾನವನ, ಹುಲಿ ಸಂರಕ್ಷಿತ ಪ್ರದೇಶ, ಮಂಗಟೆ ಹಕ್ಕಿ ರಕ್ಷಿತ ಪ್ರದೇಶ (Horibill reserve) ಸೀಬರ್ಡ್ಸ್ ನೌಕಾನೆಲೆ, ಕೈಗಾ ಅಣು ವಿದ್ಯುತ್ ಯೋಜನೆ, ಅಣೆಕಟ್ಟುಗಳ ನಿರ್ಮಾಣ, ವಿದ್ಯುತ್ ಸ್ಥಾವರ ಮುಂತಾದ ಬೃಹತ್ ಅಭಿವೃದ್ಧಿಯ ಯೋಜನೆಗಳು ಮತ್ತು ಕಾಡಿನ ಸಂರಕ್ಷಣೆಯ ನೆಪಮಾಡಿ, ಶತಶತಮಾನಗಳಿಂದ ಕಾಡಿನೊಟ್ಟಿಗೆ ಕಾಡಿನ ಭಾಗವಾಗಿಯೇ, ಜೀವ ವೈವಿಧ್ಯತೆಯ ಭಾಗವಾಗಿಯೇ ಬೇರು ಬಿಟ್ಟು ಸುಂದರವಾದ ಪಾರಂಪರಿಕ ಸಂಸ್ಕೃತಿಯೊಂದಿಗೆ ಪರಿಸರದಲ್ಲಿ ಜೀವನ ನಡೆಸಿದ್ದ ಆದಿವಾಸಿಗಳ ಕಾಡು ಮತ್ತು ಆ ಪ್ರದೇಶದೊಟ್ಟಿಗಿನ ಅಷ್ಟು ಬೇರುಗಳನ್ನು ನಿರ್ದಯವಾಗಿ ಕಡಿದು, ಅವರು ಅದರೊಟ್ಟಿಗಿನ ಸಾಂಸ್ಕೃತಿಕ ಪರಿಸರ ಮತ್ತು ಭಾವನಾತ್ಮಕ ಸಂಬಂಧಗಳನ್ನು ಕಿತ್ತೊಗೆದು, ಅಮಾಯಕ ಮುಗ್ಧ ಸಮುದಾಯಗಳನ್ನು ಕಾಡಿನ

ಪ್ರದೇಶದಿಂದ ಹೊರದಬ್ಬಲಾಗಿದೆ ಮತ್ತು ಹೊರದಬ್ಬಲಾಗುತ್ತಿದೆ. ಇದಕ್ಕೆ ಜ್ವಲಂತ ಉದಾಹರಣೆಯಾಗಿ ನರ್ಮದಾ ನದಿಗೆ ಅಡ್ಡಲಾಗಿ ಕಟ್ಟಲಾಗಿರುವ ಸರ್ದಾರ್ ಸರೋವರ ಅಣೆಕಟ್ಟು. ಇದಕ್ಕಾಗಿ ಲಕ್ಷಾಂತರ ಆದಿವಾಸಿಗಳನ್ನು ಅವರು ಸಾವಿರಾರು ವರ್ಷ ಬದುಕಿಬಾಳಿದ ಮೂಲ ನೆಲೆಯಿಂದ ನಿರ್ದಾಕ್ಷಿಣ್ಯವಾಗಿ ಹೊರದಬ್ಬಿ ನಿರ್ಗತಿಕರನ್ನಾಗಿ ಮಾಡುವ ಮೂಲಕ ದಾರಿದ್ರ್ಯದ ಕೂಪಕ್ಕೆ ತಳ್ಳಲಾಗಿದೆ.

ಆದಿವಾಸಿಗಳಿಗೆ ನಾಗರಿಕ ಜಗತ್ತಿನ ಪರಿಚಯವಿಲ್ಲ. ಅದರ ಶಿಕ್ಷಣ, ವಿದ್ವತ್ತು, ರಾಜಕೀಯ, ಮೋಸ, ವಂಚನೆ ತಟವಟಗಳು ಅರಿವಿಲ್ಲ. ಇವರು ರಾಜಕೀಯವಾಗಿ ಅಸಂಘಟಿತರು. ತಮ್ಮ ಮೇಲೆ ಜರುಗುತ್ತಿರುವ ಅನ್ಯಾಯ ತಮ್ಮ ನೆಲೆಯ ಮೇಲಿನ ಅಧಿಕಾರಗಳನ್ನು ಒಂದು ರಾಜಕೀಯ ಹಕ್ಕಾಗಿ ಪ್ರತಿಪಾದಿಸುವ ದಾರಿ ಗೊತ್ತಿಲ್ಲ. ಹೋರಾಟ, ಕಾಯ್ದೆ, ಕಾನೂನು ಅರಿಯರು. ಇವರು ಸ್ಥಳಾಂತರಕ್ಕೆ ಇರಬಹುದಾದ ಕಾನೂನಿನ ಇತಿಮಿತಿ ಹಾಗೂ ಪರಿಹಾರಗಳ ಬಗ್ಗೆ ಯಾವ ಮಾಹಿತಿಯೂ ಇಲ್ಲದ ಕಾರಣ, ಬಹಳ ಸುಲಭವಾಗಿ ಸ್ಥಳಾಂತರ ಜಾಲದ ವಂಚನೆಗೊಳಗಾಗಿ ನೆಲೆ ಕಳೆದುಕೊಳ್ಳುತ್ತಾರೆ.

ಅಭಿವೃದ್ಧಿ ಎನ್ನುವುದು ಅಸಹಾಯಕರಲ್ಲಿ ಅಸಮಾನತೆಯನ್ನು ಬಿತ್ತುವ ಒಂದು ತಂತ್ರ. ಒಂದು ಪ್ರದೇಶದಲ್ಲಿ ಶತಮಾನಗಳಿಂದ ಬದುಕಿದ ಜನರ ಕಾಡು ಮತ್ತು ಸಂಪನ್ಮೂಲಗಳನ್ನು 'ರಾಷ್ಟ್ರೀಯ ಹಿತಾಸಕ್ತಿಯ' ಹೆಸರಿನಲ್ಲಿ ಕಸಿದುಕೊಳ್ಳುವುದು, ಯಾರದೋ ಶ್ರಮದ ನೆಲೆಯನ್ನು ಇನ್ನಾರದೋ ಬಂಡವಾಳಗಾರರ ಹೂಡಿಕೆಯ ಪರವಾಗಿ ನಿಂತು ಖಾಸಗೀಕರಣಗೊಳಿಸುವುದು ಸರ್ಕಾರದ ಮಂತ್ರವಾಗಿದೆ. ಅತ್ತ ಅವರಿಗೆ ಸಿಗಬೇಕಾದ ಪರಿಹಾರ, ಪುನರ್ವಸತಿ ವ್ಯವಸ್ಥೆಯೂ ಕೂಡ ಹಕ್ಕನ್ನು ಪ್ರತಿಪಾದಿಸುವ ಮಾಹಿತಿ ಕೊರತೆಯಿಂದಾಗಿ, ಅಲ್ಲೂ ಆದಿವಾಸಿಗಳು ವಂಚಿತರಾಗಿ ಶೋಷಣೆಗೊಳಗಾಗಿದ್ದಾರೆ. ಆದಿವಾಸಿಗಳ ನೋವಿನ ಕೂಗು ಆಕ್ರಂದನಗಳು, ಆಡಳಿತದ ಜಾಣಕುರುಡು ಮತ್ತು ಕಿವುಡು ವರ್ತನೆಯಿಂದ ಆದಿವಾಸಿಗಳ ಅಳಲು ಅರಣ್ಯರೋಧನವಾಗಿಯೇ ಉಳಿದಿದೆ.

- ಆರ್ಟಿಕಲ್ 19(1–ಅ) ಅಡಿಯಲ್ಲಿ ಯಾವುದೇ ಭಾಗದ ಗಡಿಗಳ ಹೊಣೆಗಾರಿಕೆ ಸಂವಿಧಾನ ಬದ್ಧವಾದದನ್ನು ಅರಿತು ಪ್ರತಿಭಟಿಸುವ ಜ್ಞಾನ ಆದಿವಾಸಿಗಳಿಗಿರುವುದಿಲ್ಲ.
- ಆರ್ಟಿಕಲ್–21ರ ಅಡಿಯಲ್ಲಿ ಸಂವಿಧಾನಾತ್ಮಕವಾಗಿ ತಮ್ಮ ನೆಲೆಯಲ್ಲಿ ಗೌರವಯುತವಾಗಿ ಜೀವಿಸುವ ಹಕ್ಕನ್ನು ಪ್ರಶ್ನಿಸುವ ಮಾಹಿತಿ ಇವರಿಗಿಲ್ಲ.
- ಸಮಾನತೆ ಮತ್ತು ರಕ್ಷಣೆಗೂ ಕಾನೂನಲ್ಲಿ ಹಕ್ಕುಗಳಿವೆ ಎಂಬುದು ಈ ಸಮುದಾಯಗಳಿಗೆ ತಿಳಿದಿಲ್ಲ.
- ಸ್ಥಳಾಂತರವು ಬಲವಂತದ ತೆರವಿ(Forced eviction)ಗೆ ಒಳಪಡುವ ಕಾರಣ ಕಾನೂನಿನ ಮೊರೆ ಹೋಗಬಹುದೆಂದು ಯಾರೂ ತಿಳಿಸಿರುವುದಿಲ್ಲ.

- ಭಾರತ ದೇಶವು ವಿಯೆನ್ನಾ ಪೋಷಣೆಯ ಕಾರ್ಯಕ್ರಮದಲ್ಲಿ ಭಾಗಿಯಾಗಿ(ILO convention 107-1975 Mahapatra-1999)ದ್ದರ ಪ್ರಕಾರ ಸ್ಥಳಾಂತರದ ವಿಷಯದಲ್ಲಿ "ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ. ಗೌರವಯುತ ಬದುಕು ಮತ್ತು ಸಂತೋಷದ ಹಕ್ಕುಗಳಿಗೆ ಚ್ಯುತಿ' ಉಂಟಾಗಿದೆ ಎಂದು ತಮ್ಮ ಹಕ್ಕನ್ನು ಪ್ರತಿಪಾದಿಸಲು ಆದಿವಾಸಿಗಳಿಗೆ ಗೊತ್ತಿಲ್ಲ.
- ಅಭಿವೃದ್ಧಿಯ ಹೆಸರುಗಳಲ್ಲಿ ಸ್ಥಳಾಂತರ ಮಾಡುವಾಗ ಕಾಡಿನ ಪರಿಸರದ ವ್ಯವಸ್ಥೆ(Eco-system) ಜೀವವೈವಿಧ್ಯತೆ(Biodiversity), ಪ್ರಾಣಿ ಮತ್ತು ಸಸ್ಯಕುಲ ಸಂಪತ್ತು (Resources of flora and fauna), ಸಹಜೀವನ (Symbiotic life) ಮತ್ತು ತಳಿವೈವಿಧ್ಯತೆ (Genetic diversity) ಇವುಗಳ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಿ ಕಾಡಿನ ಪರಿಸರದ ಮತ್ತು ಸಂಪತ್ತಿಗೆ ಹಾನಿಯುಂಟಾಗುತ್ತದೆ. ಇದು ಅರಣ್ಯ ಇಲಾಖೆಯೇ ನಿರ್ಮಿಸಿರುವ ಅರಣ್ಯ ಕಾನೂನು ಕಾಯ್ದೆಗಳನ್ನು ಆಡಳಿತ ವರ್ಗವೇ ಉಲ್ಲಂಘಿಸಲಾಗುತ್ತಿದೆ ಎಂದು ಯಾರೂ ಪ್ರತಿಭಟಿಸುವುದಿಲ್ಲ.
- ಸ್ಥಳಾಂತರಗಳಿಂದ ಕಾಡು ಮತ್ತು ಪರಿಸರ ಹಾಗೂ ಅದಕ್ಕಾಗಿ ಇದ್ದ ಸ್ಥಳಾವಕಾಶ(Space) ಕ್ಷೀಣಿಸುತ್ತದೆ ಅಥವಾ ನಾಶವಾಗುತ್ತಿದೆ ಎಂದು ಪರಿಸರವಾದಿಗಳು ಆದಿವಾಸಿಗಳ ಪರವಾಗಿ ಧ್ವನಿ ಎತ್ತುವುದಿಲ್ಲ.
- ಸ್ಥಳಾಂತರದಿಂದ ಸ್ಥಳಾಂತರಗೊಂಡ ಸಮುದಾಯಗಳು ದಾರಿದ್ರ್ಯಕ್ಕೊಳಗಾಗುತ್ತವೆ. (Impoverishment of the particular community) ಆದಿವಾಸಿಗಳ ಆರ್ಥಿಕ ಅಂತಸ್ತು ಕುಸಿಯುತ್ತದೆ/ಕೆಡುತ್ತದೆ(Deterioration of their economic status). ಅವರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಮಾನಸಿಕ ಅಂತಸ್ತುಗಳು ನಾಶಗೊಳ್ಳುತ್ತವೆ. ಇದರಿಂದಾಗಿ ಮಾನವ ಹಕ್ಕಿಗೆ ಚ್ಯುತಿಯಾಗಿದೆ ಎಂದು ಅವರಿಗೆ ಪ್ರಶ್ನೆಗಳೇಳುವುದಿಲ್ಲ.
- ಬಹಳ ಪ್ರಮುಖವಾಗಿ ಶತಶತಮಾನಗಳಿಂದ ಒಂದು ಆದಿವಾಸಿಗಳು ಗಳಿಸಿದ್ದ ಸಂಸ್ಕೃತಿ, ಆಧ್ಯಾತ್ಮಿಕತೆ(spirituality), ಧರ್ಮ, ಅಖ್ಯಾನ/ಪುರಾಣ(Legends), ಕಟ್ಟುಕತೆ (Myths..) ಗಳು, ದಂತಕಥೆಗಳು(Anecdote) ನಂಬಿಕೆಗಳು, ಸಾಂಪ್ರದಾಯಿಕ ಮತ್ತು ಸಾಮಾಜಿಕ ಜಾಲಗಳು (Traditional and social network) ಅವರ ಕುಶಲಯಂತ್ರಗಾರಿಕೆ(Artisans) ಗಿಡಮೂಲಿಕೆ ಔಷಧಿ ಚಿಕಿತ್ಸೆ, ಮೌಖಿಕ ಜಾನಪದ, ಇಂತಹ ಎಷ್ಟೋ ಪಾರಂಪರಿಕ ಜ್ಞಾನ ಮತ್ತು ನೈಪುಣ್ಯತೆ ಕಸುಬುಗಳು ಛಿದ್ರಗೊಂಡ ಆದಿವಾಸಿ ಬದುಕಿನ ಲೋಕದಿಂದ ಶಾಶ್ವತವಾಗಿ ಅಳಿಸಿಹೋಗುತ್ತವೆ ಅವುಗಳನ್ನು ತಡೆಯಬೇಕೆಂಬ ಧ್ವನಿ ಹೊರಡಿಸುವವರಿಲ್ಲ.

ಮೇಲೆ ಗುರ್ತಿಸಿರುವ ಅಂಶಗಳು ಸ್ಥಳಾಂತರದ ಪೂರ್ವದಲ್ಲೇ ಹಾಕಿಕೊಳ್ಳಬೇಕಾದ ಪ್ರಶ್ನೆಗಳಾದರೆ, ಸ್ಥಳಾಂತರ ನಂತರ ಆಡಳಿತ ವರ್ಗ ಆದಿವಾಸಿ ಸಮುದಾಯಗಳಿಗೆ ಸಮರ್ಪಕವಾದ ಪುನರ್ವಸತಿ ಪರಿಹಾರ ವ್ಯವಸ್ಥೆ ಕಲ್ಪಿಸಲಾಗಿದೆಯೇ ಎಂಬ ಪ್ರಶ್ನೆ ನಮ್ಮ ಮುಂದಿದೆ.

ಕಾಡಿನ ಪರಿಸರದ ವ್ಯವಸ್ಥೆಯಿಂದ(ನೀರಿನಿಂದ ಹೊರಬಿದ್ದ ಮೀನಿನಂತೆ) ಹೊರಬಿದ್ದ ಆದಿವಾಸಿಗಳ ಬದುಕು ಬವಣೆ, ನೋವು, ಆಕ್ರಂದನ ಯಾರು ಗಮನಿಸಿದ್ದಾರೆ? ಮೂಲಭೂತ ಹಕ್ಕು ಮತ್ತು ಸೌಕರ್ಯಗಳನ್ನು ಪೂರೈಸಿದ್ದಾರೆಯೇ? ಸ್ಥಳಾಂತರಗೊಂಡ ಆದಿವಾಸಿ ಸಾಮಾಜಿಕ ಬದುಕಲ್ಲಿ ಅವರ ಮೂಲ ಆಧ್ಯಾತ್ಮಿಕತೆ, ನೈಪುಣ್ಯತೆ, ಆಲೋಚನಾಶಕ್ತಿ, ಕುಶಲತೆ, ಚಾತುರ್ಯತೆಗಳು ಉಳಿದಿವೆಯೇ? ಕ್ಷೀಣಿಸುತ್ತಿವೆಯೇ? ಇದರಿಂದಾಗಿ ಅವರ ನೈತಿಕತೆ ಕುಸಿದು ದಾರಿದ್ರ್ಯ ಇಣುಕಿ ಅಸ್ವಸ್ಥತೆ ಮನೆ ಮಾಡಿದೆಯೇ? ಬಲವಂತದ ಬದಲಿ ಬದುಕಿಗಾಗಿ ಉದ್ಯೋಗಗಳು ಸೃಷ್ಟಿಯಾಗಿವೆಯೇ? ಲಿಂಗತಾರತಮ್ಯ ಉಲ್ಬಣಗೊಂಡು, ಮಹಿಳೆಯರ ಲಿಂಗ ಅಸಮಾನತೆ ಮತ್ತು ಲೈಂಗಿಕ ಶೋಷಣೆಗಳಿಗೆ ಒಳಗಾಗಿದ್ದಾರೆಯೇ? ಮನೆ ಸೌಲಭ್ಯಗಳು ಸಮರ್ಪಕವೇ? ದೈಹಿಕ ಮತ್ತು ಮಾನಸಿಕ ಆರೋಗ್ಯಗಳೇನಾಗಿವೆ? ಬದಲಾದ ಅವರ ಅಧಿಕಾರ ರಚನೆ ಮತ್ತು ಸ್ವಯಂ ಆಡಳಿತ ವ್ಯವಸ್ಥೆಯಿಂದ ಸಮುದಾಯುಗಳ ಮೇಲೆ ಉಂಟಾಗುತ್ತಿರುವ ದುಷ್ಪರಿಣಾಮಗಳೇನು? ಬೇಸಾಯಕ್ಕಾಗಿ ಕೃಷಿಗೆ ಯೋಗ್ಯವಾದ ಜಮೀನನ್ನು ನೀಡಲಾಗಿದೆಯೇ? ಆಹಾರದ ಭದ್ರತೆ ವ್ಯವಸ್ಥೆ ಏನು? ಅಪೌಷ್ಟಿಕತೆಯಿಂದ ನಿತ್ರಾಣರಾಗಿದ್ದಾರೆಯೇ? ಹಕ್ಕುಗಳ ಪ್ರತಿಪಾದನೆಗಾಗಿ ಅವರ ರಾಜಕೀಯ ಪಾಲ್ಗೊಳ್ಳುವಿಕೆಯಲ್ಲಿ ನಿರ್ಬಂಧಗಳಿವೆಯೇ? ಪರಸ್ಪರ ಸಂಬಂಧಗಳೇನು? ಸಾಮಾಜಿಕವಾಗಿ ವಿಯೋಜನೆ/ಬೇರೆ ಬೇರೆ ಯಾಗಿದ್ದಾರೆಯೇ?(Social disarticulation) ಉರುವಲು, ನೈಸರ್ಗಿಕ ಗೊಬ್ಬರ ದನಗಳ ಮೇಯಿಸಲು ಹುಲ್ಲುಗಾವಲು, ಅರಣ್ಯ ಕಿರು ಉತ್ಪನ್ನಗಳ ಪೂರೈಕೆಯ ಜವಾಬ್ದಾರಿಯನ್ನು ಆಡಳಿತವರ್ಗ ವಹಿಸಿಕೊಂಡು ಅವರ ಬಡತನ ಮತ್ತು ದಾರಿದ್ರ್ಯಗಳನ್ನು ಬಗೆಹರಿಸಲಾಗಿದೆಯೇ? ಮುಂತಾದ ಪ್ರಶ್ನೆಗಳನ್ನು ಸ್ಥಳಾಂತರದ ನಂತರ ನೀಡಲಾದ ಪುನರ್ವಸತಿ ಕೇಂದ್ರ ನಿರ್ವಹಣಾ ಮಂಡಳಿ ಹಾಕಿಕೊಂಡು ಮೇಲಿನ ಸಮಸ್ಯೆಗಳ ಬಗ್ಗೆ ಗಮನ ಹರಿಸಲಾಗಿದೆಯೇ ಬಿಟ್ಟಿದೆಯೇ? ಕೇಳುವವರ್‍ಯಾರು? ಇಂತಹ ಸಂದರ್ಭಗಳಲ್ಲಿ ಆದಿವಾಸಿ ಸ್ಥಳಾಂತರಗಳ ಬಗ್ಗೆ ನಡೆಸಲಾಗುವ ಸಂಶೋಧನೆ ಮತ್ತು ಅಧ್ಯಯನಗಳು ದಾಖಲಿಸುವ ಅಂಶಗಳು ಆಡಳಿತವರ್ಗ ತಿದ್ದಿಕೊಳ್ಳಲು, ಎಚ್ಚೆತ್ತುಕೊಳ್ಳಲು ಮಾರ್ಗೋಪಾಯ/ಎಚ್ಚರಿಕೆಯ ಗಂಟೆಯ ರೀತಿಯ ಅಂಶಗಳನ್ನು ಒಳಗೊಂಡಿದ್ದಲ್ಲಿ ಅಧ್ಯಯನಗಳಿಂದ ಸಮುದಾಯಕ್ಕೆ ಒಳಿತಾಗಬಹುದೇನೋ.

### ಕಾಳಿನದಿ ಹೈಡ್ರೋ ಎಲೆಕ್ಟ್ರಿಕಲ್ ಪ್ರಾಜೆಕ್ಟ್

ಕರ್ನಾಟಕ ಸರ್ಕಾರ 1970ರಲ್ಲಿ ಮೈಸೂರು ಕಾರ್ಪೋರೇಷನ್ ಲಿಮಿಟೆಡ್ ತದನಂತರ 'ಕರ್ನಾಟಕ ಪವರ್ ಕಾರ್ಪೋರೇಷನ್(ಕೆಪಿಸಿ) ಎಂದು ನಾಮಕರಣಗೊಂಡ ಸ್ವಾಯತ್ತ

ಮಂಡಲಿಯ ರಚನೆಗೊಂಡು ಹರಿಯುವ ನದಿ ನೀರಿನಿಂದ ಜಲವಿದ್ಯುತ್ ಉತ್ಪಾದಿಸುವ ಸಲುವಾಗಿ 'ಕಾಳಿನದಿ ಹೈಡ್ರೋ ಎಲೆಕ್ಟ್ರಿಕಲ್ ಪ್ರಾಜೆಕ್ಟ್' ಬೃಹತ್ ಯೋಜನೆ ಪ್ರಾರಂಭಗೊಂಡಿತು.

ಯೋಜನೆಯ ಪ್ರಕಾರ ಪ್ರಮುಖವಾದ ದೊಡ್ಡ ಜಲಾಶಯವನ್ನು ಕಾಳಿನದಿಗೆ ಅಡ್ಡಲಾಗಿ ಆಗ ಉತ್ತರ ಕನ್ನಡ ಜಿಲ್ಲೆಯ ತಾಲ್ಲೂಕು ಕೇಂದ್ರ ಸೂಪಾ ಮತ್ತು ಸುತ್ತಮುತ್ತ ಹಳ್ಳಿಗಳನ್ನು ಮುಳುಗಡೆಗೊಳಿಸಿ ಗಣೇಶಗುಡಿಯ ಹತ್ತಿರದ ಎರಡು ಬೆಟ್ಟಗಳ ಮಧ್ಯೆ ಅಣೆಕಟ್ಟನ್ನು ಕಟ್ಟಿ 3758.42 ಮಿಲಿಯನ್ ಕ್ಯೂಬಿಕ್ ಮೀಟರ್ ನೀರನ್ನು ಹಿಡಿದಿಡಬೇಕೆಂದು ತೀರ್ಮಾನಿಸಲಾಯಿತು. ಇದರ ಕೆಳಗೆ ಒಟ್ಟು 7 ಉಪ ಜಲಾಶಯಗಳನ್ನು ಅಂದರೆ 1. ಬೊಮ್ಮನಳ್ಳಿ ಹತ್ತಿರ ಒಂದು ಜಲಾಶಯ, 2. ತಟ್ಟಿಹಳ್ಳ ಜಲಾಶಯ, 3. ಜೋಯಿಡಾ ತೆಲೋಲಿ ಹತ್ತಿರ ಅಪ್ಪರ್ ಕಾವೇರಿ ಜಲಾಶಯ, 4. ಕೊಡ್ಸಳ್ಳಿ, 5. ಕದ್ರ, 6. ಮೌಳಂಗಿ ಹತ್ತಿರ ಅಣೆಕಟ್ಟು ಕಟ್ಟಬೇಕೆಂದು ತೀರ್ಮಾನಿಸಿದ್ದನ್ನು ಹೋರಾಟದ ಮೂಲಕ ನಿಲ್ಲಿಸಲಾಯಿತು.

ಮೇಲಿನ ಯೋಜನೆಗಳಿಂದ ಒಟ್ಟು 1977 ಮೆಗಾವ್ಯಾಟ್ ವಿದ್ಯುತ್ ಉತ್ಪಾದಿಸಲಾಗುತ್ತಿದೆ.[14]

**ಸೂಪಾ ಜಲಾಶಯ**

ಗಣೇಶಗುಡಿಯ ಎರಡು ಬೆಟ್ಟಗಳ ಮಧ್ಯೆ ಕಟ್ಟಲಾದ ಈ ಅಣೆಕಟ್ಟಿನ ಸಂಪೂರ್ಣ ಸುತ್ತಳತೆಯ ಉದ್ದ 184 ಕಿ.ಮೀ. ಇದ್ದು ನೆಲದಿಂದ 101.50 ಮೀಟರ್ ಎತ್ತರವಿದೆ. ಇದು ಸಮುದ್ರ ಮಟ್ಟದಿಂದ 564.0 ಮೀಟರ್ ಇದೆ. ಇದರ ಸಂಪೂರ್ಣ ವಿಸ್ತರಣಾ ಕ್ಷೇತ್ರ 123 ಸ್ಕ್ವೇರ್ ಕಿಲೋಮೀಟರ್ ಇದ್ದು, ಜಲಾಶಯದ ಸಂಗ್ರಹಣ ವಿಸ್ತೀರ್ಣ(Catchment area) 1057.00 Sq. Km. ಇದೆ. ಈ ಜಲಾಶಯವು 4178.00 ಮೆಟ್ರಿಕ್ ಕ್ಯೂಬ್(3758.42) ಮಿಲಿಯನ್ ಕ್ಯೂಬಿಕ್ ಮೀಟರ್) ನೀರನ್ನು ಸಂಗ್ರಹಿಸುವ ಸಾಮರ್ಥ್ಯ ಹೊಂದಿದೆ.

ಸರ್ಕಾರದ ಆದೇಶ Order NV: PWD 44PPC 75 dated 20.08.1973 ರ ಅನ್ವಯ "ಹಿಂದೂಸ್ತಾನ್ ಸ್ಟೀಲ್ ವರ್ಕ್ಸ್ ಕನ್ಸ್‌ಟ್ರಕ್ಷನ್ ಲಿಮಿಟೆಡ್"(Hindustan steel works construction Ltd) ಸಂಸ್ಥೆಯು ಗುತ್ತಿಗೆ ಪಡೆದು 1974ರಲ್ಲಿ ಅಣೆಕಟ್ಟನ್ನು ಕಟ್ಟಲು ಶುರುಮಾಡಿ 1985ರಲ್ಲಿ ಆಗಿನ ಪ್ರಧಾನ ಮಂತ್ರಿ ಇಂದಿರಾಗಾಂಧಿ ಉದ್ಘಾಟಿಸುವುದರ ಮೂಲಕ ಪೂರ್ಣಗೊಂಡಿತು. ಈ ಅಣೆಕಟ್ಟೆಯ ಕೆಳಭಾಗದಲ್ಲಿ ಆ ಪ್ರಮುಖ ಜಲವಿದ್ಯುತ್ ಉಪಕಟ್ಟೆಗಳನ್ನು 2 ಹಂತಗಳಲ್ಲಿ ಕಟ್ಟಲಾಗಿದೆ.

**1. ಬೊಮ್ಮಳ್ಳಿ ಪಿಕ್‌ಅಪ್ ಡ್ಯಾಂ**

ಈ ಡ್ಯಾಂ ತಟ್ಟಿಹಳ್ಳಿ ಜಲಾಶಯ ಮತ್ತು ಸೂಪಾ ಜಲಾಶಯಗಳಿಂದ ಹರಿದು ಬಂದ ನೀರನ್ನು ಯಾವಾಗಲೂ ಒಂದೇ ಪ್ರಮಾಣದಲ್ಲಿ ಹಿಡಿದಿಟ್ಟುಕೊಳ್ಳುವ ಸಂಗ್ರಹಣಾ ಅಣೆಕಟ್ಟು ಇದಾಗಿದೆ. ತಟ್ಟಿಹಳ್ಳ ಜಲಾಶಯದಿಂದ ಟನಲ್ ಕೊರೆದು ಈ ಜಲಾಶಯಕ್ಕೆ ನೀರು ಭರ್ತಿ

ಮಾಡಲಾಗುತ್ತದೆ. ಇಲ್ಲಿಂದ ಮುಂದೆ ಸಂಪೂರ್ಣ ಬೆಟ್ಟಗಳ ಕೆಳಗಿರುವ ಅಂಬಿಕಾನಗರದಲ್ಲಿರುವ ವಿದ್ಯುತ್ ಉತ್ಪಾದನಾ ಘಟಕ 7 ಟನಲ್ ಮೂಲಕ ನೀರು ರಭಸದಿಂದ ಹರಿದು ಅಲ್ಲಿರುವ ಬೃಹತ್ ಟರ್ಬೈನ್‌ಗಳನ್ನು ತಿರುಗಿಸುವುದರ ಮೂಲಕ ವಿದ್ಯುತ್ ಉತ್ಪಾದನೆಗೊಳ್ಳುತ್ತದೆ. ಈ ಎರಡು ಯುನಿಟ್‌ಗಳಿಂದ 100 ಮೆಗಾವಾಟ್ ವಿದ್ಯುತ್ ಉತ್ಪಾದನೆಗೊಳ್ಳುತ್ತದೆ. ಅಪ್ಪರ್ ಕಾನೇರಿ ಜಲಾಶಯಗಳಿಂದ 810 ಮೆಗಾವ್ಯಾಟ್ ವಿದ್ಯುತ್ತನ್ನು ಉತ್ಪಾದಿಸಲಾಗುತ್ತದೆ. ಒಟ್ಟು 1200 ಮೆಗಾವ್ಯಾಟ್ ವಿದ್ಯುತ್ ಉತ್ಪಾದಿಸಲಾಗುತ್ತದೆ. ಈ ಜಲಾಶಯದಿಂದ 377 ಕುಟುಂಬಗಳನ್ನು ಸ್ಥಳಾಂತರ ಮಾಡಲಾಗಿದೆ. ತಿಟ್ಟಹಳ್ಳಿ ಜಲಾಶಯದಿಂದ 317 ಕುಟುಂಬಗಳನ್ನು ಸ್ಥಳಾಂತರ ಮಾಡಲಾಗಿದೆ.

**2. ಎರಡನೇ ಜಲವಿದ್ಯುತ್ ಹಂತ**

ಈ ಜಲಾಶಯದಿಂದ 374 ಕುಟುಂಬಗಳನ್ನು ಸ್ಥಳಾಂತರ ಮಾಡಲಾಗಿದೆ. ತಟ್ಟಿಹಳ್ಳ ಜಲಾಶಯ 317 ಕುಟುಂಬಗಳನ್ನು ಸ್ಥಳಾಂತರ ಮಾಡಲಾಗಿದೆ.

**ಕೊಡ್ಸಳ್ಳಿ ಡ್ಯಾಂ:** ಅಂಬಿಕಾನರದ ನಾಗಝುರಿ ಶಕ್ತಿ ಉತ್ಪಾದನಾ ಘಟದಿಂದ ಹೊರಬಿದ್ದ ಕಾಳಿನದಿ ನೀರು ಇನ್ನೂ ಘಟ್ಟದ ಕೆಳಗೆ ಯಲ್ಲಾಪುರ ತಾಲ್ಲೂಕಿನ ಕೊಡಸಳ್ಳಿಯ ಬಳಿ 1049 Sq.Km ವ್ಯಾಪ್ತಿಯಲ್ಲಿ ಮತ್ತೊಂದು ಅಣೆಕಟ್ಟನ್ನು ಕಟ್ಟಲಾಗಿದೆ. ಇದರ ಸಂಗ್ರಹಣಾ ವಿಸ್ತೀರ್ಣವು 3164 Sq.mtrs. ಈ ಜಲಾಶಯದಿಂದ 1458 ಕುಟುಂಬಗಳನ್ನು ಸ್ಥಳಾಂತರ ಮಾಡಲಾಗಿದೆ.

**ಕದ್ರಾ ಡ್ಯಾಂ:** ಕೊಡಸಳ್ಳಿ ಜಲಾಶಯದ ಘಟ್ಟದ ಇನ್ನೂ ಕೆಳ ಭಾಗ ಮತ್ತು ಕಾರವಾರ ಅರಬ್ಬಿ ಸಮುದ್ರ ಸೇರುವ ಮುಂಚೆ ಕದ್ರಾ ಭಾಗದಲ್ಲಿ 3164 Sq.mtsರಲ್ಲಿ ಕದ್ರಾ ಜಲಾಶಯವನ್ನು ಕಟ್ಟಲಾಗಿದೆ. ಈ 6ನೇ ಜಲಾಶಯವು ಸಂಪೂರ್ಣವಾಗಿ ವಿವಾದಿತ ಕೈಗಾ ನ್ಯೂಕ್ಲಿಯರ್ ಅಣುಸ್ಥಾವರಕ್ಕೆ ವಿದ್ಯುತ್ ಮತ್ತು ನೀರು ಪೂರೈಕೆಗಾಗಿ ಮೀಸಲಿಡಲಾದ ಜಲಾಶಯವಾಗಿದೆ. ಈ ಅಣೆಕಟ್ಟೆಯಿಂದ ಉತ್ಪಾದಿಸಲಾಗುವ 440 ಮೆಗಾವ್ಯಾಟ್ ಸಂಪೂರ್ಣ ವಿದ್ಯುತ್ ಕೈಗಾ ಅಣು ಸ್ಥಾವರಕ್ಕೆ ಉಪಯೋಗಿಸಲ್ಪಡುತ್ತದೆ. ಈ ಜಲಾಶಯದಿಂದಾಗಿ 1458 ಕುಟುಂಬಗಳನ್ನು ಸ್ಥಳಾಂತರ ಮಾಡಲಾಗಿದೆ.

**ರಾಮನಗರವೆಂಬ ಪುನರ್ವಸತಿ ಕೇಂದ್ರ**

ಸೂಪಾ ಜಲಾಶಯದಲ್ಲಿ ಮುಳುಗಡೆಯಿಂದ 47 ಹಳ್ಳಿಯ 1680 ಕುಟುಂಬಗಳ 8500 ಜನಗಳನ್ನು ರಾಮನಗರ ಪುನರ್ವಸತಿ ಕೇಂದ್ರಕ್ಕೆ ಸ್ಥಳಾಂತರಿಸಲಾಯಿತು. ಹಾಗೆ ನೋಡಿದಲ್ಲಿ ರಾಮನಗರವೆಂಬ ಪ್ರದೇಶ ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಗೆ ಬರುವುದಿಲ್ಲ. ಅದು ಬೆಳಗಾಂ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಲೊಂಡಾಕ್ಕೆ 3 ಕಿ.ಮೀ. ದೂರದಲ್ಲಿರುವ ಕರಾಬು ಜಾಗವಿರುವ ಒಣ ಪ್ರದೇಶ. ಈ ಕೆಳಗೆ ಇರುವ ಕೋಷ್ಟಕದ ಪ್ರಕಾರ 3 ಹಂತಗಳಲ್ಲಿ ಮುಳುಗಡೆಯಿಂದ ಹಳ್ಳಿಗಳ ಜನಗಳನ್ನು ರಾಮನಗರಕ್ಕೆ ಸ್ಥಳಾಂತರ ಮಾಡಲಾಯಿತು.

**ಕೋಷ್ಟಕ 1**

**ಸೂಫಾ ಜಲಾಶಯದಿಂದ ಸ್ಥಳಾಂತರಗೊಂಡವರ ವಿವರ**

| ಕ್ರಸಂ | ಹಂತಗಳು ಕುಟುಂಬಗಳು | ಕೃಷಿ ಕೂಲಿಗಾರರು | ಕೃಷಿ ಯೇತರರು | ಕೃಷಿ ಕುಟುಂಬಗಳು | ಒಟ್ಟು |
|---|---|---|---|---|---|
| 1 | ಮೊದಲನೇ ಹಂತ 17 ಹಳ್ಳಿಗಳು | 422 | 199 | 378 | 999 |
| 2 | ಎರಡನೇ ಹಂತ ಹಳ್ಳಿಗಳು | 78 | 35 | 1 | 114 |
| 3 | ಮೂರನೇ ಹಂತ 25 ಹಳ್ಳಿಗಳು | 417 | 131 | 19 | 567 |
| | **ಒಟ್ಟು 47 ಹಳ್ಳಿಗಳು** | 917 | 365 | 388 | 1680 |

ಆಧಾರ: https:/www.downtoearth.org.in/news/supa-dam-displaced-leased-out-lands-to-paper-mill-7075

ಕ್ಯಾಬಿನೆಟ್ ಸಬ್ ಕಮಿಟಿಯ 19.3.1974ರಂದು ಕ್ಯಾಬಿನೆಟ್ ಸಭೆಯಲ್ಲಿ ತೀರ್ಮಾನಿಸಿ ಕೈಗೊಂಡ ಸರ್ಕಾರದ ಆದೇಶದಂತೆ ಸ್ಥಳಾಂತರ ಪುನರ್ವಸತಿ ಸಮಿತಿಯ ಚೇರ್‌ಮನ್ ಆದ ಬೆಳಗಾವಿಯ ಡಿವಿಷನಲ್ ಕಮೀಷನರ್(ವಿಭಾಗೀಯ ಕಮೀಷನರ್ ಅಧಿಕಾರದ ಅಡಿಯಲ್ಲಿ ಉತ್ತರ ಕನ್ನಡ ಜಿಲ್ಲೆಯೂ ಒಳಗೊಳ್ಳುತ್ತದೆ) ಅವರು ಕ್ರಮ ಕೈಗೊಂಡು ಹೇಮಗಡದ 5000 ಎಕರೆ ಕಾಡನ್ನು ಮತ್ತು 6000 ಎಕರೆ ಜಾಪೋಲಿ ಕಾಡನ್ನು ಈ ಪುನರ್ವಸತಿ ಯೋಜನೆಗಾಗಿ ಬಿಡುಗಡೆಗೊಳಿಸುತ್ತಾರೆ. ಅದರ ಪ್ರಕಾರ ರಾಮನಗರದಲ್ಲಿ ವಸತಿ ಮತ್ತು ಕಛೇರಿ ಇತರೆ ನಗರ ನಿರ್ಮಾಣಕ್ಕಾಗಿ 530 ಎಕರೆ ಜಾಗ ಮೀಸಲಿರಿಸಿ 1158 ಮನೆಗಳನ್ನು 1981 ಮೊದಲನೇ ಹಂತದವರಿಗೂ ಎರಡನೇ ಮತ್ತು ಮೂರನೇ ಹಂತದವರೆಗೆ 1985ರಲ್ಲಿ ವಸತಿಗಳನ್ನು ಕಲ್ಪಿಸಿಕೊಡಲಾಯಿತು ಎಂದು ಕೆಪಿಸಿ ದಾಖಲೆಗಳು ಹೇಳುತ್ತವೆ.

45 x 60 ಅಡಿಗಳಲ್ಲಿ 532 ನಿವೇಶನ ಹಾಗೂ 8x120 ಅಡಿಗಳಲ್ಲಿ 626 ನಿವೇಶನಗಳನ್ನು ಕೃಷಿ ಜಮೀನು ಹೊಂದಿದವರು ಮತ್ತು ಇಲ್ಲದಿರುವವರಿಗಾಗಿ ವಿಂಗಡಣೆ ಮಾಡಿ ಹಂಚಲಾಯಿತಂತೆ. ರಾಮನಗರದ ಪುನರ್ವಸತಿಯ ಮೂಲ ಸೌಕರ್ಯಗಳಿಗಾಗಿ ಮತ್ತು ಕೃಷಿ ಬದಲೀ ಪರಿಹಾರಕ್ಕಾಗಿ ಈ ಕಟ್ಟಿಕಂಡಂತೆ ಒಟ್ಟು 4431.18 ಎಕರೆ ಜಾಗವನ್ನು ಮೀಸಲಿರಿಸಿ ಅಭಿವೃದ್ಧಿಗೊಳಿಸಿದರಂತೆ.

**ಕೋಷ್ಟಕ 2**

**ಸೂಫಾ ನಿರಾಶ್ರಿತರಿಗಾಗಿ ಹಂಚಲಾದ ಭೂಮಿ ವಿವರ**

| ಕ್ರ.ಸಂ. | ಸ್ಥಳಗಳು | ಎಕರೆಗಳು |
|---|---|---|
| 1 | ಕೃಷಿಗಾಗಿ | 3455 |
| 2 | ಗ್ರಾಮಠಾಣಾ | 530 |
| 3 | ಹಸಿರು ಪಟ್ಟಿ(Green belt) | 75 |
| 4 | ನಿತ್ಯ ಹಸಿರು ಕಾಡು(Evergreen forest) | 40.18 |
| 5 | ಕರಾಬು ಜಾಗ(waste land)<br>(ನಾಲಾ ಇತ್ಯಾದಿಗಳಿಗಾಗಿ) | 331 |
| | ಒಟ್ಟು | **4431.18 ಎಕರೆಗಳು** |

ಆಧಾರ: https:/www.downtoearth.org.in/news/supa-dam-displaced-leased-out-lands-to-paper-mill-7075

4431 ಎಕರೆ 18 ಗುಂಟೆ ಜಾಗದಲ್ಲಿ 3455 ಎಕರೆ ಭೂಮಿಯನ್ನು ಮುಳುಗಡೆಯಲ್ಲಿ ಕೃಷಿ ಭೂಮಿ ಕಳೆದುಕೊಂಡ ವಂಚಿತರಿಗೂ ಮತ್ತು 40.4 ಕಿ.ಮೀ. ರಸ್ತೆಗಳಿಗೂ ಭೂಮಿಯನ್ನು ವಿನಿಯೋಗಿಸಲಾಗಿದೆಯೆಂದು ಕೆಪಿಸಿ ಮೂಲಗಳ ದಾಖಲೆಗಳು ಮಾಹಿತಿ ನೀಡುತ್ತವೆ.

**ಕೋಷ್ಟಕ 3**

**Forest area cleared in connection with supa dam works**

| | | |
|---|---|---|
| 1. | ಸೂಪಾ ಜಲಾಶಯ ನಿರ್ಮಾಣಕ್ಕಾಗಿ ಕಡಿದ ಅರಣ್ಯ | 26419–31–00 |
| 2. | ಸ್ಥಳಾಂತರಕ್ಕಾಗಿ ಕಡಿದ ಅರಣ್ಯ | 4431–18–00 |
| 3. | ತಾಲ್ಲೂಕು ಕೇಂದ್ರ ಜೋಯಿಡಾಕ್ಕಾಗಿ ಅರಣ್ಯ ತೆರವು | 150–00 |
| 4. | ಸೂಪಾ ಶಕ್ತಿ ಕೇಂದ್ರ ಜಗಲ್ ಪೇಟ್ ಅಂಬೇಲಿ ಗ್ರಾಮ | 80–00 |
| 5. | ಚಾಂದೇವಾಡಿ ಮರಳಿನ ಕ್ವಾರಿ ಮತ್ತು ಬೋರಿಕ್ರಾಂವರೆಗೆ | 3–08–00 |
| 6. | ಗಣೇಶಗುಡಿ ಕಾಲೋನಿಗಾಗಿ ಅವೆಡಾ ಗ್ರಾಮ | 334–10–00 |
| 7. | ಅಂಬೇವಾಡಿ ಕಛೇರಿಗಾಗಿ | 87–11–00 |
| | ಒಟ್ಟು | **31,506–11–00** |
| | ಎಲ್ಲಾ ಒಟ್ಟು | **40,175–29–12** |

ಆಧಾರ: https:/www.downtoearth.org.in/news/supa-dam-displaced-leased-out-lands-to-paper-mill-7075

## ಕೋಷ್ಟಕ 4

## ಸೂಪಾ ಜಲಾಶಯಕ್ಕಾಗಿ ಹಳ್ಳಿವಾರು ಮುಳುಗಡೆಯಾದ ಪ್ರದೇಶ

| ಕ್ರಸಂ. | ಹಳ್ಳಿಗಳ ಹೆಸರು | ಅರಣ್ಯ ಪ್ರದೇಶ ಎ.ಗು.ಅ. |
|---|---|---|
| 1 | ಕೊನಾಡ | 476–10–00 |
| 2 | ಅಂಬೇಲಿ | 4012–20–00 |
| 3 | ಸೂಪಾ | 147–03–00 |
| 4 | ಹಸನಗಾಂವ್ | 1405–04–00 |
| 5 | ಬಾಮರ್ಡೆ | 2224–11–00 |
| 6 | ಕುಕಡಲಿ | 961–38–00 |
| 7 | ವಿರಕಿಲ್ | 553–28–00 |
| 8 | ಪಾಟೆ | 293–28–00 |
| 9 | ಮೈನೊಡ | 351–35–00 |
| 10 | ದೊಂಗರವಾಡ | 983–07–00 |
| 11 | ಅದಾನ್‌ಗಾಂವ್ | 791–18–00 |
| 12 | ಅಡುಳ್ಳಿ | 127–02–00 |
| 13 | ಕೆವರ್ಲೆ | 503–16–00 |
| 14 | ಹತಂಬೆ | 2184–39–4 |
| 15 | ಬಿರೋಡ | 967–14–00 |
| 16 | ಜಂಬಗಲಿ | 233–12–00 |
| 17 | ನಿನುರ್ | 111–19–00 |
| 18 | ಬಾಂದೋಡ | 198–23–00 |
| 19 | ಕಿಟಗಾಳಿ | 381–11–00 |
| 20 | ಕುರ್ಕೆ ಕುರ್ಡ್ಯಾಡೆ | 1326–21–20 |
| 21 | ಶಿರ್ಗ್ರೂರೆ | 390–39–00 |
| 22 | ಗಾವನೆ | 125–11–00 |

| ಕ್ರ.ಸಂ. | ಹಳ್ಳಿಗಳ ಹೆಸರು | ಅರಣ್ಯ ಪ್ರದೇಶ ಎ.ಗು.ಅ. |
|---|---|---|
| 23 | ಕೊಡಾಳಿ | 1802–18–00 |
| 24 | ಬಾಪೇಲಿ | 162–11–00 |
| 25 | ಪಣಾಸ್ ಕಾಂದೆ | 82–39–00 |
| 26 | ಸೂಳಾವಲಿ | 463–11–00 |
| 27 | ಚಾಪೋಲಿ ಕಳ್ನಾಯ್ | 991–31–00 |
| 28 | ಸಮಜೋಯಿಡಾ | 97–20–00 |
| 29 | ಬೆರಿಯೆ | 93–09–00 |
| 30 | ಕಾಟಾಳಿ | 77–15–00 |
| 31 | ದೇವಳಿ | 88–21–00 |
| 32 | ಜೋಯಿಡಾ | 10–00–00 |
| 33 | ವಿರಲ್ | 39–04–00 |
| 34 | ಕಲಾಂಬುಲಿ | 60–24–00 |
| 35 | ವೈನಿ | 101–00–00 |
| 36 | ಎಲ್ಲೈ ದಾಬೆ | 249–01–00 |
| 37 | ಪಾಟೋಲಿ | 308–00–00 |
| 38 | ಕಾಂಬ್ರೆ | 81–24–00 |
| 39 | ಚಾಂದೇವಾಡಿ | 182–09–00 |
| 40 | ಅವೇಡ–ಮೊಪಲ್ವಾಡಿ | 360–14–00 |
| 41 | ಅಸೂಲಿ | 342–02–00 |
| 42 | ಕುನಿಗಿನಿ | 72–20–00 |
| 43 | ಪಾಂಜೇಲಿ | 766–36–00 |
| 44 | ನಾಗೋಡ | 389–38–00 |
| **ಒಟ್ಟು ಎಕರೆಗಳಲ್ಲಿ** | | **26,419–31–00** |

ಆಧಾರ: https:/www.downtoearth.org.in/news/supa-dam-displaced-leased-out-lands-to-paper-mill-7075

## ಕೋಷ್ಟಕ 5

### ಕಾಳಿನದಿಗೆ ಕಟ್ಟಲಾದ ಜಲಾಶಯಗಳು ಮತ್ತು ಸ್ಥಳಾಂತರಗೊಂಡವರ ವಿವರ

| ಕ್ರ.ಸಂ. | ಕಾಳಿನದಿಗೆ ಕಟ್ಟಲಾದ ಜಲಾಶಯಗಳು | ಸ್ಥಳಾಂತರಗೊಂಡವರು |
|---|---|---|
| 1 | ಸೂಫಾ ಜಲಾಶಯ | 8500 |
| 2 | ಬೊಮ್ನಳ್ಳಿ ಜಲಾಶಯ | 374 |
| 3 | ತಟ್ಟೀಹಳ್ಳಿ ಜಲಾಶಯ | 317 |
| 4 | ಅಪ್ಪರ್ ಕಾನೇರಿ ಜಲಾಶಯ | 230 |
| 5 | ಕೊಡ್ಸಳ್ಳಿ ಜಲಾಶಯ | 1433 |
| 6 | ಕದ್ರ ಜಲಾಶಯ | 1458 |
| | **ಜಲಾಶಯಗಳು ಒಟ್ಟು** | **12,362 ಜನ** |

ಆಧಾರ: https:/www.downtoearth.org.in/news/supa-dam-displaced-leased-out-lands-to-paper-mill-7075

ಸೂಪಾ ಅಣೆಕಟ್ಟು ಕಟ್ಟಲು 13,960 ಹೆಕ್ಟೇರ್ ವಿಸ್ತೀರ್ಣದ ಭೂಮಿಯನ್ನು ಬಳಸಿಕೊಳ್ಳಲಾಯಿತು. ಅದರಲ್ಲಿ 11,225 ಹೆಕ್ಟೇರ್ ಭೂಭಾಗ ಸಂಪೂರ್ಣ ದಟ್ಟವಾದ ಕಾಡು ಮುಳುಗಡೆಗೊಂಡಿತು. 2277 ಸ್ವಂತ ಜಮೀನು(ಕೃಷಿ) ಹಾಗೂ 458 ಹೆಕ್ಟೇರ್ ಕಂದಾಯ ಇಲಾಖೆಯ ಭೂಮಿ ಮುಳುಗಡೆಯಾಯಿತೆಂದು ವರದಿ ಹೇಳುತ್ತದೆ.

## ಕೋಷ್ಟಕ 6

### ಸೂಪಾ ಜಲಾಶಯದ ನಿರಾಶ್ರಿತರಿಗೆ ನೀಡಲಾದ ಪರಿಹಾರದ ವಿವರ

| ಕ್ರ.ಸಂ. | ಜಲಾಶಯಗಳ ಹೆಸರು | ಪರಿಹಾರ ರೂಪದಲ್ಲಿ ನೀಡಿದ ಮೊತ್ತ | ಯಾವ ವರ್ಷದಲ್ಲಿ ಸ್ವಾಧೀನಗೊಳಿಸಿತು |
|---|---|---|---|
| 1 | ಬೊಮ್ನಳ್ಳಿ ಜಲಾಶಯ | 1979 | 3000 / ಎಕರೆ |
| 2 | ತಟ್ಟಿಹಳ್ಳಿ ಜಲಾಶಯ | 1979 | 3500/ಎಕರೆ |
| 3 | ಸೂಪಾ ಜಲಾಶಯ | 1981–87 | 7800/ಎಕರೆ |
| 4 | ಕೊಡ್ಸಳ್ಳಿ ಜಲಾಶಯ | 1997 | ಮಾಹಿತಿ ನೀಡಿಲ್ಲ |
| 5 | ಕದ್ರ ಜಲಾಶಯ | 1997 | 2976/ಎಕರೆ |
| 6 | ವೈಟಿಪಿಎಸ್ | 1993 | |

ಆಧಾರ: https:/www.downtoearth.org.in/news/supa-dam-displaced-leased-out-lands-to-paper-mill-7075

**ಸೂಪಾ ಸ್ಥಳಾಂತರ ಕುಣಬಿ ಸೀಮಾಪದ್ಧತಿ ಮೇಲೆ ಉಂಟಾದ ವ್ಯತಿರಿಕ್ತ ಪರಿಣಾಮ**

ಈಗಾಗಲೇ ಪ್ರಸ್ತಾಪಿಸಿಸಿರುವಂತೆ ಸೀಮಾಪದ್ಧತಿಯು ಶತಮಾನಗಳಿಂದ ಒಂದೇ ನೆಲೆಯಲ್ಲಿ ಕಾಡಿನ ಪರಿಸರದೊಟ್ಟಿಗೆ ಹೆಣೆದ ಸಾಂಸ್ಕೃತಿಕ ಬಲೆಯಾಗಿರುತ್ತದೆ. ನಿರ್ದಿಷ್ಟ ಪ್ರದೇಶದಲ್ಲಿನ ಬುಡಕಟ್ಟುಗಳಷ್ಟೇ ಅಲ್ಲ, ಅಲ್ಲಿನ ಪ್ರತಿಯೊಂದು ಕ್ರಿಮಿ, ಕೀಟ, ಪ್ರಾಣಿ, ಪಕ್ಷಿ ಮತ್ತು ಇಡೀ ಸಸ್ಯ ಸಂಕುಲಗಳಿಗೂ ಸಾವಿರಾರು ವರ್ಷಗಳಿಂದ ಸೀಮಾವ್ಯವಸ್ಥೆ ಸೂತ್ರದಲ್ಲಿ ನೆಲೆಗೊಂಡಿರುತ್ತದೆ. ಇವುಗಳ ಪರಸ್ಪರ ಅವಿನಾಭಾವ ಸಂಬಂಧಗಳು ಆ ನೆಲೆಯ ಆವರಣದೊಳಗೆ ಬೇರು ಬಿಟ್ಟಿರುತ್ತದೆ. ಇಂತಹ ನಿಖರವಾದ ಸಾಂಸ್ಕೃತಿಕ ಆವರಣದಿಂದ ಬುಡಕಟ್ಟುಗಳನ್ನು ನಿರ್ದಯವಾಗಿ 'ಸೀಮಾಪದ್ಧತಿ' ವ್ಯವಸ್ಥೆಗಳಿಂದ ಕಡಿದು ಬೇರೆಡೆಗೆ ಒಕ್ಕಲೆಬ್ಬಿಸಿ ಕಾಡಿನ ಇಡೀ ಜೀವಸಂಕುಲದ ಪ್ರದೇಶವನ್ನು ಅಭಿವೃದ್ಧಿಯ ಹೆಸರಲ್ಲಿ ಅಣೆಕಟ್ಟು ಕಟ್ಟಿ ಸಂಪೂರ್ಣ ಮುಳುಗಿಸಿ ಬಿಟ್ಟರೆ ಎಲ್ಲಿಯ ಸೀಮಾಪದ್ಧತಿ?.

ಸಾವಿರಾರು ವರ್ಷಗಳಿಂದ ನೇಯ್ದ ಒಂದು ಜೀವಜಾಲದ ವ್ಯವಸ್ಥೆ, ಸೀಮಾವಲಯದ ನಿರ್ನಾಮವಷ್ಟೆ ಅಲ್ಲ, ಜೀವಜಾಲದ ಪ್ರತಿಯೊಂದು ಜೀವಿಗಳಲ್ಲಿ ಸಾವಿರಾರು ವರ್ಷಗಳಿಂದ ಪರಸ್ಪರ ಹೆಣೆಯಲ್ಪಟ್ಟಿದ್ದ ಅವಿನಾಭಾವ ಸಂಬಂಧ 'ಪರಿಸರದ ವ್ಯವಸ್ಥೆ'(Eco system)ಯೂ ಜೊತೆ ಜೊತೆಗೆ ನಿರ್ನಾಮವಾಗುತ್ತದೆ. ಬುಡಕಟ್ಟುಗಳು ಈ ಜೀವಜಾಲ ಪರಿಸರ ವ್ಯವಸ್ಥೆಯಿಂದ ಶಾಶ್ವತವಾಗಿ ನಿರ್ಗಮಿಸುವ ಕರಳು ಕಿವಿಚಿ ಬರುವ ಒಂದು ಪರಿಸ್ಥಿತಿಯನ್ನು ನಿರ್ಮಿಸಿದ್ದು ಆಧುನಿಕ ಆಡಳಿತಶಾಹಿ ವ್ಯವಸ್ಥೆಯಾಗಿದೆ.

ಜಲದೊಳಗಿನ ಮೀನನ್ನು ಎತ್ತಿ ಹೊರೆಗೆಸೆದಾಗ ಹೇಗೆ ಉಸಿರುಗಟ್ಟಿ ವಿಲವಿಲ ಒದ್ದಾಡುವುದೋ ಅಂತಹ ಪರಿಸ್ಥಿತಿಯು ಆದಿವಾಸಿಗಳನ್ನು ತಮ್ಮ ಸೀಮಾವಲಯದಿಂದ ಒಕ್ಕಲೆಬ್ಬಿಸಿದಾಗ ಉಂಟಾಗಿರುತ್ತದೆ. ತಮ್ಮ ಹಾಡಿಗಳ ಸುತ್ತಲೂ ತಮ್ಮ ಹಾಡಿಯ ಶ್ರೇಯಸ್ಸಿಗಾಗಿ ದುಡಿದು ಮಡಿದವರು ಆತ್ಮಗಳ ಕಲ್ಲಿನ ಗುಂಡಿನ ರೂಪದಲ್ಲಿ ಗಡಿ ಭಾಗದಲ್ಲಿ ಪ್ರತಿಷ್ಠಾಪಿಸಿದ್ದು ದೈವಗಳು ಮತ್ತು ಅವುಗಳ ಜೊತೆ ಪ್ರಾಣಿ ಪಕ್ಷಿ ಮರ, ಗಿಡ ಹುತ್ತಗಳ ರೂಪದಲ್ಲಿನ ದೈವಗಳು ನಮ್ಮನ್ನು ನಮ್ಮ ಕಾಡನ್ನು ಕಾಯುತ್ತಿರುತ್ತವೆ ಎಂಬ ನಿರುಂಬಳ ನೆಮ್ಮದಿಯ ಒಂದು ನಂಬಿಕೆ ಶಾಶ್ವತವಾಗಿ ಛಿದ್ರಗೊಳ್ಳುತ್ತದೆ. ಪರಸ್ಪರ ನಂಬಿಕೆ, ಪ್ರೀತಿ ಮತ್ತು ಸೌಹಾರ್ದತೆಯಿಂದ ಕೂಡಿ ಬಾಳಿದ ಸಮಾಜದ ಸಾಮೂಹಿಕ ಜೀವನದ ಭಾಗಗಳಾದ ಬೇಟೆ, ಸಹಜ ಕೃಷಿ, ಕುಂಬರಿ ಬೇಸಾಯ, ಪಾರಂಪರಿಕ ಜ್ಞಾನಗಳಾದ ನಾಟಿ ಚಿಕಿತ್ಸೆ, ಜಾನಪದ ನೃತ್ಯ, ಹಾಡು, ಕಥೆ, ಕುಲ ಕಸುಬುಗಳು, ಕುಸರಿ ಕೆಲಸಗಳು, ಆಚಾರ ವಿಚಾರ, ಉಪಾಸನೆಗಳು ಸರ್ವನಾಶವಾಗುತ್ತವೆ. ಸಾವಿರಾರು ವರ್ಷಗಳಿಂದ ಗಳಿಸಿದ್ದ ಸಾಮಾಜಿಕ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ನೆಮ್ಮದಿಯ ಬದುಕಿನ ಸಮಾಧಿಯಾಗುತ್ತದೆ.

ಇದೆಲ್ಲವೂ ಸೂಪಾ ಜಲಾಶಯದ ನೆಪದಲ್ಲಿ 47 ಹಾಡಿಗಳ ಜನಗಳನ್ನು ರಾಮನಗರದ ಪುನರ್ವಸತಿ ಕೇಂದ್ರಕ್ಕೆ ಕಾಡಿನಿಂದ ಕಿತ್ತೊಗೆದು ಸೇರಿಸಿದಾಗ ಬುಡಕಟ್ಟುಗಳಿಗಾದ ಪರಿಸ್ಥಿತಿಯಾಗಿದ್ದು, ಶತಶತಮಾನಗಳ 'ಸೀಮಾಪದ್ಧತಿ' ಛಿದ್ರಗೊಂಡು ನಾಶವಾದ ಜೀವಂತ ದುರಂತದ ಕಥೆಯಾಗಿದೆ.

**ರಾಮನಗರದಲ್ಲಿನ ಪ್ರಸ್ತುತ ಕುಣಬಿಗಳ ಸ್ಥಿತಿಗತಿ**

ಕರ್ನಾಟಕ ಪವರ್ ಕಾರ್ಪೋರೇಷನ್(ಕೆಪಿಸಿ) ನೀಡಲಾಗಿರುವ ಸೂಪಾ ಜಲಾಶಯದ ವರದಿಗಳನ್ನು ಈಗಾಗಲೇ ವಿವರಿಸಲಾಗಿದೆಯಾದರೂ, ಅದು ಸರ್ಕಾರ ನೀಡಿರುವ ವರದಿ. ಓದು, ವಿದ್ಯೆ, ಭಾಷೆ(ಕುಣಬಿಗಳ ಮಾತು ಕೊಂಕಣಿ. ಬಹುತೇಕ ಕುಣಬಿಗಳಿಗೆ ಕನ್ನಡ ಬರುವುದಿಲ್ಲ), ಆಧುನಿಕತೆಯ ಗಂಧಗಾಳಿ ಇಲ್ಲದ ಆದಿವಾಸಿ ಕುಣಬಿಗಳನ್ನು 3 ದಶಕಗಳ ಹಿಂದೆ ಯಾವ ಸೂಚನೆ ನೀಡದೆ (ನೋಟಿಸ್) ಕುರಿಗಳಂತೆ ಲಾರಿಗಳಲ್ಲಿ ಎತ್ತಾಕಿಕೊಂಡು ಹೋಗಿ ರಾಮನಗರದಲ್ಲಿ ಕಟ್ಟಲಾಗಿದ್ದ ಶೆಡ್‌ಗಳಲ್ಲಿ ದೂಡಲಾಯಿತು.

ಯಾವ ದಾಖಲೆಗಳೂ ಇಲ್ಲದ ಕುಣಬಿಗಳಿಗೆ ಪರಿಹಾರ ಸಿಗಲಿಲ್ಲ. ಈಗಲೂ ವಂಚಿತರು ಕೋರ್ಟು ಕಛೇರಿಗಳಿಗೆ ಅಲೆಯುವುದು ತಪ್ಪಿಲ್ಲ. ನಿತ್ಯಹರಿದ್ವರ್ಣ ಕಾಡಿನಲ್ಲಿ ವರ್ಷ ಪೂರ್ತಿ ಹರಿಯುವ ಝುರಿ ನೀರಿನಲ್ಲಿ ಭತ್ತ ಬಿತ್ತಿ ಬೆಳೆದವರನ್ನು, ಒಣ ಬಯಲು ಪ್ರದೇಶಕ್ಕೆ ದೂಡಿದರು. ಅಲ್ಲಿ ಏನು ಬೆಳೆಯಬೇಕೆಂದು ತಿಳಿಯದ ಕುಣಬಿಗಳು ಕೆಪಿಸಿ ನೀಡಲಾಗಿದ್ದ ಜಮೀನನ್ನು ಬೀಳು ಬಿಟ್ಟರು. ಹಲವರು ತುಂಬಾ ಕಡಿಮೆ ಬೆಲೆಗೆ ಮಾರಿ, ಹೊಟ್ಟೆ ಹೊರೆಯಲು ಪಕ್ಕದ ಗೋವಾ ರಾಜ್ಯಕ್ಕೆ ವಲಸೆ ಹೋದರು. ಈಗಲೂ ಬಹುತೇಕ ರಾಮನಗರದ ಕುಣಬಿಗಳು ಕೂಲಿಗೆ ಆಶ್ರಿತರಾಗಿದ್ದಾರೆ. ಅವರ ಸಾಮಾಜಿಕ ಸಾಂಸ್ಕೃತಿಕವಾದ ಆದಿವಾಸಿ ಬದುಕು ಸಂಪೂರ್ಣವಾಗಿ ಸ್ಥಿತ್ಯಂತರಗೊಂಡಿದ್ದು, ಬುಡಕಟ್ಟು ಸಾಮೂಹಿಕ ಜೀವನ ಛಿದ್ರಗೊಂಡಿದೆ. ಸಮಾಜದೊಳಗಿನ ನಂಬಿಕೆ, ನೆಮ್ಮದಿ, ದೈವಗಳೊಟ್ಟಿಗಿನ ನ್ಯಾಯಯುತ ಶಿಸ್ತಿನ ಬದುಕು ಕಳೆದುಕೊಂಡು ಕುಣಬಿಗಳು ಅತ್ತ ಮುಖ್ಯವಾಹಿನಿಯ ಲೋಕಕ್ಕೂ ಪಾದಾರ್ಪಣೆ ಮಾಡದೆ, ಇತ್ತ ಮೊದಲಿನ ಆದಿವಾಸಿ ಸಾಂಸ್ಕೃತಿಕ ಬದುಕನ್ನು ಅನುಸರಿಸಲಾಗದೆ ತುಂಬಾ ಅತಂತ್ರದ ಸ್ಥಿತಿಯನ್ನು ಎದುರಿಸಿ ಜೀವನ ಸಾಗಿಸುತ್ತಿದ್ದಾರೆ. ಮೂಲ ನೆಲೆಯಲ್ಲೇ ಸ್ಥಳಾಂತರಗೊಳ್ಳದೇ ಇರುವ ಜೋಯಿಡಾದ ಕುಣಬಿಗಳಿಗೂ, ಸ್ಥಳಾಂತರಗೊಂಡ ಅತಂತ್ರ ಕುಣಬಿಗಳಿಗೆ ಹೋಲಿಸಿದಲ್ಲಿ ಅವರ ಸಾಮಾಜಿಕ ನಡವಳಿಕೆಗಳಲ್ಲಿ ಅಜಗಜಾಂತರ ವ್ಯತ್ಯಾಸಗಳನ್ನು ಗುರ್ತಿಸಬಹುದಾಗಿದೆ. ಬಹಳ ಶಾಂತ, ಮುಗ್ಧ ಮತ್ತು ನಾಚಿಕೆ ಸ್ವಭಾದವರಾದ ಕುಣಬಿಗಳಿಗೆ ಮೋಸ, ತಟವಟ, ಹೊಡೆದಾಟಗಳನರಿಯದ ನಂಬಿಕೆಗೆ ಹೆಸರಾದ ಮುಗ್ಧರು ಕುಣಬಿಗಳು. ಆದರೆ ರಾಮನಗರಕ್ಕೆ ಸ್ಥಳಾಂತರಗೊಂಡ ಕುಣಬಿಗಳಲ್ಲಿ ಮೂರು ದಶಕಗಳ ನಂತರದ ಬದುಕಲ್ಲಿ ಬಹಳಷ್ಟು

ಸ್ಥಿತ್ಯಂತರಗಳನ್ನು ಸೃಷ್ಟಿಸಿದೆ. ಹೀಗೆ ಸುಮ್ಮನೆ ಪೊಲೀಸ್ ಠಾಣೆಯಲ್ಲಿ ಆಗಿರುವ ಕಳ್ಳತನ, ಹೊಡೆದಾಟ, ಬಡಿದಾಟ, ಕೊಲೆ ಇತರೆ ಕೇಸುಗಳನ್ನು ರಾಮನಗರ ಮತ್ತು ಜೋಯಿಡಾಕ್ಕೆ ಹೋಲಿಸಿ ನೋಡಿದಾಗ ಜೋಯಿಡಾದಲ್ಲಿ ಕೇವಲ ಒಂದೋ ಎರಡೋ ಪ್ರಕರಣಗಳು ಕಾಣಬಹುದಾಗಿದೆ. ಆದರೆ ರಾಮನಗರ ಪೊಲೀಸ್ ಠಾಣೆಯಲ್ಲಿ ಕುಣಬಿಗಳು ಎಲ್ಲಾ ತರಹದ ಪ್ರಕರಣಗಳಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ. ಈ ಮೇಲಿನ ಚಿತ್ರಣಗಳು ಹೇಗೆ ಆಸೆ ಮತ್ತು ನಿರೀಕ್ಷೆಗಳ ಬೆನ್ನೇರಿ ದಾಪು ಗಾಲನಿಟ್ಟ ಆಧುನಿಕತೆಯ ನಾಗರಿಕ ಬದುಕು, ಆದಿವಾಸಿಗಳು ಕಟ್ಟಿಕೊಂಡ ಆದಿಮ ಸಂಸ್ಕೃತಿಗಳನ್ನು ನಾಶಗೊಳಿಸಿ ಮನುಷ್ಯನನ್ನು "ಸಮಾಜ ಘಾತುಕ" ಚಟುವಟಿಕೆಗಳಿಗೆ ಪ್ರೇರಣೆ ನೀಡುತ್ತದೆ ಎಂಬುಧನ್ನು ವ್ಯಕ್ತಪಡಿಸುತ್ತದೆ. ಈ ಪ್ರಕರಣದಲ್ಲಿ ಆದಿವಾಸಿಗಳು ಶತಮಾನಗಳಿಂದ ಕಟ್ಟಿಕೊಂಡಿದ್ದ 'ಸೀಮಾಪದ್ಧತಿ' ವ್ಯವಸ್ಥೆಯು ಅವರ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕತೆಯ ಸಾತ್ವಿಕ ಬದುಕನ್ನು ನಿರ್ಮಾಣಗೊಳಿಸಿತ್ತು. ಅದನ್ನು ಅಭಿವೃದ್ಧಿಯ ಯೋಜನೆಗಳ ನೆಪದಲ್ಲಿ ಆಡಳಿತಶಾಹಿಗಳು ಹೇಗೆ ಆದಿವಾಸಿ ಜಗತ್ತನ್ನು ಸ್ಥಿತ್ಯಂತರಗೊಳಿಸಿ ನಿರ್ನಾಮಗೊಳಿಸುತ್ತಿದೆ ಎಂಬುಧನ್ನು ಮನಗಾಣಬಹುದಾಗಿದೆ. ಇದು ಈ ಅಧ್ಯಯನದ ಪ್ರಸ್ತುತತೆಯನ್ನು ಬಿಂಬಿಸುತ್ತದೆ.

### ಹಾಲಕ್ಕಿಗಳಲ್ಲಿ ಸ್ಥಳಾಂತರಗಳಿಗೆ ಕಾರಣವಾದ ಅಂಶಗಳು

#### ಸೀಬರ್ಡ್ ನೌಕಾನೆಲೆ

ಕಾರವಾರದಲ್ಲಿ ರಾಷ್ಟ್ರದ ಪರಿಣಾಮಕಾರಿ ಮತ್ತು ಶಕ್ತಿಶಾಲಿ ಸಾಗರ ನೀತಿಯನ್ನು ರೂಪಿಸ ಲಾಯಿತು. ಸಾಂಕೇತಿಕವಾಗಿ 'ಪ್ರೊಜೆಕ್ಟ್ ಸೀಬರ್ಡ್' ಎಂದು ಕರೆಯಲಾಗುವ ನೌಕಾನೆಲೆ ಯೋಜನೆಯನ್ನು 1985ರಲ್ಲಿ ಸ್ಥಾಪಿಸಲು ಸರ್ಕಾರ ಅನುಮತಿ ನೀಡಿತು. ಅಕ್ಟೋಬರ್ 24, 1986ರಲ್ಲಿ ಅಂದಿನ ಪ್ರಧಾನಮಂತ್ರಿ ದಿವಂಗತ ರಾಜೀವಗಾಂಧಿಯವರು ಈ ಯೋಜನೆಯ ಶಿಲಾನ್ಯಾಸ ನೆರವೇರಿಸಿದರು. ಈ ಯೋಜನೆಗಾಗಿ 12,350 ಎಕರೆ ಭೂಮಿ ಸ್ವಾಧೀನಪಡಿಸಲು ಉದ್ದೇಶಿಸಲಾಗಿತ್ತು. ಇದರಲ್ಲಿ 5,470 ಮಾಲ್ಕಿ ಭೂಮಿ, ಉಳಿದ 6,930 ಎಕರೆ ಸರ್ಕಾರಿ ಭೂಮಿಯಾಗಿ ಸೇರಿತ್ತು. ಆದರೆ ಜಿಲ್ಲೆಯ ಜನರಿಗೆ ಆಗುವ ತೊಂದರೆ ಅರಿತು ಸುಮಾರು 8,320 ಎಕರೆ ಭೂಮಿಯನ್ನು ಯೋಜನೆಗೆ ಪಡೆಯಲು ಉದ್ದೇಶಿಸಿ ಇದರಲ್ಲಿ 2,495 ಎಕರೆ ಮಾಲ್ಕಿ ಹಾಗೂ 5,825 ಎಕರೆ ಭೂಮಿ ಸರ್ಕಾರಿ ಅರಣ್ಯ ಮತ್ತು ಕಂದಾಯ ಭೂಮಿಯನ್ನು ಸ್ವಾಧೀನಪಡಿಸಲಾಯಿತು. ಈ ಯೋಜನೆಗಾಗಿ ಕಾರವಾರ ಮತ್ತು ಅಂಕೋಲಾ ತಾಲ್ಲೂಕಿನ 13 ಗ್ರಾಮಗಳನ್ನು ಸ್ವಾಧೀನಪಡಿಸಿಕೊಂಡು 3,741 ಕುಟುಂಬಗಳಿಗೆ ಮುಡಗೇರಿ, ಹಟ್ಟಿಕೇರಿ, ಹಾರವಾಡ, ಅಮದಳ್ಳಿ, ಚಿತ್ತಾಕುಲಾ, ಶಿರಗುಂಜಿ ಮುಂತಾದವುಗಳಲ್ಲಿ ಪುನರ್ವಸತಿ ಕೇಂದ್ರ ಆರಂಭಿಸಿದೆ.

**ಕೈಗಾ ಅಣುವಿದ್ಯುತ್ ಯೋಜನೆ**

ಕೇಂದ್ರಸರ್ಕಾರ ಕೈಗಾದಲ್ಲಿ ಅಣುವಿದ್ಯುತ್ ಯೋಜನೆಯನ್ನು ಆರಂಭಿಸಿತು. "ಒಂದು ಘಟಕ ದಿಂದ 220 ಮೆ.ವ್ಯಾಟ್ ವಿದ್ಯುತ್ ಉತ್ಪಾದನೆಯನ್ನು ಮಾಡಲಾಗುತ್ತಿದ್ದು, ಈ ಯೋಜನೆಯು ಸುಮಾರು 1000 ಹೆಕ್ಟೇರ್ ಅರಣ್ಯ ಪ್ರದೇಶದಲ್ಲಿ ಸ್ಥಾಪಿತವಾಗಿದೆ." ಕೈಗಾ ಅಣುವಿದ್ಯುತ್ ಯೋಜನೆ ಪರಿಣಾಮವಾಗಿ ವಿದ್ಯುತ್ ಉತ್ಪಾದನೆ ಮಾಡುತ್ತಿರುವುದು ಸರ್ಕಾರ ಕಾರ್ಖಾನೆಗಳಿಗೆ ಅಥವಾ ಮತ್ಯಾವುದೇ ಖಾಸಗಿ ಉದ್ದೇಶಕ್ಕಾಗಿ ಇರಬಹುದು. ಕೈಗಾ ಪ್ರದೇಶದ ಬಳಿ ಇರುವ ನೂರಾರು ಹಾಲಕ್ಕಿ ಒಕ್ಕಲಿಗರ ಕೊಪ್ಪಗಳಲ್ಲಿ ವಿದ್ಯುತ್ ಸೌಲಭ್ಯವಿಲ್ಲ. ಒಂದು ವೇಳೆ ಯಾರಾದರೂ ತಮಗೆ ವಿದ್ಯುತ್ ವ್ಯವಸ್ಥೆ ಕಲ್ಪಿಸಿಕೊಡಿ ಎಂದರೆ ಮುಂಗಡವಾಗಿ 5-10 ಸಾವಿರ ರೂಪಾಯಿ ನೀಡಿದರೆ ಮಾತ್ರ ಎಂದು ಸಿಬ್ಬಂದಿಗಳು ಹೇಳುತ್ತಾರೆ. ಕೂಲಿನಾಲಿ ಮಾಡಿ ಜೀವನ ನಡೆಸುವ ಹಾಲಕ್ಕಿಗಳಂತಹ ದುಡಿವ ವರ್ಗಕ್ಕೆ ಇಷ್ಟೊಂದು ಹಣ ನೀಡಲು ಸಾಧ್ಯವಿಲ್ಲ. ಕೈಗಾ ಬಳಿ ಇರುವ ಹಾಲಕ್ಕಿಗಳ ಕೊಪ್ಪ ನಗೆ, ಕೋವೆ, ಬೇಳೂರಿನಲ್ಲಿ ಈ ಯೋಜನೆಯಿಂದ ಇವರ ಬಳಿ ದೇವರು, ಕುಲದೇವರು, ದೇವಸ್ಥಾನ, ಮನೆ, ಜಮೀನು ಎಲ್ಲಾ ವಶಪಡಿಸಿಕೊಳ್ಳಲಾಯಿತು. ಪರಿಹಾರಧನ ಇಂದಿಗೂ ದೊರೆತಿಲ್ಲ. ಕಾರವಾರದ ಬಳಿ ಇರುವ ಗುಡ್ಡಳ್ಳಿ ಎಂಬ ಹಾಲಕ್ಕಿ ಕೊಪ್ಪದಲ್ಲಿ 2006ರಂದು ವಿದ್ಯುತ್ ಸೌಲಭ್ಯವನ್ನು ಒದಗಿಸಲಾಯಿತು. ಈ ಇಸ್ವಿಯ ಹಿಂದಿನವರೆಗೂ ಈ ಕೊಪ್ಪಕ್ಕೆ ವಿದ್ಯುತ್ ಸೌಲಭ್ಯವಿರಲಿಲ್ಲ. ಹಾಗೆಯೇ ನಗೆ, ಕೋವೆ, ಬೇಳೂರು, ಕೈಗಾದಲ್ಲಿಯೇ ಇಂದಿಗೂ ಎಷ್ಟೋ ಹಾಲಕ್ಕಿ ಹಾಗೂ ಇತರ ಸಮುದಾಯಗಳಿಗೆ ವಿದ್ಯುತ್ ವ್ಯವಸ್ಥೆಯನ್ನು ಕಲ್ಪಿಸಲಾಗಿಲ್ಲ. ಸರ್ಕಾರ ಈ ಯೋಜನೆಗಳನ್ನು ಕೇವಲ ಖಾಸಗಿ ಉದ್ದೇಶಕ್ಕಾಗಿ ರೂಪಿಸುತ್ತಿದ್ದೆ ಹೊರತು ಸಾರ್ವಜನಿಕ ಉದ್ದೇಶಕ್ಕಾಗಿ ಅಲ್ಲ. ಯೋಜನೆಗಾಗಿ ಎಂದು ಸ್ಥಳಾಂತರಗೊಳಿಸಲಾಗಿರುವ ಹಾಲಕ್ಕಿ ಗಳಂತಹ ನೂರಾರು ಬುಡಕಟ್ಟುಗಳನ್ನು ಇನ್ನಿಲ್ಲದಂತೆ ನಾಶಗೊಳಿಸಲಾಗುತ್ತಿದೆ. ಕೈಗಾ ವಿದ್ಯುತ್ ಅಣುಸ್ಥಾವರ ಸ್ಥಾಪನೆಗೆ ಭೂಮಿಯನ್ನು ಕಳೆದುಕೊಂಡ ಹಾಲಕ್ಕಿಗಳು ಪರಿಹಾರವನ್ನು ಪಡೆಯಲಿಲ್ಲ. ಸ್ಥಳಾಂತರಗೊಂಡ ಇವರ ನಿವಾಸಗಳಿಗೆ ವಿದ್ಯುತ್ ಹರಿದುಬರಲಿಲ್ಲ.

**ಕೊಂಕಣ ರೈಲ್ವೆ ಯೋಜನೆ**

ಉತ್ತರ ಜಿಲ್ಲೆಗೆ ಬಂದ ಮತ್ತೊಂದು ಬೃಹತ್ ಯೋಜನೆಗಳಲ್ಲಿ ಕೊಂಕಣ ರೈಲ್ವೆ ಯೋಜನೆಯು ಒಂದು. "ಮಹಾರಾಷ್ಟ್ರದ ರೋಹಾದಿಂದ ಕರ್ನಾಟಕದ ಮಂಗಳೂರುವರೆಗೆ 760 ಕಿ.ಮೀ. ಉದ್ದದ ರೈಲುಮಾರ್ಗ ನಿರ್ಮಾಣವಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ 130 ಕಿ.ಮೀ. ಉದ್ದದ ರೈಲುಮಾರ್ಗ ಹೊಂದಿದೆ. ಕಾರವಾರ, ಅಂಕೋಲ, ಕುಮಟಾ, ಹೊನ್ನಾವರ ಮತ್ತು ಭಟ್ಕಳ ತಾಲ್ಲೂಕಿನ ಮೂಲಕ ಮಂಗಳೂರು ಸೇರುತ್ತದೆ. ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 17ರ ಪಕ್ಕದಲ್ಲಿ ಬೆಟ್ಟಗುಡ್ಡಗಳ ನಡುವೆ ಸಮುದ್ರ ತೀರದಲ್ಲಿ ಬ್ರಾಡ್‌ಗೇಜ್ ರೈಲುಮಾರ್ಗ ಹಾದು ಹೋಗಿದೆ." ಈ ಕೊಂಕಣ ರೈಲು ಯೋಜನೆ ಉತ್ತರ ಕನ್ನಡದ ಹಾಲಕ್ಕಿ ಕೊಪ್ಪಗಳನ್ನು ಹಾದು

ಹೋಗುವ ಪರಿಣಾಮವಾಗಿ ಹಾಲಕ್ಕಿ ಒಕ್ಕಲಿಗರ ಬಳಿ ಇದ್ದ ಮನೆ, ಜಮೀನುಗಳನ್ನು ಸರ್ಕಾರ ಪರಿಹಾರ ಧನ, ಪುನರ್ವಸತಿ ವ್ಯವಸ್ಥೆ, ಸರ್ಕಾರಿ ಉದ್ಯೋಗ ನೀಡುವ ಆಶ್ವಾಸನೆ ನೀಡಿ ಪಡೆಯಿತು. ಆದರೆ ಇಂದಿಗೂ ಸರ್ಕಾರ ಕೊಂಕಣರೈಲ್ವೆ ಯೋಜನೆಗಾಗಿ ಕಳೆದುಕೊಂಡ ಆಸ್ತಿಯ ಬದಲಿಗೆ ಪರಿಹಾರ ಧನವಿರಲಿ ಉದ್ಯೋಗ ಸಹ ಎಷ್ಟೋ ಹಾಲಕ್ಕಿಗಳಿಗೆ ನೀಡಿಲ್ಲ. ಸರ್ಕಾರ ಏನು ಈ ಮೊದಲು ಪರಿಹಾರ ಧನ ನೀಡುತ್ತೇವೆ ಎಂದು ಹೇಳಿತ್ತೋ ಅದನ್ನು 1 ಗುಂಟೆಗೆ 100–150 ರೂಪಾಯಿ ಮಾತ್ರ ನೀಡಿತು. ಅದು ಯಾರ ಬಳಿ ಸರ್ಕಾರ ರೂಪಿಸಿದ ದಾಖಲೆಪತ್ರವನ್ನು ಹೊಂದಿದ್ದಾರೋ ಅವರಿಗೆ ಮಾತ್ರ ಯಾರು ಹೊಂದಿಲ್ಲವೋ ಅವರನ್ನು ಬಲವಂತವಾಗಿ, ಒತ್ತಾಯವಾಗಿ ಇರುವ ಸ್ಥಳದಿಂದ ಎತ್ತಂಗಡಿ ಮಾಡಲಾಯಿತು. ಹಾಗೆಯೇ ಸರ್ಕಾರಿ ನೌಕರಿ ಬೇಕೆಂದರೆ ಯಾರು 8ನೇ ತರಗತಿ ಓದಿದ್ದಾರೋ ಅವರಿಗೆ ಮಾತ್ರ ಎಂದು ಘೋಷಿಸಿತು. ಆದರೆ ಬಹುಪಾಲು ಹಾಲಕ್ಕಿ ಒಕ್ಕಲಿಗರು ಯಾರೂ 8ನೇ ತರಗತಿಯವರೆಗೆ ಓದಿರಲಿಲ್ಲ. ಓದಿದ ಬೆರಳೆಣಿಕೆಯಷ್ಟು ಜನರಿಗೆ ಮಾತ್ರ ಉದ್ಯೋಗ ನೀಡಿತು. ಉಳಿದವರಿಗೆ ಸರ್ಕಾರಿ ಉದ್ಯೋಗ ನೀಡದೆ ಅನಕ್ಷರಸ್ಥರಾದ 'ನಿಮಗೆ ಸರ್ಕಾರಿ ಉದ್ಯೋಗ ನೀಡಲು ಸಾಧ್ಯವಿಲ್ಲ' ಎಂದು ಈ ಬಡ ಹಾಲಕ್ಕಿಗಳನ್ನು ಒತ್ತಾಯವಾಗಿ ಶತಮಾನಗಳ ಕಾಲದಿಂದ ಬಾಳಿದ ನೆಲದಿಂದ ಒಕ್ಕಲೆಬ್ಬಿಸಿತು.

ದೇಶದ ಅಭಿವೃದ್ಧಿಯಾಗಬೇಕು, ಆದ್ದರಿಂದ ಯೋಜನೆಗಳು ಅತ್ಯವಶ್ಯಕ ಎಂದು ಸರ್ಕಾರ ಜನ ವಿರೋಧ ವಿದ್ದರೂ ರೂಪಿಸುತ್ತದೆ. ಆ ಯೋಜನೆ ಆಶಯವೇನಿರಬೇಕೆಂದರೆ ಜನರ ಅಭಿವೃದ್ಧಿಯನ್ನು ಪರಿಗಣಿಸಬೇಕು. "ಮೂಲತಃ ಅಭಿವೃದ್ಧಿಯೆಂಬುಧು ಜನಕ್ಕೆ ಅವರ ಹಿತಕ್ಕೆ ಮತ್ತು ಪರಿಸರಕ್ಕೆ ಸಂಬಂಧಿಸಿದ್ದು. ಇಂತಿಷ್ಟು ಲಾಭ ತರುವ ಉದ್ಯಮವು ಅಸ್ತಿತ್ವಕ್ಕೆ ಬರುತ್ತೆಂಬುಧಷ್ಟೇ ಅಭಿವೃದ್ಧಿಯೆನಿಸಿ ಕೊಳ್ಳುವುದಿಲ್ಲ. ಸಾವಿರಾರು ಜನರನ್ನು ನಿರಾಶ್ರಿತರನ್ನಾಗಿಸಿ ಯಾವುದೋ ಕಂಪನಿಯ ಮಾಲೀಕರು ಲಕ್ಷಗಟ್ಟಲೆ ಡಾಲರುಗಳನ್ನು ಲಾಭವಾಗಿ ಪಡೆದುಬಿಟ್ಟರೆ ಅದು ವಿಶ್ವಾಸನೀಯ ಅಭಿವೃದ್ಧಿಯಲ್ಲ. ನಮ್ಮ ದೇಶದ ಆರ್ಥಿಕ ಬೆನ್ನೆಲುಬನ್ನು ಗಟ್ಟಿಗೊಳಿಸಿ ಸ್ವಾವಲಂಬನೆಗೆ ಹಾದಿ ಮಾಡಿಕೊಡಬೇಕಾದ್ದು ಯಾವುದೇ ಯೋಜನೆಯ ಕನಿಷ್ಠ ಲಕ್ಷಣವಾಗಿರಬೇಕು."[14] ಸರ್ಕಾರ ರೂಪಿಸುವ ಹಾಗೂ ಈಗಾಗಲೇ ರೂಪಿಸಿದ ಯೋಜನೆಗಳನ್ನು ಇಂದು ಜನವಿರೋಧ ವ್ಯಕ್ತಪಡಿಸುವ ಹಲವಾರು ಘಟನೆಗಳು ಸಾಮಾನ್ಯವಾಗಿ ಎಲ್ಲೆಡೆ ನಡೆಯುತ್ತವೆ. ನಂದಗುಡಿಯಲ್ಲಿನ ವಿಶೇಷ ಆರ್ಥಿಕ ವಲಯದ ಯೋಜನೆ, ಕೈಗಾ, ತದಡಿ, ಕೊಂಕಣರೈಲ್ವೇ, ಚಾಮಲಾಪುರದ ಶಾಖೋತ್ಪನ್ನ ವಿದ್ಯುತ್ ಯೋಜನೆ, ನರ್ಮದಾ ಅಣೆಕಟ್ಟುಗಳು, ಹೈವೇ ರಸ್ತೆ, ಕಾರ್ಖಾನೆಗಳ ಸ್ಥಾಪನೆ ಮುಂತಾದ ನೂರಾರು ಯೋಜನೆಗಳ ಸಂಬಂಧಿ ಚಳವಳಿಗಳು, ವಿರೋಧಗಳು ನಡೆದಿವೆ, ನಡೆಯುತ್ತಿವೆ. ಕಾರಣ ಸರ್ಕಾರ ದೇಶಾಭಿವೃದ್ಧಿ ಆಗಬೇಕೆಂದು ಹೇಳುತ್ತದೆ. ಆದರೆ "ವಿಶೇಷ ಆರ್ಥಿಕ ವಲಯವು ಅಭಿವೃದ್ಧಿ ಯೋಜನೆಯಲ್ಲ; ಅದು ಲೂಟಿಯ ಯೋಜನೆ. ಅವಾಂತರ ಸೃಷ್ಟಿಸುವ ಯೋಜನೆ ಮತ್ತು ದೇಶದ ಜನಸಾಮಾನ್ಯರಿಗೆ ಕುತ್ತುಂಟುಮಾಡುವ

ಯೋಜನೆ. ಅಲ್ಲಿ ಔದ್ಯಮಿಕ ಉತ್ಪಾದನೆಗೆ ಆದ್ಯತೆ ಇರುವುದಿಲ್ಲ. ಉದ್ಯಮದ ಸೋಗಿನಲ್ಲಿ ಐಷಾರಾಮಿ ಜೀವನಕ್ಕೆ ಬೇಕಾದ ಸೌಲಭ್ಯಗಳ ನಿರ್ಮಾಣವು ಅದರ ಪ್ರಮುಖ ಆಶಯ. ವಿವೇಚನೆ ಮಾಡಿದರೆ ನಮ್ಮ ಇಲ್ಲಿಯವರೆಗಿನ ದೊಡ್ಡ ಉದ್ಯಮಗಳು ಎಷ್ಟು ಭೂಮಿಯನ್ನು ಪಡೆದವೆಂಬುಧು ತಿಳಿಯುತ್ತದೆ. ಭೀಲೈ ಆಗಲಿ, ರೂರ್ಕೆಲ ಆಗಲಿ, ಭದ್ರಾವತಿ ಕಾರ್ಖಾನೆಯಾಗಲಿ ಸಾವಿರಾರು ಎಕರೆ ಭೂಮಿಯನ್ನು ಪಡೆಯಲಿಲ್ಲ. ಬೆಂಗಳೂರಿನ ಖಾಸಗಿ ಕಂಪನಿ ಮೈಕೋ ಎಷ್ಟು ಭೂಮಿಯನ್ನು ಹೊಂದಿ ಉತ್ಪಾದನಾ ಕಾರ್ಯದಲ್ಲಿ ತೊಡಗಿದೆ? ಆ ಪ್ರಮಾಣದ ಉತ್ಪಾದನೆಗೆ ಅಷ್ಟು ಭೂಮಿ ಸಾಕಾಗುವುದಾದರೆ ವಿಶೇಷ ಆರ್ಥಿಕ ವಲಯದ ಕೋಡೇನು? ಅದಕ್ಕೆ ಐದು, ಹತ್ತು ಸಾವಿರ ಎಕರೆಗಳ ಭೂಮಿ ಬೇಕು?"[15] ಇಂದು ಸೀಬರ್ಡ್ ನೌಕಾನೆಲೆ ಸ್ಥಳದ ಬಳಿ ನೋಡಿದರೆ ಇಡೀ ಜಾಗದ ಮೂರನೆಯ ಒಂದು ಭಾಗದಲ್ಲಿ ಇಲಾಖೆಯ ಮುಖ್ಯ ಕಛೇರಿಗಳಿವೆ. ಮಿಕ್ಕ ಜಾಗದಲ್ಲಿ ಬಂಗಲೆಗಳು, ಬಹು ಅಂತಸ್ತಿನ ಕಟ್ಟಡಗಳು. ಆಟದ ಮೈದಾನ, ಗಾಲ್ಫ್, ಈಜುಕೊಳ, ಜೂಜಾಟಕ್ಕೆ ಬೇಕಾದ ಕಟ್ಟಡಗಳು. ಎಂಥದೋ ಶಿಕ್ಷಣ ಕೇಂದ್ರ ಮುಂತಾದವು ಇವೆ. ಇಂಥದಕ್ಕೆಲ್ಲಾ ಭೂಮಿಯನ್ನು ವ್ಯರ್ಥ ಮಾಡಲಾಗುತ್ತಿದೆ. ಆದರೆ ಒಂದು ಇಂಚು ಭೂಮಿಯನ್ನು ಹೀಗೆ ಉಪಯೋಗಿಸುವ ಸಂದರ್ಭದಲ್ಲಿ ಹಾಲಕ್ಕಿಗಳಂತಹ ಸಮುದಾಯಕ್ಕೆ ಕೊಪ್ಪದಲ್ಲಿ ಒಂದು ಚಿಕ್ಕ ಪ್ರಾಥಮಿಕ ಶಾಲೆ, ಆಸ್ಪತ್ರೆ, ಮಕ್ಕಳಿಗೆ ಆಟದ ಮೈದಾನ, ಕುಡಿಯುವ ನೀರು, ರಸ್ತೆ, ಅಂಗಡಿ, ಮುಂತಾದ ಜೀವನಾವಶ್ಯಕ ಮೂಲಭೂತ ಸೌಲಭ್ಯ ಕಲ್ಪಿಸುವ ಮನೋಭಾವ ಏಕೆ ಇಲ್ಲ.

## ಮ್ಯಾಸಬೇಡ ಮತ್ತು ಕಾಡುಗೊಲ್ಲರ ಸೀಮಾವಲಯ ಕಸಿದುಕೊಂಡ ಕೇಂದ್ರ ಸರ್ಕಾರ

ಮ್ಯಾಸಬೇಡ ಮತ್ತು ಕಾಡುಗೊಲ್ಲ ಪಶುಪಾಲನಾ ಆದಿವಾಸಿಗಳ ಸಂಸ್ಕೃತಿ ಒಟ್ಟು ವಿಕಾಸ, ನಂಬಿಕೆ, ಆಚರಣೆ, ಉಪಾಸನೆ, ದೈವಗಳು ಎಲ್ಲಾ ಅವರ ಸಮಗ್ರ ಸಾಮಾಜಿಕ ಬದುಕು ಪಶುಗಳ ಸುತ್ತಲೂ ಕೇಂದ್ರೀಕೃತವಾಗಿವೆ. ಹಾಗಾಗಿ ಬಹುತೇಕ ಅವರ ದೈವಗಳು ಎತ್ತುಗಳೇ. ದೇವರೆತ್ತು ಹಾಗೂ ಎತ್ತುಗಳ ರಕ್ಷಣೆಗಾಗಿ ಕಾಡುಪ್ರಾಣಿಗಳಿಂದ ಮತ್ತು ವೈರಿಗಳಿಂದ ಹೋರಾಡಿದ ವೀರರು ದೈವಸ್ಥಾನಕ್ಕೇರಿ ಪೂಜಿಸಲ್ಪಡುತ್ತಿದ್ದಾರೆ. ಈ ಎರಡು ಸಮುದಾಯಗಳ ಪೂರ್ಣಗಡಿ ಮತ್ತು ಸೀಮಾಪದ್ಧತಿಯ ಸೀಮೆ ಸಂಪೂರ್ಣ ಬಯಲುಸೀಮೆಯ ಕುರುಚಲು ಕಾಡು ಮತ್ತು ಹುಲ್ಲುಗಾವಲುಗಳೇ ಆಗಿವೆ. ಈ ಎರಡೂ ಸಮುದಾಯಗಳ ಪ್ರಮುಖ ಸಾಂಸ್ಕೃತಿಕ ಸೀಮಾವಲಯದ ಕೇಂದ್ರ ಚಿತ್ರದುರ್ಗ ಜಿಲ್ಲೆಯಾಗಿದ್ದು ಅಕ್ಕಪಕ್ಕದ ಶಿವಮೊಗ್ಗ, ಬಳ್ಳಾರಿ, ತುಮಕೂರು ಜಿಲ್ಲೆಗಳ ಗಡಿ ತಾಲ್ಲೂಕುಗಳಲ್ಲಿ ಈ ಎರಡು ಸಮುದಾಯಗಳೂ ನೆಲೆಸಿದ್ದಾರೆ. ಚಿತ್ರದುರ್ಗದ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಮತ್ತು ಹಿರಿಯೂರು ತಾಲ್ಲೂಕು ಈ ಸಮುದಾಯಗಳ ಕೇಂದ್ರ ಬಿಂದು ಎಂದೇ ಹೇಳಬಹುದು. ಕುಣಬಿ, ಹಾಲಕ್ಕಿ ಸಿದ್ದಿಗಳು ಮತ್ತು ಜೇನುಕುರುಬ, ಬೆಟ್ಟಕುರುಬ ಹಾಗೂ ಸೋಲಿಗರ ಸೀಮಾಪದ್ಧತಿ ಆಚರಣೆ ಮತ್ತು ವಲಯಗಳಿಗೂ

ಪಶುಪಾಲನಾ ಸಮುದಾಯದ ಆದಿವಾಸಿ ಸೀಮಾಪದ್ಧತಿ ಮತ್ತು ವಲಯಗಳಿಗೂ ಬಹಳಷ್ಟು ವ್ಯತ್ಯಾಸಗಳಿವೆ. ಮೊದಲು ಹೆಸರಿಸಿದ ಸಮುದಾಯಗಳಲ್ಲಿ ಹಾಡಿಗಳು ಕೇಂದ್ರದಲ್ಲಿದ್ದ ಸುತ್ತಲೂ ಕಾಡಿನ ನಿರ್ದಿಷ್ಟ ಆವೃತ್ತದ ಪ್ರದೇಶ ಸೀಮಾವಲಯವಾಗಿದ್ದರೆ, ಪಶುಪಾಲನಾ ಆದಿವಾಸಿ ಸಮುದಾಯದಲ್ಲಿ ಹಾಡಿಗಳು ಸೀಮಾವಲಯಗಳು ಪ್ರತ್ಯೇಕವಾಗಿರುತ್ತಾರೆ. ಕಾವಲ, ಗೋಮಾಳಗಳೆಂದು ಕರೆಸಿಕೊಳ್ಳುವ ಜಾಗಗಳು, ಮ್ಯಾಸಬೇಡರ ಮತ್ತು ಕಾಡುಗೊಲ್ಲರ ಮೂಲ ಸೀಮಾಗಡಿ ಕ್ಷೇತ್ರಗಳಾಗಿದ್ದವು. ಆ ಸೀಮಾಕ್ಷೇತ್ರದ ಮೂಲ ಒಡೆಯರು ಅವರೇ ಆಗಿದ್ದರು. ಯಾವಾಗ ವಸಾಹತುಶಾಹಿ ಬ್ರಿಟಿಷರು ಭಾರತವನ್ನಾಕ್ರಮಿಸಿ ಆಳ್ವಿಕೆ ಶುರುಮಾಡಿದರೋ ಆಗ ವಾರ್ನ್ ಹೇಸ್ಟಿಂಗ್ ಪಿತೂರಿಯ ಭಾಗವಾಗಿ ತಂದ ಭೂನಿಯಂತ್ರಣಕಾಯ್ದೆ(Land regulating Act -1792) 1792-1830 Indian Forest Act) ಪ್ರಕಾರ ಯಾರು ಜಮೀನನ್ನು ಕೃಷಿಗಾಗಿ ಉಳುಮೆ ಮಾಡುತ್ತಿದ್ದಾರೋ, ಅವರು ದಾಖಲೆಗೊಳಿಸಿ ಕೊಟ್ಟ ಅದನ್ನು ಹೊರತುಪಡಿಸಿದ ಉಳಿದ ಯಾವುದೇ ಪ್ರದೇಶ ಆಡಳಿತದ ಆಳ್ವಿಕೆಯ ಸ್ವತ್ತಾಗಿದೆ ಎಂದು ಘೋಷಿಸಿಬಿಟ್ಟಿತು. ಹಾಗಾಗಿ ಈ ಸಮುದಾಯಗಳು ಪಶು ಮೇಯಿಸಲು ಬಳಸಲಾಗುತ್ತಿದ್ದ ಸಂಪೂರ್ಣ ಅವರ ಸೀಮಾಕ್ಷೇತ್ರ, ಆಡಳಿತದ ವಶಕ್ಕೆ ಪಡೆದು ಸರ್ಕಾರಿ ಪಡವೆಂದು ಮಾರ್ಪಾಟು ಮಾಡಿಕೊಂಡ ಕಾರಣ, ಅವರ ಸೀಮಾಪ್ರದೇಶಗಳಿಂದ ಕಾವಲಿಗಳು ಮತ್ತು ಗೋಮಾಳ ಸರ್ಕಾರದ ಸ್ವಾಧೀನ ಪ್ರದೇಶಗಳಾಗಿ ಮಾರ್ಪಟ್ಟವು. ಇವುಗಳು ಸರ್ಕಾರದ ಸ್ವಾಧೀನ ಪ್ರದೇಶಗಳೆಂದು ದಾಖಲೆಗಳಾದರೂ ಈ ಪ್ರದೇಶಗಳು ಸಮುದಾಯಕ್ಕೆ ದನಕರುಗಳು ಮೇಯಿಸಿಕೊಳ್ಳಲು ಕಾಯ್ದಿರಿಸಲಾಗಿದೆ ಎಂದೇ ಆದೇಶಗಳ ಹೊತ್ತು, ಆಚರಣೆಗಳಲ್ಲಿ ಪಿತೂರಿಗಳನ್ನು ನಡೆಸಿಬಿಟ್ಟರು. ಇಂತಹ ಎಷ್ಟೋ ಗೋಮಾಳ, ಕಾವಲಿಗಳು ಅಭಿವೃದ್ಧಿ ಹೆಸರಲ್ಲಿ ಅತಿಕ್ರಮಣವಾಗಿವೆ. ಅನಧಿಕೃತವಾಗಿ ಉಳ್ಳವರು ಈಗಾಗಲೇ 75% ಪ್ರದೇಶವನ್ನು ಅತಿಕ್ರಮಣ ಮಾಡಿಕೊಂಡಾಗಿದೆ.

ಮ್ಯಾಸಬೇಡ ಮತ್ತು ಕಾಡುಗೊಲ್ಲರಿಗೆ ಸಂಬಂಧಪಟ್ಟಂತೆ ಚಳ್ಳಕೆರೆ ಮತ್ತು ನಾಯಕನಟ್ಟಿ ಸುತ್ತಲಿರುವ ಸಾವಿರಾರು ಎಕರೆಯ ಕಮರದ ಕಾವಲಿಗಳು ಈ ಸಮುದಾಯದ ಸೀಮಾಪ್ರದೇಶವಾಗಿತ್ತು. ಅಲ್ಲಿ ಕಳೆದೆರಡು ವರ್ಷದ ಹಿಂದಿನಿಂದಲೂ 150 ಹಟ್ಟಿಗಳ ಆದಿವಾಸಿ ದನಗಳು ಮತ್ತು ಕುರಿ ಮೇಕೆಗಳು ಅಲ್ಲಿ ಹುಲ್ಲು ಸೊಪ್ಪು ಮೇಯುತ್ತಿದ್ದವು. ಕೆಲವು ದಶಕಗಳ ಹಿಂದೆ ಪಶುಪಾಲನಾ ಇಲಾಖೆಯು ಕುರಿ ಸಂರಕ್ಷಣಾ ಕೇಂದ್ರ ಹಾಗೂ ಅಮೃತ ಕಾವಲ್ ತಳಿಗಳ ಅಭಿವೃದ್ಧಿ ಕೇಂದ್ರವನ್ನಾಗಿ ಸಮುದಾಯದ ದನಕರು ಕುರಿಗಳ ಜೊತೆಜೊತೆಯಾಗಿ ಪಾಲನೆ ನಡೆಸುತ್ತಿತ್ತು. ಆದರೆ 2010 ಡಿಸೆಂಬರ್ 15ರಂದು ಕೇಂದ್ರ ಸರ್ಕಾರದ ಅಭಿವೃದ್ಧಿಯ ಕೆಂಗಣ್ಣಿಗೆ ಸಾವಿರಾರೂ ಸುಂದರ ಬಯಲು ಸೀಮೆ ಬಿತ್ತು. ಚಳ್ಳಕೆರೆ ವಾಯುಯಾನ ಪರೀಕ್ಷಾವಲಯ(Challakere Aeronautical Test Range-ATR)ನ ಹೆಸರಲ್ಲಿ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ(Defence Research and Development Organization), ಬಾಬಾ ಅಣು ಸಂಶೋಧನಾ ಕೇಂದ್ರ(Baba atomic research center

–BARC) ಭಾರತೀಯ ವಿಜ್ಞಾನ ಸಂಸ್ಥೆ(Indian Institute of Science –IISC) ಮತ್ತು ಭಾರತ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ(Indian space Research organization-ISRO) ಇವು ಒಟ್ಟಿಗೆ ಅಮಾಯಕ ಆದಿವಾಸಿಗಳ ಸೀಮಾಪ್ರದೇಶಕ್ಕೆ ಮುಗಿ ಬಿದ್ದು ಅವರ ಸೀಮಾಕ್ಷೇತ್ರಗಳಾದ ವರವೂ ಕಾವಲ್, ಕಮರದ ಕಾವಲ್ ಮತ್ತು ಅಮೃತ್‌ಮಹುಲ್ ಕಾವಲ್ ಪ್ರದೇಶಗಳನ್ನು ಯಾವ ಸೂಚನೆಗಳನ್ನು ನೀಡದೆ ಕಸಿದುಕೊಂಡಿತು. ಬಹಳ ರಹಸ್ಯ ತಂತ್ರದಲ್ಲಿ ತಮ್ಮ ಅಭಿವೃದ್ಧಿ ಕಾರ್ಯಚಟುವಟಿಕೆಗಳನ್ನು 8000 ಸಾವಿರ ಎಕರೆ ಬೃಹತ್ ಮಟ್ಟದ ಸೀಮಾವಲಯದಲ್ಲಿ ನಡೆಸಲು ಶುರುವಿಟ್ಟುಕೊಂಡಿತು. ಹೀಗಾಗಿ ಚಿತ್ರದುರ್ಗ ಜಿಲ್ಲೆಗೀಗ ಭಾರತ ದೇಶದಲ್ಲೆ ಇಂತಹ ಆಗಾಧವಾದ ಜಾಗದಲ್ಲಿ ಬೃಹತ್ ರಕ್ಷಣಾ ವೈಜ್ಞಾನಿಕ ಪ್ರಾಯೋಗಿಕ ಕೇಂದ್ರವೆಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದು ಭಾರತದ ಅತಿದೊಡ್ಡ 'ವಿಜ್ಞಾನದ ಗುಂಬ'(Indians largest science hubs) ಎಂಬ ಕೀರ್ತಿಗೆ ಒಳಗಾಗಿದೆ. ಈ ಕಾರಣ ಚಿತ್ರದುರ್ಗ ಕೋಟೆ ಪ್ರಖ್ಯಾತ ಜಿಲ್ಲೆಯ ಮುಡಿಗೆ ಮತ್ತೊಂದು ಕಿರೀಟವಾಗಿ 'ವಿಜ್ಞಾನಗರಿ' ಎಂಬ ಹಣೆಪಟ್ಟಿಯ ಪಟ್ಟ ಕಟ್ಟಲಾಗಿದೆ.

**ಕೋಷ್ಟಕ 7**

**ಡಿಆರ್‌ಡಿಓ, ಯೋಜನೆಗಾಗಿ ಮ್ಯಾಸಬೇಡರು ಕಳೆದುಕೊಂಡ ಸೀಮಾ ವಲಯ**

| ಕ್ರ.ಸಂ. | ವಿಜ್ಞಾನ ಸಂಸ್ಥೆಗಳು | ಪ್ರದೇಶ | ಸೌಲಭ್ಯಗಳು |
|---|---|---|---|
| 1 | IISC | 1,500 ಎಕರೆಗಳು | ಪ್ರಯೋಗಾಲಯಗಳು, ವಿಶೇಷ ಸಂಶೋಧನ ಕೇಂದ್ರಗಳು ಮತ್ತು ವಸತಿಗೃಹಗಳು laboratories, specialization research centre & Hostels |
| 2 | ISRO | 473 ಎಕರೆಗಳು | ಸಂವಹನ ಮತ್ತು ದೂರ ಸಂವೇದಿ ಸೌಲಭ್ಯಗಳು(Communication and remote research facilities) |
| 3 | DRDO | 4,290 ಎಕರೆಗಳು | ವ್ಯಾಪಕ ವಾಯುಯಾನ ಪರೀಕ್ಷ ಘಟಕ (Extensive eronantical testing range) |
| 4 | BARC | 1,810 ಎಕರೆಗಳು | ವಸ್ತುಗಳ ಪುಷ್ಟೀಕರಣ ಸೌಲಭ್ಯಗಳು (Material enrichment facility) |
| | **ಒಟ್ಟು 04 ಸಂಸ್ಥೆಗಳು** | **8073 ಎಕರೆಗಳು** | |

ಆಧಾರ: https://en.m.wikipedia.org/wiki/chithradurga_Aeronauti- cal_Test_Range

ಆದಿವಾಸಿಗಳ ಮೂಲ ಹಕ್ಕುಗಳ ಮತ್ತು ಮಾನವ ಹಕ್ಕುಗಳನ್ನು ಗಾಳಿಗೆ ತೂರಿ, ಕನಿಷ್ಠಮಟ್ಟದ ಕಾರ್ಯವಿಧಾನಗಳನ್ನು ರೂಪಿಸದೆ ಮತ್ತು ಜಿಲ್ಲಾಧಿಕಾರಿಗಳ ಮೂಲಕ ನಡೆಸಬೇಕಾಗಿದ್ದ ಸಾರ್ವಜನಿಕ ಅಹವಾಲು ಮತ್ತು ಅನುಮತಿಯನ್ನು ಪಡೆಯದೆ, ಶತಶತಮಾನಗಳಿಂದ ಬುಡಕಟ್ಟುಗಳ ಕಸುಬು ಮತ್ತು ಅವರ ಸಾಮಾಜಿಕ ಜೀವದ ಭಾಗವೇ ಆಗಿದ್ದ ಅವರ ಸೀಮಾಪದ್ಧತಿಯ ವಲಯಲಾಗಿದ್ದ 8073 ಸಾವಿರ ಎಕರೆ ಕಾವಲಿ ಪ್ರದೇಶವನ್ನು ಚಳ್ಳಕೆರೆಯಿಂದ 10 ಕಿ.ಮೀ. ನಾಯಕನಹಟ್ಟಿ, ನೇರ್ಲಗುಂಟೆ ಮತ್ತು ದೊಡ್ಡಳ್ಳಾರ್ತಿ ಆದಿವಾಸಿಗಳ ಬೃಹತ್ ಹುಲ್ಲುಗಾವಲು ಪ್ರದೇಶವನ್ನು ಕಸಿದು ರಕ್ಷಣಾ ಕೋಟೆ ಹಾಕಿಕೊಂಡು 'ನಿಷೇಧಿತ ಪ್ರದೇಶವೆಂದು' ಆದಿವಾಸಿಗಳನ್ನು ನಿರ್ಬಂಧಿಸಿದ್ದಾರೆ.

**BARC**: ಉತ್ತರ ಕನ್ನಡ ಜಿಲ್ಲೆಯ ಕೈಗಾ ಅಣುಸ್ಥಾವರದ ನಂತರದ ಕರ್ನಾಟಕದ ದೊಡ್ಡ ಅಣುಸ್ಥಾವರ ಚಳ್ಳಕೆರೆಯಿಂದ 10 ಕಿ.ಮೀ. ದೂರದ ಕಲ್ಯಾಣದುರ್ಗ ರಸ್ತೆಯಲ್ಲಿರುವ ದೊಡ್ಡುಳ್ಳಾರ್ತಿಯಲ್ಲಿ BARC ತಲೆ ಎತ್ತಿದೆ. ಅಲ್ಲಿ ಅಣುವಿಕರಣಕ್ಕೆ ಕಾರಣವಾಗುವ ಯುರೇನಿಯಂ, ಥೋರಿಯುಂಗಳನ್ನು ಅಣುಘಟಕಗಳ ಇಂಧನವನ್ನು ಪುಷ್ಟೀಕರಣಗೊಳಿಸಲು ಉಪಯೋಗಿಸಲ್ಪಡುತ್ತದೆ.

**ISRO**: ಮತ್ತೊಂದು ಸಂಸ್ಥೆ ಇಸ್ರೋ. ಈ ಪ್ರದೇಶದಲ್ಲಿ ಸಂವಹನ ಮತ್ತು ದೂರ ಸಂವೇದಿ ಘಟಕವನ್ನು ಸ್ಥಾಪಿಸಿದೆ. ಅದು ಹೈದರಾಬಾದಿನಲ್ಲಿರುವ ರಾಷ್ಟ್ರೀಯ ದೂರ ಸಂವೇದಿ ಏಜೆನ್ಸಿಯಷ್ಟೆ ಸರಿ ಸಮನಾಗಿದ್ದು ಯುಎಸ್ಎ ಮತ್ತು ಯುರೋಪಿನ High volume of data transmission ಜೊತೆ ಸಂಪರ್ಕ ಹೊಂದಿದೆ ಎಂದು ಹೇಳಲಾಗುತ್ತಿದೆ.

**IISC**: ಭಾರತೀಯ ವಿಜ್ಞಾನ ಸಂಸ್ಥೆಯು ಬೃಹದಾಕಾರದ ಅಯಸ್ಕಾಂತೀಯ ಆವರಣದ ದೊಡ್ಡ ಕೊಳವೆಗಳನ್ನು ನೆಲದೊಳಗೆ ಹುದುಗಿಸಿದ ಟನಲ್‌ಗಳನ್ನು ನಿರ್ಮಿಸಿ ಅದರಲ್ಲಿ ಎಲೆಕ್ಟ್ರಾನ್ ಮತ್ತು ಪ್ರೋಟಾನ್‌ಗಳನ್ನು ವಿದ್ಯುತ್ ಪೂರಣಗೊಳಿಸಿ(Charged) ಬೆಳಕು ವಿದ್ಯುತ್ ಆವರಣದಲ್ಲಿ ತ್ವರಿತಗತಿಯಲ್ಲಿ ಓಡುವಂತೆ ಮಾಡುವ ವ್ಯವಸ್ಥೆ ಇದಾಗಿದೆ. ಊಹಿಸಲಾಗದ ನೂರಾರು ಮೀಟರ್ ಸುತ್ತಳತೆಯ ವ್ಯಾಸವುಳ್ಳ ಟನಲ್ ಇದಾಗಿದ್ದು, ಹಲವು ವೈಜ್ಞಾನಿಕ ಪ್ರಯೋಗಗಳನ್ನು ಇದು ನಡೆಸುತ್ತದೆಯಂತೆ. ಈ ಸಮಗ್ರ ಪ್ರಯೋಗದ ಸಲಕರಣೆಗೆ ಸಿಂಕ್ರೋಟ್ರಾನ್(Synchrotron) ಎಂದು ಕರೆಯುತ್ತಾರೆ. ಇದು 100 ಎಕರೆಯಲ್ಲಿ ವೃತ್ತಾಕಾರದ ದೊಡ್ಡ ಟನಲ್‌ನೊಳಗಿನ ಕೊಳವೆಯಲ್ಲಿ ಇದನ್ನು ಅಳವಡಿಸಲಾಗಿದೆ. ಇದೇ ತರಹದ ಅಯಸ್ಕಾಂತೀಯ ಘಟಕವು ಜಿನೆವಾ(Geneva) ದಲ್ಲಿನ CERN ನಡೆಸುತ್ತಿದೆ ಎಂದು ತಿಳಿದುಬಂದಿದೆ. ಇದು ಮೂಲವಸ್ತು ವಿಜ್ಞಾನ ಮತ್ತು ಜೀವಶಾಸ್ತ್ರ ಜೊತೆ 2.5ರಿಂದ 6 ಗಿಗಾ ಎಲೆಕ್ಟ್ರಾನ್ ವೋಲ್ಟ್ಸ್ ಹೊಂದಿರುವ ಶ್ರೇಣಿಯ ಮಹತ್ವ ಇದಕ್ಕಿದೆ ಎಂದು ತಿಳಿದುಬಂದಿದೆ.

DRDO 4,290 ಎಕರೆ ನಾಯಕನ ಹಟ್ಟಿ ಹತ್ತಿರದ ವರವೂ ಕಾವಲ್ ಮತ್ತು ಕಮರದ ಕಾವಲಿನ ಗೋಮಾಳದ ಪ್ರದೇಶ ಕಸಿದು 120 ಮಿಲಿಯನ್ ಕೋಟಿ ವೆಚ್ಚದಲ್ಲಿ ಈಗಾಗಲೇ ಶುರುವಾಗುತ್ತಿರುವ ವಿಮಾನ ರಕ್ಷಣಾ ಪರೀಕ್ಷೆ ಪ್ರಯೋಗಾಲಯ ಘಟಕವು(DRDO) 2008ರಲ್ಲೆ ಗುಪ್ತವಾಗಿ ಸಂಧಾನ ಮಾಡಿಕೊಳ್ಳಲಾಗಿತ್ತೆಂದು ತಿಳಿದು ಬಂದಿದ್ದು, 2010 ಡಿಸೆಂಬರ್ 15ರಲ್ಲಿ ಸಕ್ರಿಯವಾಗಿ ಕೆಲಸ ನಿರ್ವಹಿಸಲು ಶುರುಮಾಡಿ 28 ಮೇ 2017 ಕೇಂದ್ರ ಸರ್ಕಾರದ ರಕ್ಷಣಾ ಮತ್ತು ಆರ್ಥಿಕ ಖಾತೆಯ ಮಂತ್ರಿ ಅರುಣ್ ಜೇಟ್ಲಿ ಮೂಲಕ ಉದ್ಘಾಟನೆಗೊಂಡಿದೆ. ಈ ಯೋಜನೆಗೆ ಮುಂದೆ 1300 ಕೋಟಿ ಹಣ ವ್ಯಯವಾಗಲಿದೆ ಎಂದು ಅಂದಾಜಿಸಲಾಗಿದೆ.

ಮೇಲಿನ ನಾಲ್ಕು ಯೋಜನೆಗಳನ್ನು ಈಗಾಗಲೇ ಪ್ರಸ್ತಾಪಿಸಿಸಿರುವಂತೆ ಚಳ್ಳಕೆರೆ ವೈಮಾನಿಕ ಪರೀಕ್ಷಾ ವಲಯ(Challakere Aeronantical Test Range-ATR) ಎಂದು ಒಂದೇ ಸಾಮಾನ್ಯ ಹೆಸರಲ್ಲಿ ಕರೆಯುತ್ತಾರೆ. ಆದರೆ ರಕ್ಷಣಾ ಮಂತ್ರಾಲಯದ "ರಹಸ್ಯವಾದ ಪದನಾಮ ಹೆಸರಿಲ್ಲದ ವೈಮಾನಿಕ ವಾಹನ (unnamed aerial -UAV programme) ಕಾರ್ಯಕ್ರಮವೆಂದು ನಾಮಕರಣ ಮಾಡಲಾಗಿದೆಯೆಂದು ತಿಳಿದುಬಂದಿದೆ.

ಅಭಿವೃದ್ಧಿ, ರಾಷ್ಟ್ರದ ಹಿತಾಸಕ್ತಿಯ ರಾಷ್ಟ್ರದ ರಕ್ಷಣೆ ಮತ್ತು ವಿಜ್ಞಾನದ ಪ್ರಯೋಗಗಳ ನೆಪ ಮಾಡಿ ಮೇಲಿನ ಎಲ್ಲಾ ತರಹದ ಸಂಸ್ಥೆಗಳನ್ನು ಏಕಕಾಲಕ್ಕೆ ಒಂದೇ ಪ್ರದೇಶದಲ್ಲಿ ತಂದು ಅಡಕಿಸುತ್ತಿರುವ ಕೇಂದ್ರ ಸರ್ಕಾರದ ಧೋರಣೆ, ಆದಿವಾಸಿ ಮತ್ತು ಚಳ್ಳಕೆರೆ ಸುತ್ತಲೂ ಸಾಮಾನ್ಯ ಜನರಲ್ಲಿ ಗಾಬರಿ, ಭಯ ಮತ್ತು ಆತಂಕಗಳನ್ನು ಸೃಷ್ಟಿಸಿವೆ. ಪ್ರಸ್ತುತಕಾಲಮಾನದಲ್ಲಿ ತಮ್ಮ ಮೂಲಕಸುಬು ಪಶುಪಾಲನಾ ವೃತ್ತಿಗೆ ದನಕರುಗಳನ್ನೇ ನಂಬಿಕೊಂಡಿರುವ ಈ ಸಮುದಾಯಗಳ ಗೋವುಗಳಿಗೆ ಮೇಯಿಸಲಿದ್ದ ಅವರ ಸೀಮಾವಲಯದ ಕಮರದ ಕಾವಲು ಸಾವಿರಾರು ಎಕರೆಗಳನ್ನು ನಿರ್ದಯವಾಗಿ ಕಸಿದುಕೊಂಡ ಕಾರಣ ದಿಕ್ಕು ತೋಚದಂತಾದ ಆದಿವಾಸಿಗಳ ಬದುಕು ಡೋಲಾಯಮಾನವಾಗಿ ಅತಂತ್ರಕ್ಕೊಳಗಾಗಿದ್ದಾರೆ. ಪ್ರತಿ ಹಟ್ಟಿಗಳಲ್ಲಿರುವ ನೂರಾರು ದೇವರೆತ್ತುಗಳಿಗೆ ಮೇಯಿಸಲು ಜಾಗವಿಲ್ಲ. ಇತ್ತ ಅವರ ಗೋಮಾಳ ಕಸಿದುಕೊಂಡ ಕೇಂದ್ರ ಆಡಳಿತಕ್ಕೆ ಕನಿಷ್ಠ ಬದಲಿ ವ್ಯವಸ್ಥೆ ಕಲ್ಪಿಸುವ ವ್ಯವಧಾನವೂ ಇಲ್ಲ. ರಾಜಕೀಯವಾಗಿ ಅಸಂಘಟಿತರಾದ ಅಮಾಯಕ ಸಮುದಾಯಗಳಿಗೆ ತಮ್ಮ ನೋವು, ಅಳಲುಗಳನ್ನು ತೋಡಿಕೊಂಡು ಹಕ್ಕಿಗಾಗಿ ಪ್ರತಿಭಟಿಸುವ ದಾರಿ ಮತ್ತು ಧೈರ್ಯಗಳಿಲ್ಲ. ದೇವರೆತ್ತುಗಳ ಪಾಲನೆಗಾಗಿ ಪಟ್ಟಾಭಿಷೇಕಗೊಂಡ ಕೀಲಾರಿಗಳು, ಪಟ್ಟದ ಪೂಜಾರಿಗಳು, ಹಾಲಿನ ಉತ್ಪಾದನೆಯಲ್ಲಿ ಜೀವನ ಸಾಗಿಸುತ್ತಿದ್ದ ಈ ಸಮುದಾಯಗಳ ನೋವು, ಆಕ್ರಂದನ ಈಗ ಬರೀ ಅರಣ್ಯರೋದನವಷ್ಟೆ.

ಜನರಿಂದ ಆಯ್ಕೆಯಾದ ಜನರ ಪ್ರತಿನಿಧಿಯಾದ ಸ್ಥಳೀಯ ಲೋಕಸಭಾ ಸದಸ್ಯರು ಮಾತ್ರ ಈ ಬೃಹತ್ ಯೋಜನೆಯಾದ 'ವಿಜ್ಞಾನ ಗುಂಬ'ಕ್ಕೆ ಆಹ್ವಾನ ನೀಡಿ ರತ್ನಗಂಬಳಿ

ಹಾಸಿ ಕರೆತಂದರೆಂದು ಹೇಳಲಾಗುತ್ತಿದೆ. ತಮ್ಮ ಕ್ಷೇತ್ರದ ಜನಸಾಮಾನ್ಯರ ಬದುಕನ್ನು ಗಾಳಿಗೆ ತೂರಿ ಈ ನಿರ್ಧಾರ ತೆಗೆದುಕೊಂಡದ್ದು ಸರಿಯೇ? ಎಂದು ಈಗ ಸಂಘಟಿತರು, ಸ್ಥಳೀಯರು, ಊರೆಲ್ಲ ಕೊಳ್ಳೆ ಹೊಡೆದ ಮೇಲೆ ದಿಡ್ಡಿ ಬಾಗಿಲು ಹಾಕಿದಂತೆ ಎನ್ನುವ ಹಾಗೆ ತಮ್ಮ ಧ್ವನಿ ಎತ್ತಿದ್ದಾರೆ. ಅತ್ತ ಕನಿಷ್ಠ ಜನರ ಅಹವಾಲನ್ನು ಕೇಳದೆ, ಸರ್ವಾಧಿಕಾರದ ಧೋರಣೆಯಲ್ಲಿ ಯಾರನ್ನೇನು ಕೇಳುವುದೆಂಬಂತೆ ಆಡಳಿತವರ್ಗ ತನ್ನ ಕಾರ್ಯ ಶುರು ಹಚ್ಚಿಕೊಂಡಾಗಿದೆ. ಜನರೇ ಈ ದೇಶದ ದೊರೆಗಳು, ಇದು ಪ್ರಜಾರಾಜ್ಯ, ಪ್ರಜೆಗಳು, ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ ಸಂವಿಧಾನ ಎಂಬ ಸಂವಿಧಾನದ ನುಡಿ ಇಲ್ಲಿ ಮಹತ್ವ ಕಳೆದುಕೊಂಡಿದೆ. ಯಥಾ ಪ್ರಕಾರ ಆದಿವಾಸಿಗಳ ಅಳಲಿನ ಕೂಗು ಗೋರ್ಕಲ್ಲ ಮೇಲೆ ಮಳೆ ಸುರಿದಂತಾಗಿದೆ. ವಿಜ್ಞಾನದ ಗುಂಬ ಆದಿವಾಸಿಗಳಿಗೆ 'ಗುಮ್ಮ'ವಾದರೆ ಕೇಂದ್ರ ಆಡಳಿತಶಾಹಿಗಳ ಕಿರೀಟಕ್ಕೆ ಇಟ್ಟ ಪ್ರತಿಷ್ಠೆಯ ಪುಕ್ಕವಾಗಿದೆ.

### ರಾಷ್ಟ್ರೀಯ ಉದ್ಯಾನವನಗಳು ಮತ್ತು ಸೀಮಾಪದ್ಧತಿ

#### (ನಾಗರಹೊಳೆ ರಾಷ್ಟ್ರೀಯ ಉದ್ಯಾನವನ/ಹುಲಿ ಸಂರಕ್ಷಿತ ಪ್ರದೇಶ/ವನ್ಯಜೀವಿಧಾಮ)

ಈಗ ರಾಜೀವಗಾಂಧಿ ರಾಷ್ಟ್ರೀಯ ಉದ್ಯಾನವನವೆಂದು ನಾವು ಕರೆಯುವುದಾದರೆ ನಾಗರಹೊಳೆ ಕರ್ನಾಟಕದ ಮೈಸೂರು ಮತ್ತು ಕೊಡಗು ಜಿಲ್ಲೆಗಳನ್ನೊಳಗೊಂಡ ನೀಲಗಿರಿ ಬೆಟ್ಟಗುಡ್ಡಗಳ ಬ್ರಹ್ಮಗಿರಿ ಬೆಟ್ಟಗಳ ತಪ್ಪಲಿನಲ್ಲಿದೆ. ಇಲ್ಲಿ ವಿಶೇಷವಾದ ಪ್ರಾಣಿ, ಪಕ್ಷಿ ಮತ್ತು ಸಸ್ಯ ಸಂಕುಲಗಳ ಜೀವವೈವಿಧ್ಯತೆಗಳಿಂದ ಕೂಡಿದ್ದು ಜಲಪಾತಗಳು ಹಾವಿನಂತೆ ಬಳಕುವ ಕಾರಣ 'ನಾಗರ ಹೊಳೆ' ಎಂದು ಕರೆದಿರಬಹುದಾಗಿದೆ. ಏಷ್ಯಾದಲ್ಲೇ ಹೆಚ್ಚಿನ ಸಾಂದ್ರತೆಯಿರುವ ಸಸ್ಯ, Herbivorous animals ಎಂಬ ಹೆಗ್ಗಳಿಕೆಗೆ ಇದು ಕಾರಣವಾಗಿದೆ. ಪಶ್ಚಿಮ ಘಟ್ಟದ ಭಾಗವಾದ ನಾಗರಹೊಳೆ 680ಮೀ. ರಿಂದ 1454 ಮೀ.ಎತ್ತರ (Altitude range)ದಲ್ಲಿದೆ. ಉತ್ತರಕ್ಕೆ ಕಬಿನಿ ನದಿ ಇದೆ. 250 ವಿವಿಧ ಪಕ್ಷಿ ತಳಿಗಳನ್ನು ಈ ಕಾಡಿನಲ್ಲಿ ಗುರ್ತಿಸಿರುತ್ತಾರೆ. ಇರಪು ಜಲಪಾತ ಇದರ 'ಸೌಂದರ್ಯ' ಹೆಚ್ಚಿಸಿದೆ. ಈ ಉದ್ಯಾನವನದ ಸಂಪೂರ್ಣ ವ್ಯಾಪ್ತಿ 642.39 km2, 960m ಎತ್ತರ(3,150 ಅಡಿ) ಸಮುದ್ರ ಮಟ್ಟಕ್ಕಿಂತ ಎತ್ತರ 1954ರಲ್ಲಿ ವನ್ಯಜೀವಿಧಾಮವೆಂದು, 1988ರಲ್ಲಿ ರಾಷ್ಟ್ರೀಯ ಉದ್ಯಾನವನವೆಂದೂ 1999ರಲ್ಲಿ ಹುಲಿ ಸಂರಕ್ಷಿತ ಪ್ರದೇಶವೆಂದು ಘೋಷಿಸಲಾಗಿದೆ. ಇದು ನೀಲಗಿರಿ(Nilgiri biosphere reserve)ಯ ಪಶ್ಚಿಮಘಟ್ಟದಲ್ಲಿ UNESCO ಮಿಶ್ರ ಪರಂಪರೆಯ ಕಮಿಟಿ ಆಯ್ಕೆ ಮಾಡಲಾಗಿರುವ 'ವಿಶ್ವಪಾರಂಪರಿಕ ತಾಣ'(world heritage site) ವ್ಯಾಪ್ತಿಗೆ ಒಳಪಡುತ್ತದೆಂಬ ಹೆಗ್ಗಳಿಕೆ ಈ ಪ್ರದೇಶಕ್ಕಿದೆ. ಈ ನಾಗರಹೊಳೆ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯೊಳಗೆ 'ಜೇನುಕುರುಬ' ಬುಡಕಟ್ಟುಗಳು ಕಾಡಿನ ಇತರ ಜೀವಿಗಳಂತೆ ಅದರದೇ ಭಾಗವಾಗಿ ಬುಡಕಟ್ಟು ಜೀವನ

ನಡೆಸಿಕೊಂಡು ಬಂದಿದ್ದರು. 1954ರಲ್ಲಿ 'ವನ್ಯಜೀವಿಧಾಮವೆಂದು' ಸರ್ಕಾರದಿಂದ ಘೋಷಿಸಲಾದ ಮೇಲೆ 70ರ ದಶಕದಲ್ಲಿ ಈ ಪ್ರದೇಶದ ವ್ಯಾಪ್ತಿಯೊಳಗಿನ ಅಪ್ಪು ಜೇನುಕುರುಬರು ಮತ್ತು ಇತರ ಬುಡಕಟ್ಟುಗಳನ್ನು ಕಾಡಿನಿಂದ ಒಕ್ಕಲೆಬ್ಬಿಸಲಾಗಿತ್ತು 1981ರ ಜನಗಣತಿಯ ಪ್ರಕಾರ ಅಲ್ಲಿ 34,747(17867 ಗಂಡು 16880 ಹೆಣ್ಣು) ಜೇನುಕುರುಬ ಸಮುದಾಯ ಈ ವ್ಯಾಪ್ತಿಯೊಳಗಿದ್ದರೆಂದು ದಾಖಲೆಗಳು ತಿಳಿಸುತ್ತದೆ.

**ನಾಗರಹೊಳೆ ಕಾಡಿನಿಂದ ಸ್ಥಳಾಂತರಗೊಂಡವರು**

ಅರಣ್ಯ ಇಲಾಖೆ ಆದೇಶ ನೀಡಿದ ವನ್ಯಜೀವಿ ಕಾಯ್ದೆ 1972ಯು 4–02–1975ರಲ್ಲಿ ಜಾರಿಗೊಂಡಿತು. 23–08–1992ರಲ್ಲಿ ಮತ್ತೆ ರಾಷ್ಟ್ರೀಯ ಉದ್ಯಾನವನವೆಂದು ಘೋಷಿಸಿತು. ನಂತರ ಅದರ ಹೆಸರನ್ನು ರಾಜೀವಗಾಂಧಿ ರಾಷ್ಟ್ರೀಯ ಉದ್ಯಾನವನವೆಂದು ಮರು ನಾಮಕರಣ ಮಾಡಲಾಯಿತು. ಮತ್ತೆ 2001ರಲ್ಲಿ ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶವೆಂದು ಘೋಷಣೆ ಮಾಡಿ ಈ ಕಾಯ್ದೆಗಳ ಪ್ರಕಾರ ಕಾಡಿನಲ್ಲಿ ಮತ್ತು ಕಾಡಿನ ವನ್ಯಜೀವಿ ಸಂಪತನ್ನು ಸಂರಕ್ಷಿಸುವ ನೆಪ ಮಾಡಿ ಸಾವಿರಾರು ವರ್ಷಗಳಿಂದ ಕಾಡಿನ ಭಾಗವಾಗಿಯೇ ಬದುಕು ಸವೆಸಿದ್ದ 25,000 ಬುಡಕಟ್ಟುಗಳನ್ನು ಕಾಡಿನಿಂದ ಒಕ್ಕಲೆಬ್ಬಿಸಿ ಹೊರದಬ್ಬಲಾಯ್ತು. ಹೀಗೆ ಹೊರದಬ್ಬಲ್ಪಟ್ಟವರಲ್ಲಿ ಹೆಚ್ಚಿನವರು ಜೇನುಕುರುಬರು. ಉಳಿದಂತೆ ಸೋಲಿಗರು, ಎರವರು, ಬೆಟ್ಟಕುರುಬರು ಮತ್ತು ಪಣಿಯರೂ ಕೂಡ ಸೇರಿದ್ದಾರೆ.

ವನ್ಯಜೀವಿ ಕಾಯ್ದೆ ಘೋಷಣೆಯಾದಾಗ ಹೆಚ್ಚಿನ ಬುಡಕಟ್ಟುಗಳು ಸ್ಥಳಾಂತರಗೊಂಡವು. ನಂತರ ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿ ಸಂರಕ್ಷಿತ ಪ್ರದೇಶವೆಂದು ಘೋಷಣೆಯಾದಾಗ, ಆಗಲೇ 85% ಭಾಗ ಬುಡಕಟ್ಟುಗಳ ಹೊರದಬ್ಬಲ್ಪಟ್ಟಿದ್ದರಿಂದ, ಇನ್ನುಳಿದ 15% ಬುಡಕಟ್ಟುಗಳನ್ನು ತದನಂತರ ಸ್ಥಳಾಂತರಗೊಳಿಸಲಾಯಿತು. ಇದಕ್ಕೆ ಕಾರಣ ಕಾಯ್ದೆಯೊಳಗಿರುವ ಆದೇಶದಂತೆ ಸೂಚಿತ ಪ್ರದೇಶದ ವ್ಯಾಪ್ತಿಯಲ್ಲಿ ಮಾನವ ಚಟುವಟಿಕೆಗಳಿರಕೂಡದು ಎಂಬ ಹೇಳಿಕೆಯಂತೆ ಎಲ್ಲರನ್ನು ಹೊರದಬ್ಬಲಾಗಿದೆ. ದಾಖಲೆಗಳ ಪ್ರಕಾರ ಕೊಡಗಿನ ವಿರಾಜಪೇಟೆಯ 58 ಹಾಡಿಗಳು, ಹೆಚ್.ಡಿ.ಕೋಟೆಯ 46 ಹಾಡಿಗಳು ಮತ್ತು ಹುಣಸೂರು ತಾಲ್ಲೂಕಿನ 36 ಹಾಡಿಗಳಿಂದ ಒಟ್ಟು 23,000 ಬುಡಕಟ್ಟುಗಳನ್ನು ಈಗಾಗಲೇ ವನ್ಯಜೀವಿ ಕಾಯ್ದೆಯ ಹೆಸರಲ್ಲಿ ಒಕ್ಕಲೆಬ್ಬಿಸಿ ಸ್ಥಳಾಂತರಿಸಲಾಗಿದೆ.

ಸ್ಥಳಾಂತರಿಸಿದ ನಂತರ ಸರ್ಕಾರ ಕೈಗೊಂಡ ಪುನರ್ವಸತಿ ಕಾರ್ಯ ಅಷ್ಟು ಸಮರ್ಪಕವಲ್ಲ ಎಂಬುಧಕ್ಕೆ ಹೆಚ್.ಡಿ.ಕೋಟೆಯಲ್ಲಿ ಕಲ್ಪಿಸಿರುವ 112 ಕಾಲೋನಿಗಳ ಪೈಕಿ ಕೇವಲ 36 ಹಾಡಿಗಳು ವಿರಾಜಪೇಟೆಯಲ್ಲಿ ಕಲ್ಪಿಸಿರುವ 58 ಕಾಲೋನಿಗಳ ಪೈಕಿ ಕೇವಲ 11 ಕಾಲೋನಿಗಳು ಮತ್ತು ಹುಣಸೂರಿನಲ್ಲಿ ಕಲ್ಪಿಸಿರುವ 51 ಹಾಡಿಗಳ ಪೈಕಿ ಕೇವಲ ವಂಚಿತ ಬುಡಕಟ್ಟುಗಳು ಉದ್ಯೋಗವನ್ನರಸಿ ಕಾಫಿ ತೋಟದ ಲೈನ್ ಮನೆಗಳಿಗೆ ಹೋಗಿ ಸೇರಿಕೊಂಡಿದ್ದಾರೆ.

## ಕೋಷ್ಟಕ 8

### ನಾಗರಹೊಳೆ ಹುಲಿ ಯೋಜನೆಯಿಂದ ನಿರಾಶ್ರಿತರಾದವರ ವಿವರ

| ತಾಲ್ಲೂಕು | ಕುಟುಂಬಗಳು | ಜನಸಂಖ್ಯೆ |
|---|---|---|
| ಹೆಚ್.ಡಿ.ಕೋಟೆ | 180 (52.69%) | 5832 (50.41%) |
| ಹುಣಸೂರು | 1106 (32.38%) | 4095 (35.39%) |
| ವಿರಾಜಪೇಟೆ | 511 (14.95%) | 1641 (14.18%) |
| ಒಟ್ಟು | 3418 | 11568 |

ಆಧಾರ: MUZAFFAR ASSADI, Interface between Displacement, Rehabilitation and Governance in India: A Critique. Page no 8.

ಬಹಳ ಆಶ್ಚರ್ಯ ಮತ್ತು ನೋವಿನ ಸಂಗತಿ ಎಂದರೆ ಸ್ಥಳಾಂತರಗೊಂಡವರಿಗೆ ಪುನರ್ವಸತಿ ಕೇಂದ್ರದಲ್ಲಿ ಕೇವಲ 45.87% ಕುಟುಂಬಗಳಿಗೆ ಮಾತ್ರ ಮನೆಗಳ ವ್ಯವಸ್ಥೆ ಕಲ್ಪಿಸಲಾಗಿದೆ. ಹುಣಸೂರು ತಾಲ್ಲೂಕಿನಲ್ಲಿ 53.50%(839) ಹೆಚ್.ಡಿ.ಕೋಟೆ ತಾಲ್ಲೂಕಿನಲ್ಲಿ 32.33%(507) ಮತ್ತು ವಿರಾಜಪೇಟೆ ತಾಲ್ಲೂಕಿನಲ್ಲಿ 14.55(222) ಪಕ್ಕಾ ಮನೆಗಳನ್ನು ಮಾತ್ರ ಕಟ್ಟಿಕೊಡಲಾಗಿದೆ.

ಪುನರ್ವಸತಿ ಜೊತೆ ಸ್ಥಳಾಂತರಗೊಂಡವರಲ್ಲಿ ಕೇವಲ 24.54% ಜನರಿಗೆ ಮಾತ್ರ ಭೂಮಿ ನೀಡಲಾಗಿದೆ. ಸ್ಥಳಾಂತರಗೊಂಡ 3418 ಕುಟುಂಬಗಳ ಪೈಕಿ ಕೇವಲ 838 ಕುಟುಂಬಗಳಿಗೆ ಮಾತ್ರ ಭೂಮಿಯ ಲಭ್ಯತೆಯಿದೆ. ಅದರಲ್ಲಿ ಕೆಲವರಿಗೆ ಮಾತ್ರ ಅಧಿಕೃತ ಪಟ್ಟವನ್ನು ಕೃಷಿಭೂಮಿಗಾಗಿ ನೀಡಲಾಗಿದೆ. ಉಳಿದವರು ಬಗರ್ ಹುಕುಂ ಪೈಸಾರಿ ಭೂಮಿಯಲ್ಲಿ ಉಳುಮೆಗೆ ಆಶ್ರಯಿಸಿದ್ದಾರೆ.

## ಕೋಷ್ಟಕ 9

## ನಾಗರಹೊಳೆ ಉದ್ಯಾನವನ ಮತ್ತು ಹುಲಿ ಸಂರಕ್ಷಿತ ಪ್ರದೇಶದ ಸ್ಥಳಾಂತರಗೊಂಡವರಿಗೆ ನೀಡಲಾದ ಪುನರ್ವಸತಿ ಕೇಂದ್ರಗಳು

| ಕ್ರ.ಸಂ. | ವನ್ಯಜೀವಿ ವಲಯದ ಹೆಸರು | ಹಾಡಿಯ ಹೆಸರುಗಳು | ಕಲ್ಪಿಸಲಾದ ಪುರ್ನವಸತಿಗಳು |
|---|---|---|---|
| | | **ಮೈಸೂರು ಜಿಲ್ಲೆ** | |
| 1 | ಡಿ.ಬಿ.ಕುಪ್ಪೆ | ಬಳ್ಳೆ ಹಾಡಿ | 18 |
| 2 | ಡಿ.ಬಿ.ಕುಪ್ಪೆ | ಬೊಗೆಪುರ (ಗುಂಡ್ರೆ ಸೇರಿಕೊಂಡು) | 43 |
| 3 | ಡಿ.ಬಿ. ಕುಪ್ಪೆ | ಮಾಚೂರು | 19 |
| 4 | ಡಿ.ಬಿ.ಕುಪ್ಪೆ | ಕೆರೆಹಾಡಿ | 34 |
| | | **ಒಟ್ಟು** | **114** |
| 5 | ಅಂತ್ರಸಂತೆ | ದೊಮ್ಮನಕಟ್ಟೆ | **1** |
| 6 | ಅಂತ್ರಸಂತೆ | ಸುಂಕದಕಟ್ಟೆ | **16** |
| 7 | ಅಂತ್ರಸಂತೆ | ಮೊಲದ ಹಾಡಿ | **26** |
| | | **ಒಟ್ಟು** | **43** |
| | | **ಕೊಡಗು ಜಿಲ್ಲೆ** | |
| 1 | ನಾಗರಹೊಳೆ | ಬಾಳೆಕೋವು | 13 |
| 2 | ನಾಗರಹೊಳೆ | ಸಿದ್ದಾಪುರ ಹಾಡಿ | 6 |
| 3 | ನಾಗರಹೊಳೆ | ನಾಣ್ಚಿಗದ್ದೆಹಾಡಿ | 1 |
| 4 | ನಾಗರಹೊಳೆ | ನಾಗರಹೊಳೆ ಗದ್ದೆ ಹಾಡಿ | 56 |
| 5 | ನಾಗರಹೊಳೆ | ನಾಗರಹೊಳೆ ಆನೆ ಕ್ಯಾಂಪ್ | 20 |
| 6 | ನಾಗರಹೊಳೆ | ಗೋಣ ಗದ್ದೆ | 30 |
| 7 | ನಾಗರಹೊಳೆ | ಕೋಡಂಗೆ | 13 |
| | | **ಒಟ್ಟು** | **139** |
| 8 | ಕಳ್ಳ ಹಳ್ಳ | ಕಳ್ಳ ಹಳ್ಳಿ | 35 |

| | | | |
|---|---|---|---|
| 9 | ಕಳ್ಳ ಹಳ್ಳ | ಕೊಳಂಗೆರೆ | 26 |
| 10 | ಕಳ್ಳ ಹಳ್ಳ | ಮೂರ್ಕಲ್ಲು | 30 |
| 11 | ಕಳ್ಳ ಹಳ್ಳ | ದಾಳಿಂಬೆಕೊಳ್ಳಿ ಹಾಡಿ | 19 |
| | | ಒಟ್ಟು | **156** |
| | | ಎಲ್ಲಾ ಸೇರಿ ಒಟ್ಟು | **562** |

ಆಧಾರ: MUZAFFAR ASSADI, Interface between Displacement, Rehabilitation and Governance in India: A Critique. Page no 11.

**ಕೋಷ್ಟಕ 10**

**ರಾಷ್ಟ್ರೀಯ ಉದ್ಯಾನದೊಳಗೆ ಇರುವ ಆದಿವಾಸಿಗಳ ಸಂಖ್ಯಾ ಪಟ್ಟಿ**

**ರಾಷ್ಟ್ರೀಯ ಉದ್ಯಾನದೊಳಗಡೆ ಇರುವ ಆದಿವಾಸಿಗಳ ಸಂಖ್ಯಾಪಟ್ಟಿ 2005 ವರದಿಯಂತೆ**

| ತಾಲ್ಲೂಕು | ಒಟ್ಟು ಕುಟುಂಬಗಳು | ಒಟ್ಟು ಜನಸಂಖ್ಯೆ | ಮನೆ ಹೊಂದಿರುವ ಕುಟುಂಬಗಳು | ಜಮೀನು ಹೊಂದಿರುವ ಕುಟುಂಬಗಳು |
|---|---|---|---|---|
| ಹೆಚ್.ಡಿ.ಕೋಟೆ | 802 | 2914 | 17 | 0 |
| ವಿರಾಜಪೇಟೆ | 936 | 3188 | 575 | 87 |
| ಒಟ್ಟು | **1738** | **6102** | **592** | **87** |

**ಆಧಾರ:** MUZAFFAR ASSADI, Interface between Displacement, Rehabilitation and Governance in India: A Critique. Page no 11.

ಭಾರತದಲ್ಲಿರುವ ಒಟ್ಟು ಜನಸಂಖ್ಯೆಯ 78% ಆದಿವಾಸಿ ಅಂದರೆ ಅಂದಾಜು 4.5 ಲಕ್ಷ ಆದಿವಾಸಿಗಳು ವನ್ಯಜೀವಿದಾಮಗಳು, ರಾಷ್ಟ್ರೀಯ ಉದ್ಯಾನವನಗಳಿಂದ ಸ್ಥಳಾಂತರಗೊಂಡಿದ್ದಾರೆ. ಅದರಲ್ಲಿ 20% ದಲಿತರೂ ಕೂಡ ಈ ಸ್ಥಳಾಂತರಕ್ಕೆ ಬಲಿಯಾಗಿದ್ದಾರೆ. ಒಂದು ಸಮೀಕ್ಷೆಯ ಪ್ರಕಾರ

**ಕೋಷ್ಟಕ 11**

**1951 ಮತ್ತು 1990 ಅಂತರದಲ್ಲಿ ಮೇಲಿನ ಕಾರಣಗಳಿಗಾಗಿ ಸ್ಥಳಾಂತರಗೊಂಡವರ ಪಟ್ಟಿ(ಲಕ್ಷಗಳಲ್ಲಿ)**

| ಕ್ರ.ಸಂ. | ಯೋಜನೆಗಳು | ಶೇಕಡಾವಾರು ಸ್ಥಳಾಂತರರಾದವರು | ಒಟ್ಟು ಬುಡಕಟ್ಟು ಸ್ಥಳಾಂತರ | ಶೇಕಡಾವಾರು ಬುಡಕಟ್ಟು ಒಟ್ಟು |
|---|---|---|---|---|
| 1 | ಡ್ಯಾಂಗಳಿಂದ | 164.0 (25.6%) | 63.2 (25.9%) | 38.5 |
| 2 | ಮೈನ್ಸ್‌ಗಳಿಂದ | 25.5 (35.5%) | 13.3 (24.8%) | 52.2 |
| 3. | ಕೈಗಾರಿಕೋದ್ಯಮಗಳಿಂದ | 12.5 (30.0%) | 3.1 (25.6%) | 25.0 |
| 4. | ವನ್ಯಜೀವಿದಾಮಗಳಿಂದ | 6.0 (20.8%) | 4.5 (22.2%) | 75.0 |
| 5. | ಇತರೆ | 5.0 (30.0%) | 1.3(20.0%) | 25.0 |
| | ಒಟ್ಟು | **213.0 (25.4%)** | **85.4 (24.8%)** | **40.1** |

**ಆಧಾರ:** MUZAFFAR ASSADI, Interface between Displacement, Rehabilitation and Governance in India: A Critique. Page no 25.

ಈ ಮೇಲಿನ ಮಾಹಿತಿಯ ಪ್ಲಾನಿಂಗ್ ಮಿಷನ್ನಿನ ಸ್ಟೀರಿಂಗ್ ಕಮಿಟಿಯ ಬುಡಕಟ್ಟು ಸಶಕ್ತೀಕರಣದ ಬುಡಕಟ್ಟು ಯೋಜನೆ 2001–ಗ್ರಾಮೀಣ ಅಭಿವೃದ್ಧಿ ಮಂತ್ರಾಲಯದ ಪ್ರಕಟಣೆಯಿಂದ ಆಯ್ದುಕೊಳ್ಳಲಾಗಿದೆ.11

## ನಕ್ಷೆ

ಕುದುರೆಮುಖ ರಾಷ್ಟ್ರೀಯ ಉದ್ಯಾನದ ಚಿಕ್ಕಮಗಳೂರು, ಉಡುಪಿ ಮತ್ತು ದಕ್ಷಣ ಕನ್ನಡ ಜಿಲ್ಲೆಯಲ್ಲಿ ಇರುವ ಗ್ರಾಮ ಮತ್ತು ಸುತ್ತುಗಟ್ಟು ವಿವರ



**ಕುದುರೆಮುಖ ರಾಷ್ಟ್ರೀಯ ಉದ್ಯಾನವನಕುದುರೆಮುಖ ವನ್ಯಜೀವಿ ವಿಭಾಗ, ಕಾರ್ಕಳ ಪುನರ್ವಸತಿ ಕುರಿತ ಕಿರು ಟಿಪ್ಪಣಿ**

**ಪೀಠಿಕೆ**

ಕುದುರೆಮುಖ ವನ್ಯಜೀವಿ ವಿಭಾಗ ವ್ಯಾಪ್ತಿಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಉಡುಪಿ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಬರುತ್ತಿದ್ದು ಕುದುರೆಮುಖ ರಾಷ್ಟ್ರೀಯ ಉದ್ಯಾನವನ(600.57 ಚ.ಕಿ.ಮೀ.) ಸೋಮೇಶ್ವರ ಅಭಯಾರಣ್ಯ(314.25 ಚ.ಕಿ.ಮೀ.) ಮತ್ತು ಮೂಕಾಂಬಿಕಾ ಅಭಯಾರಣ್ಯ (394.65 ಚ.ಕಿ.ಮೀ.) ಇದ್ದು ಕೇಂದ್ರಸ್ಥಾನ ಕಾರ್ಕಳದಲ್ಲಿ ಇರುತ್ತದೆ.

**ಕುದುರೆಮುಖ ರಾಷ್ಟ್ರೀಯ ಉದ್ಯಾನವನ**

ಕುದುರೆಮುಖ ರಾಷ್ಟ್ರೀಯ ಉದ್ಯಾನವನವು ದಕ್ಷಿಣ ಕನ್ನಡ, ಚಿಕ್ಕಮಗಳೂರು ಮತ್ತು ಉಡುಪಿ ಜಿಲ್ಲೆಯಲ್ಲಿ ವ್ಯಾಪಿಸಿದ್ದು ಪಶ್ಚಿಮಘಟ್ಟಗಳ ಸರಣಿಯ ಮಧ್ಯದಲ್ಲಿ ಬಹುತೇಕ ಇರುತ್ತದೆ. ಸಹ್ಯಾದ್ರಿ ಪರ್ವತ ಶ್ರೇಣಿಯ ಭಾಗ ಕೂಡ ಅಗಿರುತ್ತದೆ. ಸಮುದ್ರ ತೀರದಿಂದ ಸುಮಾರು 50 ಕಿ.ಮೀ. ದೂರದಲ್ಲಿದ್ದು ಶತಮಾನಗಳಿಂದ ಸಮುದ್ರ ತೀರಗಳಿಗೆ ರಕ್ಷಣೆಯನ್ನು ನೀಡುತ್ತಿದೆ. ಸಮುದ್ರ ಮಟ್ಟದಿಂದ 1892 ಮೀಟರ್ ಎತ್ತರದಲ್ಲಿ ಕುದುರೆಮುಖವನ್ನು ಹೋಲುವ ಶಿಖರದಿಂದಾಗಿ ಈ ಉದ್ಯಾನವನಕ್ಕೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನವೆಂದು ಹೆಸರು ಬಂದಿರುತ್ತದೆ.

**ನದಿಗಳು:** ಈ ಉದ್ಯಾನವನವು ಸಾಕಷ್ಟು ನದಿಗಳ ಉಗಮ ಸ್ಥಾನವಾಗಿದ್ದು ಇವುಗಳಲ್ಲಿ ಪ್ರಮುಖವಾದವು ಭದ್ರಾ, ತುಂಗ ಮತ್ತು ನೇತ್ರಾವತಿಯಾಗಿರುತ್ತದೆ. ಈ ಮೂರೂ ನದಿಗಳು ಗಂಗಮೂಲದಲ್ಲಿ ಹುಟ್ಟಿ ತುಂಗ ಮತ್ತು ಭದ್ರಾ ಪೂರ್ವ ದಿಕ್ಕನಲ್ಲಿ ಮತ್ತು ನೇತ್ರಾವತಿ ಪಶ್ಚಿಮ ದಿಕ್ಕಿನಲ್ಲಿ ಹರಿಯುತ್ತದೆ.

**ಅರಣ್ಯಪ್ರದೇಶ:** ಕುದುರೆಮುಖದ ಅರಣ್ಯಪ್ರದೇಶ ಮುಖ್ಯವಾಗಿ ನಿತ್ಯ ಹರಿದ್ವರ್ಣ(Evergreen), ಅರೆ ನಿತ್ಯ ಹರಿದ್ವರ್ಣ(Semievergreen), ಶೋಲಾ(Shola) ಮತ್ತು ಹುಲ್ಲುಗಾವಲಿನಿಂದ (Grassland) ಕೂಡಿರುತ್ತದೆ.

**ಪ್ರಾಣಿವರ್ಗ:** ನಶಿಸಿಹೋಗುತ್ತಿರುವ ಸಿಂಗಳೀಕ, ಕಾಡುಪಾಪ, ಹುಲಿ, ಚಿರತೆ ಆನೆಗಳು ಇಲ್ಲಿ ಇದ್ದು, ಕಾಡುಕೋಣ, ಕಡವೆ, ಜಿಂಕೆ, ಕರಡಿ ಸಾಮಾನ್ಯವಾಗಿ ಇರುತ್ತವೆ.

**ಕೋಷ್ಟಕ 12**

**ಕುದುರೆಮುಖ ರಾಷ್ಟ್ರೀಯ ಉದ್ಯಾನದ ಚಿಕ್ಕಮಗಳೂರು, ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ಗ್ರಾಮ ಮತ್ತು ಸುತ್ತುಗಟ್ಟು ವಿವರ**

| ಕ್ರ.ಸಂ | ರಕ್ಷಿತ ಅರಣ್ಯಗಳು | ಅರಣ್ಯ ಆಡಳಿತ | ಗ್ರಾಮಗಳು | ಸುತ್ತುಗಟ್ಟು | ಕುಟುಂಬಗಳ | ಸಂಖ್ಯೆ ಜನಸಂಖ್ಯೆ | | | |
|---|---|---|---|---|---|---|---|---|---|
| | | | | | | ಪ.ಜಾ | ಪ.ಪಂ | ಇತರೆ | ಒಟ್ಟು |
| 1 | ಕುದುರೆಮುಖ ರಾಷ್ಟ್ರೀಯ ಉದ್ಯಾನ | ಕಾರ್ಕಳ ವನ್ಯಜೀವಿ ವಲಯ | 10 | 27 | 243 | 13 | 481 | 651 | 1145 |
| 2 | | ಬೆಳ್ತಂಗಡಿ ವನ್ಯಜೀವಿ ವಲಯ | 10 | 52 | 263 | 0 | 112 | 151 | 263 |
| 3 | | ಕುದುರೆಮುಖ ವನ್ಯಜೀವಿ ವಲಯ | 03 | 11 | 335 | 52 | 367 | 1153 | 1572 |
| 4 | | ಕೆರೆಕಟ್ಟೆ ವನ್ಯಜೀವಿ ವಲಯ | 19 | 19 | 541 | 49 | 990 | 1158 | 2197 |
| | | ಒಟ್ಟು | **42** | **109** | **1382** | **114** | **2655** | **3475** | **6244** |

ಮೂಲ: ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕುದುರೆಮುಖ ವನ್ಯಜೀವಿ ವಲಯ, ಕಾರ್ಕಳ. ಉಡುಪಿ ಜಿಲ್ಲೆ.

**ಸ್ವಾಧೀನಪಡಿಸಿಕೊಳ್ಳುವುದು ಮತ್ತು ಪುನರ್ವಸತಿ ಯೋಜನೆ**

2003–04ನೇ ಸಾಲಿನಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ 201 ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸಲು ರೂ. 23.19 ಕೋಟಿ ಅನುದಾನ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಬಳಿಕ ಹೆಚ್ಚುವರಿಯಾಗಿ 25 ಕುಟುಂಬಗಳಿಗೆ ಪುನರ್ವಸತಿ ಕೋರಿ ರೂ. 7.7143 ಕೋಟಿ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. 201 ಕುಟುಂಬಗಳ ಪುನರ್ವಸತಿ ಯೋಜನೆಗೆ ಸರ್ಕಾರವು ಅದೇಶ ಆರ್‌ಡಿ 26 ಆರ್‌ಇಹೆಚ್ 2005 ಬೆಂಗಳೂರು ದಿನಾಂಕ 18.04.2005ರಂತೆ ಮಂಜೂರಾತಿ ಮಾಡಿರುತ್ತದೆ. ಈ ಅದೇಶದಂತೆ ಸುತ್ತುಗಟ್ಟುಗಳಲ್ಲಿ ವಾಸಿಸುವ ಕುಟುಂಬಗಳು ತಮ್ಮ ಮಾಲ್ಕಿ ಮೌಲ್ಯವನ್ನು ಭೂಸ್ವಾಧೀನ ಕಾಯ್ದೆಯಡಿ ನಿರ್ಧರಿಸುವ ದರಗಳಂತೆ ಪಡೆಯಲು ಅವಕಾಶ ಇರುತ್ತದೆ. ಸುತ್ತುಗಟ್ಟುಗಳಲ್ಲಿ ವಾಸಿಸುವ 1980ರ ಪೂರ್ವದ ಅರಣ್ಯ ಒತ್ತುವರಿ ಮಾಡಿದ ಕುಟುಂಬಗಳಿಗೂ, ಸಕ್ರಮಕ್ಕೆ ಅರ್ಹವಿರುವ ಕಂದಾಯ ಜಮೀನುಗಳನ್ನು ಒತ್ತುವರಿ ಮಾಡಿದ ಕುಟುಂಬಗಳಿಗೂ ಪರಿಹಾರ ವಿತರಿಸಲು ಅವಕಾಶ ಇರುತ್ತದೆ. ಸರ್ಕಾರಿ ಆದೇಶದಂತೆ ಹೆಚ್ಚುವರಿಯಾಗಿ ಮನೆ ಕಟ್ಟಲು ಸಹಾಯಧನ, ಸೊತ್ತು ಸಾಗಾಟಕ್ಕೆ, ಜಮೀನು ಖರೀದಿ, ಜೀವನ ಕುರಿತು ಅರು ತಿಂಗಳಿಗೆ ಉಪಧನ ಕೂಡ ಪಡೆಯಲು ಸರ್ಕಾರಿ ಅದೇಶದಲ್ಲಿ ಅವಕಾಶ ಇರುತ್ತದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಪುನರ್ವಸತಿ ಕುರಿತು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಜಿಲ್ಲಾ ಮಟ್ಟದ ಸಮಿತಿಯನ್ನು ಸರ್ಕಾರವು ಸರ್ಕಾರಿ ಅದೇಶ ಸಂಖ್ಯೆ ಅಪಜೀ 141 ಎಫ್‌ಎಪಿ 2009 ಬೆಂಗಳೂರು ದಿನಾಂಕ 2.2.2010ರಲ್ಲಿ ರಚಿಸಿದ್ದು ಈ ಸಮಿತಿಯ ಸದಸ್ಯ ಕಾರ್ಯದರ್ಶಿ ಉಪ ಅರಣ್ಯ ಸಂರಕ್ಷಣಾಧಿಕಾರಿಯಾಗಿದ್ದು ಜಿಲ್ಲೆಯ ವಿವಿಧ ಇಲಾಖೆಗಳ ಜಿಲ್ಲಾ ಮಟ್ಟದ ಅಧಿಕಾರಿಗಳು ಸದಸ್ಯರಾಗಿರುತ್ತಾರೆ.

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಮೂರೂ ಜಿಲ್ಲೆಗೆ ಸಂಬಂಧಿಸಿದಂತೆ ಕೆರೆ, ಬಲೇಕಡಿ, ಮುಡುಬಾ, ಸಂಸೆ, ಹಾದಿ, ಬಾಳೇಗೆರೆ, ಕಿಗ್ಗಾ, ಯಡದಳ್ಳಿ, ಗುಲಗುಂಜಿಮನೆ, ಮಲ್ನಾಡು, ಕಲ್ಲುಗುಡ್ಡೆ, ಮೇಗೂರು, ನೂರಾಲ್ ಬೆಟ್ಟು, ಶೀರ್ಲಾಲು, ಆಂಡಾರು, ನೂರಾಲ್ ಬೆಟ್ಟು, ಈದು, ಕುತ್ಲೂರು, ನಾವೂರು, ಮಲವಂತಿಗೆ, ನಾರಾವಿ, ಸವಣಾಲು, ಸುಲ್ಕೇರಿಮೊಗ್ರು, ಲ್ಯಾಲ, ನಡ, ಗ್ರಾಮಗಳಿಂದ ಸ್ವ ಇಚ್ಚೆಯಿಂದ ಸದ್ರಿಯವರ ಜಮೀನನ್ನು ರಾಷ್ಟ್ರೀಯ ಉದ್ಯಾನವನಕ್ಕೆ ಬಿಟ್ಟುಕೊಟ್ಟು ಹೊರಗೆ ಹೋಗುವುದಾಗಿಯೂ ಈ ಬಗ್ಗೆ ಸೂಕ್ತ ಪರಿಹಾರ ನೀಡಲು ರಾಷ್ಟ್ರೀಯ ಉದ್ಯಾನವನದಲ್ಲಿ ವಾಸಿಸುತ್ತಿರುವ 1382 ಕುಟುಂಬಗಳಲ್ಲಿ 550 ಕುಟುಂಬಗಳು ಅರ್ಜಿ ಸಲ್ಲಿಸಿರುತ್ತವೆ. ಈ ಕುಟುಂಬಗಳು ಪುನರ್ವಸತಿಯನ್ನು ಅಪೇಕ್ಷಿಸದೇ ಹೆಚ್ಚುವರಿ ಪರಿಹಾರ ನೀಡಿದಲ್ಲಿ ಸ್ವ ಇಚ್ಚೆಯಿಂದ ತಮ್ಮ ಜಮೀನುಗಳನ್ನು ರಾಷ್ಟ್ರೀಯ ಉದ್ಯಾನವನಕ್ಕೆ ಬಿಟ್ಟು ಕೊಟ್ಟು ಇಚ್ಚೆ ಕಂಡಲ್ಲಿ ಜೀವನ ಮಾಡುವುದಾಗಿ ತಿಳಿಸಿರುತ್ತವೆ.

## ಕೋಷ್ಟಕ 13

## ಸ್ವಇಚ್ಛೆಯಿಂದ ಹೊರಗೆ ಹೋಗಲು ಇಚ್ಛಿಸಿ ಅರ್ಜಿ ಸಲ್ಲಿಸಿದ ವಿವರ

| ಕ್ರ.ಸಂ. | ರಕ್ಷಿತಾ ಅರಣ್ಯ | ಜಿಲ್ಲೆಗಳು | ಹಳ್ಳಿಗಳು | ಸುತ್ತುಗಟ್ಟೆ | ಕುಟುಂಬಗಳು | ಸ್ವೀಕೃತ ಅರ್ಜಿಗಳು | ಅರ್ಜಿದಾರರ ವಿವರ | | |
|---|---|---|---|---|---|---|---|---|---|
| | | | | | | | ಪ.ಜಾ | ಪ.ಪಂ | ಇತರೆ |
| 1 | ಕುದುರೆಮುಖ ರಾಷ್ಟ್ರೀಯ ಉದ್ಯಾನ | ಉಡುಪಿ | 10 | 27 | 243 | 76 | – | 35 | 41 |
| 2 | | ದಕ್ಷಿಣ ಕನ್ನಡ | 10 | 51 | 263 | 114 | – | 47 | 67 |
| 3 | | ಚಿಕ್ಕಮಗಳೂರು | 22 | 30 | 876 | 360 | 24 | 83 | 253 |
| | | ಒಟ್ಟು | 42 | 108 | 1382 | 550 | 24 | 165 | 361 |

ಮೂಲ: ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕುದುರೆಮುಖ ವನ್ಯಜೀವಿ ವಲಯ, ಕಾರ್ಕಳ. ಉಡುಪಿ ಜಿಲ್ಲೆ.

## ಪುನರ್ವಸತಿ ಪ್ರಗತಿ

ಕರ್ನಾಟಕ ಸರ್ಕಾರವು ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಪುನರ್ವಸತಿ ಕುರಿತು ಹೊಸ ಲೆಕ್ಕ ಶೀರ್ಷಿಕೆಯನ್ನು ಸೃಜಿಸಿ 2009–10ನೇ ಸಾಲಿನಲ್ಲಿ ಪುನರ್ವಸತಿ ಯೋಜನೆ ಕುರಿತು ರೂ. 97.42431 ಲಕ್ಷ ಅನುದಾನ ಬಿಡುಗಡೆ ಮಾಡಿರುತ್ತದೆ. ಈವರೆಗೆ ಬಿಡುಗಡೆ ಮಾಡಿದ ಅನುದಾನದ ವಿವರ ಈ ಕೆಳಗಿನಂತೆ ಇರುತ್ತದೆ.

**ಕೋಷ್ಟಕ 14**

**ಪುನರ್ವಸತಿಯ ಪ್ರಗತಿ ವರದಿ**

| ಕ್ರಸಂ | ವರ್ಷಗಳು | ಅನುದಾನ (ಲಕ್ಷ ರೂಗಳಲ್ಲಿ) | ಕೊಡಮಾಡಲ್ಪಟ್ಟ ಅನುದಾನ (ಲಕ್ಷ ರೂಗಳು) | ಖರ್ಚು (ಲಕ್ಷ ರೂಗಳು) |
|---|---|---|---|---|
| 1 | 2009–10 | 97.42431 | 97.42431 | 97.42431 |
| 2 | 2010–11 | 250.00 | 250.00 | 250.00 |
| 3 | 2011–12 | 250.00 | 250.00 | 250.00 |
| 4 | 2012–13 | 239.64 | 239.64 | 239.64 |
| 5 | 2013–14 | 1530.00 | 1530.00 | 1530.00 |
| 6 | 2014–15 | 3133.00 | 3133.00 | 3133.00 |
| 7 | 2015–16 | 550.00 | 550.00 | 550.00 |
| 8 | 2016–17 | 2274.00 | 2274.00 | 2274.00 |
| 9 | 2017–18 | 800.00 | 800.00 | 800.00 |
| ಒಟ್ಟು | | **9124.06431** | **9124.06431** | **9124.06431** |

ಮೂಲ: ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕುದುರೆಮುಖ ವನ್ಯಜೀವಿ ವಲಯ, ಕಾರ್ಕಳ. ಉಡುಪಿ ಜಿಲ್ಲೆ.

ಪುನರ್ವಸತಿ ಯೋಜನೆಯಡಿ ಈವರೆಗೆ ಭರಿಸಿದ ವೆಚ್ಚ ಮತ್ತು ಸ್ವಾಧೀನ ಪಡೆದ ಭೂಮಿಯ ವಿವರ ಈ ಕೆಳಗಿನಂತೆ ಇರುತ್ತದೆ.

**ಕೋಷ್ಟಕ 15**

**ಪುನರ್ವಸತಿ ಯೋಜನೆಯಡಿ ಈವರೆಗೆ ಭರಿಸಿದ ವೆಚ್ಚ ಮತ್ತು ಸ್ವಾಧೀನಪಡೆದ ಭೂಮಿಯ ವಿವರ**

| ಕ್ರಸಂ | ಜಿಲ್ಲೆ | ಬಿಡುಗಡೆಗೊಂಡ ಹಣ(ಲಕ್ಷ ರೂ) | ಸ್ಥಳಾಂತರಗೊಂಡ ಕುಟುಂಬಗಳು | ಹಂಚಲ್ಪಟ್ಟ ಹಣ(ಲಕ್ಷ ರೂಗಳಲ್ಲಿ) ಭೂಮಿ (ಎಕರೆ) | ಸ್ವಾಧೀನ ಪಡಿಸಿಕೊಂಡ |
|---|---|---|---|---|---|
| 1 | ಚಿಕ್ಕಮಗಳೂರು | 4877.04642 | 110 | 4153.70031 | 282.02 |
| 2 | ದಕ್ಷಿಣ ಕನ್ನಡ | 2597.25772 | 86 | 2288.30593 | 134.795 |
| 3 | ಉಡುಪಿ | 1649.76017 | 47 | 1425.40148 | 87.18 |
| | ಒಟ್ಟು | **9124.06431** | **243** | **7867.40772** | **503.995** |

**ಮೂಲ:** ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕುದುರೆಮುಖ ವನ್ಯಜೀವಿ ವಲಯ, ಕಾರ್ಕಳ. ಉಡುಪಿ ಜಿಲ್ಲೆ.

## ಅಗತ್ಯವಿರುವ ಅನುದಾನದ ವಿವರ

ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯಲ್ಲಿ 1382 ಕುಟುಂಬಗಳು ವಾಸಿಸುತ್ತಿದ್ದರೂ 550 ಕುಟುಂಬಗಳು ಮಾತ್ರ ರಾಷ್ಟ್ರೀಯ ಉದ್ಯಾನವನದಿಂದ ಸ್ವಇಚ್ಚೆಯಿಂದ ಹೊರಗೆ ಹೋಗುವುದಾಗಿಯೂ, ಈ ಬಗ್ಗೆ ಸೂಕ್ತ ಪರಿಹಾರ(ವಿವಿಧ ಇಲಾಖೆಗಳು ನಿರ್ಧರಿಸುವ ಸಂಪೂರ್ಣ ಮೌಲ್ಯ) ಪಾವತಿಸಲು ಮನವಿ ಸಲ್ಲಿಸಿರುತ್ತವೆ. ಪ್ರಸ್ತುತ ಅರ್ಜಿ ಸಲ್ಲಿಸಿರುವ 550 ಕುಟುಂಬಗಳಲ್ಲಿ 243 ಕುಟುಂಬಗಳಿಗೆ ರೂ.786740772.00 ಪರಿಹಾರ ಪಾವತಿಸಲಾಗಿದೆ. ಉಳಿದ 297 ಕುಟುಂಬಗಳಿಗೆ ರೂ.119.60 ಕೋಟಿ ಅನುದಾನ ಅವಶ್ಯಕತೆ ಇರುತ್ತದೆ. ಉಳಿದ ಕುಟುಂಬಗಳ ಕಂದಾಯ ಮೌಲ್ಯಮಾಪನ ಪೂರ್ಣಗೊಂಡಿರುವುದಿಲ್ಲ ಆದುದರಿಂದ ಪ್ರತಿ ಕುಟುಂಬಕ್ಕೆ ಅಂದಾಜು ರೂ.40.00 ಲಕ್ಷದಂತೆ ಪರಿಗಣಿಸಿ ಅಗತ್ಯ ಇರುವ ಅನುದಾನಕ್ಕೆ ಪ್ರಸ್ತಾವನೆ ಸಲ್ಲಿಸಿದೆ.[16]

ಕೋಷ್ಟಕ 16

ಅಗತ್ಯವಿರುವ ಅನುದಾನದ ವಿವರ

| ಕ್ರಸಂ | ಜಿಲ್ಲೆ | ವಾಸಿಸುತ್ತಿರುವ ಒಟ್ಟು ಕುಟುಂಬಗಳು | ಅರ್ಜಿ ಸಲ್ಲಿಸಿದ ಕುಟುಂಬಗಳು | ಪರಿಹಾರ ಪಡೆದ ಕುಟುಂಬಗಳು | ಅರ್ಜಿ ಸಲ್ಲಿಸಿ ಬಾಕಿ ಇರುವ ಕುಟುಂಬಗಳು | ಈ ಕುಟುಂಬಗಳಿಗೆ ಅನುದಾನ (ರೂ ಲಕ್ಷಗಳಲ್ಲಿ) |
|---|---|---|---|---|---|---|
| 1 | ಚಿಕ್ಕಮಗಳೂರು | 876 | 360 | 110 | 250 | 10000 |
| 2 | ದಕ್ಷಿಣ ಕನ್ನಡ | 263 | 114 | 86 | 28 | 1120 |
| 3 | ಉಡುಪಿ | 243 | 76 | 47 | 21 | 840 |
| ಒಟ್ಟು | | **1382** | **550** | **243** | **299** | **11960** |

**ಮೂಲ:** ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕುದುರೆಮುಖ ವನ್ಯಜೀವಿ ವಲಯ, ಕಾರ್ಕಳ. ಉಡುಪಿ ಜಿಲ್ಲೆ.

**ಅಣಸಿ ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿಯೋಜನೆಗಳಿಂದಾದ ಸ್ಥಳಾಂತರ**

ದಾಂಡೇಲಿ–ಅಣಸಿ ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿಯೋಜನೆಗಳನ್ನು ಒಟ್ಟಿಗೆ ಸೇರಿಸಿ ಕಾಳಿ ಹುಲಿ ಸಂರಕ್ಷಿತ ಯೋಜನೆ ಮತ್ತು ರಾಷ್ಟ್ರೀಯ ಉದ್ಯಾನವನವೆಂದು ಹೆಸರನ್ನು ಕಳೆದ ವರ್ಷ ಅರಣ್ಯ ಇಲಾಖೆ ಮರುನಾಮಕರಣ ಮಾಡಿದೆ.

ಕಾಳಿ ರಾಷ್ಟ್ರೀಯ ಉದ್ಯಾನವನ ಒಟ್ಟು 1,116,67 ಚ.ಕಿ.ಮೀ. ವ್ಯಾಪ್ತಿಯನ್ನು ಒಳಗೊಂಡಿದೆ. ದಾಂಡೇಲಿ ವನ್ಯಜೀವಿ ಕಾಡಿನ 475.018 ಚ.ಕಿ.ಮೀ. ಅಣಸಿಯ 339.8.66 ಚ.ಕಿ.ಮೀ. ಸೇರಿಸಿಕೊಂಡು ಕಾಳಿ ಹುಲಿಸುರಕ್ಷಿತ ಪ್ರದೇಶವೆಂದು ಕರೆಯಲಾಗಿದೆ. ಸರ್ಕಾರದ ಅಧಿಸೂಚನೆ FEE 299 FWL 2007 ದಿನಾಂಕ 20–12–2007ರ ಆದೇಶ ತದನಂತರ ಜೋಯಿಡಾ ಸಂರಕ್ಷಿತ ಪ್ರದೇಶದ 163.3303 ಚ.ಕಿ.ಮೀ. ಹಾಗೂ ಕಾರವಾರದ 77.4823 ಚ.ಕಿ.ಮೀ. ಪ್ರದೇಶ ಮುಂದುವರಿದು ಗೋವಾ ವನ್ಯಜೀವಿ ವಿಭಾಗದ ಮಹಾವೀರ ಅರಣ್ಯಧಾಮ ಹಾಗೂ ಬೆಳಗಾಂ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಭೀಮಗಡ ಅರಣ್ಯಗಳನ್ನು ಸೇರಿಸಿಕೊಂಡು ಒಟ್ಟು 1300 ಚ.ಕಿ.ಮೀ. ಬೃಹತ್ ವ್ಯಾಪ್ತಿಯ ಬಹುದೊಡ್ಡ ಹುಲಿ ಸಂರಕ್ಷಣಾ ಯೋಜನೆಯನ್ನು ಸರ್ಕಾರದ ಅರಣ್ಯೆ ಇಲಾಖೆ ಜಾರಿಗೊಳಿಸಿದೆ. ಈ ಪ್ರದೇಶದಲ್ಲಿ ಒಟ್ಟು 4000 ಕುಟುಂಬಗಳು ನೆಲೆಸಿವೆ ಎಂದು ತಿಳಿದುಬಂದಿದೆ.

ಮೊದಲು ಹಮ್ಮಿಕೊಳ್ಳಲಾಗಿದ್ದ ಅಣಸಿ-ದಾಂಡೇಲಿ ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿಸಂರಕ್ಷಿತ ಪ್ರದೇಶದ ವ್ಯಾಪ್ತಿಯಲ್ಲಿ 56 ಗ್ರಾಮಗಳು 500 ಕುಟುಂಬಗಳು ಇಲಾಖೆಗಳು ಮಾಹಿತಿಯ ಪ್ರಕಾರ 320 ಕುಟುಂಬ ಮೊದಲನೇ ಹಂತದಲ್ಲಿ 180 ಕುಟುಂಬಗಳು ಎರಡನೇ ಹಂತಗಳಲ್ಲಿ ಸ್ವಇಚ್ಛೆಯಿಂದ ಪರಿಹಾರ ಪಡೆದು ಯೋಜನೆಯ ವ್ಯಾಪಿಯ ಸಮೀಪದ ಸ್ಥಳಗಳಿಗೆ ಸ್ಥಳಾಂತರಿಸಲಾಗಿದೆ. 1987ರಲ್ಲಿ ಶುರುವಾದ ರಾಷ್ಟ್ರೀಯ ಉದ್ಯಾನವನದ ಪ್ರಕ್ರಿಯೆ 2003ರಲ್ಲಿ ಅನುಸೂಚಿತಗೊಳ್ಳುವ(Notification) ಮೂಲಕ ಮೂಲನಿವಾಸಿಗಳ ಸ್ಥಳಾಂತರದ ಪ್ರಕ್ರಿಯೆ ಶುರುವಾಗಿದೆ.

ರಾಷ್ಟ್ರೀಯ ಹುಲಿ ಸಂರಕ್ಷಣಾ ಪ್ರಾಧಿಕಾರ, ನವದೆಹಲಿ ಪತ್ರ ಸಂಖ್ಯೆ 3-1/2003 ಪಿ.ಟಿ.ದಿನಾಂಕ 10-03-2008ರ ಆದೇಶದ ಪ್ರಕಾರ ಕರ್ನಾಟಕದಲ್ಲಿ ಬಂಡೀಪುರ, ನಾಗರಹೊಳೆ, ಭದ್ರಾ ಮತ್ತು ದಾಂಡೇಲಿ ಅಣಸಿ ಮೀಸಲು ಅರಣ್ಯಪ್ರದೇಶಗಳಲ್ಲಿ ಆಗಲೇ ಚಾಲ್ತಿಯಲ್ಲಿದ್ದ ರಾಷ್ಟ್ರೀಯ ಉದ್ಯಾನವನದ ಜೊತೆ ಅದೇ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಪ್ರದೇಶವನ್ನು ವಿಸ್ತರಿಸಿಕೊಂಡು ಹುಲಿ ಸಂರಕ್ಷಣಾ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ದಾಂಡೇಲಿ-ಅಣಸಿ ರಾಷ್ಟ್ರೀಯ ಉದ್ಯಾನವನ್ನು ಹೊರತುಪಡಿಸಿ ಉಳಿದಂತೆ ಇರುವ ಎಲ್ಲಾ ರಾಷ್ಟ್ರೀಯ ಉದ್ಯಾನವನದಿಂದ ಕಾಡಿನೊಳಗಿನ ಮೂಲನಿವಾಸಿಗಳನ್ನು ಕಾಡಿನಿಂದ ಒಕ್ಕಲೆಬ್ಬಿಸಿ ಸ್ಥಳಾಂತರ ಮಾಡಲಾಗಿದೆ.

**ಅಣಸಿ ರಾಷ್ಟ್ರೀಯ ಉದ್ಯಾನವನದಿಂದ ಮೂಲನಿವಾಸಿಗಳನ್ನು ಒಕ್ಕಲೆಬ್ಬಿಸದಂತೆ ನಡೆದ ಹೋರಾಟ**

1997ರಲ್ಲೇ ಉತ್ತರ ಕನ್ನಡ ಜಿಲ್ಲೆಯ ಅಣಸಿ ಸುತ್ತಮುತ್ತಲ ಪ್ರದೇಶದ ನೂರಾರು ಹಳ್ಳಿಯ ಕುಟುಂಬಗಳಿಗೆ ಸರ್ಕಾರ ಕೈಗೊಂಡ ರಾಷ್ಟ್ರೀಯ ಉದ್ಯಾನವನದ ಆದೇಶದ ಪ್ರಕಾರ ವ್ಯಾಪ್ತಿ ಪ್ರದೇಶದಿಂದ ಸ್ಥಳಾಂತರಗೊಳ್ಳುವಂತೆ ನೋಟಿಸನ್ನು ಅರಣ್ಯ ಇಲಾಖೆ ಅದರ ವ್ಯಾಪ್ತಿ ಪ್ರದೇಶದ ಜನಗಳಿಗೆ ನೀಡುವ ಮೂಲಕ ಮೂಲನಿವಾಸಿಗಳಲ್ಲಿ ಆತಂಕವನ್ನು ಸೃಷ್ಟಿಸಿತು. ಆಗಲೇ ಸೂಪಾ ಅಣೆಕಟ್ಟಿನಿಂದಾಗಿ ತಾಲ್ಲೂಕಿನ 47 ಹಳ್ಳಿಗಳ ಅರ್ಧ ಜನ ಕುಣಬಿಗಳನ್ನೊಳಗೊಂಡಂತೆ ಕಾಡಿನ ಮೂಲನಿವಾಸಿಗಳನ್ನು ರಾಮನಗರದಂತಹ ಬರಡು ಭೂಮಿಗೆ ಒಕ್ಕಲೆಬ್ಬಿಸಿ ಅದರಿಂದ ಆ ಜನಗಳು ಪಡುತ್ತಿದ್ದ ಪರಿಪಾಟಲನ್ನು ನೋಡಿದ್ದ ಜನ ನಿಜಕ್ಕೂ ಗಾಬರಿಗೊಂಡಿದ್ದರು. ಈ ಕಾಯ್ದೆ ಮೂಲಕ ಉಳಿದ ಹಳ್ಳಿಗಳು ಸ್ಥಳಾಂತರಗೊಂಡದ್ದೇ ಆದಲ್ಲಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕು ಸಂಪೂರ್ಣವಾಗಿ ಮಾನವರಹಿತ ಕಾಡಾಗಿ ಮಾರ್ಪಟ್ಟು ಆ ದಾಖಲೆಗೆ ಒಳಗಾಗುವ ಸಂದರ್ಭವಿತ್ತು. ಈ ಸರ್ಕಾರದ ಕಾಯ್ದೆಯಿಂದ ಮೂಲ ನಿವಾಸಿಗಳಿಗೆ ಆಗುವ ಅನಾಹುತಗಳನ್ನರಿತು ಸ್ಥಳೀಯ 'ಅಣಸಿ ರಾಷ್ಟ್ರೀಯ ಉದ್ಯಾನವನ ವಿರೋಧಿ ಸಮಿತಿ'ಯನ್ನು ರಚಿಸಿಕೊಂಡು ಹಲವಾರು ಹೋರಾಟಗಳನ್ನು ಆಗಲೇ ರೂಪಿಸಿದ್ದರು.

ಆಗ ಶಾಸಕರಾಗಿದ್ದ ದಿವಂಗತ ವಸಂತ ಆಸ್ನೋಟಿಕ್‌ರವರೂ, ಸಂಸದರಾಗಿದ್ದ ಅನಂತ

**ರಾಷ್ಟ್ರೀಯ ಉದ್ಯಾನವನಕ್ಕೆ ಒಳಗೊಳ್ಳುವ ಹಳ್ಳಿಗಳು**

1. ಅಮಗ
2. ಆಮಗ
3. ಕೇಗದಾಳ
4. ವಿಂಜೋಳಿ
5. ಗುಟ್ಟೆ
6. ಪಣಸೋಲಿ
7. ಅಮಗಾಂವ್
8. ಕವಳ
9. ಸನ್ಮಾಗೆ
10. ವಿರ್ನೂಲಿ
11. ಕಲಾಮ್ಕಂದ
12. ಆವರ್ಲಿ
13. ಶಿರೋಲಿ
14. ಗಾಂಗೋಡ
15. ಕುಂಬೇಲಿ
16. ಗುಂದ
17. ಚಿಂಚಕಾಂಡ
18. ಬೆಡ್ಸಗದ್ದೆ
19. ಕರಿಯಾಡಿ
20. ನಂದಿಗದ್ದೆ
21. ಶಿವಾಳಿ
22. ಯರಮುಖ
23. ಚಾಪೇರಿ
24. ಶಿವಪುರ
25. ಕಾತೇಲಿ
26. ಗೋಡ್‌ಶೇತ್
27. ಡೇರಿಯೆ
28. ಕಟೇಲ್
29. ತೆರಾಳಿ
30. ಕಳಸಾಲು
31. ಸಾಳಾವಳಿ
32. ಕುಂಡಳ್
33. ಚಾಪೋಲಿ(ಕಳಸಾಯ್)
34. ತಿನ್ಯೆಕಾಂಡ
35. ಅಂಬೋಳಿ
36. ವಡ್ಕಲ್
37. ಕೊಡ್ತಳಿ
38. ನೇತುರ್ಗ
39. ಹೆಬ್ಬಾಳ
40. ಬೀರ್ಕೊಲ್
41. ಉಳವಿ
42. ನುಜ್ಜಿ
43. ಬಿಡೋಲಿ
44. ನಿಗುಂಡಿ
45. ತುಳಸಗೇರಿ
46. ಲಾಂಡೆ
47. ಗೊಟೆಗಾಳಿ
48. ಕಮರಗಾಂವ್

49. ಗೋಯರ್ 50. ಕುಳಗಿ

**ಹೊಸದಾಗಿ ಸೇರ್ಪಡೆಯಾದ ಹಳ್ಳಿಗಳು**

1. ತೆರಾಳಿ 2. ಕೊಡ್ತಳ್ಳಿ
3. ಉಳಬಿ 4. ಬಳೆಮನೆ
5. ಡಿಗ್ಗಿ 6. ಅಣಸಿ

ಸ್ಥಳೀಯ ಸಂಸದರು ಸರ್ಕಾರದ ಈ ತೀರ್ಮಾನವನ್ನು ವಿರೋಧಿಸಿ ಹೇಳಿಕೆಗಳನ್ನು ನೀಡಿದ್ದರು.

ಅದೇ ಸಮಯದಲ್ಲಿ 1998ರಲ್ಲಿ ಜೋಯಿಡಾ ತಾಲ್ಲೂಕಿನಲ್ಲಿ ಕುಣಬಿ ಬುಡಕಟ್ಟುಗಳೊಟ್ಟಿಗೆ ಕೆಲಸ ಮಾಡಿದ ಗ್ರೀನ್ ಇಂಡಿಯಾ ಸಂಸ್ಥೆಯ(Green India Tribal Empowerment project) ಕಾಲಿಟ್ಟಿತ್ತು. ಈ ಸ್ಥಳೀಯ ಸಮಸ್ಯೆಗಳನ್ನು ಮನಗಂಡು ಇದರ ವಿರುದ್ಧ ಹೋರಾಡಲು ಬೇರೆಯದೇ ರೀತಿಯಲ್ಲಿ ಕಾರ್ಯತಂತ್ರ ರೂಪಿಸಿತು. ಮೊದಲು ಹಳ್ಳಿಗಳಲ್ಲಿ ಸಂಘ, ಸಂಘಟನೆ ಮತ್ತು ರಾಷ್ಟ್ರೀಯ ಉದ್ಯಾನವನದ ಬಗ್ಗೆ ಮಾಹಿತಿ ಮತ್ತು ಅರಿವನ್ನು ನೀಡಿ 'ಅಣಸಿ ರಾಷ್ಟ್ರೀಯ ಉದ್ಯಾನವನ ವಿರೋಧಿ ಸಮಿತಿ' ಎನ್ನುವ ಹೆಸರನ್ನು ಬದಲಾಯಿಸಲು ತಿಳಿಸಿ 'ಅಣಸಿ ರಾಷ್ಟ್ರೀ ಉದ್ಯಾನವನ ಹಕ್ಕು ರಕ್ಷಣಾ ಸಮಿತಿ' ಎಂದು ನಾಮಕರಣಗೊಳಿಸಿ ಸಂಘಟನೆ ಮೂಲಕ ಹೋರಾಟಕ್ಕಿಳಿಯಿತು. ಸ್ಥಳೀಯ ವಿವಿಧ ಸ್ವಯಂ ಸೇವಾ ಸಂಸ್ಥೆಗಳನ್ನು ಕರೆದು "ರಾಷ್ಟ್ರೀಯ ಉದ್ಯಾನವನದ ಹಕ್ಕು ಬೆಂಬಲ ಸಮಿತಿ" ರಚಿಸಿ ಸ್ಥಳೀಯ ಹೋರಾಟ ಸಮಿತಿಗೆ ಸಲಹೆ ನೀಡುವ ಸಮಿತಿ ರಚಿಸಿ ಬೆಂಗಾವಲಾಗಿ ನಿಂತು ಹೋರಾಟಕ್ಕೆ ಶುರುವಿಟ್ಟುಕೊಂಡಿತು. ಆಗ ಧಾರವಾಡದಲ್ಲಿ ಕೇಂದ್ರೀಕೃತವಾಗಿದ್ದ ಸ್ವಯಂ ಸೇವಾ ಸಂಸ್ಥೆ ಸಮಾಜ ಪರಿವರ್ತನ ಸಮುದಾಯದ ಮುಖ್ಯ ಮತ್ತು ಹೋರಾಟಗಾರ ಎಸ್.ಆರ್.ಹಿರೇಮಠರನ್ನು ಕರೆಯಿಸಿ ಆಗ ಅರಣ್ಯ ಇಲಾಖೆಯ ವನ್ಯಜೀವಿ ವಿಭಾಗದ ಡಿ.ಸಿ.ಎಫ್. ಅಧಿಕಾರಿಯಾಗಿದ್ದ ಅವತಾರ್‌ಸಿಂಗ್‌ರೊಟ್ಟಿಗೆ ಮನವಿ ಸಲ್ಲಿಸಿ ಈ ಕಾಡಿನ ಸಮುದಾಯಗಳು ಕಾಡಿನದೇ ಒಂದು ಭಾಗ, ಈ ಸಮುದಾಯವನ್ನು ಒಕ್ಕಲೆಟ್ಟಿಸಿದಲ್ಲಿ ಸಮುದಾಯ ಛಿದ್ರಗೊಂಡು ಸರ್ವನಾಶವಾಗುವುದರ ಜೊತೆಗೆ ಇತ್ತ ವಿಶ್ವದಲ್ಲೇ ಜೀವ ವೈವಿಧ್ಯತೆಯಲ್ಲಿ 7ನೇ ಸ್ಥಾನ ಪಡೆದು ಪ್ರಖ್ಯಾತಿ ಹೊಂದಿರುವ ಕಾಡು ಕೂಡ ನಾಶವಾಗುತ್ತದೆ ಎಂದು ಮನವರಿಕೆ ಮಾಡಿಕೊಡಲಾಯಿತು.

ಅರಣ್ಯ ಇಲಾಖೆಯ ಮನವೊಲಿಸಲು ಮತ್ತು ಬುಡಕಟ್ಟುಗಳ ಮೇಲೆ ಅವರಿಗಿದ್ದ ತಪ್ಪು ಅಭಿಪ್ರಾಯಗಳನ್ನು ದೂರ ಮಾಡಲು 2 ದಿನದ ಕಾರ್ಯಾಗಾರವನ್ನು ಅಣಸಿ ಕಾಡಿನ ಮಡಿಲಲ್ಲೇ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಾಗಾರದಲ್ಲಿ 'ಆಕ್ಸಫಾಮ್'ಸಂಸ್ಥೆಯ ಸಹಯೋಗ ನೀಡಿತು. ಬಹಳ ಮುಖ್ಯವಾಗಿ ಡಿಸಿಎಫ್ ಅವತಾರ್‌ಸಿಂಗರಿಗೆ ಈ ಕಾಡಿನಲ್ಲಿರುವ ಕುಣಬಿಗಳು

ಮತ್ತು ಅವರ ಸಂಸ್ಕೃತಿ ಕಾಡನ್ನು ಸಂರಕ್ಷಿಸುವ ಮಹತ್ತರವಾದ ಆಚರಣೆಗಳನ್ನು ಹೊಂದಿವೆ. ಅವರ ಪ್ರತಿಯೊಂದು ಹಬ್ಬ, ಹರಿದಿನ ಇತರ ಉಪಾಸನೆಗಳು ಈ ಕಾಡಿನ ಜೀವ ವೈವಿಧ್ಯತೆಯನ್ನು ಕಾಪಾಡುವಲ್ಲಿ ಮಹತ್ತರ ಪಾತ್ರ ವಹಿಸಿವೆ. ಅದರಲ್ಲಿ ಕುಣಬಿಗಳಲ್ಲಿನ 'ಸೀಮಾಪದ್ಧತಿ' ಮಹತ್ವ ಸ್ವರೂಪಗಳನ್ನು ಆಗಲೇ ಮನವರಿಕೆ ಮಾಡಿದ ಕಾರಣ, ವಸ್ತುಸ್ಥಿತಿಯನ್ನು ಅರಿತ ಅರಣ್ಯಾಧಿಕಾರಿ ಅವತಾರ್‌ಸಿಂಗ್ ಅವರು ಸರ್ಕಾರಕ್ಕೆ ಮೂಲನಿವಾಸಿಗಳ ಪರವಾಗಿ 8 ವರದಿಗಳನ್ನು ಸಲ್ಲಿಸಿದರು. ಕೊನೆಕೊನೆಗೆ ನೀವು ಕಾಡಿನ ಪರವಾಗಿರದೆ ಜನಗಳ ಪರವಾಗಿ ಕಾರ್ಯ ನಿರ್ವಹಿಸುತ್ತಿರುವ ಕಾರಣ ನಿಮ್ಮ ಮೇಲೆ ಕ್ರಮ ಕೈಗೊಳ್ಳಬಾರದೇಕೆ? ಎಂಬ ನೋಟಿಸನ್ನು ಪಡೆದುಕೊಳ್ಳಬೇಕಾದ ಸಂದರ್ಭ ಒದಗಿ ಬಂತು. ಕೊನೆಗೆ ಜನಪರ ಅಧಿಕಾರಿಗಳ ವರದಿ ಮತ್ತು ಸಂಘ ಸಂಸ್ಥೆಗಳ ಹೋರಾಟದ ಫಲವಾಗಿ 2003ರಲ್ಲಿ ಸರ್ಕಾರವು ಅಣಸಿ ರಾಷ್ಟ್ರೀಯ ಉದ್ಯಾನವನ ಪ್ರದೇಶದ ವ್ಯಾಪ್ತಿಯ ಮೂಲನಿವಾಸಿಗಳಿಂದ ಈ ಕಾಡಿಗೂ ಮತ್ತು ಉದ್ಯಾನವನಕ್ಕೂ ಯಾವುದೇ ಧಕ್ಕೆ ಇಲ್ಲ. ಅವರ ಸಂಸ್ಕೃತಿಯ ಕಾಡಿನ ಸಂರಕ್ಷಣೆಗೆ ಪೂರಕವಾಗಿರುವ ಕಾರಣ ಸ್ಥಳೀಯ ಸಮುದಾಯಗಳನ್ನು ಇರುವ ಜಾಗದಲ್ಲೇ ಇರಿಸಿ ಸ್ಥಳಾಂತರಗೊಳಿಸದೆ ರಾಷ್ಟ್ರೀಯ ಉದ್ಯಾನವನದ ಪ್ರಕ್ರಿಯೆಗಳನ್ನು ಅನುಷ್ಠಾನಗೊಳಿಸಬಹುದೆಂಬ ಸಮುದಾಯಗಳ ಪರವಾದ ಮಹತ್ತರ ಅನುಸೂಚಿತ ಆದೇಶವು 2003ರಲ್ಲಿ ಪ್ರಕಟಣೆಗೊಳ್ಳುವ ಮೂಲಕ ಭಾರತದಲ್ಲಿ ಈ ಒಂದೇ ಒಂದು ರಾಷ್ಟ್ರೀಯ ಉದ್ಯಾನವನದಲ್ಲಿ ಕಾಡಿನ ಜನರನ್ನು 'ಸ್ಥಳಾಂತರಿಸದೇ ಅನುಷ್ಠಾನಗೊಳಿಸುವ ದಾಖಲೆ ಆದೇಶದ ಮೂಲಕ ಅಣಸಿ ಸುತ್ತಲ ಕಾಡಿನ ಜನ ನೆಮ್ಮದಿಯಿಂದ ಉಸಿರಾಡುವಂತಾಯಿತು.

ಪ್ರಸ್ತುತ ಅಧ್ಯಯನದ ವಿಷಯ ಬುಡಕಟ್ಟುಗಳಲ್ಲಿ 'ಸೀಮಾಪದ್ಧತಿ'ಯನ್ನು ಅಧ್ಯಯನಕ್ಕೊಳಪಡಿಸಿ ದಾಖಲೆಗೆ ಮಾಡುವ ಮೂಲಕ ಬುಡಕಟ್ಟು ಸಮುದಾಯಗಳಿಗೆ ತಮ್ಮ ಹಕ್ಕುಗಳನ್ನು ಪ್ರತಿಸ್ಥಾಪಿಸುವಲ್ಲಿ ಈ ಅಧ್ಯಯನ ಮಹತ್ತರ ಪಾತ್ರ ವಹಿಸುತ್ತದೆಂಬ ಪ್ರಜ್ಞೆ ಮೊಳಕೆಯೊಡೆಯಲೂ ಮೂಲ ಕಾರಣವೇ 'ಅಣಸಿ ನ್ಯಾಷನಲ್ ಪಾರ್ಕ್' ಜಯದ ಹೋರಾಟ. ಈ ಹೋರಾಟದಲ್ಲಿ ಮುಖ್ಯ ಪಾತ್ರ ವಹಿಸಿದ್ದ ಗ್ರೀನ್ ಇಂಡಿಯಾ ನಿರ್ದೇಶಕ ಬಿ.ಪಿ.ಮಹೇಂದ್ರ ಕುಮಾರ್ ಅಧ್ಯಯನಕಾರನಾದ ನನಗೆ ಮೂಲ ಪ್ರೇರಣೆ 2003ರಲ್ಲೇ ಈ ಅಧ್ಯಯನ ಮಾಡಬೇಕೆಂಬ ನಿರ್ಧಾರ ಅಂಕುರಿಸಿತ್ತು.

## ಅರಣ್ಯ ಕಾಯ್ದೆ, ಅಣೆಕಟ್ಟುಗಳು ಮತ್ತು ರಾಷ್ಟ್ರೀಯ ಉದ್ಯಾನವನಗಳಿಂದ ಸ್ಥಳಾಂತರಗಳಿಂದ 'ಸೀಮಾಪದ್ಧತಿ' ಮೇಲೆ ಉಂಟಾದ ವ್ಯತಿರಿಕ್ತ ಪರಿಣಾಮಗಳು

ಮೇಲಿನ ಅಭಿವೃದ್ಧಿಗಳ ನೆಪ ಮಾಡಿ ಈಗಾಗಲೇ ಕಾಡಿನಿಂದ ಸ್ಥಳಾಂತರಗೊಂಡಿರುವ ಸಮುದಾಯ ಮತ್ತು ಮೂಲ ನೆಲೆಯಲ್ಲಿನ 'ಸೀಮಾಪದ್ಧತಿಯ' ಮೇಲೆ ಉಂಟಾಗಿರುವ

ವ್ಯತಿರಿಕ್ತ ಪರಿಣಾಮವನ್ನು ಒಂದೇ ಒಂದು ಮಾತಿನಲ್ಲಿ ಹೇಳಬೇಕೆಂದರೆ 'ಸೀಮಾಪದ್ಧತಿಯ ಸಂಪೂರ್ಣ ನಾಶ' ಮತ್ತು 'ಆದಿವಾಸಿಗಳ ಛಿದ್ರಗೊಂಡ ಸಂಸ್ಕೃತಿರಹಿತ ಬದುಕು' ಎಂದು ಸಣ್ಣ ವಾಕ್ಯದಲ್ಲಿ ಸಂಕ್ಷಿಪ್ತಗೊಳಿಸಬಹುದು.

ಸೂಪಾ ತಾಲ್ಲೂಕಿನ ಮೂಲ ನೆಲೆಯಿಂದ 47 ಕುಳಾವಿಯ ಕುಣಬಿಗಳನ್ನು ರಾಮನಗರಕ್ಕೆ ಸ್ಥಳಾಂತರಗೊಂಡ ಕೆಲವು ಕುಣಬಿ ಕುಟುಂಬಗಳನ್ನು ಸಂದರ್ಶಿಸಿ ಸ್ಥಳಾಂತರ ಕ್ರಿಯೆಯಿಂದ ತಮ್ಮ ಸಾಮಾಜಿಕ, ಸಾಂಸ್ಕೃತಿಕ ಮತ್ತು ಸೀಮಾಪದ್ಧತಿಯ ಆಚರಣೆಗಳ ಮೇಲೆ ಯಾವ ರೀತಿಯ ವ್ಯತಿರಿಕ್ತ ಪರಿಣಾಮಗಳಾಯಿತೆಂದು ಪ್ರಶ್ನೆಗಳನ್ನು ಹಾಕಲಾಯಿತು. ಅದರ ಪ್ರಕಾರ ಸೂಪಾ 'ಕುತರೆ' ಕುಳಾವಿಯಿಂದ ರಾಮನಗರಕ್ಕೆ ಸ್ಥಳಾಂತರಗೊಂಡ ನಾರಾಯಣವಿಠೋಬಾ ಮಿರಾಶಿ, 'ನಿಂನೋಳ್'ನಿಂದ ರಾಮನಗರಕ್ಕೆ ಸ್ಥಳಾಂತರಗೊಂಡ ಅಪ್ಪಾಲಿಂಗೋ ಮಿರಾಶಿ, 'ಭೂಮಿವಾಡೋ'ಯಿಂದ ರಾಮನಗರಕ್ಕೆ ಸ್ಥಳಾಂತರಗೊಂಡ ವಿಠೋಬಾ ತಾಮಡೋ ಮಿರಾಶಿ, 'ನಿಂಬಳ'(ಹಾತಕಾಂಬ ಗ್ರಾಮ)ದಿಂದ ರಾಮನಗರಕ್ಕೆ ಸ್ಥಳಾಂತರಗೊಂಡ ನಾರಾಯಣ ಸುಕ್ಕೊ ಸಿಡ್ಡೇಕರ, 'ಬಾರಾಡಿ'ಯಿಂದ ಪೋಸೋಲಿಗೆ ಸ್ಥಳಾಂತರಗೊಂಡ ಬಾಳಪ್ಪಾ ಗೋಪಾಳ ವೆಳಿಪ್ 'ಕರಂಜೋಯ್ಡಾ'ದಿಂದ ಜೋಕನಗಾಳಿಗೆ ಸ್ಥಳಾಂತರಗೊಂಡ ಸುಭಾಷ ಬಿ. ವೆಳಿಪ್, 'ಲಾಂಡೆಯಿಂದ' ಹೊನ್ನಾತಕ್ಕೆ ಸ್ಥಳಾಂತರಗೊಂಡ ವಿಷ್ಣು ಪುಂಕೋವೆಳಿಪ್ ಮುಂತಾದವರನ್ನು ವಿಷಯದ ಕುರಿತು ಮಾತನಾಡಿಸಲಾಯಿತು.

ತಮ್ಮ ಮೂಲ ನೆಲೆ ಮತ್ತು ಸೀಮಾವಲಯದ ಗಡಿ ದಾಟಿದ ಎಲ್ಲರೂ ಬಹುತೇಕ ತಮ್ಮ ಸಾಂಸ್ಕೃತಿಕ ಆಚರಣೆ ಮತ್ತು ಅದರ ಮಹತ್ವದ ಕೊಂಡಿ ಕಳಚಿಕೊಂಡು ಸಂಪೂರ್ಣ ಕಾಡಿನ ಹತ್ತಿರದಲ್ಲಿದ್ದ ಕಾಡಿನ ಸಂಬಂಧ ಕಳೆದುಕೊಂಡಿದ್ದಾರೆ. ಕಾಡು ಮತ್ತು ಅವರ ಸೀಮಾದೈವಗಳಾಗಿದ್ದ ದೈವಗಳು ಕ್ರಮವಾಗಿ ಕುಟೆ, ಶಿವರಾತ್‌ನಾಸ, ಪಾಯಿಕ, ಖಂಡಾಳೋ, ಬಿಲ್ವಾನಾಸ್, ಗೊರಯಾನಾಸ್, ಪರ್ತೆನಾಸ್, ವಾಗ್ರೋ, ಜನ್ಮಿ, ಲಾಂಡೇಶ್ವರಿ, ಭೋರುಜೋನಾಸ್, ಸಿವರನಾಸ್, ವಜರನಾಸ, ಚವಾಟೋ, ಭೂಮಿಮಾಯಾ, ಸೇಳ್ಯಾಪಾಯಿಕ್, ಬಾಗೇಲಿಪಾಯಕ್, ಮಡಬಾಸ್, ರಾಯಿಜೋನಾಸ್, ಕುಂಬರಿನಾಸ್ ಮುಂತಾದ ಸೀಮಾದೈವಗಳು ಮತ್ತು ಆಚರಣೆ ಹಾಗೂ ಅದರಿಂದ ಪ್ರಾಪ್ತವಾಗುತ್ತಿದ್ದ ಉಪಯೋಗ ಒಟ್ಟಾರೆ ಎಲ್ಲವನ್ನು ಕಳೆದುಕೊಂಡು ವಂಚನೆಗೊಳಗಾಗಿದ್ದಾರೆ. ಜೊತೆಗೆ ಗ್ರಾಮದೇವತೆಗಳಾದ ಚಂದ್ರೇಶ್ವರ, ವಿಮಲೇಶ್ವರ, ಮಹಾದೇವ, ರೌದ್ರಿ, ಲಾಂಡೇಶ್ವರಿ ಮುಂತಾದ ಗ್ರಾಮ ದೇವತೆಗಳನ್ನು ಅಲ್ಲೇ ಬಿಟ್ಟು ಬರಬೇಕಾಯಿತು. ಪ್ರತಿ ಕುಳಾವಿಗಳಿಂದ ಸಾಮೂಹಿಕವಾಗಿ ಬದುಕುತ್ತಿದ್ದ ಕುಣಬಿಗಳ ಒಂದೇ ಹಳ್ಳಿಯ ಜನಗಳನ್ನು ಬೇರೆ ಬೇರೆ ಕಡೆ ಬೇರೆ ಬೇರೆ ಸಮುದಾಯಗಳ ಜೊತೆ ಜೊತೆಗೆ ಜಾಗ ನೀಡಿ ಕೊಟ್ಟ ಪರಿಣಾಮ ಕಾಡಿನ ಸೀಮಾ ಆದಿವಾಸಿ ಆಚರಣೆಗಳ ಒತ್ತಟ್ಟಿಗಿರಲಿ ಕೂಡಿ ಬಾಳಿ ಸಂತಸದಿಂದ ಬದುಕುತ್ತಿದ್ದ ಅವರ 'ಸಾಮೂಹಿಕತ್ವದ' ಸಮಷ್ಟಿ ಬದುಕನ್ನೇ ಛಿದ್ರಛಿದ್ರಗೊಳಿಸಿದ್ದು ಸ್ಥಳಾಂತರ

ಕಾಡು ಮತ್ತು ಅದರಿಂದ ಲಭ್ಯವಾಗುತ್ತಿದ್ದ ಕಿರು ಅರಣ್ಯ ಉತ್ಪನ್ನ ಬೇಟೆ, ಔಷಧಿ, ಗೆಡ್ಡೆಗೆಣಸು, ಜೇನು, ಅಣಬೆ, ಕಾಡಿನ ಹಣ್ಣು ಹಂಪಲು ಸಮೃದ್ಧ ಆಹಾರ ದೈವಾಚಾರಣೆ, ರಕ್ಷಣೆ ಇವೆಲ್ಲವುಗಳಿಂದ ಹೊರದೂಡಲ್ಪಟ್ಟ ಅವರ ಬದುಕು ನೀರಿನಿಂದ ಹೊರತೆಗೆದ ಮೀನಿನಂತಾಗಿದೆ.

ಸಾಮಾನ್ಯವಾಗಿ ಕುಣಬಿಗಳಲ್ಲಿ ಮಡಿದವರ ಆತ್ಮಗಳನ್ನು ರುದ್ರಿಯಾಗಿದ್ದು ನಂತರ 'ಆಕಾರ' ಪ್ರತಿಷ್ಠಾಪನೆ ಮಾಡಿ ಕುಲದೈವಗಳನ್ನಾಗಿ ಸ್ಥಾಪಿಸಲಾಗುತ್ತದೆ. ಮುಂದೆ ಈ ಆತ್ಮಗಳೇ ಸೀಮಾದೈವಗಳಾಗುತ್ತವೆ. ಅವು ತಮ್ಮನ್ನು ತಮ್ಮ ಕಾಡನ್ನು ಸಹಾ ರಕ್ಷಿಸುತ್ತಾ ಕಾಪಾಡುತ್ತಿರುತ್ತದೆಂಬ ನಂಬಿಕೆ. ಅವರ ಬದುಕಿನೊಳಗೆ ನೆಮ್ಮದಿಯ ನಿರುಂಬಳತನವನ್ನು ನೀಡಿರುತ್ತದೆ. ಆದರೆ ಸ್ಥಳಾಂತರಗೊಂಡವರ ಬದುಕಿನಲ್ಲಿ ಆ ನೆಮ್ಮದಿ ಕಾಣಲಿಲ್ಲ. ಕಾರಣ ಇಲ್ಲಿ ಮಡಿದವರ ಆತ್ಮಗಳು ಕುಲದೈವಗಳಾಗಿ ಸ್ಥಾಪನೆಗೊಂಡಿಲ್ಲ. ಬಹಳ ಮುಖ್ಯವಾಗಿ ಸ್ಥಳಾಂತರಗೊಂಡ ಸ್ಥಳಗಳಿಗೆ ಬೇಟಿ ನೀಡಿದಾಗ ಕಂಡುಬಂದದ್ದು ತಮ್ಮ ಮೂಲ ದೈವಗಳನ್ನು ಮರೆತು ಮೇಲ್ವರ್ಗದವರು ಪೂಜಿಸುವ ದೈವಗಳನ್ನು ಆರಾಧಿಸುತ್ತಾ ಯುಗಾದಿ, ಗಣೇಶ ಚೌತಿ, ರಾಮನವಮಿ, ಸತ್ಯನಾರಾಯಣಪೂಜೆ, ತುಳಸಿ ಹಬ್ಬ ಇತ್ಯಾದಿಗಳನ್ನು ಆಚರಿಸುತ್ತಾ ಅನ್ಯಧರ್ಮೀಯರ ಮುಖ್ಯವಾಹಿನಿಗೆ ಸ್ಥಿತ್ಯಂತರಗೊಂಡಿರುವುದನ್ನು ಇವರಲ್ಲಿ ಕಾಣಬಹುದಾಗಿದೆ. ಒಂದಿಷ್ಟು ಜನ ಸೂಪಾ ಡ್ಯಾಂನಿಂದ ನೀರು ಕಡಿಮೆಯಾದಾಗ ತಮ್ಮ ಮೂಲ ನೆಲೆಗಳಿಗೆ ಹೋಗಿ ತಾವು ಬಿಟ್ಟು ಬಂದ ದೈವಗಳಿಗೆ ಪೂಜೆ ಸಲ್ಲಿಸಿ ಬರುವುದನ್ನು ಕಾಣಬಹುದಾಗಿದೆ.

ಸೀಮಾಪದ್ಧತಿಯ ವಲಯದಲ್ಲಿ ದೈವ, ಆತ್ಮ, ಕಾಡಿನೊಡನೆ ಇದ್ದ ಒಡನಾಟ, ಕಾಡಿನ ಪೌಷ್ಟಿಕ ಸಮೃದ್ಧ ಆಹಾರ, ನಾವು ನಮ್ಮದೆಂಬ ಮಮಕಾರ ಒಟ್ಟಾರೆಯಾಗಿ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ನೆಮ್ಮದಿ ಬದುಕನ್ನು ಕಳೆದುಕೊಂಡು ಸರ್ಕಾರ ನೀಡಿದ ಕೆಟ್ಟ ಸೌಲತ್ತುಗಳಲ್ಲಿ ಜೀವನ ಸವೆಸಲೇಬೇಕೆಂಬ ಕಾರಣಕ್ಕೆ ಬದುಕು ದೂಡುವ ಯಾಂತ್ರಿಕದ ಬಾಳು ಆದಿವಾಸಿ ಸ್ಥಳಾಂತರಿಗಳಿಗಾಗಿರುವುದನ್ನು ಕಾಣಬಹುದಾಗಿದೆ.

ಹಿಂದಿನ ಅಧ್ಯಯನಗಳಲ್ಲಿ ಪ್ರಸ್ತಾಪಿಸಿಸಿರುವ ಹಾಗೆ 'ಸೀಮಾಪದ್ಧತಿಯು' ಬುಡಕಟ್ಟುಗಳಲ್ಲಿ ಇದಕ್ಕಿದ್ದಂತೆ ಉದ್ಭವವಾದ ಸಂಗತಿಯಲ್ಲ. ಸಾವಿರಾರು ವರ್ಷಗಳಿಂದ ಪ್ರಾಣಿ ಜೀವನ ಸಾಗಿಸುತ್ತಿದ್ದ ಕಾಲದಿಂದಲೇ, ಪ್ರಾಣಿ ಸಹಜ ಗುಣವಾಗಿಯೇ ಜೀವವಿಕಾಸದ ಹಾದಿಯಲ್ಲೇ ಮಾನವನ ವಿಕಾಸದೊಂದಿಗೆ ಕಾಲು ಹಾಕಿ ಶತಶತಮಾನಗಳಿಂದ ರೂಪಿತವಾದ ಆದಿವಾಸಿಗಳ ಬದುಕನ್ನು ನಿಯಂತ್ರಿಸುವ ನಿರ್ದೇಶಿಸುವ ಸಂಪೂರ್ಣ ಸಂಸ್ಕೃತಿಯ ತಿರುಳು ಸೀಮಾಪದ್ಧತಿಯ ವ್ಯವಸ್ಥೆ ಕಾಡಿನ ನಿರ್ದಿಷ್ಟ ಪ್ರದೇಶದಲ್ಲಿ ನೆಲೆಯಾಗಿರುವ ಆದಿವಾಸಿಗಳು ತಮ್ಮ ಬದುಕಿನ ಜೊತೆ ಕಾಡಿನ ಸಮಸ್ತ ಜೀವಸಂಕುಲಗಳೊಟ್ಟಿಗೆ ಇಟ್ಟುಕೊಂಡ ಮತ್ತು ಕಟ್ಟಿಕೊಂಡ ಅವಿನಾಭಾವ ಸಂಬಂಧದ ಫಲಶೃತಿ 'ಸೀಮಾವ್ಯವಸ್ಥೆ' ಶತಶತಮಾನಗಳಿಂದ ರೂಪಿಸಿಕೊಂಡ ನಿರ್ದಿಷ್ಟ ಸಂಸ್ಕೃತಿಯ ಪ್ರತಿಯೊಂದು ಆಚರಣೆಗಳಾದ ಹುಟ್ಟು, ಸಾವು, ಮದುವೆ, ಹಬ್ಬ, ಹರಿದಿನ,

ಚಿಕಿತ್ಸೆ, ಪೂಜೆ ಪುನಸ್ಕಾರ, ಹಾಡು, ಕುಣಿತ, ಆಹಾರ ಸಂಗ್ರಹಣೆ, ಸಹಜಕೃಷಿ, ಬೇಟೆ, ಸಾವಿನ ನಂತರದ ಬದುಕು, ಪ್ರಾಣಿ ಪಕ್ಷಿ ಮರಗಿಡಗಳ ಆರಾಧನೆ, ಮಡಿದವರ ಆತ್ಮಗಳೊಟ್ಟಿಗಿನ ನಂಟು, ನ್ಯಾಯವ್ಯವಸ್ಥೆ... ಇತ್ಯಾದಿ ಪ್ರತಿ ಆಚರಣೆಗಳಲ್ಲಿ ಕಾಡಿನ ಪ್ರತಿಯೊಂದು ಕಲ್ಲು, ಮಣ್ಣು, ಮರಗಿಡ, ಪ್ರಾಣಿ, ಪಕ್ಷಿ, ಪ್ರತಿ ಜೀವವೈವಿಧ್ಯತೆಗಳ ಜೊತೆ ಪರಸ್ಪರ ಅವಲಂಬನೆಯ ಕಾಣದ ಬಲೆಯ ಸೂತ್ರ ಹೆಣೆಯಲ್ಪಟ್ಟಿರುತ್ತದೆ. ಹೊರಜಗತ್ತಿಗೆ ಗೊತ್ತಿರದ ಈ ಅಗೋಚರ ಆಚರಣೆಗಳು ಒಳಹೋಗಿ ನೋಡಿದಾಗ ಇನ್ನೊಂದು ಹೊಸ ಪ್ರಪಂಚವನ್ನು ಪರಿಚಯಿಸುತ್ತದೆ. ಹೀಗೆ ಹೆಣೆಯಲ್ಪಟ್ಟ ಒಂದು ವ್ಯವಸ್ಥೆ ಕಾಡಿನ ಆದಿವಾಸಿ ಮತ್ತು ಕಾಡಿನ ಜೀವಿಗಳ ಸಂಬಂಧ ಸೃಷ್ಟಿಸಿ ಪರಸ್ಪರ ನಿರೀಕ್ಷಣೆಗಳಿಲ್ಲದ ಪರಸ್ಪರ ನಂಬಿಕೆಯನ್ನೊಳಗೊಂಡ, ನೆಮ್ಮದಿಯ ಆಧ್ಯಾತ್ಮಿಕ ಬದುಕನ್ನು ಈ ಸೀಮಾಪದ್ಧತಿಯ ವ್ಯವಸ್ಥೆ ಕಲ್ಪಿಸಿರುತ್ತದೆ. ಹೀಗೆ ನಿರ್ದಿಷ್ಟ ಪ್ರದೇಶದಲ್ಲಿ ಶತಶತಮಾನಗಳಿಂದ ಕರಾರುವಕ್ಕಾಗಿ ಹೆಣೆದ ಸೂತ್ರ ರೂಪಿತವಾದ ಸಂಬಂಧ, ಕಟ್ಟಿಕೊಂಡ ಸಂಸ್ಕೃತಿಯ ನೆಲೆಯನ್ನು ಕೊಂಚ ಕದಲಿಸಿದರೂ ಸೂತ್ರ ಹರಿದು ವ್ಯವಸ್ಥೆ ಹದಗೆಡುತ್ತದೆ. ಅಂತಹುದರಲ್ಲಿ ತಮ್ಮ ಸಾಂಸ್ಕೃತಿಕ ಮೂಲ ಸೆಲೆ ಮತ್ತು ನೆಲದ ಬೇರನ್ನು ಕತ್ತರಿಸಿ ಆದಿವಾಸಿಗಳನ್ನು ಗೊತ್ತಿಲ್ಲದ ಜಾಗದಲ್ಲಿ ಪುನರ್ವಸತಿ ನೆಪದಲ್ಲಿ ಒಂದೆಡೆ ಎಸೆದರೆ, ರುಂಡ ಒಂದು ಕಡೆ ಮುಂಡ ಒಂದು ಕಡೆ ಕತ್ತರಿಸಿದ ಹಾಗೆ, ಮರದಿಂದ ಬೇರನ್ನು ಕತ್ತರಿಸಿದ ಹಾಗೆ, ಇಡೀ ಸೀಮಾ ವ್ಯವಸ್ಥೆ ಛಿದ್ರಗೊಂಡು ನಿರ್ನಾಮವಾಗುತ್ತದೆ. ಸ್ಥಳಾಂತರಗೊಂಡ ಪ್ರದೇಶಗಳಲ್ಲಿ ಆದಿವಾಸಿಗಳ ಮೇಲೆ ಆಗಿರುವ ಸಾಂಸ್ಕೃತಿಕ ಅಪಚಾರ ಘೋರವಾದದ್ದು. ಶತಶತಮಾನಗಳಿಂದ ಇಡೀ ಸಮುದಾಯಗಳು ಕೂಡಿಕೊಂಡು ಕಟ್ಟಿಟ್ಟಿದ್ದ ಬೃಹತ್ ಸಾಂಸ್ಕೃತಿಕ ಸೌಧವನ್ನು ನೆನ್ನೆ ಮೊನ್ನೆ ಕಣ್ಣುಬಿಟ್ಟ ಆಡಳಿತಶಾಹಿಗಳು ಅಭಿವೃದ್ಧಿಯ ನೆಪದಲ್ಲಿ ಹೊಡೆದು ನುಚ್ಚುನೂರು ಮಾಡಿ ನೆಲಸಮ ಮಾಡಿದ ಸಂದರ್ಭ ಆದಿವಾಸಿಗಳನ್ನು ಸ್ಥಳಾಂತರಗೊಳಿಸಿದ ಕ್ರಮ. ಸ್ಥಳಾಂತರಗೊಂಡ ಆದಿವಾಸಿ ಸಮುದಾಯಗಳು ಸೀಮಾಪದ್ಧತಿಯ ಈ ಕೆಳಕಂಡ ಮಹತ್ತರ ಅಂಶಗಳನ್ನು ಶಾಶ್ವತವಾಗಿ ಕಳೆದುಕೊಂಡಿದ್ದಾರೆ.

1. ತಮ್ಮ ಶತಶತಮಾನದ ಮೂಲನೆಲೆಯ ಕರುಳ ಬಳ್ಳಿ.
2. ಸಾವಿರಾರು ವರ್ಷಗಳಿಂದ ಕಾಡಿನಲ್ಲಿ ಸಮುದಾಯಗಳೊಟ್ಟಿಗೆ ಅಗೋಚರವಾದ ಸಂಬಂಧವಿಟ್ಟುಕೊಂಡು ಸಮುದಾಯಗಳ ಏಳಿಗೆ ಮತ್ತು ರಕ್ಷಣೆಯಲ್ಲಿ ತೊಡಗಿಸಿಕೊಂಡಿದ್ದ ಮಡಿದ ಹಿರಿಯರ ಆತ್ಮಗಳ ಸಂಬಂಧ.
3. ಶತಶತಮಾನಗಳಿಂದ ಸಮುದಾಯಗಳು ಸೃಷ್ಟಿಸಿಕೊಂಡು ಪೂಜಿಸಲ್ಪಡುತ್ತಿದ್ದ ನೂರಾರು ಸೀಮಾದೈವಗಳು ಹಾಗೂ ಇತರ ಆದಿವಾಸಿ ದೈವಗಳು, ಅವುಗಳೊಟ್ಟಿಗಿನ ನಂಬಿಕೆ ಮತ್ತು ಕಳಚಿಕೊಂಡ ಭಾವುಕ ಸಂಬಂಧ.

4. ಶತಶತಮಾನಗಳಿಂದ ಗಳಿಸಿಕೊಂಡು ಬರಲಾಗಿದ್ದ ಪಾರಂಪರಿಕ ಜ್ಞಾನ ಮತ್ತು ಅದರೊಟ್ಟಿಗಿನ ಆಚರಣೆ. ಉದಾ: ನಾಟಿ ಚಿಕಿತ್ಸೆ ಮತ್ತು ಔಷಧಿಯ ಜ್ಞಾನ, ಕರಕುಶಲ ನೂರಾರು ಕಲೆಗಳು, ಪಾರಂಪರಿಕ ಸಹಜ ಕೃಷಿ(ಕುಂಬರಿ ಬೇಸಾಯ).

5. ಕಾಡಿನೊಳಗಿನ ಆಹಾರ ಸಂಗ್ರಹಣೆ, ಬದುಕಿನ ಪೋಷಣೆಗಾಗಿ ಲಭ್ಯವಾಗುತ್ತಿದ್ದ ವಿಶೇಷ ಪೋಷಕಾಂಶಗಳ ಗಣಿಯಾಗಿದ್ದು ಕಾಡಿನ ಬೇಟೆ ಆಹಾರ, ಅಣಬೆ, ಜೇನು, ಗಿಡಮೂಲಿಕೆ... ನೂರಾರು ತರಹದ ಪೋಷಣೆಯ ಮಾರ್ಗಗಳು.

6. ಸಮುದಾಯದ ಆರ್ಥಿಕ ಸಬಲೀಕರಣದ ಮೂಲ ಕಾಡಿನ ಕಿರು ಅರಣ್ಯ ಉತ್ಪನ್ನಗಳು.

7. ಬದುಕಿಗೆ ಆಧಾರವಾಗಿದ್ದ ಮೂಲ ಕುಲಕಸುಬುಗಳು. ಉದಾ: ಬೇಟೆ, ಜೇನು ಬಿಡಿಸುವ ಕಲೆ, ಮೀನು, ಏಡಿ, ಅಣಬೆ ಬಿಡಿಸುವ ತಂತ್ರಗಾರಿಕೆ ಕಾಡಿನ ಗಿಡ ಮರ ಬೇರುಗಳಲ್ಲಿ ಅಡಕವಾಗಿರುವ ಆಹಾರಂಶ ಮತ್ತು ಔಷಧಿಗಳ ಗುರ್ತಿಸುವ ಕಲೆಗಾರಿಕೆ

8. ಕಾಡಿನೊಟ್ಟಿಗಿನ ಅವಿನಾಭಾವ ಸಂಬಂಧ, ಹೊರಪ್ರಪಂಚಕ್ಕೆ ಗೂಢವಾದ ಪ್ರತಿ ಜೀವ ಸಂಕುಲದೊಳಗಿನ ಪರಸ್ಪರ ಅನುಸಂಧಾನ.

9. ಕಾಡಿನ ಸಾಮ್ರಾಜ್ಯದೊಳಗಿನ ಪ್ರತಿಯೊಂದು ಜೀವಿ ಮರ ಗಿಡ ಬಳ್ಳಿ, ಪ್ರಾಣಿ ಪಕ್ಷಿ ಹುಳ, ಹುಪ್ಪಟೆ ಕ್ರಿಮಿಕೀಟ ಪರಿಚಯ, ಅವುಗಳ ಶಬ್ದಗಳನ್ನು ಗುರ್ತಿಸುವುದು ಆತ್ಮಗಳೊಟ್ಟಿಗಿನ ಸಹ ಕುಟುಂಬ ಜೀವನ.

10. ಕಾಡಿನ ಪರಿಸರದೊಟ್ಟಿಗೆ ಶತಶತಮಾನಗಳಿಂದ ಹೆಣೆದು ಕಟ್ಟಿದ್ದ ಹಾಡು, ಕಥೆ, ಕುಣಿತ, ಗಾದೆ, ಸಂಕಥನಗಳು.

11. ವಿಶೇಷವಾದ ಆಚರಣೆ ನಂಬಿಕೆಗಳಾದ ಘಾಡಿ(ನೋಟ) ನೋಡುವುದು, ಆತ್ಮಗಳ ಆವಾಹನೆ, ವಿಷಚಿಕಿತ್ಸೆ, ಮಾಟ, ಮಂತ್ರ, ತಂತ್ರ(Psychotherapy)

12. ಆಹಾರಕ್ರಮದ ವಿಶೇಷ ಗೆಡ್ಡೆ ಗೆಣಸು, ಕಂದಮೂಲಗಳು ವಿವಿಧ ಭತ್ತ, ರಾಗಿ ವಿವಿಧ ಸಿರಿ ಧಾನ್ಯಗಳು(ನವಣೆ, ಸಜ್ಜೆ, ಅರ್ಕ, ಸಾಮೆ, ಬುರುಗ ಇತ್ಯಾದಿ) ಕಾಡಿನ ಹಣ್ಣು, ಹೂವು ಕಾಯಿ, ಅಣಬೆ, ಜೇನು(ಜೇನುಗಳಲ್ಲಿನ ವೈವಿಧ್ಯತೆ) ವೈವಿಧ್ಯತೆಯ ಆಹಾರ ಸಂಗ್ರಹಣೆ ಮತ್ತು ಬಳಕೆಯ ಕ್ರಮಗಳು.

13. ಕಾಡಿನೊಳಗಿನ ಜೀವಿಗಳಿಗೆ ಪ್ರಾಣಿಸಹಜ ಸೂಕ್ಷ್ಮಪ್ರಜ್ಞೆ ಜಾಗೃತವಾಗಿರುತ್ತದೆ. (Animal instinct) ಹಾಗೆಯೇ ಇದರಿಂದ ವಿಕಸಿತವಾದ "ಆದಿವಾಸಿ ಸೂಕ್ಷ್ಮಪ್ರಜ್ಞೆ" (Tribal instinct) ಕಾಡಿನ ಪರಿಸರದಲ್ಲಿ ಮಾತ್ರ ಪರಿಸರ ಸಹಜ ಜ್ಞಾನದ ಸೂಕ್ಷ್ಮತೆ ಜಾಗೃತವಾಗಿರುತ್ತದೆ. ಹೊರಬಂದಾಗ ಆ ಸೂಕ್ಷ್ಮತೆ ಕಳೆದುಕೊಳ್ಳುತ್ತದೆ (ನಾಗರಿಕಪ್ರಪಂಚಕ್ಕೆ

ಈ ಬಗ್ಗೆ ಎಷ್ಟೇ ವ್ಯಾಖ್ಯಾನಿಸಿದರೂ ಅರ್ಥೈಸಿಕೊಳ್ಳುವುದು ಕಷ್ಟ ಸಾಧ್ಯವಾದ ವಿಚಾರ).

14. ಆದಿವಾಸಿಗಳ ಆದಿಮ ಸಂಸ್ಕೃತಿಯ ಮಹತ್ವ ಮತ್ತು ಮೌಲ್ಯಗಳ ಬುನಾದಿಯೇ 'ಸಾಮೂಹಿಕತ್ವ'. ಅವರ ಎಲ್ಲಾ ಜೀವನದ ಸಂಪೂರ್ಣ ಚಟುವಟಿಕೆ, ಉಪಾಸನೆ ಮತ್ತು ಆಚರಣೆಗಳೆಲ್ಲ ಪ್ರಕಟವಾಗಿರುವುದು ಸಾಮಾಜಿಕವಾಗಿಯೇ. ಅವರ ನೃತ್ಯ, ಹಾಡು, ಬೇಟೆ, ಪೂಜೆ, ಹಬ್ಬ, ಕೃಷಿ... ಯಾವುದೇ ಆಗಲಿ ಸಾಮಾಹಿಕವಾಗಿಯೇ ನಡೆಸಲಾಗುತ್ತದೆ. ಅವರ ನ್ಯಾಯ ತೀರ್ಮಾನಗಳು ಏಕಮುಖವಾಗಿರದೆ ಸಾಮೂಹಿಕ ತೀರ್ಮಾನವಾಗಿರುತ್ತದೆ. ನಂತರ ದುಃಖ, ಸುಖ, ನೆಮ್ಮದಿ, ಆಹಾರ, ಬೇಟೆ ಎಲ್ಲವನ್ನು ಸಮಾನವಾಗಿ ಹಂಚಿಕೊಂಡು ಬದುಕುವ ಆದಿವಾಸಿ ಮೌಲ್ಯಗಳು ಕುಸಿಯುತ್ತದೆ. ಜೊತೆಗೆ ಹೆಚ್ಚಿನ ಆದಿವಾಸಿಗಳು ಅವಿಭಕ್ತ ಕುಟುಂಬ ನಡೆಸುತ್ತಿದ್ದರು.

15. ಆದಿವಾಸಿಗಳು ಕಾಡಿನ ಪರಿಸರದ ಸೀಮಾವಲಯದಲ್ಲಿ ತನ್ನದೇ ಸಂಸ್ಕೃತಿಯಲ್ಲಿ ಬದುಕು ಸಾಗಿಸಿದ ಜನಕ್ಕೆ ಸ್ಥಳಾಂತರಗೊಂಡು ಅಲ್ಲಿನ ಬೇರೆ ಬೇರೆ ಸಮುದಾಯ ಮತ್ತು ನಾಗರಿಕ ಪ್ರಪಂಚದ ಪರಿಚಯವಿಲ್ಲದ ಅವರು ಅದರ ಬಲೆಗೆ ಬಿದ್ದು ಉಳಿಯಲಾಗದೇ ಬದುಕಲು ಆಗದೆ ಪರಿತಪಿಸುವ ಅತಂತ್ರದ ಸ್ಥಿತಿ ಯಾರಿಗೂ ಬೇಡ(ಉದಾ: 70 ದಶಕದಲ್ಲಿ ವನ್ಯಜೀವಿನ ಕಾಯ್ದೆ ಅಡಿ ನಾಗರಹೊಳೆ ಹಾಡಿಗಳಿಂದ ಜೇನುಕುರುಬರನ್ನು ಸ್ಥಳಾಂತರಿಸಿದಾಗ, ಅತ್ತ ಆಹಾರಕ್ಕಾಗಿ ಗೆಡ್ಡೆ ಗೆಣಸು ಬೇಟೆ ಇಲ್ಲದೆ ಇತ್ತ ಎಲ್ಲೂ ಕೂಲಿ ಕೆಲಸ ಸಿಗದೇ ಜೇಡಿಮಣ್ಣು ತಿಂದು ಸತ್ತವರ ದುರಂತದ ಉದಾಹರಣೆ ನಮ್ಮ ಮುಂದಿದೆ. ಅವರಿಗೆ ಕೂಲಿ ಕೆಲಸ ಸಿಗದಿರಲೂ ಕಾರಣ ಅವರಿಗೆ ಬೇಸಾಯವೇ ಗೊತ್ತಿರಲಿಲ್ಲ). ಇದರಿಂದಾಗಿ ಆದಿವಾಸಿಗಳ ಸಾಂಸ್ಕೃತಿಕ ಬದುಕು ಅತಂತ್ರಕ್ಕೊಳಗಾಗುವುದಷ್ಟೇ ಅಲ್ಲ, ಸಂಪೂರ್ಣ ಛಿದ್ರಗೊಂಡ ದಾರುಣ ಬದುಕನ್ನು ಸವೆಸಬೇಕಾಗುತ್ತದೆ.

16. ಎಲ್ಲಕ್ಕಿಂತ ಮುಖ್ಯವಾಗಿ ಆದಿವಾಸಿಗಳು ಶತಶತಮಾನಗಳಿಂದ ಕಟ್ಟಿಕೊಂಡ ಆದಿವಾಸಿ ಸಾಂಸ್ಕೃತಿಕ ಬದುಕಿನ ಮುಖ್ಯ ಕೇಂದ್ರವಾದ 'ಸೀಮೆಪದ್ಧತಿಯ' ಇಡೀ ವ್ಯವಸ್ಥೆಯ ಮುಖ್ಯ ತಿರುಳೇ "ನಿರೀಕ್ಷಣೆಗಳಿಲ್ಲದ ನೆಮ್ಮದಿಯ ಆಧ್ಯಾತ್ಮಿಕ ಬದುಕಾಗಿತ್ತು" ಹಾಗಾಗಿ ಸ್ಥಳಾಂತರಗೊಳ್ಳುವುದರ ಮೂಲಕ ಆದಿವಾಸಿಗಳ ಸಾಮೂಹಿಕ ಸಹಬಾಳ್ವೆಯ ಆಧ್ಯಾತ್ಮಿಕ ನೆಮ್ಮದಿ ಪರಸ್ಪರ ಅವಲಂಬಿತ ಸಹಬಾಳ್ವೆಯ ಮೌಲ್ಯಗಳನ್ನು ಕಳೆದುಕೊಂಡು ನಾಗರಿಕತೆಯ ಮುಖ್ಯವಾಹಿನಿಯ ಗಟಾರದಲ್ಲಿ ಲೀನವಾಗುವ ದುರಂತದ ಸ್ಥಿತಿ ಆದಿವಾಸಿಗಳದ್ದಾಗಿದೆ.

**ಸೀಮಾಪದ್ಧತಿ: ತಾತ್ವಿಕ ವಿವೇಚನೆ**

ಒಂದು ಜ್ಞಾನವನ್ನು ವಿವರಿಸುವ ಇನ್ನೊಂದು ಜ್ಞಾನಕ್ಕೆ ತತ್ವಜ್ಞಾನ ಎನ್ನಲಾಗುತ್ತದೆ. ತತ್ವಜ್ಞಾನದ ಎನ್ನುವುದು ಒಂದು ಜ್ಞಾನವನ್ನು ನಾವು ನೋಡುವ, ಅವಲೋಕಿಸುವ, ಪ್ರಶ್ನಿಸುವ,

ತರ್ಕಿಸುವ ಮತ್ತು ವಿವೇಚಿಸುವ ಮೂಲಕ ಜ್ಞಾನದ ಆಳವನ್ನು ಅರಿಯುವುದು ಮತ್ತು ಸಾಕ್ಷಾತ್ಕಾರಗೊಳ್ಳುವುದಾಗಿದೆ. ಒಂದು ಜ್ಞಾನದೊಳಗಿನ ಸತ್ಯವನ್ನು ಅರಿಯುವ ಸತ್ಯದರ್ಶನದ ಮಾರ್ಗವೇ ತಾತ್ವಿಕ ವಿವೇಚನೆಯಾಗಿದೆ. ಆದಿವಾಸಿಗಳಲ್ಲಿನ ಸೀಮಾವಲಯದೊಳಗಿನ ಸೀಮಾಪದ್ಧತಿ, ಸೀಮಾವ್ಯವಸ್ಥೆ ಮತ್ತು ಸೀಮಾಪರಿಕಲ್ಪನೆಯು ಆದಿವಾಸಿಗಳು ತಮ್ಮ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ನೆಮ್ಮದಿ ಮತ್ತು ಭದ್ರತೆಯ ಸಲುವಾಗಿ ನಿರ್ಮಿಸಿಕೊಂಡ ಒಂದು ಪಾರಂಪರಿಕ ಜ್ಞಾನವಾಗಿದೆ.

ಕಾಡಿನ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶದಲ್ಲಿ ಸಾವಿರಾರು ವರ್ಷಗಳಿಂದ ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ಹೆಣೆಯಲ್ಪಟ್ಟ ಜೀವ ಜಾಲದ ನೇಯ್ಗೆಯ ಮೂಲಕ ಕಟ್ಟಿದ ಅದ್ಭುತ ವ್ಯವಸ್ಥೆಯೇ ಸೀಮಾಪದ್ಧತಿಯಾಗಿದೆ. ಸೀಮೆ ಎಂದರೆ ಕೇವಲ ಗಡಿ ಮತ್ತು ರೇಖೆಯಷ್ಟೇ ಅಲ್ಲ. ತಮ್ಮ ಸೀಮಾ ವಲಯದೊಳಗೆ ಒಳಗೊಳ್ಳುವ ಅನೇಕ ವಿಕಸಿತ ಪಾರಂಪರಿಕ ಜ್ಞಾನಶಾಖೆ. ಬೇಟೆ, ಉಪಾಸನೆ, ಚಿಕಿತ್ಸಾ ವಿಧಾನ, ಮಂತ್ರ, ತಂತ್ರ, ನೋಟ, ವೃತ್ತಿಕೌಶಲ್ಯ, ಪಶುಪಾಲನೆ, ಆಹಾರ ಸಂಗ್ರಹಣೆ, ಬೇಸಾಯ, ಜಾನಪದ ನೃತ್ಯ, ಹಾಡು, ಒಗಟು, ಮೌಖಿಕ ಸಾಹಿತ್ಯ, ಆಧ್ಯಾತ್ಮ, ನ್ಯಾಯ ಕಟ್ಟಳೆ, ಹಬ್ಬ ಹರಿದಿನ, ಜಾತ್ರೆ, ಚಿತ್ತಾರ, ಇಂತಹ ನೂರಾರು ಸಾಂಸ್ಕೃತಿಕ ಆಚರಣೆಗಳಿಂದ ನೇಯ್ದ ಬಲೆಯೇ 'ಸೀಮಾ ಪದ್ಧತಿ'ಯಾಗಿದೆ. ಪ್ರತಿಯೊಂದು ಘಟಕದ ಕವಲುಗಳು ಪ್ರತ್ಯೇಕವೆಂಬಂತೆ ಕಂಡರೂ ಈ ಪ್ರಕ್ರಿಯೆಯ ಪ್ರತಿಯೊಂದು ಎಳೆಗಳೂ ಒಂದಕ್ಕೊಂದು ಪರಸ್ಕರ ಪೂರಕವೆಂಬಂತೆ ಅನೇಕ ಸೂಕ್ಷ್ಮಾತಿಸೂಕ್ಷ್ಮ ಸಂಬಂಧಗಳ ಕೊಂಡಿಗಳಿಂದ ಪರಸ್ಪರ ಬೆಸೆದುಕೊಂಡೇ ಸೀಮಾಜಾಲ ಹೆಣೆದುಕೊಂಡಿರುತ್ತದೆ. ಈ ಜೀವಜಾಲದ ಬಲೆಯು ಆದಿವಾಸಿ ಮತ್ತು ನಿಸರ್ಗದೊಟ್ಟಿಗಿನ ಅವಿನಾಭಾವ ಸಂಬಂಧ ಮತ್ತು ಅನುಸಂಧಾನದ ಮೂಲಕ ಪರಿಸರದೊಟ್ಟಿಗೆ ಮಾಡಿಕೊಂಡ ಒಪ್ಪಂದದ ಕರಾರಿನಂತೆ ಅಭಿವೃದ್ಧಿಗೊಂಡಿದೆ.

ನೈಸರ್ಗಿಕವಾಗಿ ಜೀವಿಗಳಲ್ಲಿ ತಮ್ಮ ಬದುಕಿನ ಅಸ್ತಿತ್ವದ ಮೂಲ ಆಧಾರಗಳಿಂದ ಆಹಾರ, ಸಂಗಾತಿ ಮತ್ತು ಸಂತತಿಗಳ ಭದ್ರತೆ ಮತ್ತು ರಕ್ಷಣೆಯ ಉಳಿವಿಗಾಗಿ ರಚಿತವಾದ ಸೀಮಾಪದ್ಧತಿಯು ಜೀವಿಗಳ ಆಹಾರ ಹಂಚಿಕೆ, ಸಹಜೀವನ, ಸಾಮೂಹಿಕತ್ವ, ಸಹಭಾಗಿತ್ವ ಪರಸ್ಪರ ಅವಲಂಬಿತ ಬದುಕು ನಿಸರ್ಗದ ಗುರಿ ಇದ್ದಂತೆ ಕಾಣುತ್ತದೆ. ಆದಿವಾಸಿಗಳೊಳಗೇ ನೈರ್ಸಗಿಕವಾಗಿ ಪ್ರಾಪ್ತವಾಗಿದ್ದ ಸೀಮಾಪದ್ಧತಿಯು, ಪ್ರಾಣಿ ಜೀವನದಿಂದ ಮಾನವ ಜೀವನಕ್ಕೆ ಪಾದಾರ್ಪಣೆ ಮಾಡುವ ಸಂದರ್ಭದಲ್ಲಿ ತನ್ನ ಆದಿವಾಸಿ ಬದುಕಿನ ಅಗತ್ಯ ಮತ್ತು ವಿನಾಶಕ್ಕೆ ತಕ್ಕ ಹಾಗೇ ಸೀಮಾಪದ್ಧತಿಯನ್ನು ಬದಲಾಯಿಸುತ್ತಾ, ವಿಕಸನಗೊಳಿಸುತ್ತ, ತನ್ನ ಪಾರಂಪರಿಕ ಜ್ಞಾನಗಳನ್ನು ಸೇರಿಸುತ್ತಾ, ಜೀವಸಹಜ ಪ್ರವೃತ್ತಿಯ ಸೀಮಾಪದ್ಧತಿಯನ್ನು ಆದಿವಾಸಿ ಜನಾಂಗೀಯ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಬದುಕಿನ ಭಾಗವಾಗಿ ಸಂರಚಿಸಲ್ಪಟ್ಟ ವಿಧಾನವೇ ಆದಿವಾಸಿಗಳ ಸೀಮಾಪದ್ಧತಿಯಾಗಿದೆ.

**ನೈಸರ್ಗಿಕ ಪ್ರವೃತ್ತಿಯ ಗಡಿವ್ಯವಸ್ಥೆ ಆದಿವಾಸಿಗಳ ಸೀಮಾಪದ್ಧತಿಯ ಹುಟ್ಟು ಮತ್ತು ಸಾಂಸ್ಕೃತಿಕ ರೂಪ ಪಡೆದ ಬಗೆ**

ಎಲ್ಲಾ ಜೀವಿಗಳಂತೆ ನೈಸರ್ಗಿಕ ಬದುಕು ನಡೆಸಿತ್ತಿದ್ದ ಮನುಷ್ಯ ಆಹಾರಕ್ಕಾಗಿ ಬೇಟೆಯನ್ನು ಅವಲಂಬಿಸಿದ್ದ. ಜೊತೆಗೆ ನೈಸರ್ಗಿಕವಾದ ಜೀವಿಗಳ ಸೀಮಾಪದ್ಧತಿಯೂ ನೈಸರ್ಗಿಕ ನಡುವಳಿಕೆಗಳಿಂದಲೇ ಕೂಡಿತ್ತು. ಯಾವ ಮನುಷ್ಯ ತನ್ನ ಆಲೋಚನಾಶಕ್ತಿಯ ವಿಕಾಸದಿಂದ ಮಾನವನಾಗಿ ಅಭಿವೃದ್ಧಿಗೊಳ್ಳಲು ಕಾಲಿಟ್ಟನೋ ಆಗ ಸುಧಾರಿತ ಗಣವ್ಯವಸ್ಥೆಯ ನಿರ್ಮಾಣ ಮಾಡಿಕೊಂಡ ಗಣವ್ಯವಸ್ಥೆಯಲ್ಲಿ ಕೆಲಸಗಳನ್ನು ಪ್ರತ್ಯೇಕವಾಗಿ ಹಂಚಿಕೊಂಡು ಸಾಮೂಹಿಕ ಮತ್ತು ಸಹಭಾಗಿತ್ವದಲ್ಲಿ ಬದುಕುವ ಮಾರ್ಗ ಕಂಡುಕೊಂಡ. ಬೇಟೆ ಮತ್ತು ಆಹಾರ ಸಂಗ್ರಹಣೆಗೆ ಸೀಮಿತವಾಗಿದ್ದ ಆದಿವಾಸಿಗಳು ಜೀವನ ಸುಧಾರಿತಗೊಂಡು ಪಶುಪಾಲನ ಕ್ರಮವನ್ನು ಅಳವಡಿಸಿಕೊಂಡು ಬೇಟೆಯಾಡಿ ಕಷ್ಟಪಟ್ಟು ಕೊಂದು ಆಹಾರ ಪಡೆಯುವ ಬದಲು ಬೇಟೆಯನ್ನೇ ದಳವಾಗಿಸಿ, ಸಾಕುವ ಮೂಲಕ ಆಹಾರದ ಭದ್ರತೆ ಪಡೆಯಬಹುದೆಂಬ ಆವಿಷ್ಕಾರ ಆದಿವಾಸಿಗಳಲ್ಲಿ ಮೂಡಿತು. ಈ ರೀತಿಯ ಆಹಾರದ ಉತ್ಪಾದನೆ ಮತ್ತು ಆಹಾರದ ಭದ್ರತೆಯು ಆಗಿನ ಮಾನವರಲ್ಲಿ ಅಭಿವೃದ್ಧಿಯ ದೊಡ್ಡ ಕ್ರಾಂತಿಯನ್ನೇ ಸೃಷ್ಟಿಸಿತು. ತಮ್ಮೊಳಗೆ ಉಂಟಾದ ಆಹಾರದ ಉತ್ಪಾದನೆ ಸಮುದಾಯಗಳ ಒಳಗೆ ಆರ್ಥಿಕತೆಯನ್ನು ಹುಟ್ಟುಹಾಕಿ, ಸಂಪತ್ತನ್ನು ಕ್ರೋಢೀಕರಿಸಿ ಆಸ್ತಿಮಾಡಬಹುದು, ಕೂಡಿಡಬಹುದೆಂಬ ಒಂದು ಹೊಸ ಆಲೋಚನೆಯನ್ನು ಪಶುಪಾಲನೆ ಹುಟ್ಟು ಹಾಕಿತು. ಪಶುಪಾಲನೆಯಲ್ಲಿನ ಉತ್ಪಾದನೆ ತನ್ನೊಳಗೊಂದು ಕಲಹ, ನ್ಯಾಯ, ಭದ್ರತೆ, ಬಂಡವಾಳ ಇತ್ಯಾದಿಗಳು ನೈಸರ್ಗಿಕ ಸೀಮಾಪದ್ಧತಿಯಲ್ಲಿನ ಪ್ರಾಕೃತಿಕ ನಡವಳಿಕೆಗಳನ್ನು ಮೀರಿ ಆದಿವಾಸಿಗಳು ತಮ್ಮಲ್ಲಿ ಬದಲಾವಣೆಗೊಂಡು ಬದುಕಿಗೆ ತಕ್ಕಂತೆ ಸೀಮಾವ್ಯವಸ್ಥೆಯನ್ನು ಬದಲಾಯಿಸಿಕೊಳ್ಳಲು ಶುರುಮಾಡಿದರು. ಒಟ್ಟಿಗೆ ಕೂಡಿಕೊಂಡು ಬೇರೆ ಬೇರೆ ಕೆಲಸಗಳನ್ನು ಹಂಚಿಕೊಂಡರು. ಕಲಹಗಳ ತೀರ್ಮಾನಕ್ಕೆ ನ್ಯಾಯವ್ಯವಸ್ಥೆ, ರಾಜಕೀಯ, ಆರ್ಥಿಕ, ಚಿಕಿತ್ಸೆ, ಬೇಸರ ಕಳೆಯಲು ನೃತ್ಯ, ಪದ್ಯ ಹಾಡು... ಇತ್ಯಾದಿಗಳು ಸೃಷ್ಟಿಗೊಂಡು ಮಾನವನ ಸಾಂಸ್ಕೃತಿಕ ಸಾಮಾಜಿಕ ಜೀವನ ಪ್ರಾರಂಭಗೊಂಡಿತು. ಗಣವ್ಯವಸ್ಥೆ ಪಶುಪಾಲನೆಯಲ್ಲಿ ಹಸಿರನ್ನರಸಿ ಚಲಿಸುವ ವಲಸೆ ಜೀವನಕ್ಕೆ ಪೂರಕವಾಗಿ ಸೀಮಾಪದ್ಧತಿಗಳು ಆದಿವಾಸಿಗಳ ಒಳಗೆ ನಿರ್ಮಾಣಗೊಂಡವು. ಇದರ ನಂತರದ ಆದಿವಾಸಿಗಳ ಆವಿಷ್ಕಾರವೇ ಆದಿಮ ರೀತಿಯ ಬೇಸಾಯ. ಕಾಡಿನಲ್ಲಿ ತಾವು ಕಿತ್ತು ತಂದು ಬಳಸುತ್ತಿದ್ದ ಆಹಾರ ಮೂಲದ ಗಿಡಗಳನ್ನು ತಾನು ಕಟ್ಟಿಕೊಂಡ ನೆಲೆಗಳಿಗೇ ತಂದು ನೆಟ್ಟು ತನ್ಮೂಲಕ ಸುಲಭವಾಗಿ ಸಿಗುವ ಆಹಾರ ಮೂಲದ ಗಿಡಮರ ಬಳ್ಳಿಗಳನ್ನು ಬೆಳೆಯಲು ಕಲಿತ ಮಾನವ ಕ್ರಮೇಣ ಸರಳರೂಪದ. ಸಾಂಪ್ರದಾಯಿಕ ಸಹಜ ಕೃಷಿ 'ಕುಂಬರಿ' ಬೇಸಾಯವನ್ನು ಕಲಿತ. ಕುಂಬರಿ ಬೇಸಾಯವನ್ನು ಆತ ಚಲಿಸುತ್ತಿದ್ದ ವಲಸೆಯ ಪ್ರದೇಶದ ದಾರಿಯ ಜಾಡಿನಲ್ಲೇ ಅಲ್ಲಲ್ಲಿ ಕಾಡು ಸಮ ಮಾಡಿ

ಸಾಮೂಹಿಕವಾಗಿ ಬಿತ್ತಿ ಬೆಳೆದು ಬದಕಲು ಕಲಿತ ಇದರ ವಿಕಸಿತ ಬೇಸಾಯವೇ ಪ್ರಸ್ತುತ ಕೃಷಿ ವಿಧಾನ. ಬೇಟೆ, ಆಹಾರ ಸಂಗ್ರಹಣೆ, ಆದಿಮ ಕುಂಬ್ರಿ ಬೇಸಾಯ, ಕಾಡಿನವರ ಉತ್ಪನ್ನ ಸಂಗ್ರಹಣೆಗಳ ಮಧ್ಯೆ, ನಂಬಿಕೆ ದೈವ, ಚಿಕಿತ್ಸೆ, ನೃತ್ಯ ಹಾಡು, ಉಪಾಸನೆ, ಸಾಂಸ್ಕೃತಿಕ ಆಚರಣೆಗಳು ಆಧ್ಯಾತ್ಮಕಗಳನ್ನು ನಿರ್ದಿಷ್ಟ ಭೌಗೋಲಿಕ ವಲಯದ ಗಡಿಯೊಳಗೆ ಬೆಳೆಸಿಕೊಂಡ ಆದಿವಾಸಿ ಸಮುದಾಯ ತಮ್ಮ ಭದ್ರತೆಗಾಗಿ ಗಡಿ ರೇಖೆ, ನಿಯ, ವಿಧಿ ನಿಷೇಧ, ದೈವಗಳನ್ನು ರೂಪಿಸಿ ಕಟ್ಟಿಕೊಂಡ ಸಾಂಸ್ಕೃತಿಕ ವ್ಯವಸ್ಥೆಯೇ ಆದಿವಾಸಿಗಳೊಳಗೆ ರೂಪಗೊಂಡ ಸೀಮಾಪದ್ಧತಿಯಾಗಿ ವಿಕಸನಗೊಂಡಿತು.

ಇಂತಹ ಸೀಮಾಪದ್ಧತಿ, ಅದರ ಆಚರಣೆ ನೀತಿ ನಿಯಮ, ವಿಧಿನಿಷೇಧ, ಚಿಕಿತ್ಸೆ, ಮಂತ್ರತಂತ್ರಗಳ ನಿಯಂತ್ರಣ ಮತ್ತು ನಿರ್ವಹಣೆಗಾಗಿ 'ಶಮನ' ಮಾಂತ್ರಿಕ, ಬುದುವಂತ, ಗುಡ್ಡಯ್ಯ, ಅಜ್ಜಯ್ಯ, ಬಿಂಜೆಕಾಳ ಹಾಗೂ ನ್ಯಾಯಮಂಡಳಿ ಇತರ ಆಡಳಿತ ವ್ಯವಸ್ಥೆ ರೀತಿ ರಿವಾಜುಗಳ ಸಂಪೂರ್ಣ ಬುಡಕಟ್ಟು ಜೀವನದ ಸಾಮಾಜಿ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಆಚರಣೆಗಳ ಮೊತ್ತವೇ ಬುಡಕಟ್ಟು ಸೀಮಾ ವ್ಯವಸ್ಥೆಯಾಗಿ ಕರ್ನಾಟಕದ ವಿವಿಧ ಬುಡಕಟ್ಟು ಸಮುದಾಯಗಳಲ್ಲಿ ರೂಪುಗೊಂಡಿರುವ ಬಗೆಯನ್ನು ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

**ಬುಡಕಟ್ಟುಗಳ ಸೀಮಾಪದ್ಧತಿಯ ತಾತ್ವಿಕ ವಿಶ್ಲೇಷಣೆ**

ಪ್ರಾಣಿ ಜೀವನ ನಡೆಸುತ್ತಿದ್ದ ಆದಿವಾಸಿಗಳು ಸಾಮೂಹಿಕ ಮಾನವ ಜೀವನಕ್ಕೆ ಪದಾರ್ಪಣೆಗೊಂಡು ಕಟ್ಟಿಕೊಂಡ ವ್ಯವಸ್ಥಿತ ಸಾಂಸ್ಕೃತಿಕ ಸೀಮಾಪದ್ಧತಿಯ 'ಜ್ಞಾನ' ಹುಟ್ಟಿದ್ದು ಕಾಡಿನ ಪರಿಸರದಿಂದಲೇ. ಮನುಷ್ಯನೇನೂ ಈ ಜ್ಞಾನ ತನ್ನಷ್ಟಕ್ಕೆ ತಾನೇ ಸೃಷ್ಟಿಯಾದದ್ದಲ್ಲ (ಅಪೌರುಷೆಯವಲ್ಲ). ಅದು ನಿಸರ್ಗದೊಟ್ಟಿಗಿನ ಸಾವಿರಾರು ವರ್ಷಗಳ ಅನುಸಂಧಾನ ಮತ್ತು ಅವಿನಾಭಾವ ಸಹಜೀವನದ ಮೂಲಕ ಗಳಿಸಿದ ಜ್ಞಾನವನ್ನು ಗ್ರಹಿಸಿ, ಬಳಸಿ, ಹಂಚಲಾದ ವಿಕಸಿತ ಭಾಗವೇ 'ಸೀಮಾ' ಪರಿಕಲ್ಪನೆಯಾಗಿದೆ.

ಆದಿವಾಸಿಗಳಿಗೆ ತಮ್ಮ ಸುತ್ತಲ ಪರಿಸರವೇ ಪ್ರಮುಖ ನಂಬಿಕೆಯ ದೈವಗಳಾಗಿವೆ. ಗಿಡ, ಮರ, ಬಳ್ಳಿ, ಪ್ರಾಣಿಗಳೇ ಅವರ ದೈವಗಳು. ತಮಗೆ ಗೋಚರಿಸದ ಅಮೂರ್ತಲೋಕಕ್ಕಿಂತ ತಮ್ಮ ಕಣ್ಣೆದುರಿಗಿರುವ, ತಮ್ಮ ಬದುಕಿಗೆ ಸೌಲಭ್ಯಗಳನ್ನು ನೀಡುತ್ತಿರುವ ನಿಸರ್ಗ ಮತ್ತು ಅದರ ವಿವಿಧ ಪಂಚಭೂತಗಳಾದ ಭೂಮಿ, ನೀರು, ಗಾಳಿ, ಆಕಾಶ, ಮಳೆ ಇತ್ಯಾದಿಗಳನ್ನೆ ಆದಿವಾಸಿಗಳು ಆರಾಧಿಸುತ್ತಾ ಬಂದಿರುವುದನ್ನು ಕಾಣಬಹುದಾಗಿದೆ. ನಂತರ ತಮ್ಮ ಕಣ್ಣೆದುರಿಗಿದ್ದ ತಮ್ಮ ಸಮುದಾಯಕ್ಕಾಗಿ ಪ್ರಾಣತೆತ್ತ ಮಡಿದವರ ಆತ್ಮಗಳೇ ದೈವಗಳಾಗಿ ನಮ್ಮನ್ನು ಕಾಪಾಡುತ್ತವೆಂಬ ಅವರ ನಂಬಿಕೆ ತಾವು ತಮ್ಮ ಕಾಡು, ತಮ್ಮ ಪರಿಸರದ ಸುತ್ತಲೂ ಪರಸ್ಪರ ಸಹಕಾರ

ಕೊಡುಕೊಳ್ಳುವಿಕೆಯ ಧನ್ಯತೆಗಾಗಿ ಹುಟ್ಟಿಕೊಂಡ ನಂಬಿಕೆಯ ಆದಿವಾಸಿ ದೈವಗಳಾಗಿವೆ. ಇದು ನಿಸರ್ಗ ಮತ್ತು ಮನುಷ್ಯನ ಅನುಸಂಧಾನದ ಸೃಷ್ಟಿಯಾದ್ದರಿಂದ ಆದಿವಾಸಿಗಳ ಸೀಮಾವಲಯದ ಪರಿಕಲ್ಪನೆ ನಿಸರ್ಗದ ಮೂಸೆಯೊಳಗಿಂದ ಹೊರಹೊಮ್ಮಿ 'ನಿಸರ್ಗಪ್ರಜ್ಞೆ' ಸೀಮಾಪದ್ಧತಿಯಾಗಿದೆ. ಹಾಗಾಗಿ ಆದಿವಾಸಿಗಳ ಸೀಮಾಪದ್ಧತಿ ಮತ್ತು ಅದರ ಆಚರಣೆಗಳು ಭೌತಿಕವಾದ ನೆಲೆಗಟ್ಟಿನ ಆಧಾರವನ್ನೂ ಪಡೆದಿವೆ.

ಯಾವ ಸಮುದಾಯ ರಕ್ಷಣೆ ಇಲ್ಲದೆ ಅತಂತ್ರಗೊಳಗಾಗುತ್ತಾದೋ ಅದು ರಕ್ಷಣೆಗಾಗಿ, ಮನೆ, ಕುಳಾವಿ, ಗಡಿಗಳನ್ನು ಸಂತತಿ, ಸಂಗಾತಿ, ಸಂಪನ್ಮೂಲ, ಉತ್ಪಾದನೆ, ಆಚರಣೆ ಉಪಾಸೆ ಆಧ್ಯಾತ್ಮ ಇತ್ಯಾದಿ ಸಾಮಾಜಿಕ ನೆಮ್ಮದಿಯ ಬದುಕಿಗಾಗಿ ಮತ್ತು ಭದ್ರತೆಗಾಗಿ ತಮ್ಮ ಇತಿಹಾಸವನ್ನು ಗ್ರಹಿಸುವ, ಸಕಲ ವ್ಯವಸ್ಥೆಯ ರಕ್ಷಣೆಗಾಗಿ ಕಟ್ಟಿಕೊಂಡ ಸೀಮಾ ವಿಧಾನಕ್ಕೆ ಚಾರಿತ್ರಿಕ ಭೌತಿಕತೆ ಎಂದು ಕರೆಯಬಹುದಾಗಿದೆ. ನಿಸರ್ಗದ ಭೌತಿಕ ದೈವಗಳ ಹೊರತಾಗಿ ಮಡಿದವರ ಆತ್ಮಗಳು ಕುಲದೈವಗಳಾಗಿ ಅವುಗಳು ಸದಾ ತಮ್ಮ ಸೀಮಾ ವಲಯವನ್ನು ಕಾಪಾಡುತ್ತಿರುತ್ತವೆಂಬ ಅಲೌಕಿಕದ ಅವರ ಪರಿಕಲ್ಪನೆ ಮತ್ತು ನಂಬಿಕೆ ಆದಿವಾಸಿಗಳ ಅಮೂರ್ತಲೋಕದ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಹಾಗಾಗಿ ಬುಡಕಟ್ಟುಗಳ ಸೀಮಾಪದ್ಧತಿಯು ಮೂರ್ತ ಮತ್ತು ಅಮೂರ್ತಗಳ ಒಳಗೆ ನಿಸರ್ಗದೊಟ್ಟಿಗಿನ ಸಾವಿರಾರು ವರ್ಷಗಳಲ್ಲಿ ಅನುಸಂಧಾನದ ತಿಳುವಳಿಕೆಯ ಒಟ್ಟು ಮೊತ್ತವೇ ಸೀಮಾ ಪರಿಕಲ್ಪನೆಯಾಗಿದೆ. ಜೊತೆ ಜೊತೆಗೆ ಪರಿಸರದ ಲಾಲಿತ್ಯದಲ್ಲಿ ಹಾಡು, ಕತೆ, ಗಾದೆ, ನೃತ್ಯ, ಕರಕುಶಲತೆ, ಚಿತ್ತಾರ, ಚಿಕಿತ್ಸೆ, ನೋಟ, ಮಾಟ, ಮಂತ್ರ, ತಂತ್ರ, ನ್ಯಾಯ ಕಟ್ಟಳೆ, ಪಶುಪಾಲನೆ, ಕುಂಬರಿ ಬೇಸಾಯ, ಕಿರು ಉತ್ಪನ್ನ ಮತ್ತು ಆಹಾರ ಸಂಗ್ರಹಣೆ, ವೃತ್ತಿ ಕೌಶಲ್ಯ, ಸಾಮಾಜಿಕ, ಸಾಂಸ್ಕೃತಿಕ ಆಚರಣೆಗಳನ್ನು ತನ್ನ ಮಾನಸಿಕ ಒತ್ತಡಗಲ ನಿವಾರಣೆಗಾಗಿ, ಆತ ಕಂಡುಕೊಂಡ ಎಲ್ಲಾ ಮಾರ್ಗಗಳು ಸೀಮಾಪದ್ಧತಿಯ ಪ್ರತ್ಯೇಕ ಘಟಕಗಳಾಗಿ ಹೆಣೆದುಕೊಂಡು ಸೀಮಾಜಾಲವನ್ನು ಸೃಷ್ಟಿಸಿಕೊಂಡ.

ಸೀಮಾಪದ್ಧತಿಯಲ್ಲಿನ ವ್ಯವಸ್ಥೆ ಪ್ರಮುಖವಾಗಿ ಗಮನಿಸಬೇಕಾದ ಮುಖ್ಯಾಂಶವೆಂದರೆ, ದೈವಗಳೊಟ್ಟಿಗಿನ ಸಂಬಂಧ. ದೈವಗಳು ಇಲ್ಲಿ ಮನುಷ್ಯರ ಒಟ್ಟೊಟ್ಟಿಗೇ ಬದುಕುತ್ತವೆ. ಅಥವಾ ಬುಡಕಟ್ಟುಗಳು ದೈವಗಳೊಟ್ಟಿಗೆ ಬದುಕುತ್ತಿವೆ. ಆದಿವಾಸಿಗಳು ನೇರವಾಗಿ ದೈವಗಳೊಟ್ಟಿಗೆ ವ್ಯವಹರಿಸುತ್ತಾರೆ, ಜಗಳವಾಡುತ್ತಾರೆ: ಅವಲತ್ತುಕೊಳ್ಳುತ್ತಾರೆ, ಚೌಕಾಸಿ ಮಾಡುತ್ತಾರೆ. ಆದಿವಾಸಿ ಮತ್ತು ದೈವಗಳ ಮಧ್ಯೆ ಮಧ್ಯಸ್ಥಗಾರರಿರುವುದಿಲ್ಲ. ಬ್ರಾಹ್ಮಣ ಪೂಜಾರಿಗಳಿಗೆ ಸ್ಥಾನ ಮತ್ತು ಪ್ರವೇಶಗಳಿಲ್ಲ. ಬುಡಕಟ್ಟುಗಳು ಪರಿಸರದೊಟ್ಟಿಗೆ ಸೃಷ್ಟಿಸಿಕೊಂಡ ಅನುಭಾವವೇ ಆದಿವಾಸಿಗಳ ಆಧ್ಯಾತ್ಮವಾಗಿದೆ. ಬುಡಕಟ್ಟುಗಳ ಬದುಕಿನಲ್ಲಿ ಆಧ್ಯಾತ್ಮಿಕತೆ ಅತ್ಯಂತ ಮಹತ್ತರವಾದ ಪಾತ್ರವನ್ನು

ವಹಿಸುತ್ತದೆ. ಬಡುಕಟ್ಟುಗಳು ದೈವವನ್ನು ಮರೆತರು. ಆದರೆ ಆಧ್ಯಾತ್ಮವನ್ನು ಮಾತ್ರ ಬಿಟ್ಟಿರುವುದಿಲ್ಲ. ಬುಡಕಟ್ಟುಗಳಲ್ಲಿ ಆಧ್ಯಾತ್ಮವೆಂದರೆ ತಾನು ಮತ್ತು ತನ್ನ ಕಾಡಿನ ಪರಿಸರದ ಜೀವಸಂಕುಲಗಳೊಟ್ಟಿಗಿನ ಅವಿನಾಭಾವ ಸಂಬಂಧ ಅದೊಂದು ಅನುಸಂಧಾನ, ಪರಸ್ಪರ ಕೊಡುಕೊಳ್ಳುವಿಕೆ, ಸಮಾನ ಹಂಚಿಕೆ, ಸಾಮೂಹಿಕತ್ವ, ಸಹಜೀವನಗಳೊಟ್ಟಿಗೆ ಕೃತ್ರಿಮತೆ ಮತ್ತು ನಿರೀಕ್ಷಣೆಗಳಿಲ್ಲದ ಪರಿಶುದ್ಧ ನೆಮ್ಮದಿಯ ಬದುಕೇ ಆದಿವಾಸಿ ಆಧ್ಯಾತ್ಮಿಕತೆಯಾಗಿದೆ.

## ಸೀಮಾಪದ್ಧತಿಯ ಬೆಳವಣಿಗೆಯ ಹಂತಗಳು ಮತ್ತು ಸ್ಥಿತ್ಯಂತರಗಳು

ಕರ್ನಾಟಕದ ಬಡುಕಟ್ಟುಗಳಲ್ಲಿ ಸೀಮಾಪದ್ಧತಿಯ ಅಧ್ಯಯನಕ್ಕಾಗಿ 8 ಸಮುದಾಯಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲೂಕಿನ ಕುಣಬಿ ಸಮುದಾಯವನ್ನು ಕೇಂದ್ರವಾಗಿಟ್ಟುಕೊಂಡು ಉಳಿದ ಏಳು ಬುಡಕಟ್ಟುಗಳಲ್ಲಿ ಇರುವ ಸೀಮಾಪದ್ಧತಿಯ ಸಾಂದರ್ಭಿಕ ಉದಾಹರಣೆಗಳೊಟ್ಟಿಗೆ ಸೀಮಾ ಪದ್ಧತಿಯ ತೌಲನಿಕ ಅಧ್ಯಯನವನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ಉದ್ದೇಶವಾಗಿಟ್ಟುಕೊಳ್ಳಲು ಪ್ರಮುಖ ಕಾರಣ. ಜೋಯಿಡಾ ತಾಲೂಕಿನ ಕುಣಬಿಗಳನ್ನು ಹೊರತುಪಡಿಸಿ ಕರ್ನಾಟಕದ ಯಾವುದೇ ಸಮುದಾಯಗಳಲ್ಲಿ ಸೀಮಾಪದ್ಧತಿ ಜೀವಂತ ಸ್ವರೂಪದಲ್ಲಿ ಆಚರಣೆಯಲ್ಲಿಲ್ಲ. ಕಾರಣ ಜೋಯಿಡಾ ತಾಲೂಕಿನ ಆದಿವಾಸಿಗಳನ್ನು ಅಲ್ಲಿ ನಡೆದ ಹೋರಾಟದ ಪರಿಣಾಮವಾಗಿ ಅವರನ್ನು ಕಾಡಿನ ಮೂಲನೆಲೆಯಿಂದ ಸ್ಥಳಾಂತರಗೊಳಿಸಿಲ್ಲ. ಆದರೆ ಉಳಿದ ಕಾಡಿನ ಸಮುದಾಯಗಳನ್ನು ತಮ್ಮ ಮೂಲ ನೆಲೆಯಿಂದ ಸ್ಥಾನಪಲ್ಲಟಗೊಳಿಸಿ ಅವರ ಸೀಮಾವಲಯ, ಜಮ್ಮಾವನ್ನು ಅರಣ್ಯ ಇಲಾಖೆ ಈಗಾಗಲೇ ಕಸಿದುಕೊಂಡಿದೆ. ಉಳಿದ ಸಮುದಾಯಗಳಲ್ಲಿ ಅದರ ನೆನಪು ಮತ್ತು ಕೆಲವು ಆಚರಣೆಗಳು ಮಾತ್ರ ಚಾಲನೆಯಲ್ಲಿವೆ.

ಕರ್ನಾಟಕದ ಈ 4 ಬುಡಕಟ್ಟುಗಳ ಸೀಮಾಪದ್ಧತಿಯನ್ನು ಅವಲೋಕಿಸಿದಾಗ ಅವುಗಳ ಸ್ಥಿತಿಗತಿ, ಬೆಳವಣಿಗೆ ಮತ್ತು ಸ್ಥಿತ್ಯಂತರಗಳಿಗೆ ಅನುಗುಣವಾಗಿ ಮೂರು ಹಂತಗಳನ್ನಾಗಿ ವರ್ಗೀಕರಿಸಿಕೊಳ್ಳಬಹುದಾಗಿದೆ.

1. ಆದಿಮ ಸ್ಥಿತಿಯ ಸೀಮಾಪದ್ಧತಿ
2. ವಿಕಸಿತ ಸ್ಥಿತಿಯ ಸೀಮಾಪದ್ಧತಿ
3. ಸ್ಥಿತ್ಯಂತರಗೊಂಡ ಸೀಮಾಪದ್ಧತಿ
4. ಪತನಗೊಂಡ ಸೀಮಾಪದ್ಧತಿ

**1. ಆದಿಮ ಸ್ಥಿತಿಯ ಸೀಮಾಪದ್ಧತಿ:** ಸಾಮೂಹಿಕತ್ವವು ಬುಡಕಟ್ಟುಗಳ ಮೂಲತತ್ವಗುಣ. ಹಾಗಾಗಿ ಸೀಮಾ/ಜಮ್ಮಾ ಕ್ಷೇತ್ರವಲಯ ಹಲವಾರು ಹಾಡಿ/ಪೋಡುಗಳನ್ನು ಕೂಡಿಕೊಂಡು ಇಡೀ 10–

20 ಹಾಡಿಗಳ ಸುತ್ತಲು ಕಾಡಿನ ವೃತ್ತಾಕಾರದ ಪರಿಧಿ ಆವರಣ ಕ್ಷೇತ್ರವೇ ಅವರ ಜಮ್ಮಾ/ಸೀಮಾ ಅಥವಾ ಗಡಿಯಾಗಿರುವುದನ್ನು ಜೇನುಕುರುಬ ಮತ್ತು ಬೆಟ್ಟಕುರುಬರಲ್ಲಿ ಕಾಣಬಹುದಾಗಿದೆ.

**2. ವಿಕಸಿತ ಸ್ಥಿತಿಯ ಸೀಮಾಪದ್ಧತಿ:** 10–20 ಹಾಡಿಗಳು ಕೂಡಿಕೊಂಡು ರಚಿಸಲ್ಪಟ್ಟಿದ ಸೀಮಾ ವಲಯ ವಿಕೇಂದ್ರೀಕರಣಗೊಂಡು ಪ್ರತಿ ಹಾಡಿ/ಕುಳಾವಿಗೆ ಒಂದರಂತೆ, ಅಂದರೆ ಒಂದು ಹಾಡಿಯ ಸುತ್ತಲೂ ನಿರ್ದಿಷ್ಟ ವೃತ್ತಾಕಾರದ ಪರಿಧಿಯೊಳಗೆ ನಿರ್ಮಿಸಿಕೊಂಡ ಸೀಮಾಪದ್ಧತಿಯ ಆದಿಮತೆಯು ವಿಕಸಿತಗೊಂಡ ಮಾದರಿಯಾಗಿ ಜಮ್ಮಾ/ಸೀಮಾ ರೂಪುಗೊಂಡಿರುವುದನ್ನು ಕುಣಬಿ ಮತ್ತು ಸೋಲಿಗ ಹಾಗೂ ಸಿದ್ದಿ ಸಮುದಾಯಗಳಲ್ಲಿ ಕಾಣಬಹುದಾಗಿದೆ.

**3. ಸ್ಥಿತ್ಯಂತರಗೊಂಡ ಸೀಮಾಪದ್ಧತಿ:** ಬುಡಕಟ್ಟುಗಳು ಸಾವಿರಾರು ವರ್ಷಗಳಿಂದ ತಮ್ಮ ಜ್ಞಾನ ಮತ್ತು ಅನುಭವ ಮೂಲಕ ಸೃಷ್ಟಿಸಿಕೊಂಡ ಸೀಮಾಪದ್ದತಿಯ ಪಾಳೇಗಾರಿಕೆ, ಸಾಮ್ರಾಜ್ಯಶಾಹಿಗಳ ತೆಕ್ಕೆಗೆ ಸೇರಿ ಅವರ ಆಡಳಿತದ ನಿಯಂತ್ರಣಕ್ಕೊಳಪಟ್ಟು ಆಡಳಿತವನ್ನು ನಡೆಸುವ ಮತ್ತು ತೆರಿಗೆ, ಕಪ್ಪ, ಕಾಣಿಕೆ ಸಂಗ್ರಹಿಸುವ ಕೇಂದ್ರಗಳಾಗಿ ಸ್ಥಿತ್ಯಂತರಗೊಂಡ ಸೀಮಾಪದ್ಧತಿಯನ್ನು ಹಾಲಕ್ಕಿ ಮತ್ತು ಮ್ಯಾಸಬೇಡರಲ್ಲಿ ಹಾಗೂ ಸ್ವಲ್ಪ ಕಡಿಮೆ ಭಾಗವಾಗಿ ಕಾಡುಗೊಲ್ಲರಲ್ಲಿ ಸ್ಥಿತ್ಯಂತರಗೊಂಡ ಸೀಮಾ ಪದ್ಧತಿಯನ್ನು ಕಾಣಬಹುದಾಗಿದೆ. ಉತ್ತರ ಕನ್ನಡ ಜಿಲ್ಲೆಯನ್ನು ಆಳಿದ ರಾಜರು ಯುದ್ಧಗಳಿಗೆ ಬಡುಕಟ್ಟುಗಳನ್ನು ಬಳಸಿಕೊಂಡಿದ್ದು ಮತ್ತು ಆಗಲೇ ಸೀಮಾ ವಿಂಗಡಣೆಯಾಗಿದ್ದ ಸೀಮಾ ಪದ್ಧತಿಯನ್ನು ಬದಲಾಯಿಸಿ ಸಾಮ್ರಾಜ್ಯದ ಕಪ್ಪ ಕಾಣಿಕೆ ತೆರಿಗೆ ಸಂಗ್ರಹಿಸಲು ಸೀಮಾವಲಯವನ್ನು ಮಾರ್ಪಡಿಸಿ, ಅದಕ್ಕೆ ಮುಖಂಡರುಗಳನ್ನು ನೇಮಿಸಿ ಆಡಳಿತ ನಡೆಸಿದ ಪ್ರಕರಣಗಳಿವೆ. ಹಾಲಕ್ಕಿಗಳಲ್ಲಿ 7 ಸೀಮೆಗಳಿವೆ. ಪ್ರತಿ ಸೀಮೆಗಳಿವೆ 20–60 ಹಾಲಕ್ಕಿ ಹಳ್ಳಿಗಳಿರುತ್ತವೆ. ಪ್ರತಿ ಸೀಮೆಗೆ ಒಬ್ಬಬ್ಬ ಗೌಡರಿದ್ದು ಅವರು ತೆರಿಗೆ ಕಪ್ಪಕಾಣಿಕೆಗಳನ್ನು ರೈತರಿಂದ ಸಂಗ್ರಹಿಸಿ ವಿಜಯನಗರದ ಅರಸರಿಗೆ ನೀಡಬೇಕಾಗಿತ್ತು. ಹಾಗಾಗಿ ಬುಡಕಟ್ಟುಗಳ ಸಂಪ್ರದಾಯಿಕ ಸೀಮಾಪದ್ಧತಿ ಮತ್ತು ಅದರ ಉದ್ದೇಶಗಳು ಬದಲಾದವು. ಇಂತಹದೇ ಉದಾಹರಣೆ ಮ್ಯಾಸಬೇಡರಲ್ಲಿ ಇದೆ. ಮ್ಯಾಸಬೇಡರ ಹಟ್ಟಿಗಳೀಗೆ ಒಂದರಂತೆ 'ಕಟ್ಟೆಮನೆ' ರಚಿಸಿ ಅದಕ್ಕೆ ದೊರೆಗಳನ್ನು ನೇಮಿಸಲಾಯಿತು. ಮತ್ತೆ ದೊರೆಗಳ ಕೆಲಸ ತೆರಿಗೆ ಸಂಗ್ರಹಣ, ಲೆಕ್ಕ ಆಡಳಿತ ವ್ಯಾಜ್ಯಗಳನ್ನು ಬಗೆಹರಿಸುವುದು ಇತ್ಯಾದಿಗಳು. ಈ ತರಹದ 12 ಕಟ್ಟೆಮನೆ ಮತ್ತು 12 ದೊರೆಗಳು ಆಳಿದ್ದನ್ನು ಮ್ಯಾಡಬೇಡರಲ್ಲಿ ಕಾಣಬಹುದು. ಈಗಲೂ ದೊರೆಗಳೆಂಬುವವರ ಸಂತತಿ ಇದ್ದು ಕಟ್ಟೆಮನೆಗಳಲ್ಲಿ ಈಗಲೂ ವ್ಯಾಜ್ಯಗಳನ್ನು ಅವರು ಬಗೆಹರಿಸುವುದನ್ನು ಕಾಣಬಹುದಾಗಿದೆ. ಕಾಡುಗೊಲ್ಲರಲ್ಲೂ ಕಟ್ಟೆಮನೆಗಳಿದ್ದು ಅವು ಸಂಪೂರ್ಣ ಚಾಲ್ತಿಯಲ್ಲಿಲ್ಲದೆ ಸ್ಥಗಿತಗೊಂಡಿ ರುವುದನ್ನು ಕಾಣಬಹುದಾಗಿದೆ. ಅಷ್ಟೇ ಅಲ್ಲದೆ ಬೆಟ್ಟಕುರುಬ ಮತ್ತು ಜೇನುಕುರುಬರಲ್ಲಿಯೂ ಮೈಸೂರು ಅರಸರು ಪಿರಿಯಾಪಟ್ಟಣದ ಅರಸರುಗಳು ಅಲ್ಲಿನ

ಬುಡಕಟ್ಟುಗಳಲ್ಲಿನ ಸೀಮಾಪದ್ಧತಿಗಳನ್ನು ಅಲ್ಲಲ್ಲಿ ಸ್ಥಿತ್ಯಂತರಗೊಳಿಸಿದ್ದನ್ನು ಕಾಣಬಹುದಾಗಿದೆ.

**4. ಪತನಗೊಂಡ ಸೀಮಾಪದ್ಧತಿಗಳು:** ಬುಡಕಟ್ಟುಗಳಲ್ಲಿನ ಸೀಮಾಪದ್ಧತಿ ವ್ಯವಸ್ಥೆಯ ಮೂಲ ಉದ್ದೇಶ ಕಾಡಿನಲ್ಲಿ ಭದ್ರತೆ ಮತ್ತು ರಕ್ಷಣೆ ಪಡೆಯುವುದೇ ಆಗಿದೆ. ಆದರೆ ಯಾವಾಗ ಸಾಮ್ರಾಜ್ಯಶಾಹಿಗಳು ಬುಡಕಟ್ಟುಗಳ ಆವರಣದೊಳಗೆ ಲಗ್ಗೆ ಇಟ್ಟರೋ ಆಗಲೇ ಬಡುಕಟ್ಟುಗಳ ಸೀಮಾಪದ್ಧತಿಯ ಪತನ ಪ್ರಾರಂಭವಾಯಿತು.

ಬುಡಕಟ್ಟುಗಳ ಸೀಮಾಪದ್ಧತಿಯಲ್ಲಿ ತಮ್ಮ ಮೂಲಭೂತ ಸೌಲಭ್ಯಗಳ ಪೂರೈಕೆಗಾಗಿ ಸಹಮತ ಸಹಬಾಳ್ವೆ ಸಮಾನ ಹಂಚಿಕೆಯ, ಮೇಲುಕೀಳುಗಳ ತಾರತಮ್ಯವಿಲ್ಲದ ಸಾಮೂಹಿಕತ್ವದಲ್ಲಿ ನಂಬಿಕೆಯಿಟ್ಟುಕೊಂಡಿದ್ದರು. ಆದರೆ ಸಾಮ್ರಾಜ್ಯಶಾಹಿಗಳು ಮತ್ತು ವಸಾಹತುಶಾಹಿಗಳು ಬುಡಕಟ್ಟುಗಳ ಇಂತಹ ಮಹತ್ವದ ಆಶಯಗಳನ್ನು ಛಿದ್ರಗೊಳಿಸಿ ಅಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಪ್ರಭುತ್ವವೆಂದರೆ ಆಳ್ವಿಕೆಯಮನ್ನು ಜಾರಿಗೊಳಿಸುದವ ವ್ಯವಸ್ಥೆ. ಪ್ರಭುತ್ವದಲ್ಲಿ ಶೋಷಣೆ ಮತ್ತು ದಮನಗಳ ಪ್ರವೃತ್ತಿ ಇದ್ದ ಊಳಿಗಮಾನ್ಯ ಪದ್ಧತಿಯನ್ನು ಪ್ರತಿಪಾದಿಸುತ್ತದೆ. ಆದರೆ ಸೀಮಾಪದ್ಧತಿಯು ನೈಸರ್ಗಿಕವಾಗಿ ಹುಟ್ಟಿಕೊಂಡ ಪ್ರವೃತ್ತಿಯ ಮುಂದುವರಿದ ಭಾಗವಾಗಿತ್ತು. ಅಲ್ಲಿ ಆಳ್ವಿಕೆ ಪ್ರಭುತ್ವಕ್ಕಿಂತ ಮೂಲಭೂತ ಅಗತ್ಯತೆ, ಭದ್ರತೆ, ನೆಮ್ಮದಿ, ಶಾಂತಿ ಮೂಲಮಂತ್ರವಾಗಿತ್ತು. ಆದರೆ ಸಾಮ್ರಾಜ್ಯಶಾಹಿ ಹಾಗೂ ವಸಹಾತುಶಾಹಿಗಳು ಸೀಮೆಯನ್ನು ರಯತ್ವಾರಿ, ಜಹಗೀರದಾರಿ ವ್ಯವಸ್ಥೆ ತಂದರು. ಅಲ್ಲದೆ ವಸಹಾತುಶಾಹಿ, ಅರಣ್ಯ ಇಲಾಖೆಯ ಕಾಯ್ದೆ ಕಾನೂನು ಮತ್ತು ಅಭಿವೃದ್ಧಿಯ ನೆಪದಲ್ಲಿ ಬಡುಕಟ್ಟುಗಳನ್ನು ಸಂಪೂರ್ಣವಾಗಿ ಎಲ್ಲೆಲ್ಲಿ ಸ್ಥಳಾಂತರಿಸಲಾಗಿದೆಯೋ, ಎಲ್ಲೆಲ್ಲಿ ಅವರ ಸೀಮಾ ಕ್ಷೇತ್ರಗಳನ್ನು ಕಸಿದುಕೊಳ್ಳಲಾಗಿದೆಯೋ ಅಲ್ಲೆಲ್ಲಾ ಬಡುಕಟ್ಟುಗಳ ಸೀಮಾಪದ್ಧತಿ ಪತನಗೊಂಡಿರುವುದನ್ನು ಕಾಣಬಹುದಾಗಿದೆ.

ಪ್ರಸ್ತುತದಲ್ಲಿ ಬಡುಕಟ್ಟುಗಳು ಸೀಮಾಪದ್ಧತಿಗೆ ಸಂಬಂಧಿಸಿದಂತೆ ದ್ವಂದ್ವದಲ್ಲಿ ಬದುಕು ಸವೆಸುತ್ತಿದ್ದಾರೆ. ಒಂದು ತಮ್ಮ ಮೂಲ ಆದಿಮ ಪರಂಪರೆ ಮತ್ತು ಆಧುನಿಕತೆ ಎರಡೂ ಮುಖಗಳನ್ನು ಹೊತ್ತುಕೊಂಡ ಆದಿವಾಸಿಗಳ ಬದುಕು ನಿಜವಾಗಲೂ ಅತಂತ್ರದ ಸ್ಥಿತಿಯಲ್ಲಿದೆ. ಈಗಾಗಲೇ ಪ್ರಸ್ತಾಪಿಸಿರುವ ಹಾಗೆ ಬುಡಕಟ್ಟುಗಳೊಳಗಿನ ಅನಾವರಣಗೊಳ್ಳದ ಇಂತಹ ಸಂದಿಗ್ಧ ಅಸಹಾಯಕ ಪರಿಸ್ಥಿತಿಯನ್ನು ಹೊರಪ್ರಪಂಚಕ್ಕೆ ಅನಾವರಣಗೊಳಿಸುವ ಮೂಲಕ ಸೀಮಾಪದ್ಧತಿಯ ಶ್ರೇಷ್ಠತೆ ಮತ್ತು ಅದು ಸಂಪೂರ್ಣ ಅವನತಿಗೊಳ್ಳುವ ಮುಂಚೆ ಉಳಿಸಿಕೊಳ್ಳುವ ಸಲುವಾಗಿ ತೆಗೆದುಕೊಳ್ಳಬೇಕಾದ ಎಚ್ಚರಿಕೆಗಳನ್ನು ಮನಗಾಣಿಸುವ ಮೂಲಕ ಸೀಮಾಪದ್ದತಿಯ ಅಸ್ತಿತ್ವ ಪುನಶ್ಚೇತನಕ್ಕೆ ಪೂರಕವಾದ ದಾಖಲೆ ಮಾಹಿತಿ ಒದಗಿಸುವ ಸಲುವಾಗಿ ಅಧ್ಯಯನವನ್ನು ಕೈಗೊಂಡು ಈ ಪ್ರಬಂಧವನ್ನು ಮಂಡಿಸಲಾಗಿದೆ.

## ಅಡಿ ಟಿಪ್ಪಣಿಗಳು

1. ಆದಿವಾಸಿಗಳಿಗೆ ಎತ್ತಂಗಡಿ! ಸಾಮ್ರಾಜ್ಯಶಾಹಿಗಳಿಗೆ ರತ್ನಗಂಬಳಿ!!, ಪ್ರ. ಕರ್ನಾಟಕ ವಿಮೋಚನಾ ರಂಗ, 2000.
2. The Tribes and Castes of Cochin, L.K. Ananthakrishna Iyer, Vol 1, P 135,1981
3. K.S. Singh & others, People India- Kerala vol-1, K.S.Singh- p.60, 2002
4. Ibid P 8-9
5. Ibid Vol 3, P 713
6. Ibid P 1186
7. Survey of the Environment - 2002, The Hindu.
8. Report of Committee on Forest and Tribals in India - p – 54, 1982
9. Roy Burman, Report of Committe on Forest and Tribals in India, Government of India, Ministry of Home affairs, NewDelhi, P 198, 1982
10. Sen, National Human Rights Commission, Journal Vol-I, 2002, National Institute of Human Rights, NLSIU, Bangalore- 2002.
11. www.mapsofinida.com
12. www.corbettnationalpark.in
13. https://www.collinsdictionary.com/dictionary/english/ecosystem
14. https://www.researchgate.net/profile/Nichola_Ramchurjee
15. Ibid
16. ಮೂಲ: ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕುದುರೆಮುಖ ವನ್ಯಜೀವಿ ವಲಯ, ಕಾರ್ಕಳ, ಉಡುಪಿ ಜಿಲ್ಲೆ.

# ಸಮಾರೋಪ

ಜಮ್ಮಾ, ಗಡಿ, ಸೀಮೆ ಮತ್ತು ಎಲ್ಲೆ ಇವು ನಮ್ಮ ಆದಿಮ ಸಮುದಾಯಗಳ ನಿತ್ಯದ ಬದುಕಿನ ಒಳಗಿಂದ ರೂಪುಗೊಂಡ ಲೌಕಿಕದ ಸಂಗತಿಗಳು. ನಮ್ಮ ಆದಿವಾಸಿ ಸಮುದಾಯಗಳ ಬದುಕಲ್ಲಿ ಗಡಿ ಎಂದರೆ, ಸೀಮೆ ಎಂದರೆ ಕೇವಲ ಗೆರೆ ಕೊರೆದು ಹಕ್ಕು ಸ್ಥಾಪಿಸುವ ಯಾಂತ್ರಿಕ ಯಜಮಾನಿಕೆಯಲ್ಲ. ಜಮ್ಮಾ ಮತ್ತು ಗಡಿ ಎಂದರೆ ಆಯಾ ಸಮುದಾಯದ ಸಮಗ್ರ ಬದುಕನ್ನು ಕಾಪಿಡುತ್ತ ಬಂದ ಆದಿಮ ಪದ್ಧತಿಯೂ ಹೌದು. ಈ ಸೀಮಾಪದ್ಧತಿ ಗಡಿ ಮತ್ತು ಗಡಿಯೊಳಗಿನ ಬದುಕನ್ನು ನಿರಂತರವಾಗಿ ರೂಪಿಸುತ್ತಾ, ತಾನೂ ಜೀವಂತವಿದ್ದು, ಸಮುದಾಯಗಳ ಬದುಕಿನ ಸೃಜನಶೀಲ ಕೇಂದ್ರವಾಗುತ್ತ ಬಂದ ಪ್ರಕ್ರಿಯೆಯಾಗಿದೆ. ಒಂದು ಬುಡಕಟ್ಟು ಸಮುದಾಯದ ಹಾಡಿ, ಕುಳಾವಿಯ ಸೀಮೆಯೊಳಗಿನ ಪ್ರದೇಶವು ಆ ಬುಡಕಟ್ಟಿನ ಸಮಗ್ರ ಸಾಂಸ್ಕೃತಿಕ ಕುಲಕಸಬುಗಳು, ಮಡಿದವರ ಆತ್ಮಗಳು ದೈವಗಳಾಗಿ ಗಡಿ ಕಾಯುವ ಬಗೆ, ದೈವಗಳು ಮತ್ತು ದೈವಗಳ ಪರಸ್ಪರ ಸಹಕಾರ ಸಂಪರ್ಕಗಳು ಏಕತ್ರಗೊಂಡಿರುತ್ತವೆ. ಹಾಡಿಗಳಲ್ಲಿನ ಜನರ ರಕ್ಷಣೆ, ಸೀಮೆಯ ಕಾಡು ಮರಗಿಡ–ಬಳ್ಳಿಗಳು ಮತ್ತು ಅವುಗಳೊಳಗೆ ಅಡಕವಾಗಿರುವ ದೈವಗಳು ಮತ್ತು ಅಪಾರ ಔಷಧೀಯ ಚಿಕಿತ್ಸಕ–ಜ್ಞಾನಗಳು, ತಮ್ಮ ಬದುಕಿಗೆ ಆಧಾರವಾದ ವ್ಯವಸಾಯ, ಸಹಜಕೃಷಿ ಕುಂಬರಿ ಬೇಸಾಯ, ಅರಣ್ಯ ಕಿರು ಉತ್ಪನ್ನಗಳು ಮತ್ತು ಅವುಗಳಿಂದ ಮೂಡಿ ಬರುವ ಕರಕುಶಲ ಕಲೆಗಳು ರೂಪುಗೊಂಡ ಬಗೆಗೂ ಸೀಮಾಪದ್ಧತಿಗೂ ನೇರ ಸಂಬಂಧವಿದೆ. ಇದಲ್ಲದೆ ಮದುವೆ ಹಬ್ಬ ಹರಿದಿನ ಜಾತ್ರೆಗಳು, ಹಾಡು ನೃತ್ಯ ರೂಪಕಗಳು ಸುತ್ತಲ ಪರಿಸರ ಜೀವವೈವಿಧ್ಯದ ಜೊತೆಗಿನ ತಮ್ಮ ಪರಸ್ಪರ ಹಂಚಿ ಬಾಳುವ ಸಮಾನತೆಯ ಅವಿನಾಭಾವ ಸಂಬಂಧಗಳು, ಇದರೊಟ್ಟಿಗೆ ಇವೆಲ್ಲಾ ನಮ್ಮನ್ನು ಕಾಪಾಡುತ್ತಿವೆ ಎಂಬ ನಿರುಮ್ಮಳ ಭಾವವನ್ನು ಸೀಮಾಪದ್ಧತಿ ಪಸರಿಸಿದೆ. ಹೀಗೆ ಇಂತಹ ನೂರಾರು ಆಯಾಮಗಳನ್ನು ಒಳಗೊಳ್ಳುವ ಬುಡಕಟ್ಟುಗಳ ಸಾಮಾಜಿಕ ನೆಮ್ಮದಿಯ ಬದುಕಿನ ಒಳನೋಟಗಳ ಮಗ್ಗಲುಗಳನ್ನು ಸೀಮೆಯ ಪದ್ಧತಿ ಅನಾವರಣಗೊಳಿಸುತ್ತದೆ.

ಬುಡಕಟ್ಟುಗಳ ಸೀಮೆಯೊಳಗಿನ ಈ ವಿಶಿಷ್ಟ ಸರಳ ಸಂಕೀರ್ಣ ಸಮಗ್ರ ಸಾಂಸ್ಕೃತಿಕ ನೆಮ್ಮದಿಯ ಜೀವನ ಅದಿವಾಸಿಗಳ ಸಾಮಾಜಿಕ ಜೀವನದ ಅನನ್ಯತೆಯನ್ನು ಪ್ರತಿಬಿಂಬಿಸುತ್ತದೆ.

ಈ ಸಾಂಸ್ಕೃತಿಕ ಸಾಮಾಜಿಕ ಬದುಕಿನ ಮೌಲ್ಯಗಳು ಜಡಗಟ್ಟಿದ ನೆಮ್ಮದಿರಹಿತ ಪ್ರಸ್ತುತ ಅಧುನಿಕ ನಾಗರಿಕ ಪ್ರಪಂಚಕ್ಕೆ ಪಾಠವೂ, ಮಾದರಿಯೂ, ಅಧ್ಯಯನಕ್ಕೆ ಯೋಗ್ಯವೂ ಆಗಿವೆ. ಈ ಕಾರಣಗಳಿಂದಾಗಿ ಬುಡಕಟ್ಟು ಸೀಮೆ ಮತ್ತು ಅದರ ಪರಿಕಲ್ಪನೆಗಳ ಕುರಿತು ಉತ್ತರ ಕನ್ನಡ ಜಿಲ್ಲೆ ಕುಣಬಿ ಬುಡಕಟ್ಟು ಜನಾಂಗವನ್ನು ಕೇಂದ್ರವಾಗಿಟ್ಟುಕೊಂಡು ಕರ್ನಾಟಕದ ವಿವಿಧ ಬುಡಕಟ್ಟುಗಳ ಸಾಂದರ್ಭಿಕ ಉದಾಹರಣೆಗಳೊಂದಿಗೆ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಮಾನವನ ಉಗಮ, ಹುಟ್ಟು, ಅವನ ವಿಕಾಸ, ಅವನ ಪರಿವರ್ತನೆ, ಕಾಡಿನಲ್ಲಿ ಇತರೆ ಜೀವಿಗಳೊಂದಿಗೆ ನಡೆಸುವ ಪೈಪೋಟಿ, ಹೊಂದಾಣಿಕೆ, ಅಳವಡಿಕೆಯು ಹೀಗೆ ಪ್ರಾಣಿಗಳಂತೆ ಗುಹೆ ಪೊಟರೆಗಳಲ್ಲಿ ಬೇಟೆಯಾಡಿ ನಂತರ ಗೆಡ್ಡೆಗೆಣಸುಗಳ ತಿಂದು ಅಲೆಮಾರಿಯಾಗಿ ಒಂದು ಕಡೆಯಿಂದ ಮತ್ತೊಂದು ಕಡೆ ಆಹಾರ ನೀರುಗಳಿಗಾಗಿ ವಲಸೆ ಮಾಡುತ್ತಿದ್ದರು. ಹೀಗೆ ಒಂದು ಕಡೆ ನೆಲೆ ನಿಂತು ಕೃಷಿಯ ಅನ್ವೇಷಣೆ ಮಾಡಿ ಹೀಗೆ ಅನುಭವ ಪಡೆದ ಕಾಲ ಕಳೆದಂತೆ ಸಂಘಜೀವಿಯಾಗಿ ಸಂಕೀರ್ಣಯುಕ್ತ ಬದುಕನ್ನು ಸರಳೀಕರಣಗೊಳಿಸುವ ಸಲುವಾಗಿ ಕಟ್ಟಿಕೊಂಡ ಸಮಾಜ, ದೈವಗಳು, ನಂಬಿಕೆಗಳು, ನ್ಯಾಯ ಮತ್ತು ಸೇವೆಯಂತೆ ಆಡಳಿತವ್ಯವಸ್ಥೆ, ಧರ್ಮ, ಕೃಷಿಪದ್ಧತಿ, ವೈದ್ಯಕೀಯ ಚಿಕಿತ್ಸೆ, ಕರಕುಶಲ ಕಲೆ, ಕುಸುರಿ ಸಲಕರಣೆಗಳು, ನೆಮ್ಮದಿಗಾಗಿ ಹಾಡು, ಕುಣಿತ, ಜಾನಪದ ಕಥೆ... ಇತ್ಯಾದಿಗಳನ್ನು ಸೃಷ್ಟಿಸಿಕೊಂಡದ್ದನ್ನು ಅಧ್ಯಯನ ಮಾಡಲು ಮಾನವಶಾಸ್ತ್ರದಲ್ಲಿ ಅನೇಕ ಭಾಗಗಳು ಹುಟ್ಟಿಕೊಂಡವು. ಅವುಗಳಲ್ಲಿ ಜೈವಿಕ ಮಾನವಶಾಸ್ತ್ರ, ಸಾಮಾಜಿಕ ಮಾನವಶಾಸ್ತ್ರ, ಸಾಂಸ್ಕೃತಿಕ ಮಾನವಶಾಸ್ತ್ರ, ಭಾಷಾ ಮಾನವಶಾಸ್ತ್ರ, ಪುರಾತತ್ವ ಮಾನವಶಾಸ್ತ್ರ, ವೈದ್ಯಕೀಯ ಮಾನವಶಾಸ್ತ್ರ, ಆರ್ಥಿಕ ಮಾನವಶಾಸ್ತ್ರ... ಹೀಗೆ ಅನೇಕ ಭಾಗಗಳಾಗಿ ಬೆಳೆಯತೊಡಗಿದಂತೆಯೇ ಮಾನವನ ಬಗ್ಗೆ ವರ್ಣನೆ ಮಾಡುವ ನರಕುಲವರ್ಣನೆ ಎಂಬ ಭಾಗವೂ ಸಹ ಹುಟ್ಟಿಕೊಂಡಿತು.

ಮಾನವನ ಈ ವಿಕಾಸ, ಬೆಳವಣಿಗೆ, ಸಾಮಾಜಿಕ ಜೀವನದ ನೋವು–ನಲಿವುಗಳ ಸಂಬಂಧ, ಶಬ್ದವನ್ನು ಸಂವಹನದ ಭಾಷೆಯಾಗಿ ರೂಪಿಸಿದ ಬಗ್ಗೆ ತನ್ಮೂಲಕ ಆಲೋಚಿಸುವ ವಿವೇಚಿಸುವ ವಿಚಾರಗಳನ್ನು ಅನುಭವಗಳನ್ನು ಅಂತರ್ಗತ ಮಾಡಿಕೊಂಡು ಮುಂದಿನ ಪೀಳಿಗೆಗೆ ದಾಟಿಸುವ ಜ್ಞಾನದ ನಿರಂತರ ಚಲನಶೀಲ ಪ್ರಕ್ರಿಯೆಯ ಮನುಷ್ಯನ ಬದುಕಿನ ಭಾಗವನ್ನು 'ಸಂಸ್ಕೃತಿ' ಎಂದು ಕರೆಯಲಾಯಿತು. ಒಂದು ಸಮುದಾಯ ತನ್ನ ಸೀಮಿತ ಭೌಗೋಳಿಕ ಪ್ರದೇಶದಲ್ಲಿ ಸಂಕೀರ್ಣಯುಕ್ತ ಸಂಘರ್ಷದ ಬದುಕಿನಿಂದ ಸರಳೀಕೃತ ಬದುಕಿಗಾಗಿ, ಆಹಾರ ಬದುಕು, ರೋಗ, ವ್ಯಾಜ್ಯ, ಪೈಪೋಟಿಗಳ ವಿರುದ್ಧ ನಿರಂತರವಾಗಿ ಹೋರಾಡಿ ಕಂಡುಕೊಂಡ ಸರಳ ಸಾಮಾಜಿಕ ಆಧ್ಯಾತ್ಮಿಕ ಮತ್ತು ನೆಮ್ಮದಿಯ ಸಂಘಟಿತ ಬದುಕನ್ನು ಒಟ್ಟಾರೆಯಾಗಿ 'ಸಂಸ್ಕೃತಿ' ಎನ್ನಬಹುದಾಗಿದೆ. ಈ ಪ್ರಕ್ರಿಯೆ ಕೇವಲ ಮಾನವನ ಸಂಘಟಿತ ಬದುಕಿಗೆ ಮಾತ್ರ ಸೀಮಿತವಲ್ಲ. ಈ ಭೂಮಿಯಲ್ಲಿ ಸಾವಿರಾರು ಕೋಟ್ಯಂತರ ವರ್ಷಗಳಲ್ಲಿ

ಲಕ್ಷಾಂತರ ಜೀವಗಳು ಇದೇ ರೀತಿ ಬದುಕಿಗಾಗಿ ಹೋರಾಟ ಮಾಡಿ ಕಟ್ಟಿಕೊಂಡ ಬದುಕುಗಳೂ ಕೂಡ ಜೀವವಲಯದ ಸಾಂಸ್ಕೃತಿಕ ಬದುಕೇ ಆಗಿದೆ. ಅದನ್ನು EcoSystem ಎಂದು ಜೈವಿಕಶಾಸ್ತ್ರ ಮೂಲಕ ಕರೆಯುತ್ತೇವಷ್ಟೆ. ಬುಡಕಟ್ಟುಗಳಲ್ಲಿರಬಹುದಾದ ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆಗಿಂತ ಶ್ರೇಷ್ಠವಾದ ಸಂಘಟಿತ ಬದುಕನ್ನು ಜೇನು ಇರುವೆಗಳು ಅನುಸರಿಸುತಿಲ್ಲವೇ? ಅವುಗಳು ಪ್ರಾಣಿ, ಪಕ್ಷಿ, ಕೀಟ ಲೋಕದ ಸಂಸ್ಕೃತಿಯ ವಿಶ್ಲೇಷಣೆಗೆ ಒಳಪಡುತ್ತವೆಯಷ್ಟೆ.

ಆದಿವಾಸಿಗಳಲ್ಲಿರುವ ಒಂದು ಪ್ರಮುಖವಾದ ಸಾಂಸ್ಕೃತಿಕ ವ್ಯವಸ್ಥೆ, ಅದರ ಆಚರಣೆಗಳು ಮತ್ತು ಮಹತ್ವಗಳ ಕುರಿತು ಬುಡಕಟ್ಟುಗಳ ಅಧ್ಯಯನದ ಭಾಗವಾಗಿ ಹೊರಪ್ರಪಂಚಕ್ಕೆ ಅನಾವರಣಗೊಂಡಿಲ್ಲ. ಬುಡಕಟ್ಟುಗಳು ಸಾಂಸ್ಕೃತಿಕವಾಗಿ ತಮ್ಮ ಸಮಾಜವನ್ನು ಕಟ್ಟಿಕೊಳ್ಳುವ ವಿಕಾಸದ ಹಾದಿಯಲ್ಲಿ ತಮ್ಮ ಬೇಟೆ, ಆಹಾರ, ಪಶುಪಾಲನೆ, ಕೃಷಿ, ಕಾಡಿನ ಕಿರು ಉತ್ಪನ್ನಗಳು ಸಂಗಾತಿ ಹಾಗೂ ಸಂತತಿಗಳ ಹಂಚಿಕೆಗಳ ವಿಚಾರದಲ್ಲಿ ಬುಡಕಟ್ಟು ಸಮುದಾಯಗಳು ಸಾವಿರಾರು ವರ್ಷಗಳಲ್ಲಿ ರೂಪಿಸಲಾಗಿರುವ 'ಸೀಮಾವಲಯ' ಅದರ ಬಗೆಗಿನ ಆಚರಣೆಗಳು, ದೈವಗಳು, ಪಾರಂಪರಿಕ ಜ್ಞಾನ, ಚಿಕಿತ್ಸಾವಿಧಾನ, ಸ್ವಯಂ ಆಡಳಿತವ್ಯವಸ್ಥೆ ಮತ್ತು ಅದರ ಹಿಂದಿರುವ ಆರ್ಥಿಕ ವ್ಯವಸ್ಥೆ ಇತ್ಯಾದಿಗಳು ಹಾಗೂ ಅದರ ನಿಯಂತ್ರಣಾ ಮತ್ತು ನಿರ್ದೇಶನಗಳ ಬಗ್ಗೆ ಬುಡಕಟ್ಟುಗಳಲ್ಲಿ ಹಾಸುಹೊಕ್ಕಾಗಿರುವ ಅತಿ ಪ್ರಮುಖವಾದ ಒಂದು ಸಾಂಸ್ಕೃತಿಕವಾದ ವ್ಯವಸ್ಥೆಯಾದ ಸೀಮೆ, ಗಡಿ, ಜಮ್ಮಾ, ಎಲ್ಲೆ ಹೀಗೆ ಬುಡಕಟ್ಟುಗಳಿಂದ ಮೌಖಿಕವಾಗಿ ಕರೆಯಿಸಿಕೊಳ್ಳಲಾಗಿರುವ 'ಸೀಮಾಪದ್ಧತಿ' ಕುರಿತು ಇಲ್ಲಿಯವರೆಗೂ ಮಾವನಶಾಸ್ತ್ರಜ್ಞರಾಗಲಿ, ಮಾನವಕುಲಶಾಸ್ತ್ರಜ್ಞರಾಗಲಿ ಭಾರತದ ಆದಿವಾಸಿಗಳ ಒಳಮರ್ಮ ಅರಿಯಲೆಂದೇ ವಿಶೇಷವಾಗಿ ಕರೆತಂದ ವಿದೇಶಿ ವಿದ್ವಾಂಸರುಗಳಾದ ಪೌರಸ್ತವಾದಿಗಳಾಗಲೀ ಅಥವಾ ಭಾರತೀಯ ಅಧ್ಯಯನಕಾರರು, ಸಂಶೋಧಕರುಗಳಾಗಲಿ ಯಾಕೆ ಇಂತಹ ಬುಡಕಟ್ಟು ಸಮುದಾಯದ ಪ್ರಮುಖ ಸಾಂಸ್ಕೃತಿಕ ಸಂಗತಿಯನ್ನು ಅಧ್ಯಯನಕ್ಕೊಳಪಡಿಸದೇ, ಈ ಬಗ್ಗೆ ಗಮನ ಹರಿಸದೇ ಈ ಅಂಶವನ್ನು ಹೊರಗಿಟ್ಟರು ಎಂಬ ಅಂಶವೇ ಅತ್ಯಂತ ಸೋಜಿಗವೂ, ಆಶ್ಚರ್ಯವೂ ಪ್ರಶ್ನಾರ್ಥಕವೂ ಆಗಿದೆ.

ಕಾಡು ಮತ್ತು ಅದರೊಳಗಿನ ಜೀವಿಗಳ ಜೊತೆ ಅನುಸಂಧಾನದ ಅವಿನಾಭಾವ ಸಂಬಂಧಗಳನ್ನಿಟ್ಟುಕೊಂಡ ಕಾಡಿನ ಭಾಗವೇ ತಮ್ಮ ಸಮುದಾಯದ ಸಾಂಸ್ಕೃತಿಕ ಸಮಾಜವನ್ನು ರೂಪಿಸಿಕೊಂಡ ಬುಡಕಟ್ಟುಗಳು. ಕಾಡನ್ನೆಂದೂ ಆಸ್ತಿಯನ್ನಾಗಿ ತನ್ನ ಒಡೆತನದ ಭಾಗವೆಂದು ಪರಿಗಣಿಸಿ ಅಲ್ಲಿನ ಸಂಪನ್ಮೂಲಗಳನ್ನೆಂದೂ ಮಾರಾಟದ ಸರಕನ್ನಾಗಿ ಬಳಸಿಕೊಳ್ಳಲಿಲ್ಲ. ಆದರೆ ವಸಾಹತುಶಾಹಿಗಳು ವ್ಯಾಪಾರದ ದೃಷ್ಟಿಯಿಂದ ಸಂಪನ್ಮೂಲಗಳ ಮೇಲಿನ ಹಿಡಿತ ಸಾಧಿಸಲು ಯುರೋಪಿನ ವಿದ್ವಾಂಸರುಗಳಿಂದ ತಮ್ಮ ಅಗತ್ಯತೆಯ ಮೂಗಿನ ನೇರಕ್ಕೆ ಅಧ್ಯಯನಗಳನ್ನು

ಮಾಡಿದರೇ ಹೊರತು ಕಾಡಿನ ಭಾವನಾತ್ಮಕವಾದ ಅನೇಕ ಸಾಂಸ್ಕೃತಿಕ ಒಳಮಗ್ಗಲುಗಳಲ್ಲಿರುವ ಆದಿವಾಸಿಗಳ ಮಹತ್ತರವಾದ ಸಂಗತಿಗಳನ್ನು ಅಧ್ಯಯನಗಳಲ್ಲಿ ಅನಾವರಣಗೊಳಿಸದೆ ತಮ್ಮ ಅಗತ್ಯದ ಅಧ್ಯಯನ ಮಾಡಿ ತಿಪ್ಪೆ ಸಾರಿಸಿ ಬಿಟ್ಟರು. ಕಾರಣ, ಬುಡಕಟ್ಟುಗಳ ಅನೇಕ ಶ್ರೇಷ್ಠವಾದ ಸಾಂಸ್ಕೃತಿಕ ಮೌಲ್ಯಗಳನ್ನು ಮಹತ್ವದ ಆಚರಣೆಗಳನ್ನು ಅಧ್ಯಯನಕ್ಕೆ ಒಳಪಡದೇ ಆದಿವಾಸಿಗಳ ಅನೇಕ ಸಂಗತಿಗಳು ಹೊರಪ್ರಪಂಚಕ್ಕೆ ಅಗೋಚರವಾಗಿಯೇ ಉಳಿದುಬಿಟ್ಟವು.

ಹೀಗಿರುವ ವ್ಯವಸ್ಥಿತವಾದ ಸೀಮಾವಲಯದೊಳಗಿನ ಹಾಡಿಗಾಗಿ ದುಡಿದ, ಮಡಿದ ವೀರರ ಆತ್ಮಗಳು ದೈವಗಳಾಗುತ್ತವೆ. ಗಿಡಮರಬಳ್ಳಿ, ಕಲ್ಲು, ಕಾಡಿನ ಅನೇಕ ಜೀವಿಗಳೇ ಇವರ ಪೂಜೆಯ ವಸ್ತುಗಳಾಗಿ ವಿವಿಧ ಜವಾಬ್ದಾರಿ ಪಾತ್ರಗಳನ್ನು ವಹಿಸಿಕೊಳ್ಳುತ್ತವೆ. ಸಾಂಪ್ರದಾಯಿಕ ಸಹಜಕೃಷಿ ಕುಂಬರಿ ಬೇಸಾಯ, ಬೇಟೆ ಕಾಡಿನ ಉತ್ಪನ್ನಗಳ ಸಂಗ್ರಹ ರೋಗರುಜಿನಗಳೀಗೆ ಕಾಡಿನ ಗಿಡಮೂಲಿಕೆಗಳ ಚಿಕಿತ್ಸೆ, ನಿತ್ಯಬಳಕೆಗಳಿಗೆ ತಾವೇ ಹೆಣೆದ ಬುಟ್ಟಿ, ತೊಟ್ಟಿಲು, ಕೇರುಮರ, ಕಡೆಯುವ ಮಂತು, ಮೀನು ಹಿಡಿಯುವ ಬೇಟೆಯಾಡುವ ಸಾಧನಗಳು, ತಾನೇ ಹೆಣೆದ ಚಾಪೆ, ಆಟಿಕೆಗಳು, ಮರದಿಂದ ಕೆತ್ತಿದ ಬೊಂಬೆ, ಮುಖವಾಡಗಳು ದೈವಗಳ ಪೂಜೆ, ಬಲಿ, ಜಾತ್ರೆ, ಉತ್ಸವ, ಹಬ್ಬ, ಹರಿದಿನ, ನೃತ್ಯ, ಹಾಡು ಹಾಗೂ ಬಯಲಾಟ ಪಾರಂಪರಿಕ ಜ್ಞಾನಗಳು, ಇವರುಗಳ ನಿಯಮ, ವ್ಯಾಜ್ಯ, ಸಮಸ್ಯೆಗಳ ಸುಸ್ಥಿತಿಯಲ್ಲಿಟ್ಟುಕೊಳ್ಳಲು ನ್ಯಾಯಮಂಡಳಿ ಇರುತ್ತದೆ. ಮೇಲೆ ಹೇಳಲಾಗಿರುವ ಬುಡಕಟ್ಟುಗಳ ಎಲ್ಲಾ ಬಗೆಯ ಕಾರ್ಯಚಟುವಟಿಕೆ, ಸಂಸ್ಕೃತಿ ಆಚರಣೆಗಳನ್ನು ಕೇಂದ್ರಸ್ಥಾನದಲ್ಲಿದ್ದುಕೊಂಡು ಅವುಗಳನ್ನು ನಿಯಂತ್ರಿಸಲು ಒಬ್ಬ ಮುಖ್ಯ 'ಬುದವಂತ'ನಿರುತ್ತಾನೆ. ಈತ ಇಡೀ ಸಮುದಾಯದ ಸೀಮಾವಲಯದ ಸಾಮ್ರಾಜ್ಯದ ಮುಖ್ಯ ಸೂತ್ರಧಾರ. ಬೇರೆ ಬೇರೆ ಸಮುದಾಯಗಳಲ್ಲಿ ಈತನನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಅಜ್ಜಯ್ಯ, ಗುಡ್ಡಯ್ಯ, ಬಂಜೆಕಾಳ, ಪೂಜಾರಿ ಹೀಗೆ ಬುದವಂತನು ದೈವಗಳು, ಆತ್ಮಗಳು, ನ್ಯಾಯಮಂಡಳಿ, ಸಮುದಾಯ ಇತ್ಯಾದಿಗಳ ಮಧ್ಯೆ ಸಂವಹನದ ಸಂಪರ್ಕವನ್ನೇರ್ಪಡಿಸಿ ಸೀಮಾವ್ಯವಸ್ಥೆಯನ್ನು ನಡೆಸುವ, ನಿಯಂತ್ರಿಸುವ ಮುಖ್ಯ ಪಾತ್ರ ವಹಿಸಿರುತ್ತಾನೆ. ದೈವಗಳು ಮತ್ತು ಮಡಿದವರ ಆತ್ಮಗಳ ಆವಾಹನೆ ಮಾಡಿಕೊಂಡು ಅವುಗಳ ಜೊತೆ ಸಂವಹನ, ಸಂಭಾಷಣೆಯನ್ನು ನಡೆಸಿ ಸಮುದಾಯಗಳ ಜೊತೆ ಸಂಪರ್ಕಕೊಂಡಿ ಏರ್ಪಡಿಸುವವನೇ ಈತ. ಈತನ ಮೈ ಮೇಲೆ ಆತ್ಮಗಳು, ದೈವಗಳು ಆವಾಹನೆಯಾಗಿ ಸಮಸ್ಯೆಗಳಿಗೆ ಪರಿಹಾರ ಮತ್ತು ಬುಡಕಟ್ಟು ಚಟುವಟಿಕೆಗಳ ಕಾರ್ಯ ಹಾಗೂ ಬದುಕಿನ ದಾರಿಯನ್ನು ನಿರ್ದೇಶಿಸುತ್ತವೆ. ಅದರ ಆಣತಿಯಂತೆ ನ್ಯಾಯಮಂಡಳಿ ಕೂಡ ನಡೆದುಕೊಳ್ಳುತ್ತದೆ. ಹಾಡಿಗಳಲ್ಲಿ ತಗಲುವ ರೋಗರುಜಿನಗಳಿಗೆ ಚಿಕಿತ್ಸೆ ನೀಡುವ ಮುಖ್ಯ ನಾಟಿ ವೈದ್ಯನೂ ಈತನೇ ಆಗಿರುತ್ತಾನೆ. ದನಕರುಗಳಿಗೆ ತಗಲುವ ರೋಗಗಳಿಗೂ ಚಿಕಿತ್ಸೆ ಈತನೇ ನೀಡುತ್ತಾನೆ. ಮಾಟಮಂತ್ರ, ಯಂತ್ರತಂತ್ರ ಮತ್ತು ನೋಟಗಳ ಜವಾಬ್ದಾರಿಗಳನ್ನು ನಿಭಾಯಿಸುವವನು ಈತನೇ ಆಗಿರುತ್ತಾನೆ. ಒಟ್ಟಾರೆಯಾಗಿ

ವಿವಿಧ ಬುಡಕಟ್ಟುಗಳಲ್ಲಿರುವ ಸೀಮಾಪದ್ಧತಿಯ ವ್ಯವಸ್ಥೆಗಳಲ್ಲಿ ಹೆಚ್ಚು ಕಡಿಮೆ ಬುದವಂತನಹ ಮುಖ್ಯ ಸೂತ್ರಧಾರನಿರುತ್ತಾನೆ. ಆತ ಸೀಮಾಪದ್ಧತಿ ವ್ಯವಸ್ಥೆಯಲ್ಲಿ ರಚಿತವಾಗಿರುವ ಹಲವಾರು ಉಪಹಂತ, ವಿಭಾಗ, ವಿವಿಧ ಕಾರ್ಯಚಟುವಟಿಕೆಗಳನ್ನು ನಿಯಂತ್ರಿಸುವ ಕೇಂದ್ರ ಸೂತ್ರಧಾರನಾಗಿರುತ್ತಾನೆ. ಇಂತಹ ವ್ಯವಸ್ಥೆ ಮತ್ತು ಸೂತ್ರಧಾರನಂತಹ ಪಾತ್ರವನ್ನು ಪ್ರಪಂಚದ ಬೇರೆ ಬೇರೆ ದೇಶದ ಬುಡಕಟ್ಟು ಸಮುದಾಯಗಳಲ್ಲಿ ಕಾಣಬಹುದಾಗಿದೆ.

ಸೀಮಾಪದ್ಧತಿಯ ವ್ಯವಸ್ಥೆಯಲ್ಲಿ ಒಳಗೊಳ್ಳುವ ಉಪಾಸನೆಗಳಲ್ಲಿ ಇರಬಹುದಾದ ಸಾಂಸ್ಕೃತಿಕ ರಚನೆ ಅರ್ಥವ್ಯವಸ್ಥೆ, ಪಾರಂಪರಿಕ ವ್ಯವಹಾರ ಹಾಗೂ ಸ್ವಯಂ ಆಡಳಿತ ವ್ಯವಸ್ಥೆಗಳ ಜೊತೆಗೆ ಪಾರಂಪರಿಕ ಜ್ಞಾನ, ಪರಿಸರದ ವ್ಯವಸ್ಥೆ ಹಾಗೂ ಜೀವವೈವಿಧ್ಯತೆ ಇವುಗಳ ಆಚರಣೆಗಳ ಮಧ್ಯೆ ಇರುವ ಕೊಂಡಿ ಪಾರಂಪರಿಕ ತಿಳುವಳಿಕೆಯೇ ಆಗಿರುತ್ತದೆ. ಪ್ರಸ್ತುತಬುಡಕಟ್ಟು ಸಮುದಾಯಗಳ ಬದುಕಿನಲ್ಲಿ ಈಗಲೂ ಅಸ್ತಿತ್ವದಲ್ಲಿರುವ ಈ ಸೀಮಾಪದ್ಧತಿಯ ವ್ಯವಸ್ಥೆಯು ಬುಡಕಟ್ಟುಗಳ ಇಡೀ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕಿನ ಮಹತ್ತರವಾದ ನೂರಾರು(ಮೇಲೆ ವಿವರಿಸಿದಂತೆ) ಆಯಾಮಗಳನ್ನು ಅನಾವರಣಗೊಳಿಸುತ್ತದೆ.

ಕರ್ನಾಟಕದ ಬೇರೆ ಬೇರೆ ಬುಡಕಟ್ಟು ಸಮುದಾಯಗಳಲ್ಲಿ ಸೀಮಾಪದ್ಧತಿಯನ್ನು ಬೇರೆ ಬೇರೆ ಹೆಸರುಗಳಲ್ಲಿ ಕರೆಯಲಾಗುತ್ತದೆ. ಈ ಪ್ರಬಂಧವು ಪ್ರಮುಖವಾಗಿ ಉತ್ತರ ಕನ್ನಡ ಜಿಲ್ಲೆಯ ಕುಣಬಿ ಬುಡಕಟ್ಟನ್ನು ಕೇಂದ್ರವಾಗಿಟ್ಟು ಸಂಶೋಧನೆಗೆ ತೊಡಗಿರುವ ಕಾರಣ ಕುಣಬಿಗಳಲ್ಲಿ ಕರೆಯಲಾಗುವ ಈ ಪದ್ಧತಿಯಲ್ಲಿ ಸೀಮಾ ಎಂದು ಕರೆಯುತ್ತಾರೆಯಾದ್ದರಿಂದ ಪ್ರಬಂಧದ ಶೀರ್ಷಿಕೆಯನ್ನು ಅದೇ ಹೆಸರಿನಲ್ಲಿ ಕರೆಯಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಇತರೆ ಬುಡಕಟ್ಟುಗಳಾದ ಹಾಲಕ್ಕಿ, ಗೊಂಡ ಮತ್ತು ಸಿದ್ದಿ ಸಮುದಾಯಗಳಲ್ಲೂ ಈ ಪದ್ಧತಿಯನ್ನು 'ಸೀಮಾಪದ್ಧತಿ' ಎಂದೇ ಕರೆಯುತ್ತಾರೆ.

ದಕ್ಷಿಣ ಕರ್ನಾಟಕದ ಮೈಸೂರು, ಚಾಮರಾಜನಗರ ಮತ್ತು ಕೊಡಗು ಜಿಲ್ಲೆಯ ಕಾಡಿನಲ್ಲಿ ವಾಸಿಸುತ್ತಿರುವ ಜೇನುಕುರುಬ ಮತ್ತು ಸೋಲಿಗರಲ್ಲಿ ಈ ಪದ್ಧತಿಯನ್ನು 'ಜಮ್ಮಾ ಪದ್ಧತಿ' ಎಂದು ಕರೆಯುತ್ತಾರೆ. ಆದರೆ ಇದೇ ಭಾಗಗಳಲ್ಲಿ ವಾಸಿಸುತ್ತಿರುವ ಬೆಟ್ಟಕುರುಬ ಆದಿವಾಸಿಗಳು ಇದಕ್ಕೆ **'ಎಲ್ಲೆ'** ಎಂದು ಕರೆಯುತ್ತಾರೆ. ಇವರು ಇದಕ್ಕೆ ಮೊಗೆ ಎಂದು ಕರೆಯುವುದು ಕೂಡ ರೂಢಿಯಲ್ಲಿದೆ. ಸಾಮಾನ್ಯವಾಗಿ ಬೆಟ್ಟಕುರುಬರು ತಮ್ಮ ಕುಲಗಳಿಗೆ ಮೊಗೆ ಎಂದು ಕರೆಯುತ್ತಾರೆ. ಇವರು ಕುಲ(ಮೊಗೆ)ಗಳ ವಿಂಗಡಣೆಯು ಜಮ್ಮಗಳಿಗೆ ತಕ್ಕಂತೆ ವಿಂಗಡಣೆಯಾದ ಕಾರಣ ಮೊಗೆ ಎಂತಲೂ ಕರೆಯಲಾಗುತ್ತದೆ ಎನ್ನುತ್ತಾರೆ.

ಬಯಲುಸೀಮೆಯ ಪಶುಪಾಲಕ ಬುಡಕಟ್ಟುಗಳಾದ ವ್ಯಾಸಬೇಡ ಮತ್ತು ಕಾಡುಗೊಲ್ಲರುಗಳಲ್ಲಿ ಈ ವಲಯವ್ಯವಸ್ಥೆಗೆ 'ಗಡಿ' ಎಂದೇ ಹೆಸರಿಸುತ್ತಾರೆ. ಸಿದ್ದಿ, ಕುಣಬಿ,

ಹಾಲಕ್ಕಿ ಮತ್ತು ಕುಣಬಿ ಬುಡಕಟ್ಟುಗಳಲ್ಲಿ ಶಮನ್ ಪಾತ್ರವನ್ನು ವಹಿಸುವವರಿಗೆ ಬುದವಂತನೆಂತಲೂ ಜೇನುಕುರುಬರಲ್ಲಿ ಗುಡ್ಡಯ್ಯನೆಂತಲೂ, ಬೆಟ್ಟಕುರುಬರಲ್ಲಿ ಬಿಂಜೆಕಾಳನೆಂತಲೂ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳಲ್ಲಿ ಪಟ್ಟದ ಪೂಜಾರಿಗಳೆಂತಲೂ ಕರೆಯುತ್ತಾರೆ.

ಸಮುದಾಯದ ಕೃಷಿ, ತಮ್ಮ ಸೀಮೆಯ ಕಾಡನ್ನು ಪೂರ್ವಜರ ಆತ್ಮಗಳು, ನಂಬಿದ ದೈವಗಳು ಸದಾ ಸಂರಕ್ಷಿಸುತ್ತಿರುತ್ತವೆಂಬ ಬುಡಕಟ್ಟುಗಳ ಗಾಢವಾದ ನಂಬಿಕೆ, ಸೀಮಾವಲಯದೊಳಗಿನ ಅವರ ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ನಿರೀಕ್ಷಣೆಗಳಿಲ್ಲದೆ ನಿಶ್ಚಿಂತೆಯಿಂದಿರುವಂತೆ ವ್ಯವಸ್ಥೆ ಕಲ್ಪಿಸಿದೆ. ಬುಡಕಟ್ಟು ಸಮುದಾಯಗಳ ತಮಗಿರುವ ಸಮಸ್ಯೆ, ನೋವು, ಧಾವಂತ, ಭಯ ಮತ್ತು ಆತಂಕಗಳೆಲ್ಲವನ್ನು ದೈವ ಮತ್ತು ಬುದವಂತ ಹಾಗೂ ನ್ಯಾಯಮಂಡಳಿಯ ಜವಾಬ್ದಾರಿಯ ಮಡಿಲಿಗೆ ಹಾಕಿ ತಾವು ನಿಶ್ಚಿಂತರಾಗಿ ಹಾಡಿ ಕುಣಿದು ಕುಡಿದು ನೆಮ್ಮದಿಯ ನಿದ್ರೆ ಮಾಡಿ ಬದುಕು ನೂಕುತ್ತಾರೆ.

ಆ ಕಾರಣಕ್ಕಾಗಿಯೇ ಬುಡಕಟ್ಟು ಸಮುದಾಯಗಳು, ತಮ್ಮ ಬದುಕಲ್ಲಿ ಕಂಡಕೊಂಡ ಬೇರೆ ಬೇರೆ ಜಟಿಲವಾದ ಸಮಸ್ಯೆಗಳನ್ನು ಬಗೆಹರಿಸಲು ಬೇರೆ ಬೇರೆ ದೈವಗಳನ್ನು ಆಯ್ಕೆ ಮಾಡಿ ಆಯಾ ಸಮಸ್ಯೆಗಳಿಗೆ ಆಯಾ ದೈವಗಳೇ ಪರಿಹಾರ ನೀಡುವ ವ್ಯವಸ್ಥೆಯನ್ನು ಸೀಮಾಪದ್ಧತಿಯ ವಲಯದೊಳಗೆ ನಿರ್ಮಿಸಿಕೊಂಡಿದ್ದಾರೆ. ಹಾಗಾಗಿ ಬೇರೆ ಬೇರೆ ಋತುಮಾನಗಳಲ್ಲಿ ಸಮಸ್ಯೆಗಳಿಗೆ ಸಂಬಂಧಪಟ್ಟ ದೈವಗಳಿಗೆ ಬಲಿ, ಕಾಣಿಕೆ, ಪೂಜೆ, ಹರಕೆ, ಹಬ್ಬ ಹರಿದಿನ ಜಾತ್ರೆ, ಉತ್ಸವ, ಹರಕೆಗಳಂತಹ ವಿವಿಧ ಉಪಾಸನೆಗಳನ್ನು ದೈವಗಳ ಸಂತುಷ್ಟಿ ಮತ್ತು ತೃಪ್ತಿಪಡಿಸಲು ಆಚರಣೆಗಳನ್ನು ನಡೆಸಿಕೊಂಡು ಬಂದಿರುತ್ತಾರೆ.

ಬುಡಕಟ್ಟುಗಳು ಸಾಂಸ್ಕೃತಿಕವಾಗಿ ರೂಢಿಸಿಕೊಂಡು ಬಂದಿರುವ ಸೀಮಾಪದ್ಧತಿ ವ್ಯವಸ್ಥೆಯ ನೀತಿ ನಿಯಮಗಳನ್ನು ಮೀರಿ ತಾವು ಹಾಕಿಕೊಂಡ ಗೆರೆ ದಾಟಿ ಉಪಚಾರ ಮಾಡಿ ತಪ್ಪುಮಾರ್ಗದಲ್ಲಿ ನಡೆದುಕೊಂಡರೆ ಅದು ಸೀಮೋಲ್ಲಂಘನೆಯಾಗುತ್ತದೆ. ಅದಕ್ಕಾಗಿ ನ್ಯಾಯ ಮಂಡಳಿಗಳಿದ್ದು, ಅವು ಸೀಮೆಯ ಉಲ್ಲಂಘನೆಯ ರೀತಿ, ಪ್ರಮಾಣ ಮತ್ತು ಅದರ ತೀವ್ರತೆಗನುಗುಣವಾಗಿ ದಂಡ, ಶಿಕ್ಷೆ, ಬಹಿಷ್ಕಾರಗಳನ್ನು ವಿಧಿಸುವ ಕ್ರಮ ಸೀಮಾವ್ಯವಸ್ಥೆಯಲ್ಲಿದೆ. ನ್ಯಾಯಮಂಡಳಿ ನ್ಯಾಯತೀರ್ಮಾನವನ್ನು ಮುಂಚೆಯೇ ಇಂತಹ ಅನಾಚಾರಗಳ ಆಗು ಹೋಗುಗಳನ್ನು ಸದಾ ಗಮನಿಸುತ್ತಿರುವ ಸಂಬಂಧಪಟ್ಟ ಗಡಿದೈವಗಳು, ಹಿರಿಯ ಆತ್ಮಗಳು ಅದಕ್ಕೆ ತಕ್ಕ ಶಿಕ್ಷೆಯನ್ನು ಬೇರೆ ಬೇರೆ ರೂಪದಲ್ಲಿ ನೀಡುತ್ತವೆಂದು ಬುಡಕಟ್ಟುಗಳು ಬಲಿಷ್ಠವಾಗಿ ನಂಬಿರುತ್ತಾರೆ. ಹಾಡಿಯಲ್ಲಿ ಉಂಟಾಗುವ ಯಾವುದೇ ರೀತಿಯ ವ್ಯತಿರಿಕ್ತ ಬದಲಾವಣೆ, ಪ್ರಮಾದ, ರೋಗ ರುಜಿನ, ಸಾವು ನೋವು, ವ್ಯಾಜ್ಯ, ಕಾಡಿನ ಪ್ರಾಣಿಗಳ ಆಕ್ರಮಣ, ಬರ, ಅತಿವೃಷ್ಟಿ ಅನಾವೃಷ್ಟಿ ಯಾವುದೇ ರೀತಿಯ ವ್ಯತ್ಯಯಗಳಿಗೂ ಹಾಡಿಯೊಳಗಿನ ಸೀಮೋಲ್ಲಂಘನೆಯ

ಪರಿಣಾಮವೆಂದೇ ಭಾವಿಸುತ್ತಾರೆ. ಪರಿಸರದಲ್ಲುಂಟಾಗುವ ವ್ಯತ್ಯಯ, ಕಾಡಿನೊಳಗಣ ವೈಪರೀತ್ಯಗಳಿಗೆಲ್ಲಾ ತಾವು ಹಾಕಿಕೊಂಡ ಗೆರೆ ದಾಟಿದ್ದೇವೆಂಬ ಪಾಪಪ್ರಜ್ಞೆ ಅದರ ಪಶ್ಚಾತಾಪಕ್ಕಾಗಿ, ಪ್ರಾಯಶ್ಚಿತಕ್ಕಾಗಿ ಮತ್ತೆ ದೈವಗಳ ಮೊರೆ ಹೋಗಿ ತಮ್ಮೊಳಗೆ ತಾವೇ ಶಿಕ್ಷಿಸಿಕೊಳ್ಳುವ, ತನ್ಮೂಲಕ, ಪರಿಶುದ್ಧರಾಗಿ ಹೊರಹೊಮ್ಮುವ ಅವರ ಇಂತಹ ಆಚರಣೆಗಳು ಬುಡಕಟ್ಟುಗಳ ಸಾಂಸ್ಕೃತಿಕ ಸಾಮಾಜಿಕ ಬದುಕನ್ನು ನೆಮ್ಮದಿಯಿಂದ ಇಟ್ಟಿದೆ ಮತ್ತು ಶ್ರೀಮಂತಗೊಳಿಸಿದೆ.

ಈಶಾನ್ಯ ವಲಯದ ಬುಡಕಟ್ಟುಗಳು ಹಿಂದುಗಳಿಗಿಂತ ಭಿನ್ನವಾದ ಸಂಸ್ಕೃತಿಯನ್ನು ಹೊಂದಿದ್ದು, ತಮಗೆ ಪ್ರತ್ಯೇಕವಾದ ರಾಜ್ಯ ಹಾಗೂ ಸವಲತ್ತುಗಳು ಬೇಕೆಂದು ಹೋರಾಟ ನಡೆಸಿದ್ದರು. ಅದರ ಪ್ರತಿಫಲವಾಗಿ ಕೇಂದ್ರ ಸರ್ಕಾರ ಈ ಪ್ರದೇಶದ ಜನರಿಗೆ ಹೆಚ್ಚಿನ ಸ್ವಾಯತ್ತತೆಯನ್ನು, ಸವಲತ್ತನ್ನು ನೀಡಿ ಆ ಪ್ರದೇಶಗಳನ್ನು ಪರಿಶಿಷ್ಟ ಪ್ರದೇಶಗಳೆಂದು (scheduled areas) ಘೋಷಿಸಿದೆ. ಈ ಕಾರಣದಿಂದಾಗಿ ನಾಗಾಲ್ಯಾಂಡ್, ಮಣಿಪುರ, ತ್ರಿಪುರ, ಅರುಣಾಚಲ ಪ್ರದೇಶಗಳಲ್ಲಿ ಬುಡಕಟ್ಟುಗಳು ತಮ್ಮ ಸಂಸ್ಕೃತಿಯನ್ನು ರಕ್ಷಣೆ ಮಾಡಿಕೊಂಡೇ ಕಾಡಿನಲ್ಲಿ ತಮ್ಮ ಜೀವನ ಸಾಗಿಸಬಹುದೆಂದು ಹೆಚ್ಚಿನ ಸ್ವಾಯತ್ತತೆಯನ್ನು ನೀಡಿ, ಕಾಡಿನಲ್ಲಿನ ಸ್ವಾತಂತ್ರ್ಯಕ್ಕೆ ವಿಶೇಷ ಮಹತ್ವ ನೀಡಿದ್ದಾರೆ. ನಂತರ 6th and 7th scheduled ಹಾಗೂ PESA Act ಪ್ರಕಾರ ಅಲ್ಲಿ ಸ್ವಯಂ ಆಡಳಿತ ವ್ಯವಸ್ಥೆಗೆ ಅವಕಾಶ ನೀಡಲಾಗಿದೆ. ಇದಕ್ಕೆ ಪಂಚಾಯತ್ ರಾಜ್ 123 section Act ಇದಕ್ಕೆ ಪೂರಕವಾದ Tribal Autonomous self since system ಚಾಲ್ತಿಯಲ್ಲಿದೆ.

ಬುಡಕಟ್ಟುಗಳ ಈ ಮೇಲಿನ ವಿಶೇಷ ಸವಲತ್ತುಗಳಿಗೆ ಆ ಪ್ರದೇಶದ ಆದಿವಾಸಿಗಳ ಸಮಗ್ರ ಹೋರಾಟವೇ ಪ್ರಮುಖವಾದ ಪಾತ್ರವೆಂದು ಬಿಂಬಿಸಲಾಗುತ್ತದೆ. ಆದರೆ ಮೇಲಿನ ವಿಶೇಷ ಕಾಯ್ದೆಗಳನ್ನು ತರಲು ಅದಕ್ಕೆ ಪೂರಕವಾದ ಮಾಹಿತಿಗಳ ಶಕ್ತಿ ಒದಗಿಸಿದ್ದು ಮಾತ್ರ ಆ ಸಮುದಾಯಗಳ ಮೇಲೆ ನಡೆದ ಅಧ್ಯಯಗಳಲ್ಲಿನ ಬುಡಕಟ್ಟುಗಳ ವಿಭಿನ್ನ ರೀತಿಯ ಸಂಸ್ಕೃತಿ ಎನ್ನುವುದನ್ನು ಮರೆಯುವ ಹಾಗಿಲ್ಲ.

ಸಮರ್ಪಕವಾದ ಬುಡಕಟ್ಟುಗಳ ಅಧ್ಯಯನ ಮತ್ತು ವೈಜ್ಞಾನಿಕ ಸಮೀಕ್ಷೆ ನಡೆಸದೇ ಇರುವ ಕಾರಣ ಆಯೋಗ ನಿಗದಿಗೊಳಿಸಿರುವ ಸರ್ವತರಹವಾದ ಗುಣಲಕ್ಷಣಗಳಿದ್ದೂ, ನಿಜವಾದ ಸಮೃದ್ಧ ಬುಡಕಟ್ಟು ಗುಣಲಕ್ಷಣಗಳನ್ನು ಹೊಂದಿರುವ ಅದೆಷ್ಟೊ ಬುಡಕಟ್ಟು ಸಮುದಾಯಗಳು ಅಧ್ಯಯನಕಾರರ ತಪ್ಪುಗಳಿಂದಾಗಿ ಸರ್ಕಾರದಿಂದ ಸಿಗಬಹುದಾದ ಬುಡಕಟ್ಟು ಹಕ್ಕು ಮತ್ತು ಸವಲತ್ತುಗಳಿಂದ ವಂಚಿತರಾಗೇ ಉಳಿದಿರುವ ನಿದರ್ಶನಗಳು ನಮ್ಮ ಮುಂದಿವೆ. ಉದಾಹರಣೆಗೆ ಹಾಲಕ್ಕಿ, ಕುಣಬಿ, ಧಂಗರಗೌಳಿ, ಕಾಡುಗೊಲ್ಲ, ಮ್ಯಾಸಬೇಡ ಮುಂತಾದ

ಸಮುದಾಯಗಳು ಈ ಕಾರಣಕ್ಕಾಗಿ ತಮ್ಮದಲ್ಲದ ತಪ್ಪಿಗೆ ಪರಿತಪಿಸುವಂತಹ ಸ್ಥಿತಿ ನಿರ್ಮಾಣವಾಗಿದೆ. ತಮ್ಮ ಸಮುದಾಯಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಿ ಎಂಬ ಇಂತಹ ಸಮುದಾಯಗಳ ಹಲವು ದಶಕಗಳ ಹೋರಾಟಗಳನ್ನು ಸರ್ಕಾರಗಳು ನಿಯೋಜಿಸಿರುವ ಅಧ್ಯಯನಕಾರರ ತಪ್ಪು ವರದಿ ಮತ್ತು ಸಂದೇಶಗಳಿಂದಾಗಿ ಇಂತಹ ಸಮುದಾಯಗಳು ಅವಕಾಶಗಳಿಂದ ವಂಚಿತವಾಗಿವೆ.

ಈ ಅಧ್ಯಯನದ ಪ್ರಮುಖವಾದ ಆಶಯ ಇಲ್ಲಿಯವರೆಗೂ ಹಲವಾರು ಅಧ್ಯಯನ ಸಂಶೋಧನೆಗಳಾಗಿಯೂ ಗಮನಕ್ಕೆ ತರಲಾಗದೇ ಬಿಟ್ಟಿರುವ ಬುಡಕಟ್ಟುಗಳ ಅನೇಕ ಸಾಂಸ್ಕೃತಿಕ ಸಂಗತಿಗಳನ್ನು ದಾಖಲಿಸಿ ಹೊರಪ್ರಪಂಚಕ್ಕೆ ಅನಾವರಣಗೊಳಿಸುವ ಮೂಲಕ ಬುಡಕಟ್ಟು ಸಮುದಾಯಗಳಿಗೆ ಸಿಗಲೇಬೇಕಾಗಿದ್ದ ಮಾನ್ಯತೆ(ಪ.ಪಂಗಡ) ಮತ್ತು ಹಕ್ಕುಗಳ ಪ್ರತಿಪಾದನೆಗೆ ಸೈದ್ಧಾಂತಿಕ, ಸಾಂಸ್ಕೃತಿಕ ದಾಖಲೆಗಳನ್ನು ಅಧ್ಯಯನದ ಮೂಲಕ ಕಟ್ಟಿಕೊಡುವುದು.

ಹೀಗೆ ಹೊರಪ್ರಪಂಚಕ್ಕೆ ಅನಾವರಣಗೊಳ್ಳದ ಆದಿವಾಸಿಗಳ ಸಾಂಸ್ಕೃತಿಕ ಸಂಗತಿಗಳನ್ನು ಅಧ್ಯಯನ ಮಾಡಿ ದಾಖಲಿಸುವ ಮೂಲ ಆದಿವಾಸಿಗಳ ಬದುಕಿನ ಬಗ್ಗೆ ತಪ್ಪಾಗಿ ಗ್ರಹಿಸಿ ಆರೋಪಿಸಿರುವ ಅರಣ್ಯ ಇಲಾಖೆ, ಬಂಡವಾಳಶಾಹಿಗಳು, ಪ್ರವಾಸೋದ್ಯಮಗಳ ಮತ್ತು ಆಡಳಿತವರ್ಗಗಳಿಗೆ ಬುಡಕಟ್ಟುಗಳು ಕಾಡಿನ ಕಂಟಕರಲ್ಲ, ಅವರು ಕಾಡಿನ ಜೈವಿಕ ಕ್ರಿಯೆಯ ಒಂದು ಭಾಗ. ಅವರು ಕಾಡಿನ ಉತ್ಪನ್ನಗಳನ್ನು ದೋಚುವವರಲ್ಲ, ಅವರು ಆ ಕಾಡಿನ ಆಹಾರ ಸರಪಳಿಯ ಒಂದು ಕೊಂಡಿ ಎಂದು ಸಾಬೀತುಪಡಿಸಬೇಕಿದೆ.

ಮುಖ್ಯವಾಗಿ ಆಯಾ ಸಮುದಾಯಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಲು, ಈಶಾನ್ಯ ರಾಜ್ಯಗಳಲ್ಲಿರುವ ರೀತಿ ಬುಡಕಟ್ಟು ಪ್ರದೇಶ(Schedule area)ವೆಂದು ಘೋಷಿಸಲೂ, ಪಂಚಾಯತ್ ರಾಜ್ ನಿಯಮದ ಪ್ರಕಾರ ಈ ಭಾಗದ ಸಮುದಾಯಗಳನ್ನು 6th and 7th ಶೆಡ್ಯೂಲ್‌ಗಳಿಗೆ ಸೇರ್ಪಡೆಗೊಳಿಸಿ PESA actನ್ನು ಜಾರಿಗೊಳಿಸಲು ಮತ್ತು Tribal Autonomy and life support system ಅಡಿಯಲ್ಲಿ ಬರುವ ಸ್ವಯಂ ಆಡಳಿತ ಮತ್ತು ಕಾಡಿನ ನಿರ್ವಹಣೆಯ ಹಕ್ಕನ್ನು ಈ ದಕ್ಷಿಣ ಭಾಗದಲ್ಲಿ ಅನುಷ್ಠಾನಗೊಳಿಸುವ ಉದ್ದೇಶ ಆಶಯಗಳನ್ನು ಹೊತ್ತು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಅಧ್ಯಯನವು ಬುಡಕಟ್ಟುಗಳಲ್ಲಿ ಇರುವ ಪ್ರಮುಖ ಸಾಂಸ್ಕೃತಿಕ ಆಚರಣೆಯಾದ "ಸೀಮಾಪದ್ಧತಿ"ಯ ವೈಶಿಷ್ಟ್ಯತೆ ಮತ್ತು ಮಹತ್ವಗಳ ಕುರಿತ ಅಧ್ಯಯನವಾಗಿದೆ. ಕರ್ನಾಟಕದ ಸಹ್ಯಾದ್ರಿಯ ಪಶ್ಚಿಮಘಟ್ಟಗಳ ತಪ್ಪಲಿನ ಕಾಡು ಅನೇಕ ಬುಡಕಟ್ಟು ಸಮುದಾಯಗಳು ತಮ್ಮ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಳ್ಳಲು ಆಶ್ರಯ ನೀಡಿದೆ. ದಟ್ಟವಾದ ಅರಣ್ಯಗಳು, ವೈವಿಧ್ಯಮಯ

ಜೀವವೈವಿಧ್ಯತೆ ಮತ್ತು ಅರಣ್ಯಸಂಪತ್ತು ಹಾಗೂ ಸದಾ ಹರಿಯುವ ನದಿ, ಜಲಪಾತಗಳಿಂದ ತುಂಬಿರುವ ನೈಸರ್ಗಿಕವಾದ ಪರಿಸರವು ಹಲವಾರು ಬುಡಕಟ್ಟುಗಳ ವಾಸಸ್ಥಾನಕ್ಕೆ ಅವಕಾಶ ಕಲ್ಪಿಸಿದೆ. ಈ ಅಧ್ಯಯನದಲ್ಲಿ 'ಸೀಮಾಪದ್ಧತಿ'ಯ ಕುರಿತು ಪ್ರಮುಖವಾಗಿ ಆಯ್ಕೆ ಮಾಡಿಕೊಂಡಿರುವ 'ಕುಣಬಿ' ಸಮುದಾಯವು ಕರ್ನಾಟಕದ ಸಹ್ಯಾದ್ರಿಯ ತಪ್ಪಲಿನ ವಿವಿಧ ಪ್ರದೇಶಗಳಲ್ಲಿ ನೆಲೆ ನಿಂತಿವೆಯಾದರೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ, ಅದರಲ್ಲೂ 84% ಕಾಡಿನಿಂದ ಕೂಡಿದ ಜೋಯಿಡಾ ತಾಲ್ಲೂಕಿನಲ್ಲಿ ಸಾಂದ್ರತೆಗೊಂಡಿರುವುದು ಕಾಣಬಹುದಾಗಿದೆ. ಕರ್ನಾಟಕದ ಇತರ ಜಿಲ್ಲೆಗಳಲ್ಲಿ ಕ್ರಮವಾಗಿ ಶಿವಮೊಗ್ಗ, ಉಡುಪಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ಕುಣಬಿ ಸಮುದಾಯಗಳ ನೆಲೆಗಳಿರುವುದು ಕಂಡುಬಂದಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಜೋಯಿಡಾ ತಾಲ್ಲೂಕಿನಲ್ಲಿ ನೂರಕ್ಕೂ ಹೆಚ್ಚು ಕುಳಾವಿಗಳಲ್ಲಿ(ಹಾಡಿ) ಕುಣಬಿಗಳು ನೆಲೆನಿಂತಿದ್ದಾರೆ ಹಾಗೆಯೇ ಕ್ರಮವಾಗಿ ಬೆರಳಣಿಕೆಯಷ್ಟು ಕುಳಾವಿಗಳಲ್ಲಿ ಅಂದರೆ ಯಲ್ಲಾಪುರ, ಕಾರವಾರ, ಅಂಕೋಲ, ಹಳಿಯಾಳ ಮತ್ತು ಶಿರ್ಸಿ ತಾಲ್ಲೂಕುಗಳಲ್ಲಿ ಕುಣಬಿ ಕುಳಾವಿಗಳಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಶಿವಮೊಗ್ಗ ಜಿಲ್ಲೆಯ ಸಾಗರ ಹೊಸನಗರ, ಶಿವಮೊಗ್ಗ ತಾಲ್ಲೂಕುಗಳಲ್ಲಿ ಕೆಲವು ಕುಳಾವಿಗಳಲ್ಲಿ ಕುಣಬಿಗಳು ವಾಸಿಸುತ್ತಿದ್ದಾರೆ. ಜೋಯಿಡಾ ತಾಲ್ಲೂಕಿಗೆ ಆತುಕೊಂಡಂತೆ ಇರುವ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ 3–4 ಕುಳಾವಿಗಳಲ್ಲಿ ಕುಣಬಿಗಳ ನೆಲೆಗಳಿವೆ. ದಕ್ಷಿಣ ಕನ್ನಡದ ಉಡುಪಿ ಜಿಲ್ಲೆಯ ಕುಂದಾಪುರ ಮತ್ತು ಕಾರ್ಕಳ ಹಾಗೂ ಮಂಗಳೂರಿನ ಬಂಟ್ವಾಳ ತಾಲ್ಲೂಕಿನಲ್ಲಿ ಹಾಗೂ ಚಿಕ್ಕಮಗಳೂರಿನಲ್ಲಿ ಕೆಲವು ಮನೆಗಳಿರುವುದು ಕಂಡುಬಂದಿದೆ.

ಉತ್ತರ ಕನ್ನಡ ಜಿಲ್ಲೆಗೆ ಆತುಕೊಂಡಿರುವ ಗೋವಾ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಕುಣಬಿಗಳಿರುವುದು ಕಂಡುಬಂದಿದೆ. ಕುಣಬಿಗಳ ಮೂಲ ಗೋವಾ ಅಥವಾ ಗೋವಾ–ಮಹಾರಾಷ್ಟ್ರದ ಗಡಿ ಪ್ರದೇಶವಾದ ರತ್ನಗಿರಿ ಪ್ರಾಂತ್ಯವಾಗಿದ್ದು, ಅಲ್ಲಿಂದ ಕುಣಬಿಗಳು ಕರ್ನಾಟಕಕ್ಕೆ ವಲಸೆ ಬರಲಾಗಿದೆ ಎಂದು ಅನೇಕ ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ. ಕರ್ನಾಟಕದ ಕುಣಬಿಗಳ ಮೂಲನೆಲೆ ಗೋವಾ ರಾಜ್ಯವಾಗಿದ್ದು, ಅದಕ್ಕೆ ತಾಗಿಕೊಂಡಿರುವ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ಹಾಗೂ ಪಕ್ಕದ ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಈ ಸಮುದಾಯ ವಲಸೆ ಹೋಗಿರಬಹುದೆಂದು ಅಂದಾಜಿಸಲಾಗಿದೆ.

ಕರ್ನಾಟಕದಲ್ಲಿ ನೆಲೆಗೊಂಡಿರುವ ಅಷ್ಟು ಕುಣಬಿ ಸಮುದಾಯಗಳ ಪೈಕಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ದಟ್ಟಕಾಡಿನಲ್ಲಿರುವ ಕುಣಬಿಗಳ ಬುಡಕಟ್ಟು ಸಂಸ್ಕೃತಿ, ಆಚರಣೆ, ವಿಚಾರ, ಸ್ಥಿತಿಗತಿಗಳು ಇತರೆ ಜಿಲ್ಲೆಯ ಕುಣಬಿ ಸಮುದಾಯಗಳಿಗಿಂತ ಆದಿಮ ಸ್ಥಿತಿಯಲ್ಲಿದೆ. ಜೋಯಿಡಾದಲ್ಲಿನ ಕುಣಬಿಗಳು ದಟ್ಟಕಾಡಿನಲ್ಲಿ ಪ್ರತ್ಯೇಕವಾಗಿ ನಾಗರಿಕ ಬದುಕಿನಿಂದ

ದೂರ ಉಳಿದು ಬುಡಕಟ್ಟು ಆದಿ ಸ್ವರೂಪದ ಸಂಸ್ಕೃತಿ ಜೀವನವನ್ನು ಇನ್ನೂ ಗಾಢವಾಗಿ ಉಳಿಸಿಕೊಂಡು ಬಂದಿದ್ದಾರೆ.

ಜೋಯಿಡಾ ತಾಲ್ಲೂಕು ಗೋವಾ ರಾಜ್ಯಕ್ಕೆ ಅತ್ಯಂತ ಸಮೀಪವಾಗಿ ಆತುಕೊಂಡಿದೆ. ಜೋಯಿಡಾ ತಾಲ್ಲೂಕಿನ ಭಾಷೆ, ಆಚಾರ, ವಿಚಾರಕ್ಕೂ ಗೋವಾದ ಕುಣಬಿಗಳ ಬುಡಕಟ್ಟು ಸ್ವರೂಪಗಳಿಗೂ ಅಷ್ಟೇನೂ ವ್ಯತ್ಯಾಸಗಳಿದ್ದಂತೆ ಕಂಡುಬರುವುದಿಲ್ಲ. ಹಾಗೆ ನೋಡಿದರೆ ಪೋರ್ಚುಗೀಸ್ ಆಕ್ರಮಣ ಮತ್ತು ಗೋವಾ ಅಭಿವೃದ್ಧಿ ಹಾಗೂ ವ್ಯಾಪಾರೀಕರಣಗಳ ಕಾರಣ ಜೋಯಿಡಾ ಕುಣಬಿಗಳಿಗಿಂತ ಗೋವಾ ಕುಣಬಿಗಳು ಹೆಚ್ಚು ಸ್ಥಿತ್ಯಂತರಗೊಂಡು ಮುಖ್ಯವಾಹಿನಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಅಲ್ಲಿನ ಸರ್ಕಾರ ಇವರನ್ನು ಪರಿಶಿಷ್ಟ ಪಂಗಡ ಎಂದು ಘೋಷಿಸಿದೆ.

ಜೋಯಿಡಾದ ಕುಣಬಿಗಳು ಇನ್ನೂ ದುರ್ಗಮವಾದ ಅರಣ್ಯದಲ್ಲಿ ವಾಸಿಸುತ್ತಾ, ಬುಡಕಟ್ಟುಗಳ ಮೂಲಸಂಸ್ಕೃತಿ ಆದಿಮ ಉಪಾಸನೆ ಹಾಗೂ ಸಮುದಾಯಾಧಾರಿತ ಚಟುವಟಿಕೆ ಆಚರಣೆಗಳನ್ನು ಈಗಲೂ ನಡೆಸಿಕೊಂಡು ಬಂದಿದೆ. ಇದಕ್ಕೆ ನಿದರ್ಶನವೆಂಬಂತೆ ಸಂಪ್ರದಾಯಿಕ ಸಹಜ ಸಮುದಾಯಾಧಾರಿತ ಕುಂಬರಿ ಬೇಸಾಯ, ಇನ್ನೂ ದೃಢವಾಗಿ ಆಚರಿಸಲ್ಪಡುತ್ತಿರುವ ಬುಡಕಟ್ಟುಗಳ ಸೀಮಾಪದ್ಧತಿ, ಇತರ ಆಚರಣೆಗಳನ್ನು ಅವಲೋಕಿಸಿದಾಗ ಉತ್ತರ ಕನ್ನಡ ಜಿಲ್ಲೆಯಲ್ಲೆ ಬುಡಕಟ್ಟು ಸಂಸ್ಕೃತಿಯ ದೃಷ್ಟಿಯಲ್ಲಿ ಅತ್ಯಂತ ಮೂಲ ಮತ್ತು ಆದಿಮ ಸ್ಥಿತಿಯಲ್ಲಿರುವ ಬುಡಕಟ್ಟು 'ಕುಣಬಿ' ಸಮುದಾಯ ಎಂಬುಧು ಅಧ್ಯಯನಕಾರರ ಅಭಿಪ್ರಾಯವಾಗಿದೆ. ಅದರೆ ಬಹಳಷ್ಟು ಬೇಡಿಕೆ, ಹೋರಾಟಗಳ ನಡುವೆಯೂ ಕುಣಬಿಗಳನ್ನು ಸರ್ಕಾರಗಳು ಪರಿಶಿಷ್ಟರೆಂದು ಪರಿಗಣಿಸದೇ ಕಡೆಗಣಿಸಿವೆ.

ಬುಡಕಟ್ಟು ಸಂಸ್ಕೃತಿಯಲ್ಲಿ 'ಸೀಮಾಪದ್ಧತಿ'ಯು ಅತ್ಯಂತ ಪ್ರಮುಖವಾದ ಮತ್ತು ಮಹತ್ತರವಾದ ಸಾಂಸ್ಕೃತಿಕ ಪಾತ್ರವನ್ನು ಹೊಂದಿ, ಇಡೀ ಬುಡಕಟ್ಟುಗಳ ಸಾಂಸ್ಕೃತಿಕ ಚಟುವಟಿಕೆಯಗಳನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಒಂದು ಮುಖ್ಯ ಆಚರಣಾ ಪದ್ಧತಿಯಾಗಿದೆ. ಈ ಸೀಮಾಪದ್ಧತಿಯ ಅಧ್ಯಯನವು ಬುಡಕಟ್ಟುಗಳ ಹಲವಾರು ಸಾಂಸ್ಕೃತಿಕ ಆಯಾಮಗಳನ್ನು ಹೊಂದಿದ್ದು, ಈ ಅಧ್ಯಯನದ ಮೂಲಕ ಬುಡಕಟ್ಟುಗಳ ಬೇರೆ ಬೇರೆ ಸಾಂಸ್ಕೃತಿಕ ಒಳ ಆಳದ ಅನೇಕ ಮಗ್ಗುಲುಗಳನ್ನು ಅನಾವರಣಗೊಳಿಸಬಹುದಾಗಿದೆ. ತನ್ಮೂಲಕ ಈ ಸಮುದಾಯಗಳ ಸಾಂಸ್ಕೃತಿಕ ಗುಣಲಕ್ಷಣಗಳ ಕೊರತೆ ಇದೆ ಎಂದು, ಪರಿಶಿಷ್ಟರೆಂದು ಅಂಗೀಕರಿಸದೇ ನಿರ್ಲಕ್ಷಿಸುತ್ತಿರುವ ಆಡಳಿತಕ್ಕೆ ಸಮರ್ಪಕವಾದ ಸಾಂಸ್ಕೃತಿಕ ದಾಖಲೆಗಳನ್ನು ಹಾಗೂ ಇನ್ನೂ ಹೆಚ್ಚಿನದಾಗಿ ಈಶಾನ್ಯ ರಾಜ್ಯಗಳಲ್ಲಿ ಅಲ್ಲಿನ ಸಮುದಾಯಗಳಿಗೆ ದೊರಕಿರುವ ವಿಶೇಷ ಹಕ್ಕುಗಳು ಮತ್ತು ಸೌಲತ್ತುಗಳನ್ನು ದೊರಕುವಂತಾಗಲು ಮೂಲ ಸಾಂಸ್ಕೃತಿಕ

ದಾಖಲೆಗಳನ್ನು ಪೂರೈಸುವ ಉದ್ದೇಶ ಹಾಗೂ ಅದಕ್ಕೂ ಹೆಚ್ಚಿನದಾಗಿ ಕಾಡಿನೊಳಗಿನ ಸೀಮಾಪದ್ಧತಿಯ ಸಾಂಸ್ಕೃತಿಕ ವಲಯದ ಮೇಲಿನ ಹಕ್ಕು ಮತ್ತು ಸ್ವಾಮ್ಯತ್ವವನ್ನು ಬುಡಕಟ್ಟುಗಳು ಪಡೆಯಲು ಮನವಿ ಹೋರಾಟಗಳಿಗೆ ಬುನಾದಿಯಾಗಿ ಈ ಅಧ್ಯಯನದ ಮಾಹಿತಿಗಳು ದಾಖಲೆ ಒದಗಿಸುತ್ತವೆ. ಅಂದರೆ ಅವರ ಬದುಕಿನ ಹಕ್ಕುಗಳನ್ನು ಪಡೆಯಲು ಹೋರಾಟದ ಒಂದು ಭಾಗವಾಗಿ ಈ ಅಧ್ಯಯನ ದಾಖಲೆಯ ಮಾಹಿತಿಗಳನ್ನು ನೀಡುವುದು ಈ ಅಧ್ಯಯನದ ಗುರಿಯಾಗಿದೆ.

ಕುಣಬಿಗಳಲ್ಲಿ 'ಸೀಮಾಪದ್ಧತಿ'ಯು ಪ್ರಸ್ತುತದಲ್ಲಿ ಆಚರಣೆಯಲ್ಲಿದೆ. ಕರ್ನಾಟಕದ ಇತರೆ ಸಮುದಾಯಗಳಿಗೆ ಹೋಲಿಸಿದಲ್ಲಿ ಕುಣಬಿಗಳಲ್ಲಿ ಜೀವಂತವಾಗಿರುವ ಈ ಸೀಮಾಪದ್ಧತಿಯು ಇತರೆ ಬುಡಕಟ್ಟುಗಳ ಪದ್ಧತಿಗಿಂತ ಅತ್ಯಂತ ಆದಿಮ ಸ್ವರೂಪದ ಸಂಸ್ಕೃತಿಯಾಗಿದೆ. ಇತರೆ ಸಮುದಾಯಗಳಾದ ಜೇನುಕುರುಬ, ಸೋಲಿಗ, ಬೆಟ್ಟಕುರುಬ ಬುಡಕಟ್ಟುಗಳನ್ನು ಈಗಾಗಲೇ ಅರಣ್ಯ ಇಲಾಖೆಯ ವನ್ಯಜೀವಿಕಾಯ್ದೆ, ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿಸಂರಕ್ಷಿತ ಪ್ರದೇಶದ ನೆಪವೊಡ್ಡಿ ಕಾಡಿನಿಂದ ಹೊರಹಾಕಿರುವ ಕಾರಣ ಮತ್ತು ಹಾಲಕ್ಕಿಗಳು ನಾಗರಿಕತೆಯ ಮುಖ್ಯವಾಹಿನಿಗೆ ಸಿಲುಕಿ ಸೀಮಾಪದ್ಧತಿ ಶಿಥಿಲವಾಗಿರುವ ಕಾರಣ, ಮ್ಯಾಸಬೇಡ ಮತ್ತು ಕಾಡುಗೊಲ್ಲರ ಪಶುಪಾಲನೆಯ ಸೀಮಾಲೋಕವಾದ ಕಾವಲುಗಳು ಮತ್ತು ಗೋಮಾಳಗಳನ್ನು ಅರಣ್ಯ ಇಲಾಖೆ ಮತ್ತು ಅಭಿವೃದ್ಧಿಯ ಹೆಸರಲ್ಲಿ ಕಸಿದುಕೊಂಡ ಕಾರಣ ಹಾಗೂ ಹಕ್ಕಿಪಕ್ಕಿಗಳನ್ನು ಕಳ್ಳರೆಂದು ಅತಂತ್ರಗೊಳಿಸಿರುವ ಕಾರಣ ಆ ಸಮುದಾಯಗಳು ಸೀಮಾಪದ್ಧತಿಯ ಆಚರಣೆಗಳನ್ನು ತಮ್ಮ ಮೂಲ ಸ್ವರೂಪದಲ್ಲಿ ಉಳಿಸಿಕೊಳ್ಳಲಾಗಿಲ್ಲ.

ಆದರೆ ಕುಣಬಿಗಳು ತಮ್ಮ ಹೋರಾಟಗಳ ಮೂಲಕ ವನ್ಯಜೀವಿಕಾಯ್ದೆ, ರಾಷ್ಟ್ರೀಯ ಉದ್ಯಾನವನ ಕಾಯ್ದೆ ಮತ್ತು ಹುಲಿಸಂರಕ್ಷಿತಪ್ರದೇಶ ರಕ್ಷಿಸಿಕೊಂಡು ಕಾಡಿನಿಂದ ಹೊರಹಾಕಲ್ಪಡದೆ, ತಮ್ಮ ಮೂಲ ಸ್ಥಳಗಳಲ್ಲಿಯೇ ಉಳಿದಕೊಂಡಿದ್ದಾರೆ. ಈ ಕಾರಣಕ್ಕಾಗಿ ಜೋಯಿಡಾ ತಾಲ್ಲೂಕಿನಲ್ಲಿರುವ ಕುಣಬಿ ಸಮುದಾಯದಲ್ಲಿ 'ಸೀಮಾಪದ್ಧತಿ'ಯ ಆಚರಣೆ ಇಂದಿಗೂ ಆದಿಮ ರೂಪದಲ್ಲಿದೆ. ಜೋಯಿಡಾ ತಾಲ್ಲೂಕಿನ ಕುಣಬಿ ಸಮುದಾಯವನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು, ಕರ್ನಾಟಕದ ಇತರ ಬುಡಕಟ್ಟುಗಳಲ್ಲಿ ಇನ್ನು ಬೇರೆ ಬೇರೆ ರೀತಿಯಲ್ಲಿ ಉಳಿದಿರಬಹುದಾದ ಸೀಮಾಪದ್ಧತಿಯ ಸಂಗತಿಗಳನ್ನು ಇಲ್ಲಿ ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಇದಕ್ಕಾಗಿ ಜೇನುಕುರುಬ, ಬೆಟ್ಟಕುರುಬ ಸೋಲಿಗ, ಹಾಲಕ್ಕಿ, ಸಿದ್ದಿ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳನ್ನು ಆಯ್ಕೆ ಮಾಡಿಕೊಂಡು ತೌಲನಿಕ ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನವನ್ನು ಉತ್ತರ ಕನ್ನಡ ಜಿಲ್ಲೆಯ ಜೋಯಿಡಾದ 'ಕುಣಬಿ' ಬುಡಕಟ್ಟು ಸಮುದಾಯವನ್ನು ಕೇಂದ್ರಬಿಂದುವಾಗಿಟ್ಟುಕೊಂಡು, ಅಧ್ಯಯನ ವಿಷಯಕ್ಕೆ ತೌಲನಿಕ ವಿಚಾರಗಳಿಗಾಗಿ ಪೂರಕದ ಮಾಹಿತಿ ಒದಗಿಸುವ ಕಾರಣಕ್ಕಾಗಿ ಉತ್ತರ ಕನ್ನಡ ಜಿಲ್ಲೆ ಮತ್ತು ಕರ್ನಾಟದ ಇತರ ಬುಡಕಟ್ಟುಗಳಾದ ಹಾಲಕ್ಕಿ, ಸಿದ್ದಿ, ಸೋಲಿಗ, ಜೇನುಕುರುಬ, ಬೆಟ್ಟಕುರುಬ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳ ಸೀಮಾಪದ್ಧತಿಯ ಸಂಸ್ಕೃತಿಗಳ ಸಾಂದರ್ಭಿಕ ಉದಾಹರಣೆಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಫಲಿತಗಳು**

1. ಕರ್ನಾಟಕದ ಬೇರೆ ಬೇರೆ ಬುಡಕಟ್ಟು ಸಮುದಾಯಗಳಲ್ಲಿ ಸೀಮಾಪದ್ಧತಿಯನ್ನು ಬೇರೆ ಬೇರೆ ಹೆಸರುಗಳಲ್ಲಿ ಕರೆಯಲಾಗುತ್ತದೆ. ಉತ್ತರ ಕನ್ನಡ ಜಿಲ್ಲೆಯ ಕುಣಬಿ ಬುಡಕಟ್ಟನ್ನು ಕೇಂದ್ರವಾಗಿಟ್ಟು ಸಂಶೋಧನೆಗೆ ತೊಡಗಿರುವ ಕಾರಣ ಕುಣಬಿಗಳಲ್ಲಿ 'ಸೀಮಾಪದ್ಧತಿ' ಎಂದೇ ಈ ಮಹಾಪ್ರಬಂಧದಲ್ಲಿ ಸಂಬೋಧಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಇತರೆ ಬುಡಕಟ್ಟುಗಳಾದ ಹಾಲಕ್ಕಿ, ಗೊಂಡ ಮತ್ತು ಸಿದ್ದಿ ಸಮುದಾಯಗಳಲ್ಲೂ ಈ ಪದ್ಧತಿಯನ್ನು 'ಸೀಮಾಪದ್ಧತಿ' ಎಂದೇ ಕರೆಯಲಾಗುತ್ತದೆ.

2. ಮೂಲತಃ ಪಶುಪಾಲಕರು, ಮತ್ತು ಪಾರಂಪರಿಕ ಕೃಷಿಕರು ಆದ ಕುಣಬಿಯರು ದಕ್ಷಿಣ ಭಾರತದ ವಿಶಿಷ್ಟ ಜನವರ್ಗಕ್ಕೆ ಸೇರಿದವರು. ಇವರ ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಕುರಿತ ಅನೇಕ ವಿವರಗಳು ನಮ್ಮ ದೇಶದ ಆದಿಮ ಜನಸಮುದಾಯಗಳ ವಿಶಿಷ್ಟ ದುಡಿಮೆಯ ಕ್ರಮವನ್ನು ಚಾರಿತ್ರಿಕವಾಗಿ ಕಟ್ಟಿಕೊಡುತ್ತವೆ. ಇದರ ಜೊತೆಗೆ ದಕ್ಷಿಣ ಪ್ರಸ್ಥಭೂಮಿಯ ವಿಶಿಷ್ಟ ಮತ್ತು ಆದಿಮ ಕೃಷಿಯ ಚಹರೆಗಳು ಇನ್ನೂ ಈ ಸಮುದಾಯದಲ್ಲಿ ಆಚರಣೆಯಲ್ಲಿವೆ. ಇಂತಹ ಸಮುದಾಯಗಳು ತಮ್ಮ ದುಡಿಮೆಯ ಕ್ಷೇತ್ರವನ್ನು ನಿರ್ದಿಷ್ಟವಾಗಿ ಗುರುತಿಸಿಕೊಳ್ಳುವ ಕ್ರಮದಲ್ಲಿಯೇ ಸೀಮಾಪದ್ಧತಿಯ ಕುರುಹುಗಳಿವೆ. ಅದರ ಆಚರಣೆಯು ಚಾರಿತ್ರಿಕವಾಗಿ ಇಂದಿಗೂ ಉಳಿದುಕೊಂಡು ಬಂದಿದೆ. ಕುಣುಬಿಯರ ದುಡಿಮೆ, ಭೂಹಿಡುವಳಿ, ಅರಣ್ಯದ ಅವಲಂಬನೆ, ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಕ್ರಮಗಳಲ್ಲಿ ಇರುವ ಸೀಮೆಯ ಪರಿಕಲ್ಪನೆಯು ಅತ್ಯಂತ ಆದಿಮವಾದದ್ದು.

3. ದಕ್ಷಿಣ ಕರ್ನಾಟಕದ ಮೈಸೂರು, ಚಾಮರಾಜನಗರ ಮತ್ತು ಕೊಡಗು ಜಿಲ್ಲೆಯ ಕಾಡಿನಲ್ಲಿ ವಾಸಿಸುತ್ತಿರುವ ಜೇನುಕುರುಬ ಮತ್ತು ಸೋಲಿಗರಲ್ಲಿ ಈ ಪದ್ಧತಿಯನ್ನು 'ಜಮ್ಮಾ ಪದ್ಧತಿ' ಎಂದು ಕರೆಯುತ್ತಾರೆ. ಆದರೆ ಇದೇ ಭಾಗಗಳಲಿ ವಾಸಿಸುತ್ತಿರುವ ಬೆಟ್ಟಕುರುಬ ಆದಿವಾಸಿಗಳು ಇದಕ್ಕೆ 'ಎಲ್ಲೆ' ಎಂದು ಕರೆಯುತ್ತಾರೆ. ಇವರು ಇದಕ್ಕೆ ಮೊಗೆ ಎಂದು ಕರೆಯುವುದು ಕೂಡ ರೂಢಿಯಲ್ಲಿದೆ. ಸಾಮಾನ್ಯವಾಗಿ ಬೆಟ್ಟಕುರುಬರು ತಮ್ಮ ಕುಲಗಳಿಗೆ ಮೊಗೆ ಎಂದು

ಕರೆಯುತ್ತಾರೆ. ಇವರು ಕುಲ(ಮೊಗೆ)ಗಳ ವಿಂಗಡಣೆಯು ಜಮ್ಮಗಳಿಗೆ ತಕ್ಕಂತೆ ವಿಂಗಡಣೆ ಯಾದ ಕಾರಣ ಮೊಗೆ ಎಂತಲೂ ಕರೆಯಲಾಗುತ್ತದೆ ಎನ್ನುತ್ತಾರೆ.

4. ಬುಡಕಟ್ಟು ಸಂಸ್ಕೃತಿಯಲ್ಲಿ 'ಸೀಮಾಪದ್ಧತಿ'ಯು ಅತ್ಯಂತ ಪ್ರಮುಖವಾದ ಮತ್ತು ಮಹತ್ತರವಾದ ಸಾಂಸ್ಕೃತಿಕ ಪಾತ್ರವನ್ನು ಹೊಂದಿ, ಇಡೀ ಬುಡಕಟ್ಟುಗಳ ಸಾಂಸ್ಕೃತಿಕ ಚಟುವಟಿಕೆಯಗಳನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಒಂದು ಮುಖ್ಯ ಆಚರಣಾ ಪದ್ಧತಿಯಾಗಿದೆ. ಈ ಸೀಮಾಪದ್ಧತಿಯ ಅಧ್ಯಯನವು ಬುಡಕಟ್ಟುಗಳ ಹಲವಾರು ಸಾಂಸ್ಕೃತಿಕ ಆಯಾಮಗಳನ್ನು ಹೊಂದಿದ್ದು, ಈ ಅಧ್ಯಯನದ ಮೂಲಕ ಬುಡಕಟ್ಟುಗಳ ಬೇರೆ ಬೇರೆ ಸಾಂಸ್ಕೃತಿಕ ಒಳ ಆಳದ ಅನೇಕ ಮಗ್ಗುಲುಗಳನ್ನು ಅನಾವರಣಗೊಳಿಸಬಹುದಾಗಿದೆ.

5. ನಮ್ಮ ಆದಿವಾಸಿ ಸಮುದಾಯಗಳ ಬದುಕಲ್ಲಿ ಗಡಿ ಎಂದರೆ, ಸೀಮೆ ಎಂದರೆ ಕೇವಲ ಗೆರೆ ಕೊರೆದು ಹಕ್ಕು ಸ್ಥಾಪಿಸುವ ಯಾಂತ್ರಿಕ ಯಜಮಾನಿಕೆಯಲ್ಲ. ಜಮ್ಮಾ ಮತ್ತು ಗಡಿ ಎಂದರೆ ಆಯಾ ಸಮುದಾಯದ ಸಮಗ್ರ ಬದುಕನ್ನು ಕಾಪಿಡುತ್ತ ಬಂದ ಆದಿಮ ಪದ್ಧತಿಯೂ ಹೌದು.

6. ಈ ಸೀಮಾಪದ್ಧತಿಯು ಗಡಿ ಮತ್ತು ಗಡಿಯೊಳಗಿನ ಬದುಕನ್ನು ನಿರಂತರವಾಗಿ ರೂಪಿಸುತ್ತಾ, ತಾನೂ ಜೀವಂತವಿದ್ದು, ಸಮುದಾಯಗಳ ಬದುಕಿನ ಸೃಜನಶೀಲ ಕೇಂದ್ರವಾಗುತ್ತ ಬಂದ ಪ್ರಕ್ರಿಯೆಯಾಗಿದೆ.

7. ಸೀಮಾಪದ್ಧತಿಗೂ ಆದಿವಾಸಿಗಳ ಆದಿಮ ಜ್ಞಾನವ್ಯವಸ್ಥೆಗೂ ನೇರ ಸಂಬಂಧವಿದೆ. ಆದಿವಾಸಿಗಳ ಬದುಕಿನ ಸಮಗ್ರ ತಿಳುವಳಿಕೆಯ ಕ್ರಮಗಳು ಈ ಗಡಿಯೊಳಗಿನ ಮತ್ತು ಗಡಿಯಾಚೆಗಿನ ನಿರಂತರ ಒಡನಾಟದಿಂದ ರೂಪುಗೊಳ್ಳುತ್ತ ಬಂದಿವೆ.

8. ಒಂದು ಬುಡಕಟ್ಟು ಸಮುದಾಯದ ಹಾಡಿ,ಕುಳಾವಿಯ ಸೀಮೆಯೊಳಗಿನ ಪ್ರದೇಶವು ಆ ಬುಡಕಟ್ಟಿನ ಸಮಗ್ರ ಸಾಂಸ್ಕೃತಿಕ ಕುಲಕಸಬುಗಳು, ಮಡಿದವರ ಆತ್ಮಗಳು ದೈವಗಳಾಗಿ ಗಡಿ ಕಾಯುವ ಬಗೆ, ದೈವಗಳು ಮತ್ತು ದೈವಗಳ ಪರಸ್ಪರ ಸಹಕಾರ ಸಂಪರ್ಕಗಳು ಏಕತ್ರಗೊಂಡಿರುತ್ತವೆ. ಹಾಡಿಗಳಲ್ಲಿನ ಜನರ ರಕ್ಷಣೆ, ಸೀಮೆಯ ಕಾಡು ಮರಗಿಡ-ಬಳ್ಳಿಗಳು ಮತ್ತು ಅವುಗಳೊಳಗೆ ಅಡಕವಾಗಿರುವ ದೈವಗಳು ಮತ್ತು ಅಪಾರ ಔಷಧಿಯ ಚಿಕಿತ್ಸಕ-ಜ್ಞಾನಗಳು, ತಮ್ಮ ಬದುಕಿಗೆ ಆಧಾರವಾದ ವ್ಯವಸಾಯ, ಸಹಜಕೃಷಿ ಕುಂಬರಿ ಬೇಸಾಯ, ಅರಣ್ಯ ಕಿರು ಉತ್ಪನ್ನಗಳು ಮತ್ತು ಅವುಗಳಿಂದ ಮೂಡಿ ಬರುವ ಕರಕುಶಲ ಕಲೆಗಳು ರೂಪುಗೊಂಡ ಬಗೆಗೂ ಸೀಮಾಪದ್ಧತಿಗೂ ನೇರ ಸಂಬಂಧವಿದೆ.

9. ಸೀಮಾವಲಯದೊಳಗಿನ ಹಾಡಿಗಾಗಿ ದುಡಿದ, ಮಡಿದ ವೀರರ ಆತ್ಮಗಳೂ ದೈವಗಳಾಗುತ್ತವೆ. ಗಿಡಮರ ಬಳ್ಳಿ, ಕಲ್ಲು, ಕಾಡಿನ ಅನೇಕ ಜೀವಿಗಳೇ ಇವರ ಪೂಜೆಯ ವಸ್ತುಗಳಾಗಿ ವಿವಿಧ ಜವಾಬ್ದಾರಿ ಪಾತ್ರಗಳನ್ನು ವಹಿಸಿಕೊಳ್ಳುತ್ತವೆ.

10. ಸಾಂಪ್ರದಾಯಿಕ ಸಹಜ ಕೃಷಿ ಕುಂಬರಿ ಬೇಸಾಯ, ಬೇಟೆ ಕಾಡಿನ ಉತ್ಪನ್ನಗಳ ಸಂಗ್ರಹ ರೋಗರುಜಿನಗಳಿಗೆ ಕಾಡಿನ ಗಿಡಮೂಲಿಕೆಗಳ ಚಿಕಿತ್ಸೆ, ನಿತ್ಯಬಳಕೆಗಳಿಗೆ ತಾವೇ ಹೆಣೆದ ಬುಟ್ಟಿ, ತೊಟ್ಟಿಲು, ಕೇರುಮರ, ಕಡೆಯುವಮಂತು, ಮೀನು ಹಿಡಿಯುವ ಬೇಟೆ ಯಾಡುವ ಸಾಧನಗಳು, ತಾನೇ ಹೆಣೆದ ಚಾಪೆ, ಆಟಿಕೆಗಳು ಮರದಿಂದ ಕೆತ್ತಿದ ಬೊಂಬೆ, ಮುಖವಾಡಗಳು ದೈವಗಳ ಪೂಜೆ, ಬಲಿ, ಜಾತ್ರೆ, ಉತ್ಸವ, ಹಬ್ಬ, ಹರಿದಿನ, ನೃತ್ಯ, ಹಾಡು ಹಾಗೂ ಬಯಲಾಟ ಪಾರಂಪರಿಕ ಜ್ಞಾನಗಳು, ಇವರುಗಳ ನಿಯಮ, ವ್ಯಾಜ್ಯ, ಸಮಸ್ಯೆಗಳ ಸುಸ್ಥಿತಿಯಲ್ಲಿಟ್ಟುಕೊಳ್ಳಲು ನ್ಯಾಯಮಂಡಳಿ ಇರುತ್ತದೆ.

11. ಬುಡಕಟ್ಟುಗಳ ಎಲ್ಲಾ ಬಗೆಯ ಕಾರ್ಯಚಟುವಟಿಕೆ, ಸಂಸ್ಕೃತಿ ಆಚರಣೆಗಳನ್ನು ಕೇಂದ್ರ ಸ್ಥಾನದಲ್ಲಿದ್ದುಕೊಂಡು ಅವುಗಳನ್ನು ನಿಯಂತ್ರಿಸಲು ಒಬ್ಬ ಮುಖ್ಯ 'ಬುದವಂತ'ನಿರುತ್ತಾರೆ. ಈತ ಇಡೀ ಸಮುದಾಯದ ಸೀಮಾವಲಯದ ಸಾಮ್ರಾಜ್ಯದ ಮುಖ್ಯ ಸೂತ್ರಧಾರ. ಬೇರೆ ಬೇರೆ ಸಮುದಾಯಗಳಲ್ಲಿ ಈತನಿಗೆ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಅಜ್ಜಯ್ಯ, ಗುಡ್ಡಯ್ಯ, ಬಂಜೆಕಾಳ, ಪೂಜಾರಿ ಹೀಗೆ ಬುದವಂತನು ದೈವಗಳು, ಆತ್ಮಗಳು, ನ್ಯಾಯಮಂಡಳಿ, ಸಮುದಾಯ ಇತ್ಯಾದಿಗಳ ಮಧ್ಯೆ ಸಂವಹನದ ಸಂಪರ್ಕವನ್ನೇರ್ಪಡಿಸಿ ಸೀಮಾವ್ಯವಸ್ಥೆಯನ್ನು ನಡೆಸುವ, ನಿಯಂತ್ರಿಸುವ ಮುಖ್ಯ ಪಾತ್ರ ವಹಿಸಿರುತ್ತಾರೆ.

12. ದೈವಗಳು ಮತ್ತು ಮಡಿದವರ ಆತ್ಮಗಳ ಆವಾಹನೆ ಮಾಡಿಕೊಂಡು ಅವುಗಳ ಜೊತೆ ಸಂವಹನ, ಸಂಭಾಷಣೆಯನ್ನು ನಡೆಸಿ ಸಮುದಾಯಗಳ ಜೊತೆ ಸಂಪರ್ಕಕೊಂಡಿ ಏರ್ಪಡಿಸುವವನೇ ಶಮನ್. ಈತನ ಮೈ ಮೇಲೆ ಆತ್ಮಗಳು, ದೈವಗಳು ಆವಾಹನೆಯಾಗಿ ಸಮಸ್ಯೆಗಳಿಗೆ ಪರಿಹಾರ ಮತ್ತು ಬುಡಕಟ್ಟು ಚಟುವಟಿಕೆಗಳ ಕಾರ್ಯ ಹಾಗೂ ಬದುಕಿನ ದಾರಿಯನ್ನು ನಿರ್ದೇಶಿಸುತ್ತವೆ. ಅದರ ಆಣತಿಯಂತೆ ನ್ಯಾಯಮಂಡಳಿ ಕೂಡ ನಡೆದುಕೊಳ್ಳುತ್ತದೆ.

13. ಹಾಡಿಗಳಲ್ಲಿ ತಗಲುವ ರೋಗ ರುಜಿನಗಳಿಗೆ ಚಿಕಿತ್ಸೆ ನೀಡುವ ಮುಖ್ಯ ನಾಟಿ ವೈದ್ಯನು ಈತನೇ ಆಗಿರುತ್ತಾನೆ. ದನಕರುಗಳಿಗೆ ತಗಲುವ ರೋಗಗಳಿಗೂ ಚಿಕಿತ್ಸೆ ಈತನೇ ನೀಡುತ್ತಾನೆ. ಮಾಟಮಂತ್ರ, ಯಂತ್ರತಂತ್ರ ಮತ್ತು ನೋಟಗಳ ಜವಾಬ್ದಾರಿಗಳನ್ನು ನಿಭಾಯಿಸುವವನು ಈತನೇ ಆಗಿರುತ್ತಾನೆ. ಒಟ್ಟಾರೆಯಾಗಿ ವಿವಿಧ ಬುಡಕಟ್ಟುಗಳಲ್ಲಿರುವ ಸೀಮಾಪದ್ಧತಿಯ ವ್ಯವಸ್ಥೆಗಳಲ್ಲಿ ಹೆಚ್ಚು ಕಡಿಮೆ ಬುದವಂತನಂತಹ ಮುಖ್ಯ ಸೂತ್ರದಾರನಿರುತ್ತಾನೆ. ಆತ ಸೀಮಾಪದ್ಧತಿ ವ್ಯವಸ್ಥೆಯಲ್ಲಿ ರಚಿತವಾಗಿರುವ ಹಲವಾರು ಉಪಹಂತ, ವಿಭಾಗ, ವಿವಿಧ ಕಾರ್ಯಚಟುವಟಿಕೆಗಳನ್ನು ನಿಯಂತ್ರಿಸುವ ಕೇಂದ್ರ ಸೂತ್ರಧಾರನಾಗಿರುತ್ತಾನೆ. ಇಂತಹ ವ್ಯವಸ್ಥೆ ಮತ್ತು ಸೂತ್ರಧಾರನಂತಹ ಪಾತ್ರವನ್ನು ಪ್ರಪಂಚದ ಬೇರೆ ಬೇರೆ ದೇಶದ ಬುಡಕಟ್ಟು ಸಮುದಾಯಗಳಲ್ಲಿ ಕಾಣಬಹುದಾಗಿದೆ.

14. ಬಯಲುಸೀಮೆಯ ಪಶುಪಾಲಕ ಬುಡಕಟ್ಟುಗಳಾದ ಮ್ಯಾಸಬೇಡ ಮತ್ತು ಕಾಡುಗೊಲ್ಲರುಗಳಲಿ ಈ ವಲಯವ್ಯವಸ್ಥೆಗೆ 'ಗಡಿ' ಎಂದೇ ಹೆಸರಿಸುತ್ತಾರೆ. ಸಿದ್ದಿ ಕುಣಬಿ ಹಾಲಕ್ಕಿ ಮತ್ತು ಕುಣಬಿ ಬುಡಕಟ್ಟುಗಳಲ್ಲಿ ಶಮನ್ ಪಾತ್ರವನ್ನು ವಹಿಸುವವರಿಗೆ ಬುದವಂತನೆಂತಲೂ ಜೇನುಕುರುಬರಲ್ಲಿ ಗುಡ್ಡಯ್ಯನೆಂತಲೂ, ಬೆಟ್ಟಕುರುಬರಲ್ಲಿ ಬಿಂಜೆಕಾಳನೆಂತಲೂ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳಲ್ಲಿ ಪಟ್ಟದ ಪೂಜಾರಿಗಳೆಂತಲೂ ಕರೆಯುತ್ತಾರೆ.

15. ಸೀಮಾಪದ್ಧತಿಯ ವ್ಯವಸ್ಥೆಯಲ್ಲಿ ಒಳಗೊಳ್ಳುವ ಉಪಾಸನೆಗಳಲ್ಲಿ ಇರಬಹುದಾದ ಸಾಂಸ್ಕೃತಿಕ ರಚನೆ ಅರ್ಥವ್ಯವಸ್ಥೆ, ಪಾರಂಪರಿಕ ವ್ಯವಹಾರ ಹಾಗೂ ಸ್ವಯಂ ಆಡಳಿತ ವ್ಯವಸ್ಥೆ(Autonomous rule system)ಗಳ ಜೊತೆಗೆ ಪಾರಂಪರಿಕ ಜ್ಞಾನ(Inherited knowledge) ಪರಿಸರದ ವ್ಯವಸ್ಥೆ(Eco-system) ಹಾಗೂ ಜೀವ ವೈವಿಧ್ಯತೆ (Bio-diversity) ಇವುಗಳ ಆಚರಣೆಗಳ ಮಧ್ಯೆ ಇರುವ ಕೊಂಡಿ(link)ಪಾರಂಪರಿಕ ತಿಳುವಳಿಕೆಯೇ ಆಗಿರುತ್ತದೆ.

16. ಬುಡಕಟ್ಟುಗಳು ಸಾಂಸ್ಕೃತಿಕವಾಗಿ ರೂಢಿಸಿಕೊಂಡು ಬಂದಿರುವ ಸೀಮಾಪದ್ಧತಿ ವ್ಯವಸ್ಥೆಯ ನೀತಿ ನಿಯಮಗಳನ್ನು ಮೀರಿ ತಾವು ಹಾಕಿಕೊಂಡ ಗೆರೆ ದಾಟಿ ಉಪಚಾರ ಮಾಡಿ ತಪ್ಪು ಮಾರ್ಗದಲ್ಲಿ ನಡೆದುಕೊಂಡರೆ ಅದು ಸೀಮೋಲ್ಲಂಘನೆಯಾಗುತ್ತದೆ. ಅದಕ್ಕಾಗಿ ನ್ಯಾಯ ಮಂಡಳಿಗಳಿದ್ದು, ಅವು ಸೀಮೆಯ ಉಲ್ಲಂಘನೆಯ ರೀತಿ, ಪ್ರಮಾಣ ಮತ್ತು ಅದರ ತೀವ್ರತೆಗನುಗುಣವಾಗಿ ದಂಡ, ಶಿಕ್ಷೆ, ಬಹಿಷ್ಕಾರಗಳನ್ನು ವಿಧಿಸುವ ಕ್ರಮ ಸೀಮಾವ್ಯವಸ್ಥೆಯಲ್ಲಿದೆ. ನ್ಯಾಯಮಂಡಳಿ ನ್ಯಾಯತೀರ್ಮಾನವನ್ನು ಮುಂಚೆಯೇ ಇಂತಹ ಅನಾಚಾರಗಳ ಆಗುಹೋಗುಗಳನ್ನು ಸದಾ ಗಮನಿಸುತ್ತಿರುವ ಸಂಬಂಧಪಟ್ಟ ಗಡಿದೈವಗಳು, ಹಿರಿಯ ಆತ್ಮಗಳು ಅದಕ್ಕೆ ತಕ್ಕ ಶಿಕ್ಷೆಯನ್ನು ಬೇರೆ ಬೇರೆ ರೂಪದಲ್ಲಿ ನೀಡುತ್ತವೆಂದು ಬುಡಕಟ್ಟುಗಳು ಬಲಿಷ್ಠವಾಗಿ ನಂಬಿರುತ್ತವೆ.

17. ಈ ಸೀಮಾಪದ್ಧತಿಯು ಇತರೆ ಬುಡಕಟ್ಟುಗಳ ಪದ್ಧತಿಗಿಂತ ಅತ್ಯಂತ ಆದಿಮ ಸ್ವರೂಪದ ಸಂಸ್ಕೃತಿಯಾಗಿದೆ. ಇತರೆ ಸಮುದಾಯಗಳಾದ ಜೇನುಕುರುಬ, ಸೋಲಿಗ, ಬೆಟ್ಟಕುರುಬ ಬುಡಕಟ್ಟುಗಳನ್ನು ಈಗಾಗಲೇ ಅರಣ್ಯ ಇಲಾಖೆಯ ವನ್ಯಜೀವಿಕಾಯ್ದೆ, ರಾಷ್ಟ್ರೀಯ ಉದ್ಯಾನವನ ಮತ್ತು ಹುಲಿಸಂರಕ್ಷಿತ ಪ್ರದೇಶದ ನೆಪವೊಡ್ಡಿ ಕಾಡಿನಿಂದ ಹೊರ ಹಾಕಿರುವ ಕಾರಣ ಮತ್ತು ಹಾಲಕ್ಕಿಗಳು ನಾಗರಿಕತೆಯ ಮುಖ್ಯವಾಹಿನಿಗೆ ಸಿಲುಕಿ ಸೀಮಾಪದ್ಧತಿ ಶಿಥಿಲವಾಗಿರುವ ಕಾರಣ, ಮ್ಯಾಸಬೇಡ ಮತ್ತು ಕಾಡುಗೊಲ್ಲರ ಪಶುಪಾಲನೆಯ ಸೀಮಾಲೋಕವಾದ ಕಾವಲುಗಳು ಮತ್ತು ಗೋಮಾಳಗಳನ್ನು ಅರಣ್ಯ ಇಲಾಖೆ ಮತ್ತು ಅಭಿವೃದ್ಧಿಯ ಹೆಸರಲ್ಲಿ ಕಸಿದುಕೊಂಡ ಕಾರಣ ಹಾಗೂ ಹಕ್ಕಿಪಿಪಕ್ಕಿಗಳನ್ನು ಕಳ್ಳರೆಂದು

ಅತಂತ್ರಗೊಳಿಸಿರುವ ಕಾರಣ ಆ ಸಮುದಾಯಗಳು ಸೀಮಾಪದ್ಧತಿಯ ಆಚರಣೆಗಳನ್ನು ತಮ್ಮ ಮೂಲ ಸ್ವರೂಪದಲ್ಲಿ ಉಳಿಸಿಕೊಳ್ಳಲಾಗಿಲ್ಲ.

18. ಕುಣಬಿಗಳು ತಮ್ಮ ಹೋರಾಟಗಳ ಮೂಲಕ ವನ್ಯಜೀವಿಕಾಯ್ದೆ, ರಾಷ್ಟ್ರೀಯ ಉದ್ಯಾನವನ ಕಾಯ್ದೆ ಮತ್ತು ಹುಲಿಸಂರಕ್ಷಿತಪ್ರದೇಶ ರಕ್ಷಿಸಿಕೊಂಡು ಕಾಡಿನಿಂದ ಹೊರಹಾಕಲ್ಪಡದೆ, ತಮ್ಮ ಮೂಲ ಸ್ಥಳಗಳಲ್ಲಿಯೇ ಉಳಿದುಕೊಂಡಿದ್ದಾರೆ. ಈ ಕಾರಣಕ್ಕಾಗಿ ಜೋಯಿಡಾ ತಾಲ್ಲೂಕಿನಲ್ಲಿರುವ ಕುಣಬಿ ಸಮುದಾಯದಲ್ಲಿ 'ಸೀಮಾಪದ್ಧತಿ'ಯ ಆಚರಣೆ ಇಂದಿಗೂ ಆದಿಮ ರೂಪದಲ್ಲಿದೆ.

19. ಸಮುದಾಯಗಳ ಸಾಂಸ್ಕೃತಿಕ ಗುಣಲಕ್ಷಣಗಳ ಕೊರತೆ ಇದೆ ಎಂದು, ಪರಿಶಿಷ್ಟರೆಂದು ಅಂಗೀಕರಿಸದೇ ನಿರ್ಲಕ್ಷಿಸುತ್ತಿರುವ ಆಡಳಿತಕ್ಕೆ ಸಮರ್ಪಕವಾದ ಸಾಂಸ್ಕೃತಿಕ ದಾಖಲೆಗಳನ್ನು ಹಾಗೂ ಇನ್ನೂ ಹೆಚ್ಚಿನದಾಗಿ ಈಶಾನ್ಯ ರಾಜ್ಯಗಳಲ್ಲಿ ಅಲ್ಲಿನ ಸಮುದಾಯಗಳಿಗೆ ದೊರಕಿರುವ ವಿಶೇಷ ಹಕ್ಕುಗಳು ಮತ್ತು ಸೌಲತ್ತುಗಳನ್ನು ದೊರಕುವಂತಾಗಲು ಮೂಲ ಸಾಂಸ್ಕೃತಿಕ ದಾಖಲೆಗಳನ್ನು ಪೂರೈಸುವ ಉದ್ದೇಶ ಹಾಗೂ ಅದಕ್ಕೂ ಹೆಚ್ಚಿನದಾಗಿ ಕಾಡಿನೊಳಗಿನ ಸೀಮಾಪದ್ಧತಿಯ ಸಾಂಸ್ಕೃತಿಕ ವಲಯದ ಮೇಲಿನ ಹಕ್ಕು ಮತ್ತು ಸ್ವಾಮ್ಯತ್ವವನ್ನು ಬುಡಕಟ್ಟುಗಳು ಪಡೆಯಲು ಮನವಿ ಹೋರಾಟಗಳಿಗೆ ಬುನಾದಿಯಾಗಿ ಈ ಅಧ್ಯಯನದ ಮಾಹಿತಿಗಳು ದಾಖಲೆ ಒದಗಿಸುತ್ತವೆ. ಅಂದರೆ ಅವರ ಬದುಕಿನ ಹಕ್ಕುಗಳನ್ನು ಪಡೆಯಲು ಹೋರಾಟದ ಒಂದು ಭಾಗವಾಗಿ ದಾಖಲೆಯ ಮಾಹಿತಿಗಳನ್ನು ನೀಡುವುದು ಈ ಅಧ್ಯಯನದ ಗುರಿಯಾಗಿದೆ.

20. ಬುಡಕಟ್ಟುಗಳ ಸೀಮೆಯೊಳಗಿನ ಈ ವಿಶಿಷ್ಟ ಸರಳ ಸಂಕೀರ್ಣ ಸಮಗ್ರ ಸಾಂಸ್ಕೃತಿಕ ನೆಮ್ಮದಿಯ ಜೀವನ ಅದಿವಾಸಿಗಳ ಸಾಮಾಜಿಕ ಜೀವನದ ಅನನ್ಯತೆಯನ್ನು ಪ್ರತಿಬಿಂಬಿಸುತ್ತದೆ. ಈ ಸಾಂಸ್ಕೃತಿಕ ಸಾಮಾಜಿಕ ಬದುಕಿನ ಮೌಲ್ಯಗಳು ಜಡಗಟ್ಟಿದ ನೆಮ್ಮದಿರಹಿತ ಪ್ರಸ್ತುತ ಅಧುನಿಕ ನಾಗರಿಕ ಪ್ರಪಂಚಕ್ಕೆ ಪಾಠವೂ, ಮಾದರಿಯೂ ಆಗಿವೆ.

# ಪರಾಮರ್ಶನ ಗ್ರಂಥಗಳು


1. ಅರುಣ ಜೋಳದಕೂಡ್ಲಿಗಿ, ಗಂಟಿ ಚೋರ್ ಸಮುದಾಯ, ಅಂಬೇಡ್ಕರ್ ಸಂಶೋಧನಾ ಸಂಸ್ಥೆ, 2016.
2. ಎಲ್ಲಪ್ಪ ಕೆ.ಕೆ.ಪುರ, ದೊಕ್ಕಲು ಮಕ್ಕಳು: ಒಂದು ಅಧ್ಯಯನ, ದುರ್ಗಾ ಪ್ರಕಾಶನ ಕೆ.ಕೆ.ಪುರ, 1997.
3. ತಿಪ್ಪೇಸ್ವಾಮಿ ಎನ್.ಡಿ., ಶಿಳ್ಳೇಕ್ಯಾತ ಸಮುದಾಯ. ಡಾ.ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆ, ಬೆಂಗಳೂರು, 2016.
4. ನಿಂಗಣ್ಣ ಸಣ್ಣಕ್ಕಿ, ಗೊಂದಗಲಿರ ಸಂಸ್ಕೃತಿ, ಡಾ.ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆ, ಬೆಂಗಳೂರು, 2013.
5. ನಾಯಕ್ ಎನ್.ಆರ್., ಹಳ್ಳೇರ ಜಾನಪದ ಸಾಹಿತ್ಯ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 2000
6. ನಾಗಭೂಷಣ ಬಗ್ಗನಡು, ಸುಡುಗಾಡು ಸಿದ್ಧರು, ಅಂಬೇಡ್ಕರ್ ಸಂಶೋಧನಾ ಸಂಸ್ಥೆ, 2016.
7. ಪ್ರೇಮಲತ, ಬಸವರಾಜ, ಹಿರೇಮಠ, ಉತ್ತರ ಕನ್ನಡ ಜಿಲ್ಲೆ ಗೌಳಿ ಸಮುದಾಯ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ, ಪ್ರತಿಭಾ ಪ್ರಕಾಶನ ಗದಗ, 2014.
8. ಮೋಹನ ಚಂದ್ರಗುತ್ತಿ, ಮುಕ್ರಿಯರು, ಅಂಬೇಡ್ಕರ್ ಸಂಶೋಧನಾ ಸಂಸ್ಥೆ, 2016.
9. ರಾಮಯ್ಯ ಕೋಟಗಾನಹಳ್ಳಿ, ಸಿಂದ್‌ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು, 1993.
10. ವಡ್ಡಗೆರೆ ನಾಗರಾಜು, ಬುಡ್ಗ ಜಂಗಮರು, ಅಂಬೇಡ್ಕರ್ ಸಂಶೋಧನಾ ಸಂಸ್ಥೆ, 2016.
11. ಸಿದ್ಧಲಿಂಗಯ್ಯ, ಜನಸಂಸ್ಕೃತಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ. ಹಂಪಿ. 2007.

12. ಹರಿಲಾಲ ಪವಾರ, ಹೆಳವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

13. ಹರೀಶ್. ಪಿ.ಎನ್., ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

14. ಹಿರಿಯಣ್ಣ ಅಂಬಳಿಕೆ, ಕಚ್ಚೆಗೌಳಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

15. ಪ್ರಭಾಕರ, ಎ.ಎಸ್., ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004.

16. ಬೋರಲಿಂಗಯ್ಯ ಹಿ.ಚಿ., ಕುಣಬಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010.

17. ಕಾಳೇಗೌಡ ನಾಗವಾರ, ಎನ್. ಹುಚ್ಚಪ್ಪ ಮಾಸ್ತರ, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, 2003.

18. ಬೋರಲಿಂಗಯ್ಯ ಹಿ.ಚಿ., ಸಿದ್ದಿಯರ ಸಂಸ್ಕೃತಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯದ ಹಂಪಿ, 2010.

19. ಮೀರಾಸಾಬಿಹಳ್ಳಿ ಶಿವಣ್ಣ, ಕಾಡುಗೊಲ್ಲ ಬುಡಕಟ್ಟು ವೀರರು, ಸಿ.ವಿ.ಜಿ. ಪಬ್ಲಿಕೇಷನ್, 2005.

20. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

21. ವಿರೂಪಾಕ್ಷಿ ಪೂಜಾರಳ್ಳಿ, ಬೇಟೆ ಮತ್ತು ಬೇಡರು, ಚಿನ್ನಹಗಿರಿ ಪ್ರಕಾಶನ, 2007

22. ನಾಯಕ್ ಎನ್.ಆರ್., ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

23. ಕಿಕ್ಕೇರಿ ನಾರಾಯಣ, ಬುಡಕಟ್ಟು ಸಂಸ್ಕೃತಿ: ಅರುಹ–ಕುರುಹು, ವಿಸ್ಮಯ ಪ್ರಕಾಶನ, ಮೈಸೂರು, 2011.

24. ಕಿಕ್ಕೇರಿ ನಾರಾಯಣ, ಜೇನುಕುರುಬ ಬುಡಕಟ್ಟು ಜನಾಂಗದ ಅವ್ಯಕ್ತ ಸಾಂಸ್ಕೃತಿಕ ಪರಂಪರೆ, ಫೋಕ್‌ಲೋರ್ ಸಪೋರ್ಟ್ ಸೆಂಟರ್, ಚೆನ್ನೈ, 2011.

25. ಕೃಷ್ಣಮೂರ್ತಿ, "ಪರಿವರ್ತನೆಯ ಹಾದಿಯಲ್ಲಿ ನಾಗರಹೊಳೆ ಮತ್ತು ಬಂಡೀಪುರ ಅಭಯಾರಣ್ಯ ಪ್ರದೇಶಗಳ ಬುಡಕಟ್ಟು ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ: ಒಂದು ಮಾನವಶಾಸ್ತ್ರೀಯ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2016.

26. ಚಂದ್ರು ಕಾಳೇನಳ್ಳಿ, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

27. ಪ್ರಭಾಕರ ಎ.ಎಸ್., ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2004,

28. ಪ್ರಭಾಕರ ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. 2002,

29. ಪ್ರಭಾಕರ ಎ.ಎಸ್., ಕರ್ನಾಟಕದ ಡೊಂಬರು: ಒಂದು ಅಲೆಮಾರಿ ಸಮುದಾಯದ ಅಧ್ಯಯನ, ಅಪ್ರಕಟಿತ ಪಿಎಚ್.ಡಿ.ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006.

30. ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, 2006.

31. ಪಾರ್ವತಮ್ಮ ಸಿ., ಆದಿವಾಸಿ ಬದುಕು ಬವಣೆ, ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಸಂಶೋಧನಾ ಕೇಂದ್ರ, ಮೈಸೂರು, 2007.

32. ಪಾರ್ವತಮ್ಮ ಸಿ., ಆದಿವಾಸಿ ಸಮುದಾಯಗಳ ಅಭಿವೃದ್ಧಿ, ನಿರ್ದೇಶಕರು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2007.

33. ಭಾಮಿನಿ ರಾಘವಯ್ಯ, ಕೊಡಗಿನ ಬುಡಕಟ್ಟುಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2007.

34. ಬೋರಲಿಂಗಯ್ಯ ಹಿ.ಚಿ., ದೇಶಿ ಕನ್ನಡ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2016.

35. ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

36. ಬೋರಲಿಂಗಯ್ಯ ಹಿ.ಚಿ., ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2016.

37. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಕರ್ನಾಟಕ ಬುಡಕಟ್ಟು ಸುಚಿತ್ರಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2015.

38. ಬೋರಲಿಂಗಯ್ಯ ಹಿ.ಚಿ., ಪ್ರಭಾಕರ್ ಎ.ಎಸ್., ಬುಡಕಟ್ಟು ಅಧ್ಯಯನ ಸಂಪುಟ 3, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2005.

39. ಮಧು ಗುಂಡ್ಲುಪೇಟೆ, ಬುಡಕಟ್ಟು ಜನಾಂಗಗಳ ಒಂದು ಅವಲೋಕನ, ಚಾಮತರ ಪ್ರಕಾಶನ, 2011.

40. ಮರಿಸ್ವಾಮಿ, ಆರ್, ಸೋಲಿಗ ಸಮಾಜೋಭಾಷಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2014.

41. ಮೊಗಳ್ಳಿ ಗಣೇಶ್, ಮೌಖಿಕ ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006.

42. ಮೊಗಳ್ಳಿ ಗಣೇಶ್, ಅವ್ಯಕ್ತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2009.

43. ನಡಿಕೇರಿಯಂಡ ಚಿಣ್ಣಪ್ಪ ಪಟ್ಟೋಲೆ ಪಳಮೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1975.

44. ನಾಗೇಶ ಕೆ.ಟಿ., ಕರ್ನಾಟಕದಲ್ಲಿ ವಿಕೇಂದ್ರಿತ ಆಡಳಿತ ಮತ್ತು ಬುಡಕಟ್ಟುಗಳ ಅಭಿವೃದ್ಧಿ; ಮೈಸೂರು ಜಿಲ್ಲಾ ಪಂಚಾಯತಿ ಪಾತ್ರ(2000–2010): ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2015.

45. ನಾಗೇಗೌಡ ಎಚ್.ಎಲ್., ವೆರಿಯರ್ ಎಲ್ವಿನ್ನರ ಗಿರಿಜನ ಪ್ರಪಂಚ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1967.

46. ನಾವಡ ಎ.ವಿ., ಕರಾವಳಿ ಜಾನಪದ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಗಳೂರು, 2007,

47. ಶಂಕರನಾರಾಯಣ ತೀ.ನಂ., ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, 1998.

48. ಹರೀಶ್ ಪಿ.ಎನ್., ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

49. ಕ್ಷೀರಸಾಗರ, ಜೇನು ಆಕಾಶದ ಅರಮನೆಯೋ, ನವಕರ್ನಾಟಕ ಪ್ರಕಾಶನ, ಬೆಂಗಳೂರು, 2008.

50. ಲಲಿತ ಎ.ಸಿ., ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993

ಇಂಗ್ಲಿಷ್ ಪುಸ್ತಕಗಳು

51. Ghurye, G S, Scheduled Tribes of India, South Asia Books, 1980

52. Nirmal Kumar Bose, Tribal Life in india, National book trust, New delhi, 1971.

53. Verrior Elvin, Preface: Jawaharlal Nehru The Philosophy of NEFA, Shillong, 1959 (Seceond Revised Edition).

54. Luiz A.A.D Tribes of Mysore, S.Viswa & co, Bangalore,1963.

55. Iyar L.K, The Mysore Tribes and Castes, Vol-1,2,3,4. Mittal Publication, Delhi, 1998.

56. Morab. S.G., The Soliga of Bilgiri Rangana Hills, Anthropological Survey of India, Calcutta, 1977.

57. Thurston and Rangachar K.(Ed), Caste and Tribes of Southern India (Seven volume) Asian Education Services, New Delhi, 1909.

58. Abbe J.A. Dubois 2002, Hindu manners, Customs and Ceremoies, Rupa. Co.7/16, Ansari Road, Daryaganj, New Delhi.

59. Singh K.S. & others, People of India – Karnataka, (3-Volums) Vol-XXVIII, G Anthrpological Survey of India - N. Delhi 2002.

60. Sheering Rev M.A, Hindu Tribes and Castes, Trubner & Co London, 1872.

61. Nanjundiah, H.V, Ananth krishnna Iyer, The Mysore Tribes and Castes. Mittal Publications, New Delhi, 1922.

62. Irfan Habib. The Agrarian System of Mughal India 1556-1707. Oxford University Press, 1999.

63. Srinivas M.N., *Caste in Modern India*, Media promoters & Publishers PVT LTD, Bombay 1992.

64. M.N. Srinivas, *Collected Essays,* Oxord University Press, New Delhi, 2002

65. Milton Siger and Bernard S. Cohn, Ed: *Structure And Change In Indian Society*, Rawat Publications, Jaipur and New Delhi, 1994

66. Christoph van furer Haimndraf, "Tribes of India", Oxford University press Bombay, Culcutta, Madras, 1992.

67. Crooke W., The Tribes and Castes of the North-Western India (Calcutta : Government Printing Press, 1896 : rpt,1974, Delhi : Cosmo Publications) Vol. II.

68. Devy G. N., Technical Advisory Group on Denotified Nomadic and Semi-nomadic Tribes Report 2006(New Delhi): Ministry of Social Justice and Empowerment, Government of India).

69. Elwin, Verrier, *Leaves from the Jungle : Life in a Gond Vilalge*(London: John Murray, 1926).

70. Enthoven R.E (1922) "The Tribes and Castes of Bombay" Vol-I, II and III Cosmo Publications, New Delhi (Reprint) 1975.

71. Lawrence D'Souza S.J., "Hakki Pikkies" Unesco Co-action learning Mangalore.

72. Lawrence D'Souza S.J., The Third Tribe (Kankani Marati Naikas), Unesco Co-action learning centre, Mangalore.

73. Praveen Fernadas, 1994, "Kadu Gollas" Unesco co-action Learning Centre Fatimo letreat House, Mangalore.

74. M.N.Srinivas, Caste in Modern India, Media promoters & Publishers Pvt Ltd., Bombay, 1992.

75. Woldaana Weissleder, Ed : *The Nomadic alternative,* Mountan Publisher, Chicago, 1977.

76. Ananthakrishna Iyer.L.K., The Mysore Tribes and Castes(Mysore: The Mysore University, 1930 ; rpt, 1998, New Delhi : Mittal Publications), 5 Vols.

77. Avadhani P.S.R. et.al., 'The Chenchus: A scheduled Tribe of Andhra Pradesh (Ethnographic Studies)', *Census of India,* 1961, Vol. I Part V-B,No.IV (Delhi : Manager of Publications, 1972).

78. Ayer Ananthakrishna L.K., 1935, "The Mysore Tribes and castes Vol-1 to 5 Mysore University, Mysore.

79. Bettageri Prahallada, Culture of Adavichencharu, Karnataka Sayithya Academy Bangalore, 1993.

80. Boralingaiah H.C., Nammolagondu Putta Africa, C.V.G.Publications, Bangalore, 2004 (Kannada).

81. Indigenous and Traditional peoples and protected by Javier Beltran and Adrian Philips, Principles, Guidelines and case studies by IUC world commission on protected areas. Best practice protected area guidelines series No.4 by-IUCN-The world conservation union, 2000.

82. Antony, P.H. Dayal and A.K.Karan, eds., Poverty and Deprivation Among schedule tribes in India. Delhi : Institute for Human development, 2003.

83. Appa, G., and G. Patel, Unrecognized, Unnecessary and Unjust Displacement: case study from Gujrat, India. In McDowell, C. Understanding Impoverishment: The Consequences of Development Induces Displacement. Providence/Oxford: Berghahn, 1996.

84. Bailey F.G., Tribe, cast and Nation: A study in Political Activity and Political changes in Highland Orissa. Manchester: University Press, 1960.

85. Baviskar A., In the Belly of the river : Tribal conflict over development in Narmadha Valley, Delhi : Oxford University Press, 1995.

86. Hari Mohan Mathur: Tribal Land Issues in India: Communal Management, Rights and Displacement.

87. World Intellectual Property Organization: Customary Law, Traditional Knowledge and Intellectual Property: Outline of the issues.

88. Kailash, C. Malhotra, Indian statistical Institute: Culture and Ecological Dimensions of Scared groves in India.

89. Ankur Mishra, *Rehabilitation and Resettlement of Displaced Person Due to Development,* R&R Lawyer Club. 31st July, 2009

90. Stem Reports, SR-17/2003: Taking Stock of Rehablitation and Resettlement Schemes, Land Acquisition Act 1894, 2nd Feb, 1894

91. Ministry of Environment and Forest Conservation and Protection of Tigers in Tiger Reserves -2006. Govt. Of India

92. Ministry of Environment and Forest (NTCA) Section 38 -0 © The Wild Life Protection Act 1972, For Project Tiger.

93. John C. Russell, Ph.D.Peggy A. Adams-RussellValues, Attitudes and Beliefs Toward National Forest System Lands: Arizona Tribal Peoples USDA Forest Service Region 3, Southwestern Region 333 Broadway SE, Albuquerque, NM 87102, April 19, 2006

94. Birgitte Feiring, Indigenous peoples' rights to lands, territories, and resources, International Land Coilation, 2013.

95. Nithya N.R. Land Question And The Tribals Of Kerala, International Journal of Scientific & Technology Research Volume 2, Issue 9, September, 2013.

96. Javier Beltrán, Adrian Phillips(Ed), Indigenous and Traditional Peoples and Protected Areas, Principles, Guidelines and Case Studies, Cardiff University, 2002.

97. Zachary S. Price, Dividing Sovereignty in Tribal and Territorial Criminal Jurisdiction, *Dividing Sovereignty , 2013*

98. Mythri Prasad-Aleyamma, Territorial Legends Politics of Indigeneity, Migration, and Urban Citizenship in Pasighat Economic & Political Weekly, MAY 31st, 2014.

99. Jennifer Brick, The Political Economy of Customary Village Organizations in Rural Afghanistan, Department of Political Science University of Wisconsin – Madison, USA , 2008.

100. A. Sivakumar and M.Murugesan, Ethnobotanical Studies on the Wild Edible Plants Used by the Tribals of Anaimalai Hills, The Western Ghats, Ancient Science of Life Vol : XXV (2) October, November, December 2005.

101. Yogesh Gokhale, Kushalappa C, Bhat H. R, Madhav Gadgil, Prioritizing Traditional Conservation Practices for Karnataka ,Centre for Ecological Sciences, Indian Institute of Science, Bangalore 560012, India , 2001.

102. Pavate P. P and Bellad, D. G., Head and facial measurements among the Kunbi of Uttara Kannada district, Available online at www.elixirpublishers.com (Elixir International Journal), 2012.

103. Sachin A. Punekar and P. Lakshminarasimhan, Flora of Anshi National Park, Western Ghats – Karnataka, Published by Biospheres Publication, Lakshmi Nagar, Parvati, Pune 411 009, Maharashtra, 2011.

104. William & Lancaster, The concept of territorality among the Rwala Bedouin, Rysa lodge Lyness.U.K., 1986.

105. Radhika Johari & MadhavKarki,Tribal Folk Medicinal Plant Resources of South Asia, Medicinal & Aromatic Plants Program in Asia (MAPPA), 1996.

106. Edward E. Dudek, M.A., Tribal Religious Beliefs of North East India with Special Emphasis On Nagaland and the Introduction Effect of the Gospel, Globe Serve Journal of Missions www.globeserve journalofmissions.org, December, 2008.

107. Jenneke Arens: page 60, 81, Jens Dahl: page 155, Josée Duranleau: page 49, Christian Erni: page 27, 72, 83, 89, 109, 35, 137, 139, 168, 162, Marianne Jensen: page 28, 31, 183, Palle Kjærulff-Schmidt: page 10, 57, 80, Arthur Krasilnikoff: page 4, 54, 132 ,Nina Meshtyp: page 171, Alejandro Parellada: page 62, Indigenous & Tribal Peoples' Rights in Practice , International Labour Standards Department, 2009.

108. Kailash C. Malhotra., Cultural and Ecological Dimensions *Published* by: Indian National Science Academy, New Delhi & Indira Gandhi Rashtriya Manav Sangrahalaya, Bhopal. Sacred Groves in India, June, 2001

109. Malcolm N Shaw, Peoples,Territorialism and Boundaries, Liverpool University , 1997.

110. Desmond Morries; Terrestrial Behavior, http: homage, smc, edu/ Zehr_david / desmondmorries. htm, 20/7/2018.

111. Katherine J. Florey, Indian Country's Borders: Territoriality, Immunity, and The Construction of Tribal Sovereignty, University of California, Davis, School of Law, 2010.

112. **E-books**

113. http://www.cidh.org

**ಪಿಎಚ್, ಡಿ ಮಹಾಪ್ರಬಂಧಗಳು**

1. ಅರವಿಂದ್ ಎಸ್. ನಾಯಕ್, ಆಗೇರ–ಮುಕ್ರಿ–ಹಳ್ಳೇರ ಜನಾಂಗಗಳ ಸಾಂಸ್ಕೃತಿಕ ಅಧ್ಯಯನ. ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡಕ್ಕೆ ಸಲ್ಲಿಸಿದ ಮಹಾಪ್ರಬಂಧ(ಅಪ್ರಕಟಿತ).

2. ಮಲ್ಲಿಕಾರ್ಜುನ ಪ.ಸೊಬರದ, ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ(ಅಪ್ರಕಟಿತ ಸಂಶೋಧನಾ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010.

3. ವಿಜಯಲಕ್ಷ್ಮಿ ಆರ್, ಹಾಲಕ್ಕಿ ಒಕ್ಕಲಿಗರ ಮಹಿಳೆ, ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ(ಅಪ್ರಕಟಿತ ಸಂಶೋಧನಾ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, 2007.

ಅನುಬಂಧ: ಒಂದು

# ಸಂದರ್ಶಿಸಿದ ತಿಳುವಳಿಕೆದಾರರು

**ಕುಣಬಿ(ಉತ್ತರ ಕನ್ನಡ ಜಿಲ್ಲೆ, ಜೋಯಿಡಾ ತಾಲ್ಲೂಕು)(ವಕ್ತೃ)**

1. ಗಾಂಗೋಡ, ರಾಯ ಸುಕ್ಪೊ ವೆಳಿಪ್(60), ಬುದವಂತಜೋಯಿಡಾ
2. ಗಜಾನನ ಮದೇವ್, ಬಾಂಡೋಳ್ಕರ್(53), ಮುಲಕರ್ಣಿ, ಜೋಯಿಡಾ
3. ಸುರೇಶ್ ತಾಂಬ್ಡೊ ವೆಳಿಪ್, ಬುಧವಂತ, ಪಾಟ್ನೆ
4. ಬಾರಾಡಿ, ಗುರುನಾಥ ಕಣಬಾ ವೆಳಿಪ್(52) ಬುಧವಂತ
5. ಖಾಬಾ ಲಿಪ್ಪಿ ವೆಳಿಪ್–ಬಾಲಾಡಿ
6. ಮಹದೇವ್ ಬಾರ್‌ಕೆಲೋ ವೆಳಿಪ್ ಬಾಲಾಡಿ
7. ರಾಮಾಬಿಕೋ ಗಾವಡ, ಬುದವಂತ, ಕುಂಗಾಳಿ
8. ರಾಮದಾಸ ವಿಠಲ್ ವೆಳಿಪ್, ಮಿರಾಶಿ, ಕುಂಗಾಳಿ
9. ಗಜಾನನ ಮಿರಾಸಿ, ಮಯನಾಳ್
10. ರೆಡಿಯೋ ವೆಳಿಪ್, ಕಾರ್‌ಸಿಂಗಳಾ

**ಹಾಲಕ್ಕಿ**

1. ಹನುಮಂತ ಬೊಮ್ಮುಗೌಡ(53) ಅಧ್ಯಕ್ಷರು, ಜಿಲ್ಲಾ ಹಾಲಕ್ಕಿ ಸಮಾಜ, ಬೆಳೆಂಬರ, ಅಂಕೋಳ
2. ಮಂಗುಗೌಡ(65) ಅಂಬಾರಕೊಡ್ಲ, ಅಂಕೋಲ
3. ಸುಕ್ರಿ ಬೊಮ್ಮುಗೌಡ(54) ಪದ್ಮಶ್ರೀ ಪ್ರಶಸ್ತಿ ವಿಜೇತೆ, ಬಡಗೇರಿ, ಅಂಕೋಲ
4. ಗೋವಿಂದೇಗೌಡ(50) ಅರಸುಗೌಡ ಗೋಕರ್ಣ
5. ರಮೇಶಗೌಡ(52) ಬಿಣಗಾ ಕಾರವಾರ

6. ಶಿವಯ್ಯಗೌಡ

7. ದೇವುನಾರಾಯಣಗೌಡ(65), ಗುರುಗೌಡ, ತಲಗೇರಿ(ಚಂದಾವರಸೀಮೆ) ಕುಮುಟ

8. ಜೋಗಿ ಜಟ್ಟುಗೌಡ(55) ಗುರುಗೌಡ, ದೀವಳ್ಳಿ ಕುಮುಟ

9. ಮಂಕಾಳ ಆನಂದುಗೌಡ(65), ಗುರುಗೌಡ, ನುಶಿಕೋಟೆ, ಅಂಕೋಲ

10. ರಾಜೀವ ಮಂಜುನಾಥಗೌಡ(32), ಗುರುಗೌಡ, ಬೈಲುಗದ್ದೆ, ಕುಮುಟ, ಅಂತ್ರಳ್ಳಿ(ಬಂಡಿಹಬ್ಬ), ಕುಮುಟ

**ಸಿದ್ದಿಗಳು**

1. ದಾವಲಸಾಬ್ ಇಮಾಮ್ ಸಾಬ್ ಪಾಟೀಲ ಸಿದ್ದಿ(50), ಭಾಗವತಿ ಹಳಿಯಾಳ

2. ಅಂತೋಗ್ ಮರಿಯಾನಿಸಿದ್ದಿ(53), ಬುದವಂತ

3. ಅಗಸ್ತಿನ್ ಕೈಕಾನ್ ಸಿದ್ದಿ(67), ಬುದವಂತ, ಹುಲಿಪಾಲ್, ಯಲ್ಲಾಪುರ

4. ನರಸಿಂಹಸಿಕೊಟ ಸಿದ್ದಿ(48), ಬುದವಂತ, ಖೈರಗಾಳಿ, ಯಲ್ಲಾಪುರ

5. ರಾಮಾಗಿಂಡಿಸಿದ್ದಿ(62), ಬುದವಂತ, ಹುಂಜೆಕುಬ್ರಿ,ಯಲ್ಲಾಪುರ

6. ಸಾಣು ಶಿವಾಸಿದ್ದಿ(55), ಪೂಜಾರಿ, ಸಾತನಬೈಲ್, ಆಂಕೋಲ

7. ಶೇಖರ ರಾಮಾಸಿದ್ದಿ(65), ಪೂಜಾರಿ, ವೈದ್ಯಹೆಣ್ಣಾರ, ಅಂಕೋಲ

8. ಗಣಪತಿ ನಾಗಪುಸಿದ್ದಿ(29), ಪೂಜಾರಿ, ಕೋನಾಳ ಆಂಕೋಲ

9. ಡಿಯಾಗೋ ಬಿ.ಸಿದ್ದಿ(68), ಬುದವಂತ, ತೊಟ್ಟಲಗುಂಡಿ

10. ಇಮಾಮ್ ಸಿದ್ಧಿ(54), ಮುಖಂಡ, ಯಲ್ಲಾಪುರ

**ಕಾಡುಗೊಲ್ಲ**

1. ದೊಡ್ಡಮಲ್ಲಯ್ಯ(63), ರಾಜ್ಯಾಧ್ಯಕ್ಷರು, ಕಾಡುಗೊಲ್ಲ ಸಮಾಜ, ಚಿತ್ರದುರ್ಗ

2. ಗೋವಿಂದಪ್ಪ(70), ಕೊಂಡ್ಲಳ್ಳಿ, ಚಳ್ಳಕೆರೆ

3. ಜಯಣ್ಣ(65), ಚಿಕ್ಕೇರಳ್ಳಿ ಗೊಲ್ಲರಹಟ್ಟಿ, ಚಳ್ಳಕೆರೆ

4. ಚನ್ನವೀರ(60), ಹನುಮಂತನಹಳ್ಳಿ ಗೊಲ್ಲರಹಟ್ಟಿ

5. ದಿನೇಶ್(50), ಪಟ್ಟದ ಪೂಜಾರಿ ಮಸ್ಕಲ್ ಗೊಲ್ಲರಹಟ್ಟಿ, ಹಿರಿಯೂರು

6. ಸಣ್ಣ ಕರಿಯಪ್ಪ(65), ಪೂಜಾರಿ, ಚಿತ್ರದೇವರಹಟ್ಟಿ, ಹಿರಿಯೂರು

7. ಚಿಕ್ಕಮಲ್ಲಯ್ಯ(70), ಯಂಬಳ್ಳಿ ದೊಡ್ಡಗೊಲ್ಲರಹಟ್ಟಿ, ಹಿರಿಯೂರು

8. ಗೌಡ ಮುದ್ದಪ್ಪ(73), ಹಿರಿಯ, ವೇಣುಕಲ್ಲುಗುಡ್ಡ, ಹಿರಿಯೂರು

9. ಎಂ. ಅಜ್ಜಣ್ಣ(85), ಹಿರಿಯ, ಈರಮುದ್ದಣ್ಣನಗುಡ್ಡ, ಹಿರಿಯೂರು

10. ಚಿತ್ತಯ್ಯ(45), ಪಟ್ಟದ ಪೂಜಾರಿ,ಕಲವರಹಳ್ಳಿ(ಬೇವಿನಹಳ್ಳಿ), ಶಿರಾ, ತುಮಕೂರು

**ಮ್ಯಾಸಬೇಡ**

1. ಒಬಣ್ಣ(31), ಪಟ್ಟದ ಪೂಜಾರಿ, ರುದ್ದಮ್ಮನಹಳ್ಳಿ, ಚಳ್ಳಕೆರೆ ತಾಲ್ಲೂಕು
2. ರೇವಣ್ಣ(45), ಪಟ್ಟದ ಪೂಜಾರಿ, ಕಂಪಲದೇವರಹಟ್ಟಿ, ಚಳ್ಳಕೆರೆ ತಾಲ್ಲೂಕು
3. ಬೋರಪ್ಪ(87), ನಿವೃತ್ತ ಶಿಕ್ಷಕರು, ಹಿರೇಹಳ್ಳಿ, ಚಳ್ಳಕೆರೆ ತಾಲ್ಲೂಕು
4. ಪೆದ್ದಯ್ಯ(60), ಪಟ್ಟದ ಪೂಜಾರಿ, ಮುತ್ತಿಗರಹಳ್ಳಿ, ಚಳ್ಳಕೆರೆ ತಾಲ್ಲೂಕು
5. ಪಾಪಣ್ಣ(48), ಪಟ್ಟದ ಪೂಜಾರಿ, ಚಿಕ್ಕೊಂತಿ ಕಂಪಲದೇವಹಟ್ಟಿ
6. ಒಬಯ್ಯ ಪಟ್ಟದ ಪೂಜಾರಿ, ರಾಯಪುರ, ಮ್ಯಾಸರಹಟ್ಟಿ
7. ಶಿವರಾಜವರ್ಮ(42), ದೊರೆ, ಗುಡೇಕೋಟೆ ಕಟ್ಟೇಮನೆ ಕೊಪ್ಪಳ ತಾಲ್ಲೂಕು
8. ಸಿದ್ದುಪುನಾಯಕ(60), ದೊರೆ, ಜರ್ಮಲೆ, ಕೊಪ್ಪಳ ತಾಲ್ಲೂಕು, ಬಳ್ಳಾರಿ
9. ಬಸವರಾಜ(55), ದೊರೆ, ನಾಯಕನಹಟ್ಟಿ, ಕಟ್ಟೇಮನೆ, ಚಳ್ಳಕೆರೆ
10. ಸಿ.ನಾಗರಾಜ, ಅರ್ಚಕರು (58), ತಿಪ್ಪೇಸ್ವಾಮಿ ಮಠ, ನಾಯಕನಹಟ್ಟಿ
11. ಸಣ್ಣಬೋರಪ್ಪ (55) ಪಟ್ಟದಪೂಜಾರಿ, ಬೋರೇ ದೇವರಹಟ್ಟಿ, ಚಳ್ಳಕೆರೆ
12. ಸೂರನಾಯ್ಕ, ದೊರೆ, ನನ್ನಿವಾಳ ಕಟ್ಟೇಮನೆ, ಚಳ್ಳಕೆರೆ
13. ಗೊರಕೂರು, ದೊರೆಸ್ವಾಮಿ(45), ದೊರೆ ಕಟ್ಟೇಮನೆ, ಚಿತ್ರದುರ್ಗ
14. ರಾಮಪ್ಪ(70), ನಿಡಗಲ್ಲು, ಪಾವಗಡ, ತುಮಕೂರು ಜಿಲ್ಲೆ
15. ಮಾರಮ್ಮನಹಳ್ಳಿ, ಪಟ್ಟದ ಪೂಜಾರಿ ಪಾಲಯ್ಯ, ಚಳ್ಳಕೆರೆ

**ಜೇನುಕುರುಬ**

1. ಸೋಮಣ್ಣ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ.
2. ದೇವಯ್ಯ, ಮಾರನ ಹಾಡಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ.
3. ದೇವಮ್ಮ, ಕಾರಾಪುರ ಹಾಡಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ.
4. ರಾಜಣ್ಣ, ಮಾರನ ಹಾಡಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ.
5. ಕುಳ್ಳಮ್ಮ, ದೇಸಿಪುರ ಕಾಲೋನಿ, ಬಂಡಿಪುರ, ಮೈಸೂರು ಜಿಲ್ಲೆ.
6. ಮಾದೇವಮ್ಮ, ದೇಸಿಪುರ ಕಾಲೋನಿ, ಬಂಡಿಪುರ, ಮೈಸೂರು ಜಿಲ್ಲೆ.
7. ಕ್ಷೀರಸಾಗರ, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ

8. ಮಾದೇಶ, ಸೊಳ್ಳೆಪುರ ಕಾಲೋನಿ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ

9. ನಾಗಪ್ಪ, ನಾಗಪೂರ ಕಾಲೋನಿ, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ

10. ದೊಡ್ಡಣ್ಣ, ಕಬಿನಿ, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ

**ಬೆಟ್ಟಕುರುಬ**

1. ದೇವಮ್ಮ, ಚೆನ್ನಗುಂಡಿ, ಬಂಡಿಪುರ, ಮೈಸೂರು ಜಿಲ್ಲೆ.
2. ಕೃಷ್ಣ, ಚೆನ್ನಗುಂಡಿ, ಬಂಡಿಪುರ, ಮೈಸೂರು ಜಿಲ್ಲೆ.
3. ವಿಠಲ್ ನಾಣ್ಚಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ
4. ರಾಜು, ಮಚ್ಚೂರು, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ
5. ಸೋಮಮ್ಮ, ಮಚ್ಚೂರು, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ
6. ಕಾಳ, ಬ್ರಹ್ಮಗಿರಿ, ಕಬಿನಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ
7. ಚಾಂಡ, ದೇವರಪುರ, ಕೊಡಗು, ಕೊಡಗು ಜಿಲ್ಲೆ
8. ಸುರೇಶ, ನಾಗಪೂರ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ
9. ಮಹಾದೇವ, ಹುಣಸೆಕಟ್ಟೆ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ
10. ಮಂಜು, ಪಿರಿಯಾಪಟ್ಟಣ, ಪಿರಿಯಾಪಟ್ಟಣ ತಾಲೂಕು, ಮೈಸೂರು ಜಿಲ್ಲೆ

**ಸೋಲಿಗ**

1. ರಾಜು, ಕರೇಹಳ್ಳಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ
2. ಬಸವಯ್ಯ, ಕಣೆಯನಪುರ, ಬಂಡೀಪುರ, ಗುಂಡ್ಲುಪೇಟೆ ತಾಲ್ಲೂಕು, ಮೈಸೂರು ಜಿಲ್ಲೆ
3. ಮುಕುಂದಯ್ಯ, ಕೆಂಚನಹುಂಡಿ, ಗುಂಡ್ಲುಪೇಟೆ ತಾಲ್ಲೂಕು, ಮೈಸೂರು ಜಿಲ್ಲೆ
4. ಬೊಮ್ಮೆಗೌಡ, ಬಿಳಿಗಿರಿರಂಗನಬೆಟ್ಟ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ
5. ಜಡೇಸ್ವಾಮಿ, ಬಿಳಿಗಿರಿರಂಗನಬೆಟ್ಟ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ
6. ಮಾದೇಗೌಡ, ಅಂಗಳ, ಗುಂಡ್ಲುಪೇಟೆ ತಾಲ್ಲೂಕು, ಮೈಸೂರು ಜಿಲ್ಲೆ
7. ಹೆಜ್ಜೂರಯ್ಯ, ಬೋರದೇವರ ಹುಂಡಿ, ಗುಂಡ್ಲುಪೇಟೆ ತಾಲ್ಲೂಕು, ಮೈಸೂರು ಜಿಲ್ಲೆ
8. ತಿಮ್ಮ, ಕಾಳಯ್ಯನಹುಂಡಿ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ
9. ಜೋಗಪ್ಪ, ದರ್ಗಾ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ
10. ಜಿ.ಪುಟ್ಟಸ್ವಾಮಿ, ಬಸವನಗಿರಿ, ಹೆಚ್.ಡಿ.ಕೋಟೆ, ಮೈಸೂರು ಜಿಲ್ಲೆ

## ಅನುಬಂಧ: ಎರಡು

# ಛಾಯಾಚಿತ್ರಗಳು



ಕುಣಬಿಯರ ಸೀಮಾ ದೈವ ಕಾಪ್ರಿ ಜಾತ್ರೆ



ಕುಣಬಿಯರ ಹೋಳಿ ಸಿಗ್ಮಾ ನೃತ್ಯ



ಕುಣಬಿಯರ
ಸೀಮಾ ದೈವ
ವಾಗ್ರೋ



ಕುಣಬಿಯರ
ಸೀಮಾ ದೈವ
ಸಾತ್ಪುರುಷ



ಕುಣಬಿಯರ
ಕುಂಬ್ರಿ
ಬೇಸಾಯ


ಕುಣಬಿಯರ ಸೀಮಾ ದೈವ ಜನ್ಮಿ


ಕುಣಬಿಯರ ಸೀಮಾ ದೈವ ಗಾವಳದೇವಿ


ಕುಣಬಿಯರ ಸೀಮಾ ದೈವ ಬಯೋಚಾನಾಸಿ



ಸಿದ್ದಿಯರ ದೈವ ನ್ಯಾಸ



ಸಿದ್ದಿಯರ ಸೀಮಾ ದೈವ ಚೌಂಡೇಶ್ವರಿ



ಸಿದ್ದಿಯರ ಸೀಮಾ ದೈವ ದ್ಯಾಮವ್ವ ಬೀರವ್ವ



ಸಿದ್ದಿಯರ ದೈವ
ಸಿದ್ದಿನ್ಯಾಸ

ಹಾಲಕ್ಕಿ ಒಕ್ಕಲಿಗ
ಮಹಿಳೆ





ಹಾಲಕ್ಕಿಗಳ
ಗಡಿದೈವ
ಕರಿರಾಯ

ಹಾಲಕ್ಕಿಗಳ
ಸಾಕ್ಷಿಪ್ರಜ್ಞೆ ಸುಕ್ರಿ
ಬೊಮ್ಮಗೌಡ





ಹಾಲಕ್ಕಿ
ಒಕ್ಕಲಿಗರ
ಬಂಡಿಹಬ್ಬದ
ಜಾತ್ರೆ

ಸೋಲಿಗರ
ಕಾಡೊಳಗಿನ
ಪೋಡು




ಸೋಲಿಗರ ಗೋರುಕಾನ ಹಾಡಿನ ತಂಡ


ಸೋಲಿಗರ ದೊಡ್ಡಸಂಪಿಗೆ ಜಮ್ಮಾ ದೈವ


ಸೋಲಿಗರ ತಮ್ಮಡಿ



ಜೇನುಕುರುಬರ
ಬುಂಡೆ ಕರೆಯುವ
ಆಚರಣೆ



ಜೇನುಕುರುಬರ
ಗಡಿ ದೈವ



ಜೇನುಕುರುಬರ
ಗಡಿ ದೈವ

ಜೇನುಕುರುಬರ
ಹಾಡಿ





ಬೆಟ್ಟಕುರುಬರ
ಅಂಬಾಲ

ಬೆಟ್ಟಕುರುಬರ
ಮಹಿಳೆಯರು



ಬೆಟ್ಟಕುರುಬರ
ಎಲ್ಲೆ ದೈವ





ಬೆಟ್ಟಕುರುಬರ
ಭದ್ರಕಾಳಿ

ಮ್ಯಾಸಬೇಡ
ಸಮುದಾಯದ
ಕುಟುಂಬ





ಮ್ಯಾಸಬೇಡ
ಸಮುದಾಯದ
ಗಡಿದೈವ



ಮ್ಯಾಸಬೇಡ
ಸಮುದಾಯದ
ಪೆಟ್ಟಿಗೆ ದೈವ



ಮ್ಯಾಸಬೇಡ
ಸಮುದಾಯದ
ರೊಪ್ಪ



ಜುಂಜಪ್ಪನ
ಸಮಾದಿ



ಕಾಡುಗೊಲ್ಲರ
ಪೆಟ್ಟಿಗೆ ದೇವರು



ಜುಂಜಪ್ಪನ
ದೇವಳ

